ಆನಂದ ಕರ್ಣಾಟಕ ಗ್ರಂಥರತ್ನಮಾಲೆ. ನಂ. ೧

39

ಶ್ರೀಃ

ವಾಲ್ಮೀಕಿಮಹರ್ಷಿಪ್ರಣೀತ

# ಶ್ರೀಮದ್ರಾಮಾಯಣವು

# ಅಯೋಧ್ಯಾಕಾಂಡವು.

(ಎರಡನೆಯ ಭಾಗವು.)

ಕರ್ಣಾಟಕ ವಚನವು.



ಶ್ರೀಮದ್ಯದುಶೈಲನಿವಾಸರಸಿಕ

ಪಂಡಿತ ದೇವಶಿಖಾಮಣಿ ಅಳಸಿಂಗರಾಚಾರ್ಯ ವಿರಚಿತವು

---

ಮದ್ರಾಸು

ಆನಂದಮುದ್ರಾಕ್ಷರಶಾಲೆಯಲ್ಲಿ ಮುದ್ರಿತವಾಗಿ.

ಆರ್. ವೆಂಕಟೇಶ್ವರ ಕಂಪೆನಿಯವರಿಂದ

ಪ್ರಕಟಿಸಲ್ಪಟ್ಟಿದೆ.

---

1912.

# ವಿ ಷ ಯಾ ನು ಕ್ರ ಮ ಣಿ ಕೆ.

---



---

* ಈ ಅಧ್ಯಾಯದ ವಿಷಯಸಂಗ್ರಹವನ್ನು ಇಲ್ಲಿರುವಂತೆಯೇ ೬೪೪ನೇ ಪುಟದಲ್ಲಿಯೂ ಓದಿಕೊಳ್ಳಬೇಕು.

---

## ಪ ಟ ಗ ಳ ಪ ಟ್ಟಿ.



625. ಶ್ರೀ ಸೀತಾರಾಮಲಕ್ಷ್ಮಣರು ಭರದ್ವಾಜಮುನಿಯನ್ನು ನಮಸ್ಕರಿಸಿದುದು.

ರ್ಷಿಯು ಸುತ್ತಲೂ [1] ಅನೇಕಮೃಗಪಕ್ಷಿಗಳಿಂದಲೂ, ಋಷಿಗಳಿಂದಲೂ ಪರಿವೃತನಾಗಿ, ರಾಮನನ್ನು ಅನೇಕವಿಧದಲ್ಲಿ ಸತ್ಕರಿಸಿ, ಆತನಿಗೆ ಸುಖಾಗ ಮನವನ್ನು ಹೇಳಿದನು. ರಾಮನೂ ಆಸತ್ಕಾರಗಳೆಲ್ಲವನ್ನೂ ಸಂತೋಷದಿಂದ ಸ್ವೀಕರಿಸಿ,ಸುಖಾಸನದಲ್ಲಿ ಕುಳಿತುಕೊಂಡಮೇಲೆ,ಋಷಿಯು ಆತನನ್ನುಕುರಿತು "ಎಲೈರಾಮನೆ! ನೀನು ಇಲ್ಲಿಗೆ ಬಂದುದರಿಂದ ಬಹುಕಾಲಕ್ಕೆ ನಿನ್ನದರ್ಶನವು ನನಗೆ ಲಭಿಸಿತು. ನಿನ್ನನ್ನು ,ನಿಷ್ಕಾರಣವಾಗಿ ಕಾಡಿಗೆ ಕಳುಹಿಸಿದ ವೃತ್ತಾಂ ತವೂ ನನಗೆ ತಿಳಿಯಿತು. ಮಹಾನದಿಗಳಾದ ಗಂಗಾಯಮುನೆಗಳು ಸಂಗ ಮಿಸುವ ಈಸ್ಥಳವು ಬಹಳ ಪವಿತ್ರವಾದುದು. ಮತ್ತು ವಿವಿಕ್ತವಾಗಿಯೂ ರಮಣೀಯವಾಗಿಯೂ ಇರುವುದು. ಇಲ್ಲಿಯೇ ನೀನು ಸುಖವಾಗಿದ್ದು ಕಾಲ ವನ್ನು ಕಳೆಯಬಹುದು." ಎಂದನು. ಇದನ್ನು ಕೇಳಿ ರಾಮನು ಆ ಮಹಾತ್ಮ ನನ್ನುಕುರಿತು, "ಎಲೈ ಮಹರ್ಷಿಯೆ! [2] ಈಸ್ಥಳವು ಪಟ್ಟಣಗಳಿಗೂ,ಗ್ರಾಮ

---

1 ಇಲ್ಲಿ "ಮೃಗಪಕ್ಷಿಭಿರಾಸೀನೋ ಮುನಿಭಿಶ್ಚ ಸಮಂತತಃ" ಎಂದು ಮೂಲವು. ಮಹರ್ಷಿಯ ಪ್ರಭಾವದಿಂದ ಅಲ್ಲಿನ ತಿರ್ಯಗ್ಜಂತುಗಳುಕೂಡ, ಇತರತಾಪಸರಂತೆಯೇ ಆತನಲ್ಲಿ ವಿಶ್ವಾಸವಿಟ್ಟು, ಆತನ ಸೇವೆಮಾಡುತ್ತ, ಮುಂದೆಕುಳಿತು ಉಪದೇಶವನ್ನು ಹೊಂದುತ್ತಿರುವುವೆಂದು ಗೋವಿಂದರಾಜೀಯವಾದ ವ್ಯಾಖ್ಯಾನವು. ಆ ಮಹರ್ಷಿಯ ಮಹಿಮೆಯಿಂದ ಅಲ್ಲಿನ ತಿರ್ಯಗ್ಜಂತುಗಳೂಕೂಡ, ರಾಮನನ್ನು ಪರಮಾತ್ಮನೆಂದೇ ತಿಳಿದು, ಇತರ ಋಷಿಗಳಂತೆ ತಾವೂಬಂದು ಈರಾಮನನ್ನು ಸೇವಿಸುತಿದ್ದುವೆಂದು ಮ ಹೇಶ್ವರತೀರ್ಥವ್ಯಾಖ್ಯಾನವು.

2 ಇದಕ್ಕೆ "ಭಗವನ್ನಿತ ಆಸನ್ನಃ ಪೌರಜಾನಪದೋಜನಃ । ಸುದರ್ಶ ಮಿಹ ಮಾಂ ಪ್ರೇಕ್ಷ್ಯ ಮನ್ಯೇಹಮಿ ಮಮಾಶ್ರಮ್ । ಆಗಮಿಷ್ಯತಿ ವೈದೇಹೀಂ ಮಾಂಚಾಪಿ ಪ್ರೇಕ್ಷಕೋಜನಃ । ಅನೇನ ಕಾರಣೇನಾಹಮಿಹ ವಾಸಂ ನರೋಚಯೇ । ಏಕಾಂತೇಪಶ್ಯ ಭಗನ್ನಾಶ್ರಮಸ್ಥಾನಮುತ್ತಮಂ ॥ ರಮೇತಯತ್ರ ವೈದೇಹೀ ಸುಖಾರ್ಹಾ ಜನಕಾತ್ಮಜಾ" ಎಂದುಮೂಲವು. ಇದರಲ್ಲಿ ಕೆಲವು ರಹಸ್ಯಾರ್ಥಗಳುಂಟು. (ಭಗರ್ವ!) ಎಲೈ ಸರ್ವ ಜ್ಞನೆ! ನೀನು ನನ್ನ ನಿಜಸ್ವರೂಪವನ್ನು ಚೆನ್ನಾಗಿ ತಿಳಿದವನಾದರೂ, ರಾವಣವಧಾರ್ಥ ವಾಗಿ ಗೂಢವಾಗಿ ಅವತರಿಸಿರುವ ನನ್ನನ್ನು ಇಲ್ಲಿ ಪ್ರಕಟಿಸಿದೆಯಾದರೆ(ಪೌರಜಾನಪದೋ ಜನಃ) ಸಮಸ್ತಜನವೂ (ಮಾಂ) ನನ್ನನ್ನು (ಸುದರ್ಶಂ) ವಿಷ್ಣುವನ್ನಾಗಿಯೇ "ವಿ ಷ್ಣುಂಚದೃಶ್ಯತೇತ್ವಗ್ರ್ಯಯಾ" ಎಂಬ ಶ್ರುತ್ಯನುಸಾರವಾಗಿ ಸುದರ್ಶನೆಂದರೆ ವಿಷ್ಣು ವೆಂದರ್ಥವು. (ವೈದೇಹೀಂ) ಸೀತೆಯನ್ನು ( ಮಾಂಚ ) ಲಕ್ಷ್ಮೀದೇವಿಯನ್ನಾಗಿಯೂ

ಗಳಿಗೂ ಬಹಳ ಸಮೀಪದಲ್ಲಿರುವುದರಿಂದ, ಸೀತೆಯನ್ನೂ ನನ್ನನ್ನೂ ನೋಡುವುದಕ್ಕಾಗಿ ಅನೇಕಪುರಜನರು ಆಗಾಗ ಇಲ್ಲಿಗೆ ಬರುತ್ತಿರುವರೆಂದುತೋರುವುದು. ಆದುದರಿಂದ ನನಗೆ ಇಲ್ಲಿರುವುದಕ್ಕೆ ಇಷ್ಟವಿಲ್ಲ. ಜನಗಳದೃಷ್ಟಿಗೆಬೀಳದಂತೆ ಎಲ್ಲಿಯಾದರೂ ಏಕಾಂತಸ್ಥಳದಲ್ಲಿರಬೇಕೆಂದು ನನಗೆ ತೋರಿರುವುದು. ಈ ಸೀತೆಯು ಯಾವಾಗಲೂ ಸುಖವನ್ನೇ ಅನುಭವಿಸುವುದಕ್ಕೆ ಅರ್ಹಳಾದುದರಿಂದ, ಅವಳು ಕಷ್ಟಪಡದೆ ವಿನೋದದಿಂದ ಕಾಲಹರಣಮಾಡುವುದಕ್ಕೆ ತಕ್ಕ ಉತ್ತಮವಾದ ಬೇರೊಂದುಸ್ಥಳವನ್ನು ಹುಡುಕಬೇಕು. ಅಂತಹ ಉತ್ತಮವಾದ ಆಶ್ರಮಪ್ರದೇಶವನ್ನು ನೀನೇಆಲೋಚಿಸಿಹೇಳು"ಎಂದನು. ಇದನ್ನು ಕೇಳಿ ಆ ಭರದ್ವಾಜನು "ವತ್ಸರಾಮನೆ ! ಇಲ್ಲಿಗೆ ಹತ್ತು ಹರಿದಾರಿಗಳ ದೂರದಲ್ಲಿ ಒಂದು ಬೆಟ್ಟವುಂಟು. ಅಲ್ಲಿ ನೀನು ವಾಸವಾಗಿರಬಹುದು. ಅದು ಅನೇಕ

---

ತಿಳಿದು, (ಇಹ ಆಗಮಿಷ್ಯತಿ.) ನಮ್ಮನ್ನು ನೋಡುವುದಕ್ಕಾಗಿ ಇಲ್ಲಿಗೆ ಬಂದುಬಿಡುವುದು. (ಅನೇನ ಕಾರಣೇನ) ಈ ಕಾರಣಕ್ಕಾಗಿಯೇ ನಾನು (ಇಹವಾಸಂ ನರೋಚಯೇ) ಇಲ್ಲಿ ವಾಸವಾಗಿರುವುದಕ್ಕೆ ಇಷ್ಟಪಡುವುದಿಲ್ಲ. ಆದುದರಿಂದ (ಯತ್ರ) ಪರಮಾನಂದೈಕತಾನನಾದ ಯಾವ ನನ್ನಲ್ಲಿ, (ವೈದೇಹೀ) ಸೀತೆಯೂಕೂಡ, (ರಮತೇ) ಅನುರಾಗವಿಶಿಷ್ಟಳಾಗಿರುವಳೋ, ಎಂದರೆ, "ಯೋ ಮೃಗ್ಯತೇ ಹಸ್ತಗೃಹೀತಪದ್ಮಯಾ ಶ್ರಿಯೇತರೈ ರಂಗ ವಿಮೃಗ್ಯಮಾಣಯಾ" ಇತರರಿಂದ ಹುಡುಕಲ್ಪಡುವವಳಾಗಿಯೂ, ಕೈಯ್ಯಲ್ಲಿ ಕಮಲವನ್ನು ಧರಿಸಿದವಳಾಗಿಯೂ ಇರುವ ಶ್ರೀದೇವಿಯೂಕೂಡ ಯಾವ ನನ್ನು ಹುಡುಕುವಳೋ, ಅಂತಹ ಮಹಾಲಕ್ಷ್ಮಿಯು ತಾನೇ ಸರ್ವಜನಾಶ್ರಯಣೀಯಳಾಗಿ, ಅನವರತವೂ ಮಹಾವಿಷ್ಣುವಿನ ಸಹವಾಸಸೌಖ್ಯವನ್ನು ಅನುಭವಿಸುತ್ತಿರುವವಳಾಗಿದ್ದರೂ, ಈಗಲೇ ಅದನ್ನು ಅನುಭವಿಸಲಾರಂಭಿಸಿದವಳಂತೆ, ಎಡೆಬಿಡದ ಅನುರಾಗದಿಂದ ಯಾವನನ್ನು ಪ್ರೀತಿಸುವಳೋ, ಅಂತಹ ನಾನು, (ಆಶ್ರಮಸ್ಥಾನಂ) "ಆ ಶ್ರೀಯತ ಇತ್ಯಾಶ್ರಮಃ" ಎಂಬ ವ್ಯುತ್ಪತ್ತಿಯಿಂದ ಆಶ್ರಮವೆಂದರೆ ಚರಾಚರಗಳಿಗೆ ಆಶ್ರಯವಾದ ಈ ಪ್ರಪಂಚವು. ಇದಕ್ಕೆ ಸ್ಥಾನವೆಂದರೆ ಆಧಾರಭೂತನು. ಮತ್ತು (ಉತ್ತಮಂ) ಸ್ವರೂಪ ಗುಣವಿಭವಾದಿಗಳಲ್ಲಿ ಇತರ ದೇವತೆಗಳಿಗಿಂತಲೂ ಮೇಲಾದವನು; ಇಂತಹ ನನ್ನನ್ನು ಅತಿಪ್ರಿಯನಾಗಿಯೂ ಸರ್ವಜ್ಞನಾಗಿಯೂ ಇರುವ ನೀನೊಬ್ಬನೇ (ಏಕಾಂತೇ ಪಶ್ಯ)ರಹಸ್ಯವಾಗಿ ಧ್ಯಾನದೃಷ್ಟಿಯಿಂದ ನೋಡಿ ಅನುಭವಿಸು "ಗುಹ್ಯಾದ್ಗುಹ್ಯತಮಂ" ಎಂಬಂತೆ ಅತಿರಹಸ್ಯವಾದ ನನ್ನ ಸ್ವರೂಪವನ್ನು ಬೇರೆಯವರಲ್ಲಿ ಪ್ರಕಟಿಸಬೇಡವೆಂದು ರಹಸ್ಯೋಪದೇಶವು. (ಮಾಹೇಶ್ವರ ತೀರ್ಥವು.)

ಮಹರ್ಷಿಗಳಿಂದಸೇವಿತವಾಗಿರುವುದು.ಬಹಳಪರಿಶುದ್ಧವಾದುದು.ಅಲ್ಲಿ[1]ಗೋ ಲಾಂಗೂಲಗಳೂ,ಕಪಿಗಳೂ,ಕರಡಿಗಳೂ ವಿಶೇಷವಾಗಿ ತುಂಬಿರುವುವು.ಅದ ಕ್ಕೆ ಚಿತ್ರಕೂಟವೆಂದು ಹೆಸರು.ಅದು ಕುಲಪರ್ವತವೆನಿಸಿಕೊಂಡ ಗಂಧಮಾದ ನಕ್ಕೆ ಸಮಾನವಾಗಿರುವುದು. ಮನುಷ್ಯನು ಒಂದಾವರ್ತಿ ಆಪರ್ವತದ ಶಿಖರ ಗಳನ್ನು ಕಣ್ಣಿನಿಂದ ನೋಡಿದಮಾತ್ರದಲ್ಲಿ ಆತನ ಮನಸ್ಸಿನಲ್ಲಿ ಶಾಂತಿಯು ನೆಲೆಗೊಳ್ಳುವುದು. ಆತನ ಮನಸ್ಸು ಸತ್ಕಾರ್ಯಗಳಲ್ಲಿಯೇ ಪ್ರವರ್ತಿಸುವುದೇ ಹೊರತು ಪಾಪಕಾರ್ಯದಲ್ಲಿ ಪ್ರವರ್ತಿಸದು. ಎಷ್ಟೋಮಂದಿಋಷಿಗಳು ಅಲ್ಲಿ ನೂರಾರು ವರ್ಷಗಳವರೆಗೆ ಸುಖವಾಗಿ ತಪಸ್ಸನ್ನುಮಾಡಿ,[2] ಕಪಾಲ ಶಿರಸ್ಸಿನೊಡನೆಯೇ ಸ್ವರ್ಗವನ್ನು ಪಡೆದಿರುವರು. ನಿರ್ಜನವಾದ ಆಪರ್ವತ ಪ್ರದೇಶವೇ ನಿನಗೆ ಅನುಕೂಲವಾದ ಸ್ಥಳವೆಂದು ನನಗೆ ತೋರುವುದು. ಅಥ ವಾ ಇಲ್ಲಿಯೇ ನೀನು ಸುಖವಾಗಿ ನನ್ನೊಡನೆ ನಿನ್ನ ವನವಾಸಕಾಲವನ್ನು ಕಳೆ ದುಹೋದರೂ ಹೋಗಬಹುದು"ಎಂದನು.ಆಮೇಲೆಆಮೂವರಿಗೂ ಯಥೋ ಚಿತವಾದ ಆತಿಥಿಸತ್ಕಾರಗಳನ್ನು ನಡೆಸಿ ಉಪಚರಿಸಿದನು. ಆ ಪ್ರಯಾಗೆಯಲ್ಲಿ ಅವರೆಲ್ಲರೂ ಋಷಿಯಮುಂದೆಸುಖಾಸೀನರಾಗಿ ಕುಳಿತುವಿನೋದವಾಗಿ ಮಾ ತಾಡುತ್ತಿರುವಾಗಲೇ ರಾತ್ರಿಯಾಯಿತು. ಸುಖಾರ್ಹನಾದ ರಾಮನು ಮಾ ರ್ಗಶ್ರಮದಿಂದ ಬಹಳವಾಗಿಬಳಲಿದ್ದುದರಿಂದ,ರಮಣೀಯವಾದಆಭರದ್ವಾ ಜಾಶ್ರಮದಲ್ಲಿಯೇಸುಖವಾಗಿಮಲಗಿದನು.ಎಲ್ಲರೂಆರಾತ್ರಿಯನ್ನು ಅಲ್ಲಿಯೇಕ ಳೆದರು.ಬೆಳಗಾದಕೂಡಲೆ ರಾಮನುತೇಜಸ್ವಿಯಾದ ಆಮಹರ್ಷಿಯಬಳಿಗೆಬಂ ದು,ಅವನನ್ನು ಕುರಿತು,"ಎಲೈ ಮಹಾತ್ಮನೆ! ಈರಾತ್ರಿಯನ್ನಂತೂ ನಾವು ಸು ಖವಾಗಿ ನಿಮ್ಮ ಆಶ್ರಮದಲ್ಲಿಯೇ ಕಳೆದುಬಿಟ್ಟೆವು. ಇನ್ನುನಮಗೆ ಮುಂದಿನ ಪ್ರಯಾಣಕ್ಕೆ ಅನುಮತಿಯನ್ನು ಕೊಡಬೇಕು'' ಎಂದನು. ಆಗ ಮಹರ್ಷಿಯು

---

1 ಇಲ್ಲಿ ತ್ರಿಕಾಲಜ್ಞನಾದ ಮಹರ್ಷಿಯು ಗೋಲಾಂಗೂಲಾದಿಗಳನ್ನು ಹೇಳಿರುವು ದರಿಂದ, ಆ ಜಾತಿಯ ಪ್ರಾಣಿಗಳೇ ಮುಂದೆ ರಾಮನಿಗೆ ಸಹಾಯಕರಾಗುವರೆಂದು ಭವಿ ಷ್ಯದ್ವೃತ್ತಾಂತವನ್ನು ಸೂಚಿಸಿರುವುದಾಗಿ ಗ್ರಹಿಸಬೇಕು.

2 ಕಪಾಲಾಸನದಿಂದ ತಪಸ್ಸು ಮಾಡಿದವರು, ತಲೆಯಲ್ಲಿರುವ ಕೂದಲುಗಳನ್ನೂ, ಚರ್ಮವನ್ನೂ ನೀಗಿ, ಉಳಿದ ಶಿರಃಕಪಾಲಮಾತ್ರದೊಡನೆ ಸ್ವರ್ಗವನ್ನು ಸೇರುವರೆಂದು ಪ್ರಸಿದ್ಧಿಯು.

ರಾಮನನ್ನು ಕುರಿತು, "ನಾನು ಹೇಳಿದಂತೆ ಈಗ ನೀವು ಆ ಚಿತ್ರಕೂಟಕ್ಕೇ ಹೋಗಿರಿ! ಅದೇ ನಿಮಗೆ ಅನುಕೂಲವಾದ ಸ್ಥಳವೆಂದು ನನಗೆ ತೋರಿರುವುದು. ಅಲ್ಲಿ ನಿಮ್ಮ ಆಹಾರಕ್ಕೆ ಬೇಕಾದ ಬಗೆಬಗೆಯ ಹಣ್ಣುಗಳು, ಗೆಡ್ಡೆಗೆಣಸುಗಳು, ಜೇನು, ಮುಂತಾದ ಪದಾರ್ಥಗಳೆಲ್ಲವೂ ಹೇರಳವಾಗಿ ಸಿಕ್ಕುವುವು. ಇದರಮೇಲೆ ಅದು ಬಹಳಪವಿತ್ರವಾಗಿಯೂ, ರಮಣೀಯವಾಗಿಯೂ ಇರುವುದು. ಅಲ್ಲಿ ಅನೇಕಜಾತಿಯ ವೃಕ್ಷಗಳಿರುವುವು. ಕಿನ್ನರರು ನಾಗರು ಮೊದಲಾದ ದೇವಜಾತಿಗಳಿಗೆಲ್ಲಾ ಅದು ನಿತ್ಯಾಶ್ರಯವಾಗಿರುವುದು. ಮತ್ತು ಅಲ್ಲಿ ನವಿಲುಗಳು ಇಂಪಾಗಿ ಕೂಗುತ್ತಿರುವುವು. ದೊಡ್ಡದೊಡ್ಡ ಕಾಡಾನೆಗಳು ಅಲ್ಲಿ ವಿಶೇಷವಾಗಿ ತುಂಬಿರುವುವು. ಆದುದರಿಂದ ನೀವು ಅಲ್ಲಿಗೇ ಹೋಗಿರಿ! ಅಲ್ಲಿಯೇ ನಿಮಗೆ ಸುಖವುಂಟು. ಪವಿತ್ರವಾಗಿಯೂ ರಮಣೀಯವಾಗಿಯೂ, ಫಲಮೂಲಸಮೃದ್ಧಿಯುಳ್ಳುದಾಗಿಯೂ ಇರುವ ಆಚಿತ್ರಕೂಟ ಪರ್ವತವೇವಾಸಯೋಗ್ಯವು! ಅಲ್ಲಿ ವಿಚಿತ್ರಗಳಾದ ಮೃಗಗಳೂ, ಕಾಡಾನೆಗಳಹಿಂಡುಗಳೂವಿಶೇಷವಾಗಿಸಂಚರಿಸುತ್ತಿರುವುದರಿಂದ, ಅವುಗಳ ನೋಟವೇನಿಮ್ಮ ಮನಸ್ಸಿಗೆಎಷ್ಟೋಲಸಂತವನ್ನುಂಟುಮಾಡವುವು. ಮತ್ತು ಅಲ್ಲಿಸಣ್ಣ ಸಣ್ಣಗಿರಿನದಿಗಳೂ, ದೊಡ್ಡನದಿಗಳೂ, ಸಾನುಪ್ರದೇಶಗಳೂ, ಗುಹೆಗಳೂ, ಕಲ್ಲಿನ ಆವರಣಗಳೂ ಅನೇಕವಾಗಿರುವುವು. ಸೀತೆಯೊಡನೆ ಅಲ್ಲಲ್ಲಿ ಸಂಚರಿಸುತ್ತಾ ಅವುಗಳನ್ನು ನೋಡುತಿದ್ದರೆ, ನಿನ್ನ ಮನಸ್ಸಿಗೆ ಎಷ್ಟೋಉಲ್ಲಾಸವುಂಟಾಗುವುದು. ಟಿಟ್ಟಿಭ ಕೋಗಿಲೆ ಮುಂತಾದಪಕ್ಷಿಗಳ ಇಂಪಾದ ಧ್ವನಿಯಿಂದಲೂ, ವಿಚಿತ್ರ ಮೃಗಗಳಿಂದಲೂ, ಮದ್ದಾನೆಗಳಿಂದಲೂ ಕಿವಿಗಳಿಗೂ, ಕಣ್ಣುಗಳಿಗೂ ಆನಂದವನ್ನುಂಟುಮಾಡುವ ಆ ಚಿತ್ರಕೂಟಪರ್ವತದಲ್ಲಿ ಸುಖವಾಗಿ ವಾಸಮಾಡುತ್ತಿರು." ಎಂದನು. ಇಲ್ಲಿಗೆ ಐವತ್ತುನಾಲ್ಕನೆಯಸರ್ಗವು.

---

ಚಿತ್ರಕೂಟಕ್ಕೆ ಪ್ರಯಾಣವು. ದೋಣಿಯಲ್ಲಿ ಯಮುನಾನದಿಯನ್ನು ದಾಟಿ, ಆ ದಿನದ ಸಾಯಂಕಾಲವನ್ನು ಯಮುನಾವನದಲ್ಲಿಯೇ ಕಳೆದುದು.

ಶತ್ರುಸಂಹಾರಕರಾದ ಆ ರಾಜಕುಮಾರರಿಬ್ಬರೂ ಆ ರಾತ್ರಿಯನ್ನು ಭರದ್ವಾಜಾಶ್ರಮದಲ್ಲಿಯೇ ಕಳೆದು, ಬೆಳಗಾದಮೇಲೆ ಮಹರ್ಷಿಗೆ ನಮಸ್ಕ

ರಿಸಿ, ಚಿತ್ರಕೂಟಪರ್ವತದ ಕಡೆಗೆ ಪ್ರಯಾಣಸನ್ನದ್ಧರಾಗಿದ್ದರು. ಆಗ ಭರದ್ವಾಜಮಹರ್ಷಿಯು ಅವರಿಗೆ ಸ್ವಸ್ತ್ಯಯನಗಳನ್ನುಮಾಡಿ, ತಂದೆಯು ಮಕ್ಕಳನ್ನು ದಾರಿಕಳುಹಿಸುವಂತೆ, ಅವರನ್ನು ತಾನೂ ಹಿಂಬಾಲಿಸಿ ಹೊರಟನು. ಹೀಗೆ ಹೋಗುತ್ತಿರುವಾಗ ಮಹಾತೇಜಸ್ವಿಯಾದ ಆಮಹರ್ಷಿಯು, ಸತ್ಯಪರಾಕ್ರಮಿಯಾದ ರಾಮನನ್ನು ಕುರಿತು, “ಎಲೆ ವತ್ಸನೆ ! ನೀವು ಮೊದಲು ಗಂಗಾಯಮುನೆಗಳ ಸಂಗಮಸ್ಥಳವನ್ನು ಸೇರಿ, ಅಲ್ಲಿಂದ ಸ್ವಲ್ಪಪಶ್ಚಿಮಾಭಿಮುಖವಾಗಿ ಪ್ರವಹಿಸುತ್ತಿರುವ ಯಮುನಾನದಿಯ ದಾರಿಯನ್ನೇ ಹಿಡಿದು ಹೋಗಿರಿ ! ಆ ಯಮುನಾನದಿಯು ವೇಗವಾಗಿ ಹರಿಯುತ್ತಿರುವುದರಿಂದ, ಆಸ್ಥಳದಲ್ಲಿ, ; ಬಹುಕಾಲದಿಂದ ಜನಗಳು ಹೋಗಿಬಂದು ಬಳಿಕೆಯಾಗಿರುವ ಭಾಗವನ್ನೇ ನೋಡಿ, ಅಲ್ಲಿ ಬಲವಾದ ದೋಣಿಯನ್ನಿಟ್ಟುಕೊಂಡು ಆ ನದಿಯನ್ನು ದಾಟಬೇಕು. ಅದನ್ನು ದಾಟಿದಮೇಲೆ ವಿಶೇಷವಾಗಿ ಹಸುರೆಲೆಗಳಿಂದ ತುಂಬಿದ ದೊಡ್ಡದಾದ ಒಂದು ಆಲದಮರವುಕಾಣುವುದು ಅದರಸುತ್ತಲೂ ಅನೇಕವೃಕ್ಷಗಳಿರುವುವು.ಅದು ಅನೇಕಸಿದ್ಧಚಾರಣಾದಿಗಳಿಂದ ಸೇವಿಸಲ್ಪಡುತ್ತಿರುವುದು. ಅದಕ್ಕೆ“ಶ್ಯಾಮ”ವೆಂದು ಹೆಸರು. ಆ ವೃಕ್ಷವು ಮಹಾಮಹಿಮೆಯುಳ್ಳುದಾದುದರಿಂದ, ಸೀತೆಯು ಅದಕ್ಕೆ ಕೈಮುಗಿದು ತನ್ನ ಕೋರಿಕೆಗಳೆಲ್ಲವೂ ಈಡೇರುವಂತೆ ಪ್ರಾರ್ಥಿಸಿಕೊಳ್ಳಲಿ! ಒಂದುವೇಳೆ ಅಲ್ಲಿ ಹೋಗುವುದರೊಳಗಾಗಿ ನಿಮಗೆ ಆಯಾಸವಾದರೆ, ಸಲ್ಪಹೊತ್ತು ಅಲ್ಲಿಯೇ ವಿಶ್ರಮಿಸಿಕೊಂಡಿರಬಹುದು. ಸಾಧ್ಯವಾದರೆ ಮುಂದಕ್ಕೂ ಪ್ರಯಾಣಮಾಡಬಹುದು. ಅಲ್ಲಿಂದ ಮುಂದೆ ಒಂದು ಹರಿದಾರಿಯವರೆಗೆ ನೀವು ಪ್ರಯಾಣಮಾಡಿದರೆ, ಕಪ್ಪಾದ ಒಂದು ಅರಣ್ಯವು ಕಾಣುವುದು. ಅಲ್ಲಿ ಮುತ್ತುಗ, ಬದರಿ, ಮುಂತಾದ ಅನೇಕವೃಕ್ಷಗಳು ಬೆಳೆದಿರುವುವು. ಬಿದಿರುಮೆಳೆಗಳು ದಟ್ಟವಾಗಿ ತುಂಬಿ ಅತಿಮನೋಹರವಾಗಿ ಕಾಣುವುವು. ಅದೇ ಚಿತ್ರಕೂಟಪರ್ವತಕ್ಕೆ ಹೋಗುವ ದಾರಿಯು. ಆ ದಾರಿಯಲ್ಲಿ ನಾನು ಅನೇಕಾವರ್ತಿ ಚಿತ್ರಕೂಟಕ್ಕೆ ಹೋಗಿ ಬಂದಿರುವೆನು. ಅದೇ ಸುಖವಾದ ಮಾರ್ಗವು. ಕಲ್ಲುಮುಳ್ಳುಗಳಿಲ್ಲದುದರಿಂದ ನಡೆಯುವುದಕ್ಕೂ ಕಷ್ಟವಾಗಿ ತೋರದು. ಕಾಡುಗಿಚ್ಚು ಮುಂತಾದಅಪಾಯಗಳೊಂದೂ ಅಲ್ಲಿ ಸಂಭವಿಸವು”ಎಂದನು.

ಹೀಗೆ ಆಭರದ್ವಾಜಮಹರ್ಷಿಯು ಚಿತ್ರಕೂಟದ ದಾರಿಯನ್ನು ತಿಳಿಸಿದಮೇಲೆ, ರಾಮನು ಆತನಿಗೆ ನಮಸ್ಕರಿಸಿ «ನಿಮ್ಮ ಆಜ್ಞೆಯಂತೆಯೇ ಆಗಲಿ"! ಎಂದು ಆತನ ಅನುಮತಿಯನ್ನು ಪಡೆದು ಅವನನ್ನು ಹಿಂತಿರುಗಿಸಿದನು. ಆ ಭರದ್ವಾಜನು ಇತ್ತಲಾಗಿ ಆಶ್ರಮಕ್ಕೆಹಿಂತಿರುಗಿದೊಡನೆಯೇ, ಅತ್ತಲಾಗಿ ಅವರು ಪ್ರಯಾಣಮಾಡಿ ಹೋಗುತ್ತಿರುವಾಗ, ರಾಮನು ಲಕ್ಷ್ಮಣನನ್ನು ಕುರಿತು, « ವತ್ಸ,ಲಕ್ಷ್ಮಣನೆ ! ಈ ಮಹರ್ಷಿಯ ಸಂಪೂರ್ಣವಾದ ಅಭಿಮಾನಕ್ಕೆ ಪಾತ್ರರಾದ ನಾವೇ ಪುಣ್ಯಶಾಲಿಗಳಲ್ಲವೆ!"ಎಂದನು. ಹೀಗೆ ರಾಮಲಕ್ಷ್ಮಣರಿಬ್ಬರೂ ಪರಸ್ಪರಸಲ್ಲಾಪಮಾಡುತ್ತಾ, ಸೀತೆಯನ್ನು ಮುಂದಿಟ್ಟುಕೊಂಡು ಯಮುನಾನದಿಯ ತೀರವನ್ನು ಸೇರಿದರು. ಆ ನದಿಯ ಸಮೀಪಕ್ಕೆ ಬಂದೊಡನೆಯೇ, ಬಹುವೇಗದಿಂದ ಪ್ರವಹಿಸುತ್ತಿರುವ ಅದನ್ನುನೋಡಿ, ದಾಟುವುದಕ್ಕೆ ಉಪಾಯವೇನೆಂದು ಅವರಿಗೆ ಚಿಂತೆಯು ಹುಟ್ಟಿತು.ಆಮೇಲೆ ಆ ರಾಮಲಕ್ಷ್ಮಣರಿಬ್ಬರೂ ತಾವಾಗಿಯೇ ಹೊರಟು, ಕಾಡಿನಲ್ಲಿ ಅಲ್ಲಲ್ಲಿ ಬಿದ್ದಿದ್ದ ಕಾಷ್ಠಸಮೂಹಗಳನ್ನೂ, ಒಣಗಿದ ಬಿದಿರುತುಂಡುಗಳನ್ನೂ ಸಂಗ್ರಹಿಸಿ ತಂದು, ಉದ್ದವಾದ ಲಾಮಂಚದ ಬೇರುಗಳಿಂದ ಅವುಗಳನ್ನು ಸೇರಿಸಿ ಕಟ್ಟಿ, ಒಂದು ದೊಡ್ಡತೆಪ್ಪವನ್ನು ಮಾಡಿದರು.ಆಮೇಲೆ ಲಕ್ಷ್ಮಣನು ಕೆಲವು ನೀರಂಜಿಯಮರದ ಕೊಂಬೆಗಳನ್ನೂ,ನೇರಳೆಮರದ ಕೊಂಬೆಗಳನ್ನೂ ಕಡಿದುತಂದು,ಸೀತೆಗೆ ಸುಖವಾದ ಒಂದು ಆಸನವನ್ನೂ ಮಾಡಿಟ್ಟನು. ರಾಮನು ಅಲ್ಲಿ ಸಾಕ್ಷಾಲ್ಲಕ್ಷ್ಮೀದೇವಿಯಂತೆ ಎಣೆಯಿಲ್ಲದ ಸೌಂದರ್ಯವುಳ್ಳವಳಾಗಿ ಪ್ರಕಾಶಿಸುತ್ತಿರುವ ತನ್ನ ಪ್ರಿಯಪತ್ನಿಯಾದ ಸೀತೆಯು, ಲಜ್ಜೆಯಿಂದ ತಲೆತಗ್ಗಿಸಿ ನಿಂತಿರುವುದನ್ನು ನೋಡಿ, ತಾನೇ ಕೈಹಿಡಿದುಕರೆತಂದು ತೆಪ್ಪದಮೇಲೆ ಏರಿಸಿದನು.ಅವಳ ವಸ್ತ್ರಭೂಷಣಾದಿಗಳೆಲ್ಲವನ್ನೂತಂದು ತಾನೇಆಕೆಯ ಪಕ್ಕದಲ್ಲಿರಿಸಿದನು. ಹಾಗೆಯೇ ತಮ್ಮ ಆಯುಧಗಳನ್ನೂ ಗುದ್ದಲಿಯನ್ನೂ, ಮೇಕೆಯ ಚರ್ಮದಿಂದ ಮಾಡಿದ ಪುಟ್ಟಿಯನ್ನೂ ಆ ತೆಪ್ಪದಲ್ಲಿ ತಂದಿರಿಸಿದನು. ಮೊದಲು ಸೀತೆಯು ಆ ತೆಪ್ಪವನ್ನೇರುವಾಗ ರಾಮಲಕ್ಷ್ಮಣರಿಬ್ಬರೂ ಅದನ್ನು ಚಲಿಸದಂತೆ ಕೈಯಿಂದ ಬಲವಾಗಿ ಹಿಡಿದು ನಿಲ್ಲಿಸಿಕೊಂಡು, ಆಮೇಲೆ ತಾವೂ ಏರಿ, ನದಿಯನ್ನು ದಾಟಿಹೋಗುತ್ತಿದ್ದರು.ಸೀತೆಯು ಆನದಿಯ ಮಧ್ಯಕ್ಕೆಬಂದು ನಿಂತಾಗ,ಆನದಿಯನ್ನುನೋಡಿ,«ಎಲೆದೇವಿ ಯಮುನೆ!ನಿನಗೆನಮಂ

ಗಳವಾಗಲಿ! ಈಗ ನಿನ್ನನ್ನು ನಾನು ದಾಟಿಹೋಗುವ ಈ ಅಪರಾಧವನ್ನು ಕ್ಷಮಿಸು! ನನ್ನ ಪತಿಯು ವನವಾಸವ್ರತವನ್ನು ಮುಗಿಸಿಕೊಂಡು ಸುಖವಾಗಿ ಹಿಂತಿರುಗಿ ಬಂದಮೇಲೆ, ನಿನ್ನ ಪ್ರೀತ್ಯರ್ಥವಾಗಿ ಸಾವಿರಾರು ಗೋದಾನಗಳನ್ನು ಮಾಡಿ ನೂರಾರು ಘಟಗಳಲ್ಲಿ ಮದ್ಯವನ್ನರ್ಪಿಸಿ ಪೂಜಿಸುವೆನು. ರಾಮನು ಇಕ್ಷ್ವಾಕುವಂಶದ ರಾಜರಿಂದ ರಕ್ಷಿಸಲ್ಪಟ್ಟ ಅಯೋಧ್ಯಾಪುರಿಯನ್ನು ಸುಖವಾಗಿ ಹಿಂತಿರುಗಿಬಂದು ಸೇರುವಂತೆ ಅನುಗ್ರಹಿಸು" ಎಂದು ಕೈಮುಗಿದು ಪ್ರಾರ್ಥಿಸುತ್ತಿರಲು, ಹಾಗೆಯೇ ದಕ್ಷಿಣತೀರಕ್ಕೆ ಬಂದು ಸೇರಿದರು. ಹೀಗೆ ಸೀತಾ ರಾಮಲಕ್ಷ್ಮಣರು ಮೂವರೂ ಬಹುವೇಗದಿಂದ ಪ್ರವಹಿಸುವುದಾಗಿಯೂ, ವಿಶೇಷವಾದ ಅಲೆಗಳುಳ್ಳುದಾಗಿಯೂ, ಬಗೆಬಗೆಯಾದ ತೀರವೃಕ್ಷಗಳಿಂದ ಕೂಡಿದುದಾಗಿಯೂ ಇರುವ ಆ ಯಮುನಾನದಿಯನ್ನು ಪ್ರಯತ್ನದಿಂದ ದಾಟಿಬಂದು, ದಕ್ಷಿಣತೀರದಲ್ಲಿ ಇಳಿದು, ಆ ತೆಪ್ಪವನ್ನು ಅಲ್ಲಿಯೇ ಬಿಟ್ಟು ಅದರ ತೀರದಲ್ಲಿದ್ದ ವನಪ್ರದೇಶದಮಾರ್ಗವನ್ನು ಹಿಡಿದು ನಡೆದುಹೋಗುತ್ತಿದ್ದರು. ಮುಂದೆ ಹಸುರಾದ ಎಲೆಗಳಿಂದ ಕೂಡಿದ ಶ್ಯಾಮವೆಂಬ ಆಲದಮರವೂ ಕಾಣಿಸಿತು. ಆ ವೃಕ್ಷಸಮೀಪವನ್ನು ಸೇರಿದೊಡನೆಯೇ ಸೀತೆಯು "ಎಲೆಮಹಾವೃಕ್ಷವೆ! ನಿನಗೆ ವಂದಿಸುವೆನು. ನನ್ನ ಪತಿಯು ವನವಾಸವನ್ನು ಮುಗಿಸಿಕೊಂಡು! ಕ್ಷೇಮದಿಂದ ಹಿಂತಿರುಗಿಬರುವಂತೆ ಅನುಗ್ರಹಿಸು. ನಾನೂ ಹಿಂತಿರುಗಿಬಂದು ಕೌಸಲ್ಯೆಯನ್ನೂ ಸುಮಿತ್ರೆಯನ್ನೂ ನೋಡುವಂತೆ ಅನುಗ್ರಹಿಸು" ಎಂದು ಹೇಳುತ್ತಾ ಆ ವೃಕ್ಷವನ್ನು ಪ್ರದಕ್ಷಿಣಮಾಡಿದಳು. ಆಗ ರಾಮನು, ತನ್ನ ಶ್ರೇಯಸ್ಸಿಗಾಗಿ ಬಾರಿಬಾರಿಗೂ ಆ ವೃಕ್ಷವನ್ನು ಕುರಿತು ದೈನ್ಯದಿಂದ ಬೇಡುತ್ತಿರುವ ಸೀತೆಯನ್ನು ನೋಡಿ, ಅವಳಿಗೆ ತನ್ನಲ್ಲಿರುವ ಅಸಾಧಾರಣವಾದ ಭಕ್ತಿವಿಶೇಷವನ್ನೂ, ವಿಧೇಯತೆಯನ್ನೂ ನೋಡಿ ಸಂತೋಷದಿಂದ ಹಿಗ್ಗುತ್ತಾ, ಸಮೀಪದಲ್ಲಿದ್ದ ಲಕ್ಷ್ಮಣನನ್ನು ಕುರಿತು "ವತ್ಸ ಲಕ್ಷ್ಮಣನೆ! ಈ ಸೀತೆಯನ್ನು ಕರೆದುಕೊಂಡು ನೀನು ಮುಂದೆ ನಡೆ,! ನಾನು ನಿಮ್ಮಿಬ್ಬರಿಗೂ ಬೆಂಗಾವಲಾಗಿ ನಿಮ್ಮ ಹಿಂದೆ ಬರುವೆನು. ಎಲೈ ಪುರುಷಶ್ರೇಷ್ಠನೇ! ರಾಜಕುಮಾರಿಯಾದ ಈಕೆಯು ಯಾವಯಾವ ಹಣ್ಣುಗಳನ್ನು ಕೇಳುವಳೋ, ಯಾವಯಾವ ಪುಷ್ಪಗಳನ್ನು ಅಪೇಕ್ಷಿಸುವಳೋ, ಅವುಗಳನ್ನು ಆಗಾಗಲೇ ತಂದಿಡು. ಇವಳ ಮನಸ್ಸಿಗೆ ಯಾವಯಾವ ಭಾಗದಲ್ಲಿ ತೃಪ್ತಿ

ಯುಂಟಾಗಬಹುದೋ ಅವೆಲ್ಲವನ್ನೂ ಲೋಪವಿಲ್ಲದೆ ನಡೆಸು" ಎಂದನು. ಅದರಂತೆಯೇ ಲಕ್ಷ್ಮಣನು ಮುಂದೆಯೂ, ರಾಮನು ಹಿಂದೆಯೂ ಬರುತ್ತಿರಲು,ಎರಡುಗಂಡಾನೆಗಳ ನಡುವೆಹೋಗುತ್ತಿರುವಹೆಣ್ಣಾನೆಯಂತೆ ಅವರಿಬ್ಬರನಡುವೆ ಸೀತೆಯೂ ದಾರಿನಡೆಯುತಿದ್ದಳು. ಅಲ್ಲಿ ಸೀತೆಯು ಅಪೂರ್ವವಾದ ವೃಕ್ಷವನ್ನಾಗಲಿ, ಗಿಡಗಳನ್ನಾಗಲಿ, ಪುಷ್ಪಿತವಾದ ಲತೆಯನ್ನಾಗಲಿ, ನೋಡಿದಾಗಲೆಲ್ಲಾ,ಅವುಗಳ ವಿಷಯವನ್ನುಕುರಿತು ರಾಮನನ್ನು ವಿಚಾರಿಸುತ್ತಿರುವಳು. ಹೀಗೆ ವಿಚಾರಿಸುತ್ತಿರುವಾಗಲೇ ಲಕ್ಷ್ಮಣನು ಆಸೀತೆಯ ಮನೋಭಿಪ್ರಾಯವನ್ನು ತಿಳಿದು, ಅತ್ಯಾತುರದಿಂದ ಹೋಗಿ ಆಯಾಪುಷ್ಪಫಲಗಳನ್ನು ತಂದು ಅವಳಮುಂದಿಡುತಿದ್ದನು. ಆ ಮೂವರೂ ಹೀಗೆಯೇ ಬಹುದೂರದವರೆಗೆ ಆ ಯಮುನಾನದಿಯತೀರವನ್ನೇಹಿಡಿದು ಹೋಗುತಿದ್ದರು. ಆಗ ಸೀತೆಯು ಅಂದವಾದ ಮಳಲುದಿಣ್ಣೆಗಳಿಂದಲೂ,ಹಂಸಸಾರಸಾದಿ ಜಲಚರ ಪಕ್ಷಿಗಳಿಂದಲೂ, ತಿಳಿನೀರಿನಿಂದಲೂ ಅತಿಮನೋಹರವಾದ ಆನದಿಯನ್ನು ನೋಡಿ, ಸಂತೋಷದಿಂದ ಮಾರ್ಗಾಯಾಸವನ್ನೂ ತಿಳಿಯದೆ. ಹೋಗುತಿದ್ದಳು. ಹೀಗೆ ಒಂದು ಹರಿದಾರಿಯದೂರದವರೆಗೆ ನಡೆದುಹೋದಮೇಲೆ,ಅಣ್ಣ ತಮ್ಮಂದಿರಾದ ರಾಮಲಕ್ಷ್ಮಣರಿಬ್ಬರೂ ಅಲ್ಲಿ ಬೇಟೆಯಾಡಿ, ಶಾಸ್ತ್ರೋಕ್ತವಾಗಿ ಆಹಾರಯೋಗ್ಯವಾದ ಕೆಲವು ಮೃಗಗಳನ್ನು ಹೊಡೆದುತಂದು,ಭೋಜನಮಾಡಿದರು. ಅವರು ಇಷ್ಟುಕಷ್ಟದಶೆಯಲ್ಲಿದ್ದರೂ ಮನಸ್ಸಿನಲ್ಲಿ ಉತ್ಸಾಹಗುಂದದೆ, ಉಲ್ಲಾಸದಿಂದಲೇ ಅಲ್ಲಲ್ಲಿ ವಿಹರಿಸುತ್ತಾ,ನವಿಲುಗಳ ಕೇಕಾಧ್ವನಿಗಳಿಂದಲೂ, ಕಾಡಾನೆಗಳಿಂದಲೂ, ಕಾಡುಕಪಿಗಳಿಂದಲೂ ಮನೋಹರವಾದ ಆ ವನಪ್ರದೇಶದಲ್ಲಿ ಸಂತೋಷದಿಂದ ಸಂಚರಿಸುತಿದ್ದರು. ಮತ್ತು ಹಳ್ಳತಿಟ್ಟುಗಳಿಲ್ಲದೆ! ಸಮವಾದ ಭೂಪ್ರದೇಶದಿಂದ ಕೂಡಿದ ಆ ನದೀತೀರದಲ್ಲಿ, ಸೀತೆಗೆ ಅಭಿಮತವಾದ ಒಂದಾನೊಂದುಸ್ಥಳವನ್ನು ನೋಡಿ, ಅಲ್ಲಿಯೇ ವಾಸಸ್ಥಾನವನ್ನೂ ಮಾಡಿಕೊಂಡರು. ಇಲ್ಲಿಗೆ ಐವತ್ತೈದನೆಯಸರ್ಗವು.

---

ರಾಮಾದಿಗಳು ಚಿತ್ರಕೂಟ ಪ್ರಾಂತದಲ್ಲಿದ್ದ ವಾಲ್ಮೀಕ್ಯಾಶ್ರಮವನ್ನು ಸೇರಿದುದು. ವಾಲ್ಮೀಕಿದರ್ಶನವು. ಪರ್ಣಶಾಲೆಯನ್ನು ಕಟ್ಟಿಕೊಂಡು ಚಿರಕಾಲದವರೆಗೆ ಅಲ್ಲಿವಾಸಮಾಡುತ್ತಿದ್ದುದು.

ಆ ರಾತ್ರಿಯು ಕಳೆದು ಬೆಳಗಾದಕೂಡಲೆ ರಾಮನು ಮೊದಲು ನಿದ್ರೆತಿಳಿದೆದ್ದು, ಅರ್ಧನಿದ್ರೆಯಲ್ಲಿಮಲಗಿದ್ದ ಲಕ್ಷ್ಮಣನನ್ನೂ ಮೆಲ್ಲಗೆ ಎಚ್ಚರಗೊಳಿಸಿ"ಎಲೆ ವತ್ಸನೆ!ಕಾಡಿನಲ್ಲಿ ಕಿವಿಗಿಂಪಾಗಿ ಕೂಗುತ್ತಿರುವ ಪಕ್ಷಿಗಳ ಧ್ವನಿಯನ್ನುಕೇಳಿದೆಯಾ?ಬೆಳಗಾಯಿತು. ನಮ್ಮಪ್ರಯಾಣಕ್ಕೆ ಇದೇಸರಿಯಾದ ಕಾಲವು. ನಾವಿನ್ನು ಹೊರಡುವೆವು" ಎಂದನು. ಹೀಗೆ ಸಕಾಲದಲ್ಲಿ ರಾಮನಿಂದ ಎಚ್ಚರಿಸಲ್ಪಟ್ಟ ಲಕ್ಷ್ಮಣನು ಒಡನೆಯೇ ನಿದ್ರೆಯನ್ನೂ, ಬೇಸರವನ್ನೂ ಮಾರ್ಗಾಯಾಸವನ್ನೂ ಬಿಟ್ಟು ಪ್ರಯಾಣಸನ್ನದ್ಧನಾದನು. ಆಮೇಲೆ ಅವರೆಲ್ಲರೂ ಎದ್ದು, ನದಿಯಲ್ಲಿ ಪ್ರಾತರಾಹ್ನಿಕಗಳನ್ನು ಮಾಡಿಕೊಂಡು, ಭರದ್ವಾಜಮಹರ್ಷಿಯು ಹೇಳಿದ್ದ ಮಾರ್ಗವನ್ನೇ ಹಿಡಿದು ಚಿತ್ರಕೂಟಕ್ಕೆ ಹೊರಟರು. ಹೀಗೆ ಸಕಾಲದಲ್ಲಿ ಎದ್ದು ಪ್ರಯಾಣಮಾಡುತ್ತಿರುವಾಗ ರಾಮನು ಲಕ್ಷ್ಮಣನನ್ನೂ, ಕಮಲದಳದಂತೆ ಕಣ್ಣುಳ್ಳ ತನ್ನ ಪ್ರಿಯಪತ್ನಿಯನ್ನೂ ನೋಡಿ "ಎಲೆ ಪ್ರಿಯೆ! ಅದೋ! ಅಲ್ಲಿ ನೋಡು! ಈಗ ಶಿಶಿರಋತುವು ಕಳೆದು ವಸಂತಕಾಲವು ಪ್ರಾಪ್ತವಾಗಿರುವುದರಿಂದ ಮುತ್ತುಗದಮರಗಳೆಲ್ಲವೂ ಪುಷ್ಪಭರಿತಗಳಾಗಿ, ಜ್ವಲಿಸುವಂತೆ ಕೆಂಪಗೆ ಕಾಣುತ್ತಿರುವುವು. ಪುಷ್ಪಸಮೃದ್ಧಿಯಿಂದ ಇಲ್ಲಿನ ಅನೇಕವೃಕ್ಷಗಳು ಹೂದಂಡೆಯಿಂದ ಅಲಂಕರಿಸಲ್ಪಟ್ಟಿರುವಂತೆ ಕಾಣುವುವು. ಇದೋ! ಇತ್ತಲಾಗಿ ನೋಡು! ಅರಳಿದ ಹೂಗಳಿಂದ ತುಂಬಿದ ಭಲ್ಲಾತಕವೃಕ್ಷಗಳು ಹೇರಳವಾಗಿರುವುವು. ಈ ಸ್ಥಳವು ದುರ್ಗಮವಾದುದರಿಂದ ಮನುಷ್ಯರು ಯಾರೂ ಬಂದು ಇವುಗಳಲ್ಲಿ ಹಣ್ಣುಗಳನ್ನೂ, ಕಾಯಿಗಳನ್ನೂ, ಹೂಗಳನ್ನೂ ಅನುಭವಿಸುವುದಕ್ಕಿಲ್ಲ. ಆದುದರಿಂದ ಆ ಹಣ್ಣುಗಳು ಮರದಲ್ಲಿಯೇ ತುಂಬಿ ಕೊಂಬೆಗಳೆಲ್ಲವೂ ಅವುಗಳ ಭಾರಕ್ಕೆ ಬಗ್ಗಿಹೋಗಿರುವುದನ್ನು ನೋಡಿದೆಯಾ? ಇಲ್ಲಿ ನಾವು ಸುಖವಾಗಿ ಜೀವಿಸುತ್ತಿರಬಹುದೆಂಬುದರಲ್ಲಿ ಸಂದೇಹವಿಲ್ಲ. ವತ್ಸ ಲಕ್ಷ್ಮಣನೆ! ಇಲ್ಲಿ ನೋಡು! ಒಂದೊಂದುಮರದಲ್ಲಿಯೂ ಜೇನುಹುಳುಗಳು ಗೂಡನ್ನು

ಕಟ್ಟಿ, ಸಮೃದ್ಧವಾಗಿ ಜೇನನ್ನು ತುಂಬಿಟ್ಟಿರುವುವು. ಇವುಗಳಲ್ಲಿ ಒಂದೊಂದ ರಲ್ಲಿಯೂ ಒಂದೊಂದು ಕೊಳಗದಷ್ಟು ಜೇನಿರುವುದರಲ್ಲಿ ಸಂದೇಹವಿಲ್ಲ. ಅದರ ಭಾರಕ್ಕಾಗಿ ಗೂಡುಗಳು ಜೋಲುಬಿದ್ದಿರುವುದನ್ನು ನೋಡು. ಇತ್ತಲಾಗಿ ದಾತ್ಯೂಹಗಳೆಂಬ ಪಕ್ಷಿಗಳು ಕೂಗುತ್ತಿರುವುವು. ಅದನ್ನು ಕೇಳಿ ಪ್ರತಿಧ್ವನಿಕೊಡುವಂತೆ ಅತ್ತಲಾಗಿ ನವಿಲುಗಳು ಕೂಗುತ್ತಿರುವುವು.ಇದೋ! ಇದೇ ಚಿತ್ರಕೂಟವು. ಆನೆಗಳ ಹಿಂಡು ಅಲ್ಲಲ್ಲಿ ಸಂಚರಿಸುತ್ತಿರುವುವು. ಪಕ್ಷಿಗಳ ಗುಂಪು ಕಿವಿಗಿಂಪಾಗಿ ಕೂಗುತ್ತಿರುವುವು. ಈಪರ್ವತದ ಶಿಖರವು ಎಷ್ಟು ಉನ್ನತವಾಗಿರುವುದು ನೋಡು.ಇಲ್ಲಿ ವಿಶೇಷವಾಗಿ ವೃಕ್ಷಗಳಿಂದ ತುಂಬಿ ಸಮಭೂಮಿಯುಳ್ಳ ಒಂದಾನೊಂದು ಪ್ರದೇಶವನ್ನು ನೋಡಿ ಇಲ್ಲಿಯೇ ನಾವು ಆಶ್ರಮವನ್ನು ಮಾಡಿಕೊಂಡು ವಿನೋದದಿಂದ ಕಾಲವನ್ನು ಕಳೆಯುವುದು ಉತ್ತಮವು. ಇದರಮೇಲೆ ಇದುಬಹಳ ಪವಿತ್ರವಾದ ಸ್ಥಳವೂ ಆಗಿರುವುದು" ಎಂದನು. ಹೀಗೆಯೇ ಪರಸ್ಪರಸಲ್ಲಾಪಗಳನ್ನು ಮಾಡುತ್ತಾ, ಆ ರಾಮಲಕ್ಷ್ಮಣರಿಬ್ಬರೂ ಸೀತೆಯೊಡಗೂಡಿ ಕಾಲುನಡೆಯಿಂದಲೇ ಬಹುದೂರನಡೆದು ಕೊನೆಗೆ ಚಿತ್ರಕೂಟಪರ್ವತವನ್ನು ಸೇರಿದರು. ಅನೇಕಪಕ್ಷಿಸಮೂಹಗಳಿಂದ ಕೂಡಿ, ವಿಶೇಷವಾದ ಫಲಮೂಲಸಮೃದ್ಧಿಯುಳ್ಳುದಾಗಿ, ನಿರ್ಮಲವಾದ ಮತ್ತು ರುಚಿಯಾದ ನೀರುಳ್ಳ ಗಿರಿನದಿಗಳಿಂದ ತುಂಬಿದ ಆ ಪರ್ವತವನ್ನು ಸೇರಿದೊಡನೆಯೇ ರಾಮನು ಲಕ್ಷ್ಮಣನನ್ನು ಕುರಿತು "ಎಲೈ, ಸೌಮ್ಯನೆ! ನಿಜವಾಗಿಯೂ ಈ ಪರ್ವತವು ಬಹುಮನೋಹರವಾಗಿರುವುದು.ಇಲ್ಲಿ ಫಲಮೂಲಗಳೆಲ್ಲವೂ ಸಮೃದ್ಧಿಯಾಗಿ ಸಿಕ್ಕುವುವು. ನಮ್ಮ ವಾಸಕ್ಕೆ ಇದೇ ಸುಖವಾದ ಸ್ಥಳವೆಂದು ನನಗೆ ತೋರಿರುವುದು. ಅನೇಕ ಮಹಾತ್ಮರಾದ ಮಹರ್ಷಿಗಳು ಇಲ್ಲಿವಾಸಮಾಡುತ್ತಿರುವರು." ಎಂದು ಹೇಳಿ ಒಬ್ಬರಿಗೊಬ್ಬರು ಸಲ್ಲಪಿಸುತ್ತ ಅಲ್ಲಿಯೇ ವಾಸಮಾಡುವುದೆಂದು ನಿಶ್ಚಯಿಸಿಕೊಂಡು, ಆ ಮೂವರೂ ಅಲ್ಲಿಂದ [1]ವಾಲ್ಮೀಕ್ಯಾಶ್ರಮಕ್ಕೆ ಹೋಗಿ ಆ ಮಹರ್ಷಿಗೆ ಕೈ

---

1 ರಾಮನು ಚಿತ್ರಕೂಟಕ್ಕೆ ಹೋದಕಾಲದಲ್ಲಿ ವಾಲ್ಮೀಕಿಯು ಆ ಪರ್ವತಪ್ರಾಂತದಲ್ಲಿಯೇ ಆಶ್ರಮವನ್ನು ಮಾಡಿಕೊಂಡಿರುತಿದ್ದನು. ಭರತನು ಅಲ್ಲಿಗೆ ಬಂದು ಹೋದಮೇಲೆ, ಆ ಮಹರ್ಷಿಯು ಈ ಆಶ್ರಮವನ್ನು ಬಿಟ್ಟು ತಪಸ್ಸಿಗಾಗಿ ತಮಸಾನದೀತೀರಕ್ಕೆ ಹೋಗಿ ಅಲ್ಲಿ ನೆಲೆಗೊಂಡನೆಂದು ಗ್ರಹಿಸಬೇಕು.

ಮುಗಿದು ನಮಸ್ಕರಿಸಿದರು. ಆಗ ವಾಲ್ಮೀಕಿಮುನಿಯು ಇವರ ಆಗಮ ನಕ್ಕಾಗಿ ಬಹಳಸಂತೋಷಗೊಂಡು, ಅವರನ್ನು ಯಥೋಚಿತವಾಗಿ ಪೂಜಿಸಿ ಸುಖಾಗಮನವನ್ನು ಕೇಳಿ ಆಸನವನ್ನು ಕೊಟ್ಟು, ಕುಳ್ಳಿರಿಸಿದನು. ಆಗ ಮಹಾಬಾಹುವಾದ ರಾಮನು ಆ ಮಹರ್ಷಿಗೆ ತನ್ನ ಮತ್ತು ಸೀತಾಲಕ್ಷ್ಮ ಣರ ಪೂರ್ವೋತ್ತರಗಳೆಲ್ಲವನ್ನೂ ತಿಳಿಸಿ ಅಭಿವಾದನಮಾಡಿದನು. ಆಮೇಲೆ ಲಕ್ಷ್ಮಣನನ್ನು ನೋಡಿ, "ಎಲೆ, ವತ್ಸನೆ! ನೀನು ಈಗಲೇ ಹೋಗಿ,ಗಟ್ಟಿಯಾ ದ ಮರದ ತುಂಡುಗಳನ್ನು ಸಂಗ್ರಹಿಸಿಕೊಂಡು ಬಂದು ಒಂದು ಗುಡಿಸಲ ನ್ನು ಮಾಡು. ಇಲ್ಲಿಯೇ ವಾಸಮಾಡಬೇಕೆಂದು ನನ್ನ ಮನಸ್ಸಿಗೆ ತೋರು ರುವುದು." ಎಂದನು. ಒಡನೆಯೇ ಲಕ್ಷ್ಮಣನು ನಾನಾವಿಧವಾದ ಮರಗ ಳನ್ನು ತಂದು ಶೀಘ್ರದಲ್ಲಿಯೇ ಪರ್ಣಶಾಲೆಯನ್ನು ಸಿದ್ಧಪಡಿಸಿಟ್ಟನು. ಬ ಲವಾದ ಗೋಡೆಗಳುಳ್ಳುದಾಗಿ ಮಳೆಗಾಳಿಗಳಿಗೆ ಅಲ್ಲಾಡದಂತೆ ಕಟ್ಟಲ್ಪಟ್ಟ ಆ ಪರ್ಣಶಾಲೆಯು ನೋಡುವುದಕ್ಕೆ ಬಹಳ ಅಂದವಾಗಿಯೂ ಕಾಣುತಿತ್ತು. ಅದನ್ನು ನೋಡಿ ರಾಮನು ಬಹಳಸಂತೋಷಪಟ್ಟು, ತನಗೆ ಅನವರತವೂ ಪ ರಿಚರ್ಯೆಯನ್ನು ಮಾಡುತ್ತ ತನ್ನ ಅಜ್ಞೆಯನ್ನೇ ಬಹಳ ಎಚ್ಚರಿಕೆಯಿಂದ ಇದಿ ರುನೋಡುತ್ತಿರುವ ಲಕ್ಷ್ಮಣನನ್ನು ನೋಡಿ "ವತ್ಸ, ಲಕ್ಷ್ಮಣನೆ! ಉತ್ತಮ ವಾದ ಜಿಂಕೆಯ ಮಾಂಸವನ್ನು ತಂದು ಈ ಮನೆಗೆ ಶಾಂತಿಕರ್ಮಗಳನ್ನು ನಡೆಸಬೇಕು. ಈ ನಿವೇಶನದಲ್ಲಿ ನಾನಾದಿಕ್ಕುಗಳಲ್ಲಿಯೂ ಇರುವ ದೇವತೆ ಗಳ ಪ್ರೀತ್ಯರ್ಥವಾಗಿ ಗೃಹಪ್ರವೇಶಕ್ಕೆ ಮೊದಲು ವಾಸ್ತುಕರ್ಮಗಳನ್ನು ನಡೆಸಬೇಕು. ಆಮೇಲೆಯೇ ಇದರಲ್ಲಿವಾಸಮಾಡತಕ್ಕವರಿಗೆ ಶ್ರೇಯಸ್ಸುಂಟು. ಗೃಹವಾಸಿಗಳು ಚಿರಜೀವಿಗಳಾಗಿರಬೇಕಾದರೆ ಮೊದಲು ಈ ಶಾಂತಿಕರ್ಮವ ನ್ನುನಡೆಸಿಯೇ ತೀರಬೇಕು. ಈಗಲೇ ಒಂದು ಮೃಗವನ್ನು ಹೊಡೆದು ತರು ವನಾಗು. ಈ ಸಂದರ್ಭಗಳಲ್ಲಿ ಪ್ರಾಣಿವಧವನ್ನು ಮಾಡುವುದು ದೋ ಷವೆಂದೆಣಿಸಬೇಡ. ಧರ್ಮದೃಷ್ಟಿಯುಳ್ಳವರು ಶಾಸ್ತ್ರವಿಹಿತವಾದ ಕಾರ್ಯ ವನ್ನು ಮಾಡಿಯೇ ತೀರಬೇಕಲ್ಲವೆ!" ಎಂದನು. ಒಡನೆಯೇ ಲಕ್ಷ್ಮಣನು ಅಣ್ಣನ ಆಜ್ಞಾನುಸಾರವಾಗಿ ಅದೆಲ್ಲವನ್ನೂ ಲೋಪವಿಲ್ಲದೆನಡೆಸಿ, ರಾಮನನ್ನು ಕುರಿತು, "ಅಣ್ಣಾ! ಇದೋ ಮೃಗಮಾಂಸವನ್ನು ಸಿದ್ಧಪಡಿಸಿರುವೆನು." ಎಂ ದನು. ರಾಮನು ಪುನಃ ಲಕ್ಷ್ಮಣನನ್ನು ಕುರಿತು "ವತ್ಸನೆ! ಇದನ್ನು ಪಚನ

ಮಾಡು! ಗೃಹದೇವತೆಗಳನ್ನು ಪೂಜಿಸುವೆವು! ಆ ಕಾರ್ಯಕ್ಕೆ ಇದೇ ಶುಭಮುಹೂರ್ತವಾಗಿರುವದು. ದಿವಸವೂ ಒಳ್ಳೆಯದಾಗಿರುವುದು." ಎಂದನು. ಲಕ್ಷ್ಮಣನು ಇದನ್ನು ಕೇಳಿದೊಡನೆ ಶುದ್ಧವಾದ ಆ ಮೃಗಮಾಂಸವನ್ನು ಉರಿಯುತ್ತಿರುವ ಬೆಂಕಿಯಲ್ಲಿ ಬೇಯಿಸಿ, ಅದರ ರಕ್ತವೆಲ್ಲವೂ ಆರಿ ಚೆನ್ನಾಗಿ ಪಕ್ವವಾದಮೇಲೆ ರಾಮನನ್ನು ನೋಡಿ, "ಎಲೈ, ದೇವನೆ! ಇದೋ ಕರೀಜಿಂಕೆಯ ಮಾಂಸವನ್ನು ಚೆನ್ನಾಗಿ ಬೇಯಿಸಿಟ್ಟಿರುವೆನು. ಇದು ಸರ್ವಾವಯವಗಳಿಂದ ಕೂಡಿ, ಮೃಗಾಕಾರದಿಂದಲೇ ಇರುವುದು. ಇನ್ನು ವಾಸ್ತುದೇವತೆಗಳನ್ನು ಪೂಜಿಸು. ಈ ಕಾರ್ಯಕ್ಕೆ ನೀನೇ ಸಮರ್ಥನು." ಎಂದನು. ಆಗ ರಾಮನು, ನಿಯಮದಿಂದ ಸ್ನಾನಮಾಡಿಬಂದು, ಕಾಲೋಚಿತವಾದ ಮಂತ್ರಜಪಗಳೆಲ್ಲವನ್ನೂ ಚೆನ್ನಾಗಿ ತಿಳಿದವನಾದುದರಿಂದ ಆ ವಾಸ್ತುಕರ್ಮಗಳಿಗೆ ಬೇಕಾದ ಮಂತ್ರಗಳೆಲ್ಲವನ್ನೂ ಜಪಿಸಿ, ಅದು ಮುಗಿಯುವವರೆಗೆ ನಡೆಸಬೇಕಾದ ಶಾಂತಿಕರ್ಮಗನ್ನೂ ನಡೆಸಿದನು. ಆಮೇಲೆ ಆ ವಾಸ್ತುದೇವತಾ ಸಮೂಹಗಳೆಲ್ಲವನ್ನೂ ಯಥೋಚಿತವಾಗಿ ಪೂಜಿಸಿ, ಶುದ್ಧನಾಗಿ ಆ ಮನೆಯನ್ನು ಪ್ರವೇಶಿಸಿದನು. ಮಹಾತೇಜಸ್ವಿಯಾದ ರಾಮನು ಇವೆಲ್ಲವನ್ನೂ ನಡೆಸಿ ಸಂತುಷ್ಟಚಿತ್ತನಾಗಿ, ವೈಶ್ವದೇವಬಲಿ, ರುದ್ರಬಲಿ, ವಿಷ್ಣುಬಲಿ ಮೊದಲಾದ ಬಲಿಕರ್ಮಗಳನ್ನೂ ನಡೆಸಿದನು. ವಾಸ್ತುಶಾಂತಿಗಾಗಿ ಗೃಹಾರಿಷ್ಟಗಳನ್ನು ಶಮನಮಾಡತಕ್ಕ ಮಂಗಳಕರವಾದ ಪುಣ್ಯಾಹವಾಚನಗಳನ್ನೂ, ಜಪಶಾಂತಿಗಳನ್ನೂ,ಕ್ರಮವಾಗಿಆಯಾಮಂತ್ರಗಳಿಂದಲೇ ನಡೆಸಿದನು. ಯಥಾವಿಧಿಯಾಗಿ ಪುನಃ ಸ್ನಾನಮಾಡಿ,ಸಮಸ್ತಪಾಪಶಾಂತ್ಯರ್ಥವಾಗಿ ಮಾಡಬೇಕಾದ ಬಲಿಕರ್ಮಗಳನ್ನೂ ಮಾಡಿದನು.. ಆಮೇಲೆ ಆ ಮನೆಯಲ್ಲಿ ಅಪ್ರಮೋಚಿತವಾದ ಅಗ್ನಿವೇದಿಕೆಗಳನ್ನೂ, ದೇವತಾಗಾರಗಳನ್ನೂ, ಅಗ್ನಿಗೃಹಗಳನ್ನೂ ಸಂಗ್ರಹವಾಗಿ ಮಾಡಿಸಿಟ್ಟನು. ಆಗ ರಾಮಲಕ್ಷ್ಮಣರಿಬ್ಬರೂ ಸೀತಾಸಮೇತರಾಗಿ ಪುಷ್ಪಗಳಿಂದಲೂ, ಪಕ್ವವಾದ ಮಾಂಸಗಳಿಂದಲೂ, ಜಲತರ್ಪಣದಿಂದಲೂ, ಮಂತ್ರಜಪಗಳಿಂದಲೂ, ದರ್ಭೆ, ಸಮಿತ್ತು,ಮೊದಲಾದ ಪೂಜಾಸಾಮಗ್ರಿಗಳಿಂದಲೂ, ಯಥಾವಿಧಿಯಾಗಿ ಭೂತಗಳಿಗೆ ತೃಪ್ತಿಯನ್ನುಂಟುಮಾಡಿ, ಸುಂದರವಾದ ಆಪರ್ಣಶಾಲೆಯ ಬಾಗಿಲಿಗೆ ಬಂದರು. ಮರದೆಲೆಗಳಿಂದ ಚೆನ್ನಾಗಿ ಹೊದ್ದಿಸಲ್ಪಟ್ಟು, ಶಾಸ್ತ್ರೋಕ್ತ

ವಾದ ಆಯಾದೇಶ ವಿಭಾಗಗಳೊಡಗೂಡಿ, ಅಂದವಾಗಿಯೂ, ಮಳೆ ಗಾಳಿಗಳಿಗೆತಡೆಯುವಂತೆದೃಢವಾಗಿಯೂಕಟ್ಟಲ್ಪಟ್ಟ ಆಪರ್ಣಶಾಲೆಯನ್ನು, ದೇವತೆಗಳು ಸುಧರ್ಮಾಸಭೆಯನ್ನು ಪ್ರವೇಶಿಸುವಂತೆ ಸೀತಾಲಕ್ಷ್ಮಣರಿಬ್ಬ ರೂ ರಾಮನನ್ನು ಮುಂದಿಟ್ಟುಕೊಂಡು ಪ್ರವೇಶಿಸಿದರು. ಹೀಗೆ ಆಸೀತಾ ರಾಮಲಕ್ಷ್ಮಣರು ಮೂವರೂ, ಅನೇಕಮೃಗಪಕ್ಷಿಗಳಿಂದಲೂ, ವಿಚಿತ್ರವಾ ದ ಹೂಗೊಂಚಲುಗಳಿಂದ ಕೂಡಿದ ವೃಕ್ಷಗಳಿಂದಲೂ ತುಂಬಿ, ಆನೆಗಳ ಕೂ ಗಿನಿಂದಲೂ, ಇತರಮೃಗಗಳ ಧ್ವನಿಯಿಂದಲೂ ಮನೋಹರವಾದ ಆ ವನ ದಲ್ಲಿ ಜಿತೇಂದ್ರಿಯರಾಗಿ ಸುಖದಿಂದ ವಿಹರಿಸುತ್ತಿದ್ದರು. ಅತಿಮನೋಹರವಾ ದ ಪರ್ವತಪ್ರದೇಶಗಳಲ್ಲಿಯೂ, ನಿರ್ಮಲವಾದ ತೀರ್ಥವುಳ್ಳ ಅಲ್ಲಿನ ಮಾಲ್ಯ ವತೀನದಿಯಲ್ಲಿಯೂ, ಆಗಾಗ ವಿಹರಿಸುತ್ತ, ವಿಚಿತ್ರ ವಿಚಿತ್ರಗಳಾದ ಮೃ ಗಪಕ್ಷಿಗಳಿಂದ ಕೂಡಿದ ಆ ಪ್ರದೇಶವನ್ನು ಆಗಾಗ ನೋಡಿ ಸಂತೋಷಿಸು ತ್ತಾ, ತಾನು ಪಟ್ಟಣವನ್ನು ಬಿಟ್ಟುಬಂದದುಃಖವನ್ನೂ ಮರೆತು ರಾಮನು ಸಂತೋಷದಿಂದಿರುತ್ತಿದ್ದನು. ಇಲ್ಲಿಗೆ ಐವತ್ತಾರನೆಯಸರ್ಗವು.

---

{ ಸುಮಂತ್ರನು ರಾಮನನ್ನು ಬಿಟ್ಟು ಅಯೋಧ್ಯೆಗೆ ಹೋದುದು. ಪುರಜನರ ದುಃಖವು. ದಶರಥನಶೋಕವು. }

ಇತ್ತಲಾಗಿ ರಾಮನು ಗಂಗೆಯ ದಕ್ಷಿಣತೀರವನ್ನು ಸೇರಿ, ಕಣ್ಮರೆ ಯಾದಮೇಲೆ, ಅತ್ತಲಾಗಿ ಗುಹನು ಬಹಳ ದುಃಖ ಪೀಡಿತನಾಗಿ, ಸುಮಂತ್ರನೊಡನೆ ಇದೇ ವಿಷಯವನ್ನು ಕುರಿತು ಸಲ್ಪಹೊತ್ತಿನವರೆಗೆ ಮಾತಾಡುತ್ತಿದ್ದು, ಆಮೇಲೆ ತನ್ನ ಮನೆಗೆ ಬಂದುಸೇರಿದನು. ಅತ್ತಲಾಗಿ ರಾ ಮನು[1]ಭರದ್ವಾಜಾಶ್ರಮಕ್ಕೆಹೋಗಿ ಋಷಿಯನ್ನು ದರ್ಶನಮಾಡಿದುದನ್ನೂ,

---

1 ಮೊದಲನೆಯ ದಿವಸದಲ್ಲಿ ಗಂಗೆಯನ್ನು ದಾಟಿ ಒಂದುಮರದಕೆಳಗೆ ವಾಸ ಮಾಡುತ್ತಿದ್ದುದು. ಎರಡನೆಯ ದಿನದಲ್ಲಿ ಭರದ್ವಾಜಾಶ್ರಮವಾಸವು. ಮೂರನೆಯ ದಿನ ದಲ್ಲಿ ಯಮುನಾತೀರದಲ್ಲಿದ್ದುದು, ನಾಲ್ಕನೆಯ ದಿನದಲ್ಲಿ ಚಿತ್ರಕೂಟಗಮನವು, ಐದ ನೆಯ ದಿನದಲ್ಲಿ ಚಾರರು ಹಿಂತಿರುಗಿ ಬಂದು ವೃತ್ತಾಂತವನ್ನು ತಿಳಿಸಿದುದು, ಎಂದು ಗ್ರಹಿಸಬೇಕು.

ಪ್ರಯಾಗದಲ್ಲಿ ಅವರೂಡನೆಕಲೆತು ವಾಸಮಾಡುತಿದ್ದುದನ್ನೂ, ಅಲ್ಲಿಂದ ಅವರೆಲ್ಲರೂ ಚಿತ್ರಕೂಟಪರ್ವತದ ಸಮೀಪಕ್ಕೆ ಹೋದುದನ್ನೂ ಗುಹಸುಮಂತ್ರರಿಬ್ಬರೂ ಅಲ್ಲಿಯೇಚಾರರಿಂದ ತಿಳಿದರು. ಅವರು ಇನ್ನೂ ಮುಂದೆ ಹೊರಟುಹೋದಮೇಲೆ, ಸುಮಂತ್ರನು ರಥಕ್ಕೆ ಕುದುರೆಗಳನ್ನು ಕಟ್ಟಿಕೊಂಡು, ಗುಹನ ಅನುಮತಿಯನ್ನು ಪಡೆದು, ದುಃಖದಿಂದ ಅಯೋಧ್ಯಾಪುರದ ಕಡೆಗೆ ಹೊರಟನು. ಇವನು ದಾರಿಯಲ್ಲಿ ಬರುತ್ತಿರುವಾಗ, ಅಲ್ಲಲ್ಲಿ ಸುವಾಸನೆಯುಳ್ಳ ವನಪ್ರದೇಶಗಳೂ, ನದಿಗಳೂ,ಸರೋವರಗಳೂ, ಗ್ರಾಮಗಳೂ, ನಗರಗಳೂ, ಕಣ್ಣಿಗೆ ಅತ್ಯಾನಂದವನ್ನುಂಟುಮಾಡುತ್ತಿರಲು, ಮಾರ್ಗಾಯಾಸವನ್ನೇ ತಿಳಿಯದೆ ಬಹುವೇಗದಿಂದ ಬರುತ್ತಿದ್ದನು ಇವನು ಗುಹನನ್ನು ಬಿಟ್ಟು ಹೊರಟ ಮೂರನೆಯದಿವಸದ ಸಾಯಂಕಾಲದ ಹೊತ್ತಿಗೆ ಅಯೋಧ್ಯೆಯನ್ನು ಮುಟ್ಟಿದನು. ಅವನು ಅಲ್ಲಿ ಬಂದು ನೋಡಿದಾಗ ಆ ಅಯೋಧ್ಯೆಯ ದುಸ್ಥಿತಿಯನ್ನು ಹೇಳತಕ್ಕುದೇನು? ಅಲ್ಲಿ ಯಾವ ಪ್ರಾಣಿಗಳಲ್ಲಿಯೂ ಪರೂ ಸಂತೋಷವೆಂಬುದೇ ಇರಲಿಲ್ಲ. ಆಪಟ್ಟಣವೆಲ್ಲವೂ ಬಹಳ ನಿಶ್ಶಬ್ದವಾಗಿದ್ದುದರಿಂದ, ಬಹುಕಾಲದಿಂದ ಹಾಳುಬಿದ್ದಊರಿನಂತೆ ಕಾಣಿಸುತಿತ್ತು. ಈದುರವಸ್ಥೆಯನ್ನು ನೋಡಿದೊಡನೆಯೇ ಸುಮಂತ್ರನ ದುಃಖವು ಮತ್ತಷ್ಟು ಹೆಚ್ಚಿತು. ಹಾಗೆಯೇ ಸಂಕಟದಿಂದ ಏನೊತೋರದೆ, ಮನಸ್ಸಿನಲ್ಲಿ “ಆಃ! ಇದೇನು? ಈಪಟ್ಟಣವು ತನ್ನಲ್ಲಿರುವ ಆನೆ ಕುದುರೆಗಳೊಡನೆಯೂ, ಪ್ರಜೆಗಳೊಡನೆಯೂ, ರಾಜನೊಡನೆಯೂ ಕೂಡಿ, ರಾಮವಿರಹದಿಂದುಂಟಾದ ಶೋಕಾಗ್ನಿಯಿಂದ ಒಟ್ಟಿಗೆ ಬೆಂದೇಹೋಗಿರಬಹುದೆ?” ಎಂದು ಚಿಂತಿಸಿ ಕೊರಗುತ್ತ, ಹಿಂದು ಮುಂದು ತೋರದೆ,ಕುದುರೆಗಳನ್ನು ವೇಗವಾಗಿ ಓಡಿಸಿಕೊಂಡು ಪಟ್ಟಣದ ದ್ವಾರಪ್ರದೇಶವನ್ನು ಸೇರಿ ಒಳಕ್ಕೆ ಪ್ರವೇಶಿಸಿದನು. ಈ ರಥವನ್ನು ನೋಡಿದೊಡನೆಯೇ ಪುರವಾಸಿಗಳೆಲ್ಲರೂ ಸಾವಿರಲಕ್ಷದಂದ ಗುಂಪುಗೂಡಿ, ರಥವನ್ನು ಹಿಂಬಾಲಿಸಿ ಓಡಿಬರುತ್ತ, ಸುಮಂತ್ರನನ್ನು ಕುರಿತು, “ಎಲೆ ಸೂತನೆ! ನಮ್ಮ ರಾಮನೆಲ್ಲಿ?” ಎಂದು ಕೇಳತೊಡಗಿದರು. ಆಗ ಸುಮಂತ್ರನು, ಅವರನ್ನು ಕುರಿತು, “ಎಲೈಪ್ರಜೆಗಳಿರಾ! ರಾಮನು ಗಂಗಾತೀರವನ್ನು ಸೇರಿದಮೇಲೆ,ನನ್ನನ್ನು ಹಿಂತಿರುಗಿಹೋಗುವಂತೆ ನಿರ್ಬಂಧಿಸಿದನು. ಅವನ ಅನುಜ್ಞೆಯನ್ನು ಪಡೆದು ನಾನು ಅಲ್ಲಿಂದ

ಹಿಂತಿರುಗಿ ಬಂದುಬಿಟ್ಟೆನು" ಎಂದನು. ಇದನ್ನು ಕೇಳಿ ಅಲ್ಲಿದ್ದ ಜನರೆಲ್ಲರೂ ಆಶಾಭಂಗವನ್ನು ಹೊಂದಿ ದುಃಖಿತರಾಗಿ, ರಾಮನು ಸೀತಾಲಕ್ಷ್ಮಣರೊಡನೆ ಗಂಗೆಯನ್ನೂ ದಾಟಿ ಹೊರಟುಹೋಗಿರುವನೆಂದು ನಿರ್ಧರಿಸಿಕೊಂಡು ಕಣ್ಣೀರನ್ನು ಸುರಿಸುತ್ತ, "ಛೀ! ಇನ್ನು ಕೆಲಸವೇ ಕೆಟ್ಟಿತು!" ಎಂದು ನಿರಾಶರಾಗಿ "ಹಾರಾಮಾ!" ಎಂದು ಗಟ್ಟಿಯಾಗಿ ಪ್ರಲಾಪಿಸುತಿದ್ದರು. ಅಲ್ಲಲ್ಲಿ ಜನರು ಗುಂಪುಗುಂಪಾಗಿ ನಿಂತು, "ಅಯ್ಯೋ ನಾವು ಕೆಟ್ಟೆವು! ಇನ್ನು ರಾಮನನ್ನು ನೋಡುವುದೆಲ್ಲಿ? ಆತನನ್ನು ನೋಡದೆ ನಾವು ಬದುಕುವಬಗೆ ಹೇಗೆ? [1] ಇನ್ನು ಮೇಲೆ ದಾನಕಾಲಗಳಲ್ಲಿಯಾಗಲಿ, ಯಜ್ಞಕಾಲಗಳಲ್ಲಿಯಾಗಲಿ, ವಿವಾಹಕಾಲಗಳಲ್ಲಿಯಾಗಲಿ, ದೊಡ್ಡದೊಡ್ಡ ವಿನೋದಗೋಷ್ಠಿಗಳಲ್ಲಿಯಾಗಲಿ, ನಾವು ರಾಮನನ್ನು ನೋಡುವುದಕ್ಕಿಲ್ಲವಲ್ಲಾ! ರಾಮನನ್ನು ತೊರೆದುಬಿಟ್ಟ ಮೇಲೆ ಇಲ್ಲಿನ ಜನರು ಇನ್ನು ಯಾವಕಾರ್ಯವನ್ನು ತಾನೇ ಮಾಡಬಲ್ಲರು? ಇವರಿಗೆ ಇನ್ನು ಯಾವುದು ತಾನೇ ಪ್ರಿಯವಾಗಿರುವುದು? ಇನ್ನು ಇವರಿಗೆ ಸುಖವೆಲ್ಲಿಯದು? ರಾಮನು ಈ ನಗರವಾಸಿಗಳೆಲ್ಲರನ್ನೂ ಹೆತ್ತತಂದೆಯಂತೆ ಎಷ್ಟೋ ಪ್ರೇಮದಿಂದ ಪೋಷಿಸುತಿದ್ದನಲ್ಲಾ! ಇನ್ನು ಈ ಜನಕ್ಕೆ ಗತಿಯೇನು? "ಎಂದು ಪ್ರಲಾಪಿಸುತಿದ್ದರು. ಹಾಗೆಯೇ ಅಂಗಡಿಬೀದಿಯಲ್ಲಿ ಬರುತ್ತಿರುವಾಗ, ಪುರಸ್ತ್ರೀಯರೆಲ್ಲರೂ ತಮ್ಮತಮ್ಮ ಮನೆಯ ಗವಾಕ್ಷಗಳಲ್ಲಿ ಬಗ್ಗಿ, ಈ ಶೂನ್ಯರಥವನ್ನು ನೋಡುತ್ತ, ನಾನಾವಿಧದಲ್ಲಿ ಗೋಳಾಡುತಿದ್ದರು. ಈ ಪ್ರಲಾಪಧ್ವನಿಗಳನ್ನು ಕೇಳಿ ಸುಮಂತ್ರನು ಲಜ್ಜೆಯಿಂದಲೂ, ದುಃಖದಿಂದಲೂ, ಅವರಿಗೆ ಮುಖವನ್ನು ತೋರಿಸಲಾರದೆ, ಮುಖಕ್ಕೆ ಮುಸುಕು

---

1 ಬೇರೆ ಯಾರಾದರೂ ದಾನಮಾಡುವಾಗ, ಅವರಿಗೆ ದೇಶಕಾಲಗಳನ್ನು ತಿಳಿಸಿ ಸತ್ಪಾತ್ರಗಳಿಗೆ ಕೊಡಿಸುವುದೂ, ಯಜ್ಞಕಾಲಗಳಲ್ಲಿ ನ್ಯಾಯಾರ್ಜಿತವಾದ ದ್ರವ್ಯದಿಂದಲೇ ಅದನ್ನು ಮಾಡಿಸಿ, ಅಲ್ಲಲ್ಲಿ ಸಂದೇಹಗಳನ್ನು ನಿವೃತ್ತಿಮಾಡಿ ಯಜ್ಞಗಳನ್ನು ಸಾಂಗವಾಗಿ ನಡೆಸುವುದೂ, ವಿವಾಹಾದಿಕಾಲಗಳಲ್ಲಿ ಉಭಯವರ್ಗದವರನ್ನೂ ಒಂದಾಗಿ ಸೇರಿಸಿ, ದ್ರವ್ಯದಾನಾದಿಗಳಲ್ಲಿ ಆಗಾಗ ಅವರವರಿಗೆ ಉಂಟಾಗತಕ್ಕ ಅಸಮಾಧಾನಗಳನ್ನು ನೀಗಿಸಿ, ಆ ಕಾರ್ಯವು ನಿರ್ವಿಘ್ನವಾಗಿ ನಡೆಯುವಂತೆ ಮಾಡುವುದೂ, ಈ ರಾಮನ ಕೆಲಸವಾಗಿತ್ತೆಂದು ಭಾವವು. ಇದರಿಂದಲೇ ಇಂತಹ ಸಂದರ್ಭಗಳಲ್ಲಿ ರಾಮನು ತಪ್ಪದೆ ತಾನೇ ಬಂದು ಆ ಯಾಕಾರ್ಯಗಳನ್ನು ನಿರ್ವಹಿಸುತ್ತಿದ್ದನೆಂದು ಗ್ರಹಿಸಬೇಕು.

ಹಾಕಿಕೊಂಡೇ ರಾಜಬೀದಿಯನ್ನು ದಾಟಿ ನೆಟ್ಟಗೆ ದಶರಥನಿದ್ದ ಅರಮನೆಯ ಹೊರಬಾಗಿಲಿಗೆ ಬಂದನು. ಅವನು ಬಾಗಿಲಲ್ಲಿ ರಥದಿಂದಿಳಿದು, ಅತ್ಯಾತುರದಿಂದ ಒಳಗೆ ಪ್ರವೇಶಿಸಿ, ವಿಶೇಷವಾಗಿ ರಾಜಸಂಚಾರವಿಲ್ಲದುದರಿಂದ ಅಲ್ಲಲ್ಲಿ ಜನಸಮೂಹದಿಂದ ತುಂಬಿದ ಆ ಅರಮನೆಯ ಏಳುತೊಟ್ಟಿಗಳನ್ನೂ ದಾಟಿ ಹೋದನು. ಅಲ್ಲಿದ್ದ ರಾಜಸ್ತ್ರೀಯರೆಲ್ಲರೂ ಉಪ್ಪರಿಗೆಗಳನ್ನೂ, ಗೋಪುರಗಳನ್ನೂ ಏರಿ,ಶೂನ್ಯರಥದಿಂದ ಬರುವ ಸುಮಂತ್ರನನ್ನು ನೋಡಿ,ರಾಮನನ್ನು ಕಾಣದಸಂಕಟಕ್ಕಾಗಿ ಹಾಹಾಕಾರವನ್ನುಮಾಡುತ್ತಾ,ತಮ್ಮವಿಸ್ತಾರವಾದ ಕಣ್ಣುಗಳಿಂದ ಧಾರೆಧಾರೆಯಾಗಿ ಕಣ್ಣೀರುಬಿಡುತ್ತ,ಅದರಿಂದ ಒಬ್ಬರನ್ನೊಬ್ಬರು ಚೆನ್ನಾಗಿಯೂ ನೋಡಲಾರದೆ,ಗಟ್ಟಿಯಾಗಿಗೋಳಿಡುವುದಕ್ಕಾರಂಭಿಸಿದರು. ಒಳಗಿದ್ದ ದಶರಥನೂ ಅರಮನೆಯ ನಾಲ್ಕುಕಡೆಗಳಿಂದಲೂ ಸ್ತ್ರೀಯರ ಪ್ರಲಾಪಧ್ವನಿಯು ಹೊರಡುತ್ತಿರುವುದನ್ನು ಕೇಳುತಿದ್ದನು. ಅಲ್ಲಿ ಸ್ತ್ರೀಯರು ತಮ್ಮೊಳಗೆ ಒಬ್ಬರಿಗೊಬ್ಬರು “ಇಲ್ಲಿಂದ ರಾಮನೊಡನೆ ಹೊರಟ ಸುಮಂತ್ರನು. ಈಗ ರಾಮನನ್ನು ಬಿಟ್ಟು ತಾನೊಬ್ಬನೇ ಬಂದಿರುವನು. ದುಃಖಿತೆಯಾದಕೌಸಲ್ಯೆಗೆ ಈತನು ಈಗಏನುತ್ತರವನ್ನು ಕೊಡಬಲ್ಲನು?ರಾಮನಿಲ್ಲದೆ ನಮಗೇ ಬದುಕುವುದು ಕಷ್ಟವಾಗಿರುವುದಲ್ಲಾ!ಇನ್ನು [1]ಕೌಸಲ್ಯೆಯು ತನ್ನ ಮುದ್ದುಮಗನನ್ನು ಬಿಟ್ಟುಹೇಗೆ ಬದುಕಿರುವಳು ? ಬಲಾತ್ಕಾರದಿಂದ ಪ್ರಾಣವನ್ನುಳಿಸಿಕೊಂಡಿರಬೇಕೆಂದರೂ ಅವಳಿಗೆ ಸಾಧ್ಯವಾಗದೆಂದು ತೋರುವುದು.” ಎಂದು ಮೆಲ್ಲಗೆ ಮಾತಾಡಿಕೊಳ್ಳುತ್ತಿದ್ದರು. ಇವೆಲ್ಲವನ್ನೂ ಆ ಸುಮಂತ್ರನು ಕೇಳುತ್ತಾ,ವ್ಯಸನದಿಂದ ಬೆಂದು ಹೋಗುವಹಾಗಿರುವ ಆ ಅರಮನೆಯನ್ನು ದುಃಖದಿಂದ ಪ್ರವೇಶಿಸಿ, ಅಲ್ಲಿ ಶುಭ್ರವರ್ಣವುಳ್ಳ ಒಂದಾನೊಂದು ಸಣ್ಣಮನೆಯಲ್ಲಿ ಪುತ್ರಶೋಕದಿಂದ ಕಂದಿ ದೈನ್ಯದಿಂದ ಕಳವಳಿಸುತ್ತಿರುವ ರಾಜನನ್ನು ನೋಡಿದನು.ಆತನ ಮುಂದೆನಿಂತು ನಮಸ್ಕಾರಮಾಡಿ

---

1 “ಮಗನನು ಬಿಟ್ಟು ಹೋದಮೇಲೆಯೂ, ಬಲಾತ್ಕಾರದಿಂದ ಪ್ರಾಣಧಾರಣೆಯನ್ನು ಮಾಡಿಕೊಂಡಿರುವುದು ಬಹಳ ಅಸಾಧ್ಯಕಾರ್ಯವು. ಹೀಗೆ ದುಃಖಜೀವನವು ಕೌಸಲ್ಯೆಗೆ ಹೊರತು ಮತ್ತೊಬ್ಬರಿಗೆ ಸಾಧ್ಯವಲ್ಲವೆಂದೆಣಿಸಿರುವೆವು.” ಎಂದು ಹೇಳಿದುದಾಗಿ ಮಹೇಶ್ವರತೀರ್ಥರ ವ್ಯಾಖ್ಯಾನವು.

ರಾಮನು ಹೇಳಿದ್ದ ಸಂದೇಶಗಳೆಲ್ಲವನ್ನೂ ಯಥೋಕ್ತವಾಗಿ ಅವನಿಗೆ ತಿಳಿಸಿದನು. ದಶರಥನು ಆ ಮಾತುಗಳೆಲ್ಲವನ್ನೂ ಮೌನದಿಂದಲೇ ಕೇಳುತ್ತ, ದುಃಖದಿಂದ ಬುದ್ಧಿಭ್ರಮವುಳ್ಳವನಾಗಿ, ಸಂಕಟವನ್ನು ತಡೆಯಲಾರದೆ ಮೂರ್ಛೆಹೊಂದಿ ನೆಲದಮೇಲೆ ಬಿದ್ದನು. ಇದನ್ನು ನೋಡುತಿದ್ದ ಅಂತಃಪುರಸ್ತ್ರೀಯರೆಲ್ಲರೂ ಮಹಾವ್ಯಸನದಿಂದ ಮುಂದೆ ಬಂದು, ಎರಡು ತೋಳುಗಳನ್ನೂ ಮೇಲಕ್ಕೆತ್ತಿ "ಹೋ"ಎಂದು ಗಟ್ಟಿಯಾಗಿ ಅಳತೊಡಗಿದರು. ಆಗ ಕೌಸಲ್ಯೆಯು ಸುಮಿತ್ರೆಯೊಡಗೂಡಿ ಬಂದು,ನೆಲದಮೇಲೆ ಬಿದ್ದ ರಾಜನನ್ನು ಮೇಲಕ್ಕೆತ್ತಿ,ಆತನನ್ನು ಕುರಿತು "ಎಲೈ ಆರ್ಯಪುತ್ರನೆ! ಇದೇನು?ಲೋಕದಲ್ಲಿ ಯಾರಿಂದಲೂ ಮಾಡಲಾಗದ ವನವಾಸ ವೆಂಬ ಕಷ್ಟಕಾರ್ಯಕ್ಕೆ ಪ್ರಯತ್ನಿಸಿ ಮಹಾಧೀರನೆನಿಸಿಕೊಂಡಿರುವ ನಮ್ಮ ರಾಮನು ಕಳುಹಿಸಿರುವ ಈ ದೂತನೊಡನೆಯೂ ನೀನು ಮಾತಾಡದಿರಬಹುದೇ?ಆತನು ವನವಾಸದಲ್ಲಿರುವಾಗ ಹೇಳಿ ಕಳುಹಿಸಿದ ಸಂದೇಶಗಳನ್ನು ಕೇಳಿಯೂ ನೀನು ಪ್ರತ್ಯುತ್ತರವನ್ನು ಕೊಡದೆ ಮೌನದಿಂದಿರಬಹುದೆ ? ಮೊದಲಂತೂ ನೀನು ಅನ್ಯಾಯಕ್ಕೆಪ್ರವರ್ತಿಸಿ ರಾಮನನ್ನುಕಾಡಿಗೆ ಕಳುಹಿಸಿಬಿಟ್ಟೆ ! ಅದಕ್ಕಾಗಿ ಈಗ ನಾಚಿಕೆಪಟ್ಟು ಹೀಗೆ ದುಃಖಿಸುವುದರಿಂದ ಪ್ರಯೋಜನವೇನು ? ಏಳು!! ಇದರಿಂದ ಮಾತಿಗೆ ತಪ್ಪಿದವನೆಂಬ ಖ್ಯಾತಿಯಾದರೂ ನಿನಗುಂಟಾಯಿತಲ್ಲವೆ ? ಆ ಪುಣ್ಯವಾದರೂ ನಿನ್ನನ್ನು ರಕ್ಷಿಸಲಿ! ಈಗ ದುಃಖಿಸುವುದರಿಂದ ಪ್ರಯೋಜನವಿಲ್ಲ! ರಾಮನ ಕಡೆಯಿಂದ ಬಂದಿರುವ ಈಸುಮಂತ್ರನಿಗೆ ಮುಖಕೊಟ್ಟು ಮಾತುಗಳನ್ನಾಡು ! ಒಂದುವೇಳೆ ನೀನು ರಾಮನಕಡೆಯವನಾದ ಇವನನ್ನು ಕೈಕೇಯಿಯ ಭಯಕ್ಕಾಗಿ ಮಾತಾಡಿಸದಿರಬಹುದು. ಅವಳಿಗಾಗಿ ನೀನು ಈಗ ಭಯಪಡಬೇಕಾದುದಿಲ್ಲ. ಆಕೈಕೇಯಿಯು ಈಗ ಇಲ್ಲಿಲ್ಲವಲ್ಲವೆ?ಅವಳು ಬರುವವರೆಗಾದರೂ ನೀನು ನಿರ್ಭಯವಾಗಿ ಮಾತಾಡಬಹುದು!" ಎಂದಳು. ಹೀಗೆ ಕೌಸಲ್ಯೆಯು ದುಃಖಾತಿಶಯದಿಂದ ಮೈಮರೆತು, ಮರ್ಯಾದೆಯನ್ನೂ ಮೀರಿ ರಾಜನೊಡನೆ ಈಮಾತುಗಳನ್ನಾಡುತ್ತಿರುವಾಗಲೇ ತಾನೂ ಸಂಕಟವನ್ನು ತಡೆಯಲಾರದೆ,ಗದ್ಗದಸ್ವರದಿಂದ ಮಾತುಗಳನ್ನೂ ಚೆನ್ನಾಗಿ ಮುಗಿಸದೆ,ಹಾಗೆಯೇ ಮೂರ್ಛೆಹೊಂದಿ ನೆಲದಮೇಲೆ ಬಿದ್ದಳು. ಹೀಗೆ ಪ್ರಲಾಪಿಸಿ ಮೂರ್ಛೆಬಿದ್ದ ಕೌಸಲ್ಯೆಯನ್ನೂ, ಬುದ್ಧಿಭ್ರಮದಿಂದ ಮೈಮರೆ

ತಿರುವ ದಶರಥನನ್ನೂ ನೋಡಿ,ಅಲ್ಲಿದ್ದ ಇತರ ರಾಜಸ್ತ್ರೀಯರೂ ಗಟ್ಟಿಯಾಗಿ ರೋದಿಸತೊಡಗಿದರು. ಅಂತಃಪುರದಲ್ಲಿ ಹೊರಟ ಈ ದೊಡ್ಡರೋದನ ಧ್ವನಿಯನ್ನು ಕೇಳಿ ಆ ಪಟ್ಟಣದಲ್ಲಿದ್ದ ಸ್ತ್ರೀಬಾಲವೃದ್ಧರೂ ಅಳುವುದ ಕ್ಕಾರಂಭಿಸಿದರು. ಹೀಗೆ ಒಬ್ಬರ ದುಃಖವನ್ನು ನೋಡಿ ಮತ್ತೊಬ್ಬರಿಗೆ ಮೇಲೆಮೇಲೆ ಸಂಕಟವು ಹೆಚ್ಚುತ್ತಿರಲು, ಆ ಪಟ್ಟಣದ ನಾಲ್ಕು ಪ್ರದೇಶ ಗಳೂ ಕೇವಲ ಪ್ರಲಾಪಧ್ವನಿಯಿಂದಲೇ ತುಂಬಿ, ಹಿಂದೆ ರಾಮನ ವನಪ್ರ ಯಾಣಕಾಲದಲ್ಲಿ ಉಲ್ಲೋಲಕಲ್ಲೋಲವಾಗಿದ್ದಂತೆಯೇ ಆಗಲೂ ವ್ಯಾಕುಲ ವಾಗಿತ್ತು. ಇಲ್ಲಿಗೆ ಐವತ್ತೇಳನೆಯಸರ್ಗವು.

---

ಸುಮಂತ್ರನು ರಾಮನನ್ನು ಬಿಟ್ಟು ಅಯೋಧ್ಯೆಗೆ ಪೋದುದು. ಪುರಜನರ ದುಃಖವು. ದಶ ರಥನ ಶೋಕವು.

ದಶರಥನು ಮೂರ್ಛೆತಿಳಿದೆದ್ದಮೇಲೆ ಪುನಃ ಇದಿರಿಗಿದ್ದ ಸುಮಂತ್ರನ ನ್ನು ನೋಡಿ,ರಾಮನವೃತ್ತಾಂತವನ್ನು ಕೇಳುವುದಕ್ಕಾಗಿಸಮೀಪಕ್ಕೆ ಕರೆದನು. ಆಗ ಸುಮಂತ್ರನು ಕೈಮುಗಿದು ರಾಜನ ಸಮೀಪದಲ್ಲಿ ಬಂದು ನಿಂತನು. ರಾಮನನ್ನೇ ಆಗಾಗ ನೆನೆಸಿಕೊಂಡು ದುಃಖಿಸುತ್ತಾ, ಆಗಲೇ ಹಿಡಿದು ತರ ಲ್ಪಟ್ಟ ಮತ್ತು ವ್ಯಾಧಿಗ್ರಸ್ತವಾದ ಮದ್ದಾನೆಯಂತೆ ಸಂಕಟದಿಂದಬೆಂದು, ಉದ್ದವಾಗಿ ನಿಟ್ಟುಸಿರನ್ನು ಬಿಟ್ಟು ಚಿಂತಿಸುತ್ತಿರುವ ವೃದ್ಧನಾದ ದಶ ರಥನನ್ನು ನೋಡುತ್ತಾ ಸುಮಂತ್ರನು ಮುಂದೆ ನಿಂತನು. ಆಗ ದಶರಥನು ಧೂಳಿನಿಂದ ಮಲಿನವಾದ ಮೆಯ್ಯುಳ್ಳವನಾಗಿ ಕಣ್ಣೀರುಬಿಡುತ್ತಾ, ಮಹಾ ವಿಪತ್ತಿನಲ್ಲಿ ಸಿಕ್ಕಿದವನಂತೆ ದೈನ್ಯದಿಂದ ಮುಂದೆ ನಿಂತಿರುವ ಸುಮಂತ್ರನನ್ನು ನೋಡಿ, “ಎಲೆ, ಸೂತನೆ ! ಧರ್ಮಾತ್ಮನಾದ ನಮ್ಮ ರಾಮನು ಈಗ ಎಲ್ಲಿರು ವನು? ಯಾವ ಮರದಕೆಳಗೆ ಮಲಗುವನು? ಹುಟ್ಟಿದುದು ಮೊದಲು ಸುಖ ದಲ್ಲಿಯೇ ಬಳೆದ ಆತನು ಈಗ ಭುಜಿಸತಕ್ಕ ಆಹಾರಪದಾರ್ಥಗಳಾವುವು ? ಯಾವಾಗಲೂ ದುಃಖವೆಂಬುದನ್ನೇ ಕಾಣದೆ ಸುಖಶಯ್ಯೆಯಲ್ಲಿಯೇ ಮಲಗ ತಕ್ಕ ಆ ರಾಮನು ದಿಕ್ಕಿಲ್ಲದವನಂತೆ ಖಠಿಣನೆಲದಮೇಲೆ ಹೇಗೆ ತಾನೇ ಮಲಗ ಬಲ್ಲನು ? ಯಾವನು ಸಂಚಾರಾರ್ಥವಾಗಿ ಹೊರಟಾಗ, ಕಾಲಾಳುಗಳೂ

ಆನೆಗಳೂ ಹಿಂಬಾಲಿಸಿ ಹೊರಡುತಿದ್ದುವೋ, ಆ ರಾಮನು ನಿರ್ಜನವಾದ ವನದಲ್ಲಿ ಹೇಗೆ ವಾಸಮಾಡಬಲ್ಲನು? ಕಾಡಾನೆಗಳಿಂದಲೂ, ಕಾಡುಮೃಗಗ ಳಿಂದಲೂ, ಕಾಳಸರ್ಪಗಳಿಂದಲೂ ತುಂಬಿದ ಕಾಡಿನಲ್ಲಿ ಸೀತೆಯೊಡನೆ ಆ ಸಣ್ಣಮಕ್ಕಳಿಬ್ಬರೂ ಹೇಗೆ ತಾನೇ ಕಾಲವನ್ನು ಕಳೆಯಬಲ್ಲರು? ಎಲೈ ಸುಮಂ ತ್ರನೆ ! ಆ ಸೀತೆಯಾದರೋ ಬಹುಸುಕುಮಾರವಾದ ಮೆಯ್ಯುಳ್ಳವಳು! ಇಂತವಳಿಗೆ ಹೀಗೆ ಶೋಚನೀಯಾವಸ್ಥೆಯು ಬಂದೊದಗಿತು! ಆ ರಾಜಕು ಮಾರರಿಬ್ಬರೂ ರಥವನ್ನು ಬಿಟ್ಟು, ಕಾಲುನಡೆಯಿಂದಲೇ ಕೋಮಲಾಂಗಿ ಯಾದ ಆ ಸೀತೆಯನ್ನೂ ನಡೆಸಿಕೊಂಡು, ಹೇಗೆ ತಾನೇ ಪ್ರಯಾಣಮಾಡಿದ ರುಓಲೆ ಸೂತನೆ! ನೀನೇ ಧನ್ಯನು! ಮಂದರಪರ್ವತವನ್ನು ಪ್ರವೇಶಿಸುವ ಅಶ್ವಿ ನೀದೇವತೆಗಳಂತೆ, ನನ್ನ ಮಕ್ಕಳು ಅರಣ್ಯಪ್ರವೇಶವನ್ನು ಮಾಡುವವರೆಗಾ ದರೂ ಅವರನ್ನು ನೋಡುತ್ತಿರುವ ಭಾಗ್ಯವು ನಿನಗೆ ಲಭಿಸಿತಲ್ಲವೆ ? ಅದೆಲ್ಲವೂ ಹೋಗಲಿ! ಅವರು ಕಾಡನ್ನು ಸೇರಿದಮೇಲೆ ರಾಮನು ನಿನ್ನೊಡನೆ ಹೇಳಿದು ದೇನು ? ಲಕ್ಷ್ಮಣನೇನು ಹೇಳಿದನು? ಸೀತೆಯೇನು ಹೇಳಿದಳು? ಕಾಡಿನಲ್ಲಿ ರಾ ಮನು ಅಲ್ಲಲ್ಲಿ ಕುಳಿತುದನ್ನೂ, ಮಲಗಿದುದನ್ನೂ, ಊಟಮಾಡಿದುದನ್ನೂ ಯಥಾವತ್ತಾಗಿ ನನಗೆ ತಿಳಿಸು ! ಯಯಾತಿಯು ಪೂರ್ವದಲ್ಲಿ ಸ್ವರ್ಗಭ್ರ ಷ್ಟನಾಗಿ ಕಷ್ಟದಲ್ಲಿ ಸಿಕ್ಕಿದ್ದರೂ, ಸಾಧುಜನಗಳ ಸಹವಾಸವೆಂಬ ಸ್ವಲ್ಪ ಸಂತೋಷದಿಂದಲೇ ಪ್ರಾಣಧಾರಣೆಯನ್ನು ಮಾಡಿಕೊಂಡಿದ್ದಂತೆ, ರಾಮ ನವಿಷಯವಾದ ಆ ಮಾತುಗಳನ್ನಾದರೂ ಕೇಳುತ್ತಾ, ನಾನೂ ಸ್ವಲ್ಪ ಕಾಲದವರೆಗೆ ಬದುಕಿರುವೆನು" ಎಂದನು. ರಾಜನ ಈ ಮಾತುಗಳನ್ನು ಕೇಳಿ ಸುಮಂತ್ರನು, ಪರಮದುಃಖಿತನಾಗಿ, ಕಣ್ಣೀರಿನಿಂದ ಕುಗ್ಗಿದ ಸ್ವರವುಳ್ಳನ ನಾಗಿ, ದರಶಥನನ್ನು ಕುರಿತು, "ಎಲೈ, ಮಹಾರಾಜನೆ ! ಧರ್ಮದಲ್ಲಿಯೇ ದೃಢಸಂಕಲ್ಪವುಳ್ಳ ಆ ರಾಮನು ನನ್ನನ್ನು ಬಿಟ್ಟು ಹೋಗುವಾಗ, ನಿನಗೆ ಬ ದ್ಧಾಂಜಲಿಯಾಗಿ, ತಲೆಯನ್ನು ತಗ್ಗಿಸಿ ಪ್ರಣಾಮಮಾಡಿ, ಕೆಲವು ಮಾತುಗಳ ನ್ನು ಹೇಳಿ ಕಳುಹಿಸಿರುವನು. ಆತನು ತನ್ನ ಮಾತಿನಿಂದ ಮೊದಲು ನಿನ್ನ ಪಾ ದಗಳನ್ನು ಹಿಡಿದು ನಮಸ್ಕರಿಸುವಂತೆ ಹೇಳಿ, ನಿನ್ನ ಕ್ಷೇಮಲಾಭವನ್ನು ವಿಚಾ ರಿಸಿರುವನು. ಹಾಗೆಯೇ ಅಂತಃಪುರಜನರಿಗೂ ಪ್ರಣಾಮಮಾಡಿ ಅವರೆಲ್ಲರ ಕ್ಷೇಮಲಾಭಗಳನ್ನೂ ವಿಚಾರಿಸುವಂತೆ ಹೇಳಿ ಕಳುಹಿಸಿರುವನು. ಮತ್ತು

ಎಲೈ, ಮಹಾರಾಜನೆ! ರಾಮನು ಆಗ ನನ್ನನ್ನು ನೋಡಿ “ಎಲೆ' ಸೂತನೆ! ನನ್ನ ತಾಯಿಯಾದ ಕೌಸಲ್ಯೆಗೆ ನನ್ನ ಪ್ರಣಾಮವನ್ನು ತಿಳಿಸು!ಆವಳ ಕ್ಷೇಮ ವನ್ನು ವಿಚಾರಿಸಿದೆನೆಂದು ಹೇಳು ! ಧರ್ಮವಿಷಯದಲ್ಲಿಯಾಗಲಿ ಪತಿಯವಿಷ ಯದಲ್ಲಿಯಾಗಲಿ ಪ್ರಮಾದರಹಿತಳಾಗಿ ನಡೆದುಕೊಳ್ಳುವಂತೆ ಆಕೆಗೆ ತಿಳಿಸು! ಮತ್ತು “ಯಾವಾಗಲೂ ಧರ್ಮವನ್ನು ಬಿಡದೆ ಕಾಲಕಾಲಕ್ಕೆ ಸರಿಯಾಗಿ ಅಗ್ನಿಶಾಲೆಯ ಕೆಲಸಗಳನ್ನು ನಡೆಸುತ್ತಿರಬೇಕು. ಪತಿಯ ಪಾದವನ್ನೇ ಪರ ದೈವವೆಂದು ಭಾವಿಸಿ ಆತನನ್ನು ಪೂಜಿಸುತ್ತಿರಬೇಕು. ಜ್ಯೇಷ್ಠಪತ್ನಿಯೆಂಬ ಗ ರ್ವವನ್ನಾಗಲಿ,ಔದಾಸೀನ್ಯವನ್ನಾಗಲಿತೋರಿಸದೆ,ಇತರಮಾತೆಯರಲ್ಲಿ ಬಹು ಗೌರವದಿಂದನಡೆಯುತ್ತಿರಬೇಕು.ಕೈಕೇಯಿಯನ್ನು ಪತಿಯಾದದಶರಥನಿಗೆಪ್ರ ತಿನಿಧಿಯನ್ನಾಗಿ ಭಾವಿಸಿ ಹಾಗೆಯೇ ಅವಳಲ್ಲಿಯೂ ಮರ್ಯಾದೆಯಿಂದಿರಬೇಕು. ಆಕೆಯ ಮಗನಾದ ಭರತನನ್ನು ರಾಜನಂತೆಯೇ ಗೌರವಿಸುತ್ತಿರಬೇಕು. ರಾಜ ನಾದವನುವಯಸ್ಸಿನಲ್ಲಿ ಚಿಕ್ಕವನಾದರೂ ಭಾಗ್ಯದಲ್ಲಿ ದೊಡ್ಡವನು. ಈ ರಾಜ ಧರ್ಮಗಳನ್ನು ಚೆನ್ನಾಗಿ ಮನಸ್ಸಿನಲ್ಲಿಡು"ಎಂದುನಾನುಹೇಳಿದಂತೆ.ಆಕೆಗೆಹೇಳು. ನಾನು ಕ್ಷೇಮವನ್ನು ವಿಚಾರಿಸಿದುದಾಗಿ ಭರತನಿಗೂತಿಳಿಸು!ಆತನಿಗೆನನ್ನಮಾತಿ ನಿಂದ ಸಮಸ್ತಮಾತೆಯರನ್ನೂ ಒಂದೇ ವಿಧವಾಗಿ ನಿಷ್ಪಕ್ಷಪಾತವಾಗಿ ನ್ಯಾ ಯವನ್ನನುಸರಿಸಿ ನೋಡುವಂತೆಹೇಳು. ಇಕ್ಷ್ವಾಕುವಂಶಕ್ಕೆ ಪುರೋವೃದ್ಧಿಯ ನ್ನುತರತಕ್ಕ ಮಹಾಬಾಹುವಾದ ಆಭರತನಿಗೆ ಇನ್ನೂ ಹೇಳಬೇಕಾದ ಒಂದು ಮುಖ್ಯವಾದ ಮಾತುಂಟು.“ನಿನಗೆ ಯೌವರಾಜ್ಯದ ಅಧಿಕಾರವು ಬಂದಿತೆಂಬು ದಕ್ಕಾಗಿ, ಪ್ರಧಾನರಾಜನಾದ ತಂದೆಯನ್ನು ಅಲಕ್ಷ್ಯದಲ್ಲಿ ಕಾಣಬೇಡ! ಆತ ನನ್ನು ತಕ್ಕಂತೆ ಉಪಚರಿಸು! ರಾಜನಿಗೆ ವಯಸ್ಸೆಲ್ಲವೂ ಕಳೆದುಹೋಯಿತು. ಮುದುಕನಾದತಂದೆಯನ್ನು ನಿರ್ಬಂಧದಲ್ಲಿಡುವುದು ಉಚಿತವಲ್ಲ.ಆತನ ಆಜ್ಞೆ ಯನ್ನೇ ಮುಂದಿಟ್ಟುಕೊಂಡು ಯೌವರಾಜ್ಯವನ್ನು ನಡೆಸುತ್ತಾ, ಬಹುಕಾಲ ದವರೆಗೆ ಭೋಗಗಳನ್ನು ಅನುಭವಿಸು" ಎಂದು ನಾನುಹೇಳಿದುದಾಗಿ ಹೇಳು" ಎಂದು ಆತನು ಅನೇಕವಿಧದಲ್ಲಿ ಎಲ್ಲರಿಗೂ ಸಂದೇಶಗಳನ್ನು ಹೇಳಿಕಳುಹಿಸಿ ರುವನು. ರಾಮನಿಗೆ ಆಗಾಗ ತನ್ನ ತಾಯಿಯಾದ ಕೌಸಲ್ಯೆಯ ಸ್ಮರಣೆಯೇ ಹೆಚ್ಚಾಗಿರುವುದು. ಇಲ್ಲಿ ಆಕೆಯು ಯಾವಕಷ್ಟಕ್ಕೆ ಗುರಿಯಾಗುವಳೋ ಎಂದು ಅನವರತವೂ ತತ್ತಳಿಸುತ್ತಿರುವನು.ಇದಕ್ಕಾಗಿಯೇ ಬಾರಿಬಾರಿಗೂ ನ

ನ್ನನ್ನು ನೋಡಿ,ಭರತನನ್ನು ಕುರಿತು“ಎಲೆ ವತ್ಸನೆ!ನಿನ್ನ ತಾಯಿಯಂತೆಯೇ ಭಾವಿಸಿ,ಪುತ್ರವತ್ಸಲೆಯಾದನನ್ನ ತಾಯಿಯನ್ನೂ ಪ್ರೀತಿಯಿಂದ ಪೋಷಿಸು"ಎಂದು ಸಾರಿ ಸಾರಿ ಹೇಳಿಕಳುಹಿಸಿರುವನು. ಈ ಮಾತುಗಳನ್ನಾಡುವಾಗ ಆತನ ಕಣ್ಣುಗಳಿಂದಪಳಪಳನೆ ನೀರು ಸುರಿಯುತಿತ್ತು.ಮಹಾಯಶಸ್ವಿಯಾಗಿಯೂ, ಕಮಲದಳದಂತೆ ಕಣ್ಣುಳ್ಳವನಾಗಿಯೂ ಇರುವ ಆರಾಮನಿಗೆ,ಇತ್ತಲಾಗಿ ಪುತ್ರಪ್ರೇಮಪರವಶಳಾಗಿರುವ ಕೌಸಲ್ಯೆಯ ವಿಚಾರವೇ ಹೆಚ್ಚಾಗಿರುವುದು.ರಾಮನು ಹೀಗೆ ದುಃಖದಿಂದ ಇಲ್ಲಿಗೆ ಸಂದೇಶಗಳನ್ನು ಹೇಳುತ್ತಿರುವಾಗ, ಆತನ ಮನೋವ್ಯಾಕುಲತೆಯನ್ನು ನೋಡಿ ಲಕ್ಷ್ಮಣನಿಗೆ ಮಿತಿಮೀರಿದ ಕೋಪವುಂಟಾಯಿತು. ಆಕೋಪವನ್ನು ತಡೆಯಲಾರದೆ ಬಿಸಿಬಿಸಿಯಾಗಿ ನಿಟ್ಟುಸಿರನ್ನು ಬಿಡುತ್ತಾ ಅವನೂ ಕೆಲವು ಮಾತುಗಳನ್ನಾಡತೊಡಗಿದನು. ರಾಮನ ಕಣ್ಣುಗಳಲ್ಲಿ ನೀರುಬಿದ್ದುದನ್ನು ನೋಡಿದೊಡನೆಯೇ ಲಕ್ಷ್ಮಣನಿಗೆ ಇನ್ನೂ ತಡೆಯಲಾರದಷ್ಟು ಕೋಪವುಂಟಾಯಿತು. ಆಗ ಅವನು ನಿಟ್ಟುಸಿರುಬಿಡುತ್ತ “ಆಹ! ಕೈಕೇಯಿಯ ಅಲ್ಪಬುದ್ಧಿಗೆ ಒಳಗಾದ ರಾಜನು ಯಾವ ಅಪರಾಧಕ್ಕಾಗಿ ರಾಜ್ಯಾರ್ಹನಾದ ಕುಮಾರನನ್ನು ಕಾಡಿಗೆ ಕಳುಹಿಸಿದನು ? ಇದು ಕಾರ್ಯವಾಗಲಿ, ಅಕಾರ್ಯವಾಗಲಿ ನಾವಂತೂ ಇದರಿಂದ ಕಷ್ಟಕ್ಕೆ ಸಿಕ್ಕಬೇಕಾಯಿತು. ಪುತ್ರವಿವಾಸನವೆಂಬ ಈ ಮಹಾಘೋರಕೃತ್ಯವನ್ನು ರಾಜನು ಲೋಭದಿಂದ ಮಾಡಿದರೇನು ? ಅಥವಾ ಕೊಟ್ಟಮಾತನ್ನು ನಡೆಸಬೇಕೆಂಬ ಸತ್ಯಸಂಧತೆಯಿಂದ ಮಾಡಿದರೇನು ?ಹೇಗಿದ್ದರೂ ಈಗ ಮಾಡಿದ ಕೆಲಸವಂತೂ ಸರ್ವಥಾ ದುಷ್ಕೃತ್ಯವು ! ಆದುದಂತೂ ಆಯಿತು! ರಾಜ್ಯಾರ್ಹನಾದ[1]ಹಿರಿಯಮಗನನ್ನು ಕಾಡಿಗೆ ಕಳುಹಿಸುವುದಕ್ಕಿಂತಲೂ ಮಾತಿಗೆತಪ್ಪುವುದು ಅನುಚಿತವಾದ ಕೆಲಸವೆಂದು ನನಗೆ ತೋರಲಿಲ್ಲ.ತತ್ವವನ್ನು ವಿಚಾರಿಸಿ ನೋಡಿದರೆ ರಾಜನಾದವನಿಗೆ ಸಮಸ್ತ ವಿಷಯಗಳಲ್ಲಿಯೂ ಸ್ವಾತಂತ್ರ್ಯವುಂಟು. ಆತನು ಆಗಲೇ ಕೈಕೇಯಿಯ ಬಾಯಿಯನ್ನು ಅಡಗಿಸಿಬಿಡಬಹುದಾಗಿತ್ತು. ಇದನ್ನು ಆತನು ಇಷ್ಟಪಟ್ಟೇ ಮಾಡಿರುವನೇ ಹೊರತು, ಸತ್ಯಪರಿಪಾಲನವೆಂಬ ನಿರ್ಬಂಧಕ್ಕಾಗಿ ಮಾಡಿದುದಲ್ಲವೆಂದೇ ತೋರುವುದು.

---

1 “ ನತ್ವೇಕಪುತ್ರಂದದ್ಯಾನ್ನತ್ವೇವ ಜ್ಯೇಷ್ಠಪುತ್ರಂ” ಎಂಬಸ್ಮೃತಿವಾಕ್ಯವನ್ನು ದಶರಥನು ಗಮನಿಸಲಿಲ್ಲವೆಂದು ಭಾವವು.

ಅಂತೂ ದೈವಪ್ರೇರಣೆಯು ಹೀಗಿರುವಾಗ ಯಾರೇನು ಮಾಡಬಲ್ಲರು ? ರಾಮನನ್ನು ರಾಜ್ಯದಿಂದ ಹೊರಡಿಸುವುದಕ್ಕೆ ಆ ದುರ್ದೈವದ ಪ್ರೇರಣೆಯಲ್ಲದೆ ನನಗೆ ಬೇರೊಂದು ಕಾರಣವೂ ತೋರಲಿಲ್ಲ.ಹಾಗೆ ರಾಜನು ಮನಃ ಪೂರ್ವಕವಾಗಿಯೇ ಈ ಅಕಾರ್ಯದಲ್ಲಿ ಪ್ರವರ್ತಿಸಿದ್ದರೆ, ಆತನ ವಿರಹಕ್ಕಾಗಿ ಹೀಗೆ ಪಶ್ಚಾತ್ತಾಪಪಟ್ಟು ಕೊರಗುವುದೇತಕ್ಕೆಂದು ಶಂಕೆಯುಂಟಾಗಬಹುದು. ರಾಜನಂತೂ ಹಿಂದುಮುಂದನ್ನಾಲೋಚಿಸದೆ ಅಲ್ಪಬುದ್ಧಿಯಿಂದ ಮೊದಲು ಈ ಕೆಲಸವನ್ನು ನಡೆಸಿಬಿಟ್ಟನು. ಅದಕ್ಕೆ ಫಲವಾಗಿ ಈಗ ಸಂಕಟವನ್ನು ಅನುಭವಿಸಬೇಕಾಯಿತು. ನಾನಾದರೋ ಆತನನ್ನು [1]ತಂದೆಯಂತೆಯೇ ಭಾವಿಸಿಲ್ಲ. ಮಕ್ಕಳನ್ನು ಪಡೆದವನಿಗಿರಬೇಕಾದ ಒಂದು ಗುಣವಾದರೂ ಆತನಲ್ಲಿಲ್ಲವೆಂದೇ ನನಗೆ ತೋರಿರುವುದು. ನನಗೆ ಈ ರಾಮನು ಅಣ್ಣನು ಮಾತ್ರವೇಅಲ್ಲ. ಈತನೇ ನನಗೆ ತಂದೆಯು; ಈತನೇ ನನಗೆ ರಾಜನು. ಈತನೇ ನನಗೆ ಸಮಸ್ತವಿಧವಾದ ಬಂಧುವು. ಸಮಸ್ತ ಜನಗಳಿಗೂ ಪ್ರಿಯನಾಗಿ, ಸಮಸ್ತಲೋಕಕ್ಕೂ ಹಿತವನ್ನೇ ಕೋರುತ್ತಿರುವ ಈ ರಾಮನನ್ನು ತೊರೆದು ಬಿಟ್ಟಮೇಲೆ, ಲೋಕದಲ್ಲಿ ಈ ದುಷ್ಕಾರ್ಯವನ್ನುನೋಡಿ ಯಾವಾತನೇ ಅವನಲ್ಲಿ ಅನುರಾಗವನ್ನು ತೋರಿಸುವರು ? ಲೋ ಕಾ ಭಿ ರಾ ಮ ನೆ ನಿ ಸಿ ಕೊಂಡಿರುವ ಧಾರ್ಮಿಕನಾದ ರಾಮನನ್ನು ಕಾಡಿಗೆ ಹೊರಡಿಸುವುದರಿಂದ ಈ ಲೋಕಕ್ಕೇ ಅವನು ವಿರೋಧಿಯಾದನಲ್ಲವೆ? ಇನ್ನು ಅವನನ್ನು ರಾಜನೆಂದು ಯಾರುತಾನೇ ಕರೆಯುವರು ?" ಎಂದನು. ಆಗ ಈ ಮಾತುಗಳೆಲ್ಲವನ್ನೂ ಕೇಳುತಿದ್ದ ಸೀತೆಯಾದರೋ ದುಃಖದಿಂದ ನಿಟ್ಟುಸಿರನ್ನು ಬಿಡುತ್ತಾ, ಭೂತಾವಿಷ್ಟಳಾದಂತೆ ಕದಲಿದ ಮನಸ್ಸುಳ್ಳವಳಾಗಿ, ಏನೊಂದೂ ತೋರದೆ ಸುಮ್ಮನಿದ್ದಳು. ಅಯ್ಯೋ ! ಯಶಸ್ವಿನಿಯಾದ ಆ ರಾಜಕುಮಾರಿಯು ಹಿಂದೆ ಯಾವಾಗಲೂ ವ್ಯಸನವೆಂಬುದನ್ನೇ ಕಂಡವಳಲ್ಲ. ಈಗ ಈವ್ಯಸನವನ್ನು ತಡೆಯಲಾರದೆ ರೋದಿಸುವುದಕ್ಕಾರಂಭಿಸಿದಳು.ಯಾವುದೊಂದು ಮಾತನ್ನೂ ಆಡಲಿಲ್ಲ.ಕಂದಿದ ಮುಖದಿಂದ ತನ್ನಪತಿಯನ್ನು ನೋಡಿನೋಡಿ ದುಃಖಿಸುತಿದ್ದಳು.

1 "ಗುರೋರಪ್ಯವಲಿಪ್ತಸ್ಯ ಕಾರ್ಯಾಕಾರ್ಯ ಮಜಾನತಃ । ಉತ್ಪಥಂಪ್ರತಿಪನ್ನಸ್ಯ ಪರಿತ್ಯಾಗೋ ವಿಧೀಯತೇ॥"ಎಂಬ ನೀತಿವಚನವನ್ನು ಮನಸ್ಸಿನಲ್ಲಿಟ್ಟು ಲಕ್ಷ್ಮಣನು ಹೀಗೆ ಹೇಳಿದುದಾಗಿ ಗ್ರಹಿಸಬೇಕು.

ನಾನು ಇತ್ತಲಾಗಿ ಹೊರಟುಬರುವುದನ್ನು ನೋಡಿ ಇನ್ನೂ ಹೆಚ್ಚಾಗಿ ಕಣ್ಣೀರನ್ನು ಸುರಿಸಲಾರಂಭಿಸಿದಳು. ಎಲೈ ಮಹಾರಾಜನೆ ! ನಾನು ಹೊರಟು ಬರುವಾಗ ಅವರೆಲ್ಲರಸಂಕಟವನ್ನೂ ಏನೆಂದು ಹೇಳಲಿ?ಒಂದು ಕಡೆಯಲ್ಲಿ ರಾಮನು ಕಣ್ಣೀರನ್ನು ಬಿಡುತ್ತ ಕೈಮುಗಿದುನಿಂತು, ನಿನಗೆ ಸಂದೇಶಗಳನ್ನು ಹೇಳುತಿದ್ದನು. ಲಕ್ಷ್ಮಣನು ಆತನ ದುಃಖೋಪಶಮನಾರ್ಥವಾಗಿ ಆತನನ್ನು ಪಚರಿಸುತಿದ್ದನು. ಅತ್ತಲಾಗಿ ಸೀತೆಯು ಬಹಳ ದೈನ್ಯದಿಂದ ಗೋಳಿಡುತ್ತ, ನನ್ನನ್ನೂ, ನನ್ನರಥವನ್ನೂ ನೋಡಿ ಸಂಕಟಪಡುತಿದ್ದಳು. ಈ ಸ್ಥಿತಿಯಲ್ಲಿಯೇ ನಾನು ಇತ್ತಲಾಗಿ ಹೊರಟು ಬಂದುಬಿಟ್ಟೆನು."ಎಂದನು. ಇಲ್ಲಿಗೆ ಐವತ್ತೆಂಟನೆಯಸರ್ಗವು.

---

{ ಸುಮಂತ್ರನು ಅಯೋಧ್ಯೆಯಲ್ಲಿ ರಾಮ ವಿಯೋಗದಿಂದುಂಟಾದ ಮಹಾನರ್ಥಗಳನ್ನು ದಶರಥನಿಗೆ ತಿಳಿಸಿದುದು. ಅವನ್ನುಕೇಳಿ ದಶರಥನು ಮೂರ್ಛಿತನಾದುದು. }

[1](ಮಂತ್ರಿಶ್ರೇಷ್ಠನಾದ ಸುಮಂತ್ರನು ಹೇಳಿದುದನ್ನು ಕೇಳಿ.ದಶರಥನು ಪುನಃಪುನಃ ಆತನನ್ನು ಕುರಿತು ಮುಂದಿನ ವಿಷಯಗಳನ್ನು ತಿಳಿಸಬೇಕೆಂದು ನಿರ್ಬಂಧಿಸುತಿದ್ದನು. ಆಗ ಸುಮಂತ್ರನು ಕಣ್ಣೀರು ಸುರಿಸುತ್ತ ಅಲ್ಲಿ ನಡೆದ ಉಳಿದವೃತ್ತಾಂತಗಳನ್ನೂ ವಿಸ್ತಾರವಾಗಿ ಹೇಳಲಾರಂಭಿಸಿದನು. "ಎಲೈ ಮಹಾರಾಜನೆ ! ವೀರರಾದ ನಿನ್ನ ಕುಮಾರರಿಬ್ಬರೂ ಜಡೆಯನ್ನು ಧರಿಸಿ, ನಾರುಮಡಿಯನ್ನುಟ್ಟು, ಗಂಗೆಯನ್ನು ದಾಟಿ ಪ್ರಯಾಣಾಭಿಮುಖರಾಗಿ ಹೊರಟರು. ಮುಂದೆ ಲಕ್ಷ್ಮಣನೂ, ನಡುವೆ ಸೀತೆಯೂ, ಅವರಿಬ್ಬರಿಗೂ ಹಿಂದೆ ರಾಮನೂ ಒಬ್ಬರಗೊಬ್ಬರು ಬೆಂಬಲವಾಗಿ ದಾರಿನಡೆದು ಹೋಗುತ್ತಿದ್ದರು. ಅವರೆಲ್ಲರೂ ಅತ್ತಲಾಗಿ ಕಣ್ಮರೆಯಾಗಿ ಹೊರಟು ಹೋದಮೇಲೆ ಆ ವ್ಯಸನವನ್ನು ತಡೆಯಲಾರದೆ ನಾನೂ ಹಿಂತಿರುಗಿ ಬಿಟ್ಟೆನು.) ಎಲೈ ರಾಜನೆ!

---

1 ಇದುಮೊದಲು ನಾಲ್ಕುಶ್ಲೋಕಗಳುಮಾತ್ರ ಗೋವಿಂದರಾಜಾದಿವ್ಯಾಖ್ಯಾನಗಳಲ್ಲಿಕಾಣುವುದಿಲ್ಲ. ಹಾಗಿದ್ದರೂ ಅನೇಕಮಾತೃಕೆಗಳಲ್ಲಿ ಈ ಶ್ಲೋಕಗಳಿರುವುದರಿಂದ, ಅವುಗಳ ಅರ್ಥವನ್ನು ಕುಂಡಲೀಕರಣಚಿಹ್ನದಲ್ಲಿ ಸೇರಿಸಿದೆ.

ನನ್ನ ವ್ಯಸನವು ಹಾಗಿರಲಿ; ನನ್ನ ರಥದ ಕುದುರೆಗಳೊಕೂಡ ದಾರಿಯಲ್ಲಿ ನಡೆಯಲೊಲ್ಲದೆ ಹೋದುವು. ರಾಮನು ಅತ್ತಲಾಗಿ ಹೊರಟುಹೋದುದನ್ನು ನೋಡಿ, ಕುದುರೆಗಳೂ ಕಣ್ಣಿನಲ್ಲಿ ಬಿಸಿಬಿಸಿಯಾಗಿ ನೀರನ್ನು ಬಿಡುತಿದ್ದುವು. ನಾನು ಅಲ್ಲಿಂದ ಹೊರಡುವಾಗ ಆರಾಜಕುಮಾರರಿಬ್ಬರಿಗೂ ಕೈಮುಗಿದು ರಥವನ್ನೇರಿ ಹಿಂತಿರುಗಿ, ತಡೆಯಲಾರದ ಆ ಮಹಾವ್ಯಸನವನ್ನೂ ತಡೆದು ಕೊಂಡು, ರಾಮನು ಪುನಃ ಒಂದುವೇಳೆ ಸಹಾಯಕ್ಕಾಗಿ ನನ್ನನ್ನು ಕರೆಯು ವನೋ ಎಂದು ವ್ಯರ್ಥವಾದ ಒಂದು ಆಶೋತ್ತರವನ್ನಿಟ್ಟುಕೊಂಡು [1]ಬ ಹುದಿವಸಗಳವರೆಗೆ ಗುಹನೊಡನೆ ಅಲ್ಲಿಯೇ ನಿಂತಿದ್ದೆನು. ಮಹಾರಾಜನೆ!

---

1 ಇಲ್ಲಿ ಬಹುದಿನಗಳೆಂದರೆ ಮೂರೇದಿವಸಗಳೆಂದು ಕೆಲವರ ಮತವು. ಕ್ರಮವಾಗಿ ದಿನಸಂಖ್ಯೆಯನ್ನು ನೋಡಿದರೆ, ಮೊದಲು ಮರದಡಿಯಲ್ಲಿ ಮಲಗಿದ್ದುದೊಂದುದಿನವು. ಭರದ್ವಾಜಾಶ್ರಮದಲ್ಲಿ ಎರಡನೆಯ ದಿನವನ್ನು ಕಳೆದು, ಯಮುನಾತೀರದಲ್ಲಿ ಮೂರನೆ ಯದಿವಸವನ್ನು ಕಳೆದರು. ನಾಲ್ಕನೆಯದಿನದಲ್ಲಿ ಚಿತ್ರಕೂಟಪ್ರವೇಶವು ಐದನೆಯದಿನ ದಲ್ಲಿ ರಾಮಾದಿಗಳನ್ನು ದೋಣಿಯಲ್ಲಿ ಗಂಗಾನದಿಯನ್ನು ದಾಟಿಸುವುದಕ್ಕಾಗಿ ಹೋದ ಗುಹನ ಕಡೆಯವರು ಹಿಂತಿರುಗಿ ಬಂದು ಆ ವೃತ್ತಾಂತವನ್ನು ತಿಳಿಸಿದುದು. ಆಮೇಲೆ ಆರನೆಯದಿನದಲ್ಲಿ ಸುಮಂತ್ರನು ಅಯೋಧ್ಯೆಗೆ ಹಿಂತಿರುಗಿದುದು; ಹೀಗೆ ಆರುದಿನಗಳು ಕಳೆದುಹೋಗಿರುವುವೆಂದು ಗ್ರಹಿಸಬಹುದು. ಅಥವಾ ಎರಡನೆಯದಿವಸದಲ್ಲಿಯೇ ಭರ ದ್ವಾಜಾಶ್ರಮದಲ್ಲಿ ರಾಮನು ಚಿತ್ರಕೂಟಕ್ಕೆ ಹೋಗುವುದಾಗಿ ನಿಶ್ಚಯಿಸಿದುದರಿಂದ, ಅದನ್ನು ತಿಳಿದು ಚಾರರು ಮೂರನೆಯದಿವಸವೇ ಬಂದು ಸುಮಂತ್ರನಿಗೆ ತಿಳಿಸಲು ಆಸು ಮಂತ್ರನು ಅದಕ್ಕೆ ಮಾರನೆಯದಿವಸವೇ ಎಂದರೆ ನಾಲ್ಕನೆಯದಿವಸವೇ ಅಯೋಧ್ಯೆಗೆ ಹಿಂತಿರುಗಿದನೆಂದು ಗ್ರಹಿಸಿದಪಕ್ಷದಲ್ಲಿ, ಆತನು ಗಂಗಾತೀರದಲ್ಲಿ ಮೂರುದಿನಗಳಿದ್ದಂತೆ ಸಿದ್ಧಿಸುವುದು. ಆದುದರಿಂದ ಇಲ್ಲಿ ಬಹುದಿನಗಳೆಂದರೆ ಮೂರುದಿನಗಳೆಂದು ಸಿದ್ಧವು. ಆದರೆ ಆ ಸುಮಂತ್ರನಿಗೆ ರಾಮವಿಯೋಗದಿಂದ ಒಂದೊಂದುದಿನವೂ ಕಲ್ಪಪ್ರಾಯವಾ ಗಿ ಬಹುದೀರ್ಘಕಾಲದಂತೆ ಕಂಡುಬಂದುದರಿಂದ ಇಲ್ಲಿ ಬಹುದಿವಸಗಳೆಂದು ಹೇಳಿದು ದಾಗಿ ಗ್ರಹಿಸಬೇಕು. (ಗೋವಿಂದರಾಜೀಯವು)

ಮಹೇಶ್ವರತೀರ್ಥ ವ್ಯಾಖ್ಯಾನುಸಾರವಾಗಿ ಈದಿನಸಂಖ್ಯೆಯು ಬೇರೆವಿಧವಾಗಿ ನಿರೂ ಪಿಸಲ್ಪಟ್ಟಿರುವುದು. ಹೇಗೆಂದರೆ, ಸುಮಂತ್ರನು ಸೀತಾರಾಮಲಕ್ಷ್ಮಣರೊಡನೆ ಗಂಗಾ ತೀರವನ್ನು ಸೇರಿ, ಅಲ್ಲಿ ಗುಹನೊಡನೆ ಕಲೆತಿದ್ದುದೊಂದು ದಿನವು; ರಾಮನು ಗಂಗೆಯ

ರಾಮನ ವ್ಯಸನದಿಂದ ಕಂದಿ ನಿನ್ನ ದೇಶಲ್ಲಿರುವ[1] ಪುಷ್ಪಿತಗಳಾದ ವೃಕ್ಷಗಳೂ ಬಾಡಿಹೋಗಿರುವುವು. ಈ ಶೋಕಾಗ್ನಿಯಿಂದ ಬೆಂದು ನಮ್ಮದೇಶದಲ್ಲಿರುವ ಕೆರೆತೊರೆಗಳೆಲ್ಲವೂ ಕುದಿಯುತ್ತಿರುವುವು. ಕಾಡು ಮತ್ತು ತೋಟಗಳಲ್ಲಿರುವ[2] ಹಸುರೆಲೆಗಳೆಲ್ಲವೂ ಒಣಗಿ ಹೋಗಿರುವುವು. ಪ್ರಾಣಿಗಳೆಲ್ಲವೂ ಸಂಚಾ

---

ನ್ನು ದಾಟಿದಮೇಲೆ, ಆಲದ ಮರದ ಕೆಳಗಿದ್ದುದೊಂದು ದಿನವು; ರಾಮನು ಭರದ್ವಾಜಾಶ್ರಮವನ್ನು ಸೇರಿದ ದಿನವಲ್ಲಿಯೇ ಆ ಆಶ್ರಮದಿಂದ ಹಿಂತಿರುಗಿ ಬಂದ ಗುಹನ ಚಾರರು ಬಂದುದೊಂದು ದಿನವು; ಇವೆಲ್ಲವೂ ಸೇರಿ ಮೂರು ದಿನಗಳಾಗುವುವು. ಈ ಮೂರು ದಿನಗಳೇ ಇಲ್ಲಿ ಬಹುದಿನಗಳೆಂದು ಹೇಳಲ್ಪಟ್ಟಿರುವುವು. ರಾಮನು ಭರದ್ವಾಜಾಶ್ರಮವನ್ನು ಸೇರಿದ ಮೂರನೆಯ ದಿವಸದಲ್ಲಿ, ಚಾರರು ಅಲ್ಲಿಂದ ಬಂದು ಸುಮಂತ್ರನಿಗೆ ಅಲ್ಲಿನ ವೃತ್ತಾಂತಗಳನ್ನು ತಿಳಿಸಿದ ಮೇಲೆ, ಸುಮಂತ್ರನು ಆ ದಿನವೇ ಅಲ್ಲಿಂದ ಹೊರಟು ಮೂರನೆಯದಿನದ ಸಾಯಂಕಾಲಕ್ಕೆ ಸರಿಯಾಗಿ ಎಂದರೆ, ಹೊರಟ ದಿನವೂ ಸೇರಿ ಮೂರನೆಯದಿನದ ಸಾಯಂಕಾಲಕ್ಕೆ ಅಯೋಧ್ಯೆಯನ್ನು ಸೇರಿರುವನು. ಆದುದರಿಂದಲೇ ''ತತಸ್ಸಾಯಾಹ್ನಸಮಯೇ ತೃತೀಯೇಹನಿಸಾರಥಿಃ । ಅಯೋಧ್ಯಾಂಸಮನುಪ್ರಾಪ್ಯ ನಿರಾನಂದಾಂದದರ್ಶಸ:"ಎಂಬುದಾಗಿ ಆತನು ಮೂರನೆಯದಿನದಲ್ಲಿ ಅಯೋಧ್ಯೆಯನ್ನು ಸೇರಿದನೆಂದು ಹೇಳಲ್ಪಟ್ಟಿದೆ. ಆದುದರಿಂದ ಮೂರನೆಯ ದಿನವೆಂದರೆ ಶೃಂಗಿಬೇರಪುರದಿಂದ ಹೊರಟ ದಿನದೊಡನೆ ಸೇರಿ ಮೂರನೆಯದಿನಕ್ಕೆ ಅಯೋಧ್ಯೆಯನ್ನು ಸೇರಿದನೆಂದು ಗ್ರಹಿಸಬೇಕು.(ಮಹೇಶ್ವರ ತೀರ್ಥೀಯವು).

1 ಇದಕ್ಕೆ ''ಅಪಿವೃಕ್ಷಾ: ಪರಿಮ್ಲಾನಾ: ಸಪುಷ್ಪಾಂಕುರ ಕೋರಕಾ:"ಎಂದು ಮೂಲವು. ವೃಕ್ಷಗಳಿಗೆ ಕಾಲವಶದಿಂದ ಸಸ್ಯರೋಗಗಳು ಬಂದು, ಅವುಗಳಲ್ಲಿ ಒಂದೆರಡು ಭಾಗಗಳು ಮಾತ್ರ ನಿಸ್ಸಾರವಾಗಿ ಒಣಗಿ ಬೀಳುವುದುಂಟು. ಈಗ ರಾಮವಿರಹವ್ಯಸನದಿಂದಲಾದರೋ ಆಗಿಡಗಳೆಲ್ಲವೂ ತಮ್ಮತಮ್ಮ ಹೂಗಳು, ಮೊಳಕೆಗಳು, ಮೊಗ್ಗುಗಳು, ಮೊದಲಾದ ಸಮಸ್ತಾವಯವಗಳೊಡನೆ ಸಂಪೂರ್ಣವಾಗಿ ಕಂದಿ ಕೆಟ್ಟು ಬಿದ್ದುವೆಂದು ಭಾವವು. ಇದರಿಂದ ವೃಕ್ಷಾವಯವಗಳಲ್ಲಿಕೂಡ ಕಠಿಸಮೃದುಭಾಗಗಳೆಂಬ ಭೇದವಿಲ್ಲದೆ ಸಮಸ್ತಭಾಗವೂ ಕೆಟ್ಟುಹೋದುವೆಂದರ್ಥವು.

2 ಇಲ್ಲಿಯೂಕೆರೆಕಟ್ಟೆಗಳೆಂಬುದರಿಂದ ಗುರುಲಘುತ್ವ ತಾರತಮ್ಯವಿಲ್ಲದೆಸಮಸ್ತವೂ ದುಃಖಾಗ್ನಿಯಿಂದ ಕಾದು ಹೋದುವೆಂದು ಭಾವವು ಮತ್ತು ಕಾಡುಗಳು, ತೋಟಗಳು, ಎಂಬಿವೆರಡನ್ನೂ ಹೇಳಿರುವುದರಿಂದ, ದೋಹದಾದಿಗಳೊಂದೂ ಇಲ್ಲದೆ ತಾನಾಗಿಯೇಬಳೆದು ಕಠಿನಾಕಾರಗಳಾದ ವೃಕ್ಷಗಳೂ, ಎಡೆಬಿಡದೆ ನೀರುಕಟ್ಟಿ ಬೆಳೆಸಿ ಕೋಮಲಾಕಾರವಾದ ಗಿಡಗಳೂ, ಇವೆರಡೂ ಏಕರೂಪವಾಗಿಯೇ ಒಣಗಿದುವೆಂದರ್ಥವು.

ರವಿಲ್ಲವೆ ಸ್ತಬ್ಧವಾಗಿರುವುವು. ಕ್ರೂರಮೃಗಗಳೂ ಕೂಡ, ವ್ಯಸನಹೊಂದಿ ನಿಂತಕಡೆಯಲ್ಲಿಯೇ ನಿಂತಿರುವುವು. ವನಚರಗಳಾದ ಮೃಗಪಕ್ಷಿಗಳೆಲ್ಲವೂ ರಾಮವಿರಹದಿಂದುಂಟಾದ ವ್ಯಸನದಿಂದ ಶಕ್ತಿಗುಂದಿ ಶಬ್ದಮಾಡದಿರುವುವು. ತಾವರೆಕೊಳಗಳೆಲ್ಲವೂ ಕಲಗಿ ಅದರಲ್ಲಿರುವ ಕಮಲದಳಗಳು ಸುಕ್ಕಿ ಮುಳುಗಿಹೋಗಿರುವುವು. ಜಲಚರಪಕ್ಷಿಗಳೆಲ್ಲವೂ ದುಃಖದಿಂದ ಒಳಗೆಯೇ ಅಡಗಿಕೊಂಡಿರುವುವು. ನೀರಿನಲ್ಲಿಯಾಗಲಿ, ನೆಲದಲ್ಲಿಯಾಗಲಿ, ಯಾವುದೊಂದು ಪುಷ್ಪಗಳಿಗೂ ಉಲ್ಲಾಸವೇ ಇಲ್ಲವು. ಅವುಗಳಿಗೆ ವಾಸನೆಯೂ ಇಲ್ಲವು. ಹಕ್ಕಿಗಳೆಲ್ಲವೂ ಗೂಡುಗಳಲ್ಲಿ ಅಡಗಿಕೊಂಡಿರುವುದರಿಂದ ಪುರೋದ್ಯಾನಗಳೆಲ್ಲವೂ ಕೇವಲಶೂನ್ಯಗಳಾಗಿರುವುವು. ವಿಹಾರೋದ್ಯಾನಗಳೊಂದಾದರೂ ಕಣ್ಣಿಗೆ ಅಂದವನ್ನೇ ಕೊಡುವುದಿಲ್ಲ. ನಾನು ಅಯೋಧ್ಯೆಗೆ ಪ್ರವೇಶಮಾಡಿ ಬಂದಾಗ ಒಬ್ಬರಾದರೂ ಆದರಿಸಲಿಲ್ಲ. ರಾಮನನ್ನು ಕಾಣದುದಕ್ಕಾಗಿ ಜನರೆಲ್ಲರೂ ಬಾರಿಬಾರಿಗೂ ನಿಟ್ಟುಸಿರನ್ನು ಬಿಡುತ್ತಿದ್ದರು. ರಾಮಶೂನ್ಯವಾದ ರಾಜರಥವನ್ನುನೋಡಿ ಪ್ರತಿಯೊಬ್ಬರೂ ಬೀದಿಯಲ್ಲಿ ಕಣ್ಣೀರನ್ನು ಸುರಿಸುತಿದ್ದರು. ಪುರಸ್ತ್ರೀಯರೆಲ್ಲರೂ ಉಪ್ಪರಿಗೆಗಳನ್ನೂ ವಿಮಾನಗಳನ್ನೂ ಗೋಪುರಗಳನ್ನೂ ಏರಿನಿಂತು, ರಾಮನಿಲ್ಲದ ರಥವನ್ನುನೋಡಿ ಹಾಹಾಕಾರದಿಂದ ಗಟ್ಟಿಯಾಗಿ ಅಳುವುದಕ್ಕಾರಂಭಿಸಿದರು. ಆಸ್ತ್ರೀಯರೆಲ್ಲರೂ ವಿಸ್ತಾರವಾಗಿಯೂ, ಶುದ್ಧವಾಗಿಯೂ ಇರುವ ತಮ್ಮ ಕಣ್ಣುಗಳಲ್ಲಿ ನೀರು ತುಂಬಿಕೊಂಡು, ದುಃಖಿತರಾಗಿ ಒಬ್ಬರನ್ನೊಬ್ಬರು ನೋಡುತಿದ್ದರು. ಈ ಅಯೋಧ್ಯೆಯಲ್ಲಿ ಯಾರನ್ನು ನೋಡಿದರೂ ರಾಮವಿರಹಕ್ಕಾಗಿ ದುಃಖಿಸುತ್ತಿದ್ದುದರಿಂದ, ಅವರಲ್ಲಿ ನಿನಗೆ ಶತ್ರುಗಳಾರು, ಮಿತ್ರರಾರು, ಉದಾಸೀನರಾರು, ಎಂಬೀ ಭೇದವೇ ನನಗೆ ತಿಳಿಯಲಿಲ್ಲ. ಅಲ್ಲಿದ್ದ ಮನುಷ್ಯರಲ್ಲಿ ಒಬ್ಬರಿಗಾದರೂ ಸಂತೋಷವಿರಲಿಲ್ಲ. ಆನೆ ಕುದುರೆಗಳೆಲ್ಲವೂ ದೈನ್ಯದಿಂದ ಕೊರಗುತಿದ್ದುವು. ಎಲ್ಲಿ ನೋಡಿದರೂ ರೋದನಧ್ವನಿಯೇ ಕೇಳಿಸುತ್ತಿರುವುದು. ಎಲ್ಲಿ ನೋಡಿದರೂ ಹಾಹಾಕಾರಧ್ವನಿಗಳೂ, ನಿಟ್ಟುಸಿರಿನ ಶಬ್ದಗಳೂ ತುಂಬಿರುವುವು. ರಾಮನ ಅಗಲಿಕೆಯಿಂದ ವ್ಯಾಕುಲವಾದ ಅಯೋಧ್ಯೆಯಲ್ಲಿ ಎಲ್ಲಿನೋಡಿದರೂ ಉಲ್ಲಾಸವೆಂಬುದೇ ಕಾಣುವುದಿಲ್ಲ. ಇದನ್ನುನೋಡಿದರೆ ಪುತ್ರಹೀನಳಾದವಳು ಕೌಸಲ್ಯೆಯುಮಾತ್ರವೇ ಅಲ್ಲ. ಈ ಅಯೋಧ್ಯಾ ನಗ

ರಿಯೇ ಪುತ್ರಹೀನವಾಗಿ ದುಃಖಿಸುವಂತೆ ನನಗೆ ತೋರಿರುವುದು.'' ಎಂದನು. ಈ ಮಾತನ್ನು ಕೇಳಿ ದಶರಥನು ದುಃಖದಿಂದ ಕಣ್ಣೀರುಬಿಡುತ್ತ, ಗದ್ಗದ ಸ್ವರವುಳ್ಳವನಾಗಿ, "ಎಲೈ ಸುಮಂತ್ರನೆ! ನಾನೇನು [1]ಮಾಡಲಿ! ಪಾಪಕು ಲದಲ್ಲಿ ಹುಟ್ಟಿ, ಪಾಪಬುದ್ಧಿಯುಳ್ಳ ಆ ಕೈಕೇಯಿಯಿಂದ ನಾನು ವಂಚಿತ ನಾಗಿ ಈ ಅಕಾರ್ಯವನ್ನು ಮಾಡಿ ಬಿಟ್ಟೆನು. ನಾನು ಮೊದಲೇ ಹಿರಿಯರಾದ ಮಂತ್ರಿಗಳೊಡನೆಕಲೆತು, ಈ ಕಾರ್ಯಾಲೋಚನೆಯನ್ನು ಮಾಡದೆ ಹೋದೆನು. ಅಥವಾ ನನ್ನ ಶ್ರೇಯಃಕಾಂಕ್ಷಿಗಳಾದ ಮಿತ್ರರೊಡನೆಯಾಗಲಿ, ಅಧಿಕಾರಿಗ ಳೊಡನೆಯಾಗಲಿ, ಪುರಜನರೊಡನೆಯಾಗಲಿ ಈ ಕಾರ್ಯವನ್ನು ಪರ್ಯಾಲೋ ಚಿಸದೆ ಅಜ್ಞಾನದಿಂದ ರಾಮನನ್ನು ಕಳುಹಿಸಿಬಿಟ್ಟೆನು. ಮುಖ್ಯವಾಗಿ ಸ್ತ್ರೀ ಮೋಹದಿಂದ ವಂಚಿತನಾಗಿ ಹಿಂದುಮುಂದನ್ನು ವಿಚಾರಿಸದೆ ಈಘೋರಕಾರ್ಯ ವನ್ನು ನಡೆಸಿ ಬಿಟ್ಟೆನು. ಎಲೆಸೂತನೆ! ದೈವಸಂಕಲ್ಪದಿಂದ ನಡೆಯಬೇಕಾ ದುದನ್ನು ಯಾರಿಂದ ತಾನೇ ತಪ್ಪಿಸುವುದಕ್ಕೆ ಸಾಧ್ಯವು? ಮಹಾಪಾಪಿಯಾ ದ ನನಗೆ ಈ ದೊಡ್ಡವ್ಯಸನವು ನಿಷ್ಕಾರಣವಾಗಿ ತನ್ನಷ್ಟಕ್ಕೆ ತಾನೇ ಸಂಭ ವಿಸಿತು. ಈ ವಿಪರೀತಕಾರ್ಯವೆಲ್ಲವೂ ನನ್ನ ವಂಶಹಾನಿಗೇ ಹೊರತು ಬೇರೆಯ ಲ್ಲವೆಂಬೇ ನನಗೆ ತೋರಿರುವುದು. ಅದೆಲ್ಲವೂ ಹಾಗಿರಲಿ! ಎಲೈ ಸೂತನೆ! ನೀ ನು ನನ್ನಿಂದ ಹಿಂದೆ ಏನಾದರೂ ಉಪಕಾರವನ್ನು ಪಡೆದಿದ್ದರೆ,ಆಕೃತಜ್ಞತೆ ಯನ್ನಿಟ್ಟುಕೊಂಡು, ಈಗಲೇ ನನ್ನನ್ನು ರಾಮನಿರುವಸ್ಥಳಕ್ಕೆ ಕರೆದು ಕೊಂಡು ಹೋಗಿ ಸೇರಿಸಿಬಿಡು. ಉತ್ಕ್ರಾಂತಿದಶೆಯಲ್ಲಿರುವ ನನ್ನಪ್ರಾಣಗ ಗಳೇ ಈಗ ನನ್ನನ್ನು ತ್ವರೆಪಡಿಸುತ್ತಿರುವುವು.ಈಗಲೂ ನನ್ನ ಆಜ್ಞೆಯು ನಡೆ ಯಬಹುದಾಗಿ ನಿನಗೆ ತೋರಿದ್ದರೆ, ರಾಮನನ್ನು ಹಿಂತಿರುಗಿಸಿ ಇಲ್ಲಿಗೆ ಕರೆದು

---

1 ಇದುವರೆಗೂ ರಾಮನಸರ್ವಾತ್ಮಕತ್ವವನ್ನು ಕವಿಯು ವಸ್ತುಧ್ವನಿಯಿಂದ ಸೂಚಿ ಸಿದುದಾಗಿ ತಿಳಿಯಬೇಕು. ದಶರಥನು ಕೇಳಿದ ಪ್ರಶ್ನೆಗೆಮಾತ್ರ ಸುಮಂತ್ರನು ಉತ್ತರವ ನ್ನು ಹೇಳಿ,ಅಷ್ಟರಲ್ಲಿಯೇನಿಲ್ಲದೆ, ರಾಜ್ಯದಲ್ಲಿಯೂ,ಮನುಷ್ಯಾದಿಗಳಲ್ಲಿಯೂ ಉಂಟಾದ ಕ್ಷೋಭವನ್ನು ವಿಶೇಷವಾಗಿ ವಿವರಿಸಿ ಹೇಳುತಿದ್ದುದನ್ನು ಕೇಳಿ.ದಶರಥನು,'ತಾನುಮಾಡಿ ದ ಅಕೃತ್ಯವನ್ನು ತಿಳಿಸುವುದಕ್ಕಾಗಿಯೇಈಮಾತುಗಳನ್ನು ಸುಮಂತ್ರನು ಹೇಳಿರುವ' ನೆಂದು ತಿಳಿದು,ತಾನುಮಾಡಿದುದು ತಪ್ಪೆಂದು ಒಪ್ಪಿಕೊಳ್ಳುತ್ತ ಈಮುಂದಿನ ಉತ್ತರಗ ಳನ್ನು ಹೇಳುವನು.

ಕೊಂಡುಬಾ! ರಾಮನನ್ನು ಬಿಟ್ಟು ಇನ್ನು ನಿಮಿಷಮಾತ್ರವಾದರೂ ನಾನು ಬದುಕಿರಲಾರೆನು. ಒಂದುವೇಳೆ ಮಹಾಬಾಹುವಾದ ಆರಾಮನು ಇಷ್ಟರಲ್ಲಿ ಬಹುದೂರಕ್ಕೆ ಹೊರಟುಹೋಗಿರಬಹುದು. ಆವನನ್ನು ಹಿಂತಿರುಗಿಸಿ ಕರೆತರುವುದಕ್ಕಿಂತಲೂ, ನನ್ನನ್ನೇ ರಥದಮೇಲೇರಿಸಿ ಅಲ್ಲಿಗೆ ಕರೆದುಕೊಂಡು ಹೋಗಿ ರಾಮನಮುಂದೆ ಬಿಡು. ಮೊಲ್ಲೆಯ ಮೊಗ್ಗುಗಳಂತೆ ದುಂಡಾದ ಹಲ್ಲುಗಳುಳ್ಳ ಮಹಾಧನುಷ್ಮಂತನಾದ ಆರಾಮನು ಈಗ ಎಲ್ಲಿರುವನೋ? ಆತನನ್ನು ನೋಡುತಿದ್ದರೆ ಮಾತ್ರವೇ ನನ್ನ ಜೀವವು ನನ್ನಲ್ಲಿ ನಿಲ್ಲುವುದೇಹೊರತು ಸೀತೆಯೊಡಗೂಡಿದ ಆತನನ್ನು ನೋಡದಿದ್ದರೆ ನನ್ನ ಪ್ರಾಣವೇ ನನ್ನಲ್ಲಿ ನಿಲ್ಲದು. ತಾವರೆಯಂತೆ ಕೆಂಪಾದ ಕಣ್ಣುಳ್ಳವನಾಗಿ, ನೀಡಿದ ಭುಜವುಳ್ಳವನಾಗಿ, ರತ್ನಕುಂಡಲಗಳನ್ನು ಧರಿಸಿದವನಾಗಿರುವ ಆ ರಾಮನನ್ನು ನೋಡದಿದ್ದರೆ ನಾನು ಯಮಪುರಿಗೇ ಹೋಗಬೇಕಾಗುವುದು. ಅಯ್ಯೋ! ಎಲೆ ಸೂತನೆ! ಈ ದುರವಸ್ಥೆಯನ್ನು ನಾನು ಅನುಭವಿಸುತ್ತಿರುವಾಗಲೂ,ಇಕ್ಷ್ವಾಕುವಂಶವರ್ಧನನಾದ ರಾಮನನ್ನು ನೋಡದಿರುವೆ ನಲ್ಲಾ! ಇದಕ್ಕಿಂತಲೂ ಇನ್ನು ಕಷ್ಟವೇನುಂಟು?ಹಾರಾಮಾ!ಹಾಲಕ್ಷ್ಮಣಾ!ಹಾಸೀತೇ!ನಾನು ಇಲ್ಲಿಹೀಗೆ ಅನಾಥನಾಗಿದುಃಖದಿಂದಸಾಯುತ್ತಿರುವನೆಂಬವಿಷಯವು ನಿಮಗೆ ತಿಳಿಯುವುದಕ್ಕೂ ಅವಕಾಶವಿಲ್ಲದೇ ಹೋಯಿತಲ್ಲಾ" ಎಂದು ಮಹಾವ್ಯಸನದಿಂದ ಬುದ್ಧಿಗೆಟ್ಟವನಾಗಿ, ನಾನಾವಿಧದಲ್ಲಿ ಪ್ರಲಾಪಿಸುತ್ತಾ, ಕೊನೆಗಾಣದ ದುಃಖಸಮುದ್ರದಲ್ಲಿ ಮುಳುಗಿ, ಸಮೀಪದಲ್ಲಿದ್ದ ಕೌಸಲ್ಯೆಯನ್ನು ನೋಡಿ‘ಎಲೆ ದೇವಿ! ನನಗಾದರೋ ಈಗಸಂಭವಿಸಿರುವ ಶೋಕವನ್ನು ಅಷ್ಟಿಷ್ಟೆಂದು ಹೇಳುವುದಕ್ಕೂ ಸಾಧ್ಯವಿಲ್ಲ. ಮಹಾಸಾಗರದಂತೆ ಇದಕ್ಕೆಪಾರವೇ ಇಲ್ಲದಿರುವುದು. ಇದೊಂದು ಮಹಾಸಮುದ್ರವೆಂಬುದರಲ್ಲಿ ಸಂದೇಹವೇ ಇಲ್ಲ. ರಾಮವಿರಹವೇ ಇದರ ವಿಸ್ತಾರವು. ಸೀತೆಯವಿಷಯವಾದ ದುಃಖವೇ ಅದರ ಪಾರವಂತಿರುವುದು ನನ್ನ ನಿಟ್ಟುಸಿರುಗಳೇ ಅಲೆಗಳಾಗಿಯೂ ಸುಳಿಗಳಾಗಿಯೂ ಇರುವುವು. ಈ ಕಣ್ಣೀರುಗಳೇ ಅದರ ನೊರೆಗಳು. ಈ ನನ್ನ ಬಾಹುವಿಕ್ಷೇಪಗಳೇ ಅದರಲ್ಲಿ ಸಂಚರಿಸತಕ್ಕ ಮೀನುಗಳು. ನನ್ನ ಈ ರೋದನಧ್ವನಿಯೇ ಅದರ ಮಹಾಘೋಷವು. ಈ ನನ್ನ ಬಿಚ್ಚಿದ ತಲೆಕೂದಲುಗಳೇ ಅದರಪಾಚಿಯು. ಕೈಕೇಯಿಯೆ ಇೀ

ಇದರೊಳಗಿನ ಬಡಬಾಗ್ನಿಯು. ಆ ಕುಬ್ಜೆಯವಾಕ್ಯವೇ ಇದರೊಳಗಿನ ಮಹಾಕ್ರೂರವಾದ ಮೊಸಳೆಯು. ಈ ನನ್ನ ಕಣ್ಣೀರೆಂಬ ಅಲೆಗಳ ಹಾರಾಟಕ್ಕೆ ಆ ಮೊಸಳೆಯೇ ಮೂಲವು. ಕೈಕೇಯಿಯು ಕೊಟ್ಟವರಗಳೇ ಇದರ ಜಲವೃದ್ಧಿಯು. ರಾಮ ವಿವಾಸನವೇ ಆಸಮುಪ್ರದ ನೀಳವು. ಇಂತಹ ಶೋಕಸಮುದ್ರದಲ್ಲಿ ನಾನು ಮುಳುಗಿ ಹೋಗುತ್ತಿರುವೆನಲ್ಲಾ!ರಾಮನ ಸಹಾಯವಿಲ್ಲದೆ ಈ ಮಹಾಸಮುದ್ರವನ್ನು ದಾಟಲಾರೆನಲ್ಲಾ! ಏನುಮಾಡಲಿ! ಎಲೆ ಕೌಸಲ್ಯೆ! ಇಲ್ಲಿ ನಾನು ಲಕ್ಷ್ಮಣನೊಡಗೂಡಿದ ರಾಮನನ್ನು ನೋಡಬೇಕೆಂದು ಎಷ್ಟುಹಂಬಲಿಸಿದರೇನು?ನನಗೆ ಎಂದಿಗೂ ಅದುದೊರೆಯಲಾರದು.ಇದಕ್ಕಿಂತ ನನಗೆ ಇನ್ನು ಆಗಬೇಕಾದ ಅಮಂಗಳವೇನಿರುವುದು."ಎಂದನು. ರಾಜನು ಹೀಗೆ ಕಿವಿಯಿಂದ ಕೇಳಿ ಸಹಿಸುವುದಕ್ಕಾಗದಂತೆ ಪ್ರಲಾಪಿಸುತ್ತಾ,ಹಾಗೆಯೇ ಪ್ರಜ್ಞೆತಪ್ಪಿ,ಹಾಸಿಗೆಯ ಮೇಲೆ ಒರಗಿದನು.ರಾಮನನ್ನು ಸ್ಮರಿಸಿಕೊಂಡಹಾಗೆಲ್ಲಾ ಆತನ ದುಃಖವು ಕ್ಷಣಕ್ಷಣಕ್ಕೂ ದ್ವಿಗುಣವಾಗಿ ಹೆಚ್ಚುತ್ತಿತ್ತು. ಹಾಗೆಯೇ ಮೂರ್ಛೆಬಿದ್ದ ದಶರಥನನ್ನು ನೋಡಿ,ಮೊದಲೇ ರಾಮನಲ್ಲಿ ಅಪಾಯಶಂಕೆಯಿಂದ ತತ್ತಳಿಸುತ್ತಿರುವ ಕೌಸಲ್ಯೆಗೆ,ಈಗಪತಿಯ ಗತಿಯೇನಾಗುವುದೋ ಎಂದು ಮತ್ತಷ್ಟುಭಯವುಂಟಾಯಿತು. ಇಲ್ಲಿಗೆ ಐವತ್ತೊಂಭತ್ತನೆಯಸರ್ಗವು.

---

**{ ಸುಮಂತ್ರನಿಂದ ರಾಮನ ವೃತ್ತಾಂತವನ್ನು ತಿಳಿದು, ಕೌಸಲ್ಯೆಯು ಪ್ರಲಾಪಿಸಿದುದು. ಸುಮಂತ್ರನು ಅವಳನ್ನು ಸಮಾಧಾನಪಡಿಸಿದುದು. }**

ಆಮೇಲೆ ಕೌಸಲ್ಯೆಯು, ಭೂತಮೆಟ್ಟಿದವಳಂತೆ ನಡುಗುತ್ತ, ಬಾರಿಬಾರಿಗೂ ಪ್ರಜ್ಞೆತಪ್ಪಿ ಭೂಮಿಯಲ್ಲಿ ಬಿಳುತ್ತಾ,ಮೆಲ್ಲಗೆ ಚೇತರಿಸಿಕೊಂಡು ಸುಮಂತ್ರನನ್ನುನೋಡಿ,"ಎಲೆ, ಸೂತನೆ! "ಈಗಲೇ ನನ್ನನ್ನು ಸೀತಾರಾಮಲಕ್ಷ್ಮಣರಿರುವಸ್ಥಳಕ್ಕೆ ಕರೆದುಕೊಂಡು ಹೋಗು! ಅವರನ್ನುಬಿಟ್ಟು ನಾನು ಕ್ಷಣಮಾತ್ರವೂ ಇರಲಾರೆನು! ನೀನು ತಂದಿರುವರಥವನ್ನು ಹಾಗೆಯೇ ಅತ್ತಲಾಗಿ ತಿರುಗಿಸು! ನನ್ನನ್ನೂ ದಂಡಕಾರಣ್ಯದಲ್ಲಿ ಬಿಟ್ಟುಬಾ! ಹಾಗಿಲ್ಲದಿದ್ದರೆ ಇತ್ತಲಾಗಿನಾನೂಯಮಪುರಿಗೇ ಹೋಗಬೇಕಾಗಿರುವುದು."ಎಂದಳು. ಥಾರೆ

ಧಾರೆಯಾಗಿ ಕಣ್ಣೀರುಸುರಿಸಿ ಹೀಗೆ ಗದ್ಗದಸ್ವರದಿಂದಗೋಳಿಡುತ್ತಿರುವ ಆ ಕೆಯನ್ನು, ಸುಮಂತ್ರನು ವಿನಯದಿಂದಕೈಮುಗಿದುಸಮಾಧಾನಪಡಿಸುತ್ತಾ, “ಎಲೆ ದೇವಿ. ಇದೇನು ಹೀಗೆ ದುಃಖಿಸುವೆ? ಈ ಮೋಹವನ್ನೂ, ಕಳವಳವ ನ್ನೂ ಬಿಡು. ದುಃಖಿಸಬೇಡ! ರಾಮನು ಕಾಡಿನಲ್ಲಿದ್ದರೂ ಆತನಿಗೆ ಯಾವು ದೊಂದು ಕಷ್ಟವೂ ಇಲ್ಲವು. ಲಕ್ಷ್ಮಣನು ಆತನ ಪಾದಶುಶ್ರೂಷೆಯನ್ನು ಮಾಡುತ್ತಿರುವನು.ಆ ಲಕ್ಷ್ಮಣನು ಧರ್ಮಜ್ಞನಾದುದರಿಂದ ರಾಮನಪಾದ ಶುಶ್ರೂಷೆಯೇ ತನಗೆ ಪರಲೋಕಸಾಧನೆಯೆಂದು ತಿಳಿದು, ಜಿತೇಂದ್ರಿಯ ನಾಗಿ ಎಡೆಬಿಡದೆ ಅದನ್ನು ನಡೆಸುತ್ತಿರುವನು. ನಿರ್ಜನವಾದ ವನದಲ್ಲಿ ಯೂ ಸೀತೆಯು ಮನೆಯಲ್ಲಿರುವಂತೆಯೇ ಸುಖದಿಂದಿರುವಳು. ವನವಾ ಸದುಃಖವೆಂಬುದು ಆಕೆಗೆ ಸ್ವಲ್ಪವಾದರೂ ಸಂಭವಿಸದು. ಆಕೆಯು ವನ ವಾಸವನ್ನನುಭವಿಸುವುದಕ್ಕೆ ಶಕ್ತಳೆಂದೇ ನನಗೆ ತೋರಿರುವುದು. ನಿರ್ಜನ ವಾದ ಆ ವನಪ್ರದೇಶಗಳಲ್ಲಿಯೂಕೂಡ, ಆಸೀತೆಯು. ಉದ್ಯಾನವನದಲ್ಲಿರು ವಂತೆಯೇ ವಿನೋದದಿಂದಿರುವಳು. ಪೂರ್ಣಚಂದ್ರನಿಗೆ ಸಮಾನವಾದ ಮುಖವುಳ್ಳ ಆಕೆಯು ರಾಮನಲ್ಲಿಯೇನಟ್ಟಮನಸ್ಸುಳ್ಳವಳಾಗಿರುವುದರಿಂದ, ಜನಶೂನ್ಯವಾದ ಅಡವಿಯಲ್ಲಿಯೂ, ಮುಗ್ಧೆಯಾದ ಬಾಲಿಕೆಯಂತೆ ಕಷ್ಟ ವೆಂಬುದನ್ನೇ ತಿಳಿಯದೆ ಕ್ರೀಡಿಸುತ್ತಿರುವಳು. ಆಕೆಯ ಮನಸ್ಸೆಲ್ಲವೂ ಆತನ ಲ್ಲಿಯೇ ನಟ್ಟು ಹೋಗಿರುವುದು.ಆಕೆಯಪ್ರಾಣವೂ ಆತನಲ್ಲಿಯೇಅಡಗಿರುವು ದು. ರಾಮನಿಲ್ಲದಿದ್ದರೆ ಈ ಅಯೋಧ್ಯೆಯೂ ಆಕೆಗೆ ಅರಣ್ಯಪ್ರಾಯವಾಗುವು ದು. ಅವರು ಪ್ರಯಾಣಮಾಡುತ್ತಿರುವಾಗ ದಾರಿಯಲ್ಲಿ ಸೀತೆಯು, ಅಲ್ಲಲ್ಲಿ ಕಾಣುವ ಗ್ರಾಮಗಳನ್ನೂ, ಪಟ್ಟಣಗಳನ್ನೂ, ನದೀಪ್ರವಾಹಗಳನ್ನೂ, ನಾನಾವಿಧವೃಕ್ಷಗಳನ್ನೂನೋಡಿ, ಅವುಗಳ ವಿಷಯವನ್ನುಕುರಿತು ರಾಮನ ನ್ನಾಗಲಿ, ಲಕ್ಷ್ಮಣನನ್ನಾಗಲಿ ವಿಚಾರಿಸುತ್ತಿರುವಳು. ಅವರಿಂದ ಅವುಗ ಳಲ್ಲಿ ಒಂದೊಂದರ ಹೆಸರನ್ನೂ ಕೇಳಿ ತಿಳಿಯುತ್ತಿರುವಳು. ಮುಖ್ಯವಾಗಿ ಆಕೆಗೆ ಸ್ವಲ್ಪವೂ ಶ್ರಮತೋರದಂತೆ ರಾಮಲಕ್ಷ್ಮಣರಿಬ್ಬರೂ ಅವಳನ್ನು ವಿನೋದಪಡಿಸುತ್ತ ಕರೆದುಕೊಂಡು ಹೋಗುವರು. ಎಲೆ! ದೇವಿ! ಅದರೆ ನಾನು ಇತ್ತಲಾಗಿ ಹೊರಡುವುದಕ್ಕೆ ಸ್ವಲ್ಪ ಮೊದಲು, ಸೀತೆಯು

¹ಯಾವುದೋ ಒಂದು! ಮಾತನ್ನು ಮಾತ್ರ ಹೇಳಿದುದಾಗಿ ನನಗೆ ಈಗಲೂ

---

1 ಇಲ್ಲಿ "ಇದಮೇವ ಸ್ಮರಾಮ್ಯಸ್ಯಾ ಸಹಸ್ಯೈವೋಪಜಲ್ಪಿತಂ । ಕೈಕೇಯೀ ಸಂಶ್ರಿತಂ ವಾಕ್ಯಂ ನೇದಾನೀಂ ಪ್ರತಿ ಭಾತಿಮಾ । ಧ್ವಂಸಯಿತ್ವಾತು ತದ್ವಾಕ್ಯಂ ಪ್ರಮಾದಾತ್ಪರ್ಯು ಪಸ್ಥಿತಂ । ಹ್ಲಾದನಂವಚನಂ ಸೂತೋ ದೇವ್ಯಾ ಮಧುರಮಬ್ರವೀತ್॥" ಎಂದು ಮೂಲವು. ಸುಮಂತ್ರನು ಕಾಡನ್ನು ಬಿಟ್ಟು ಅಯೋಧ್ಯೆಗೆ ಹಿಂತಿರುಗುವಾಗ, ಸೀತೆಯು ಕೈಕೇಯಿಯನ್ನುದ್ದೇಶಿಸಿ ಕ್ರೂರವಾಗಿ ಹೇಳಿದ ಒಂದುವಾಕ್ಯವನ್ನು, ಕೌಸಲ್ಯೆಯ ಮನ ಸ್ಸಂತೋಷಾರ್ಥವಾಗಿ ಮೊದಲು ಹೇಳಬೇಕೆಂದೆಣಿಸಿ, ಆಮೇಲೆ ತನ್ನ ಮನಸ್ಸಿನಲ್ಲಿಯೇ ತಾನು ಆವೃದ್ಧರಾದ ಕೌಸಲ್ಯಾದಶರಥರು ಆಮಾತನ್ನು ಕೇಳಿದರೆ ಪ್ರಾಣಬಿಟ್ಟುಬಿಡು ವರೆಂದು ಶಂಕಿಸಿ, ಅದನ್ನು ವ್ಯಕ್ತವಾಗಿ ಹೇಳದೆ ಮರೆಸಿ ಬಿಡುವನು. "(ಇದಮೇವಸ್ಮ ರಾಮಿ) ಇಷ್ಟುಮಾತ್ರವೇ ನನಗೆ ಸ್ಮರಣೆಯಲ್ಲಿರುವುದು. (ಕೈಕೇಯೀಸಂಶ್ರಿತಂ) ಕೈಕೇ ಯಿಗೆ ಸಂಬಂಧಪಟ್ಟ (ಸಹಸ್ಯೈವೋಪಜಲ್ಪಿತಂ)ಸೀತೆಯು ಥಟ್ಟನೆ ಹೇಳಿಬಿಟ್ಟ(ವಾಕ್ಯಂ) ವಾಕ್ಯವು. (ಮಾಪ್ರತಿ) ನನಗೆ (ನೇದಾನೀಂಭಾತಿ) ಈಗ ಸ್ಮರಣೆಗೆ ಬರಲಿಲ್ಲವು" ಎಂದು ಹೇಳಿ,(ಪ್ರಮಾದಾತ್ಪರ್ಯುಪಸ್ಥಿತಂ) ಪ್ರಮಾದವಶದಿಂದ ತನ್ನಬಾಯಿಯಲ್ಲಿ ಹೊರಟು ಬಿಟ (ತದ್ವಾಕ್ಯಂ) ಆಸೀತೆಯವಾಕ್ಯವನ್ನು, (ಧ್ವಂಸಯಿತ್ವಾ) ಮರೆಸಿಬಿಟ್ಟು, (ದೇವ್ಯಾಃ) ಆಕೌಸಲ್ಯೆಗೆ, (ಹ್ಲಾದನಂ) (ಸಂತೋಷಕರವಾಗಿಯೂ, (ಮಧುರಂ) ಇಂಪಾಗಿಯೂ ಇರುವ, (ವಚನಂ) ಮಾತನ್ನು, (ಅಬ್ರವೀತ್) ಹೇಳಿದನು." ಎಂದರ್ಥವು. ಮೊದಲು ಸುಮಂತ್ರನು ಸೀತೆಯು ಕೈಕೇಯಿಯ ವಿಷಯವಾಗಿ ಒಂದೆರಡು ಮಾತುಗಳನ್ನು ಹೇ ಳಿದಳೆಂದು ಸೂಚಿಸಲಾರಂಭಿಸಿ, ಅದನ್ನು ಮರೆಸಿಬಿಟ್ಟಿರುವನು (ಸಹಸ್ಯೈವೋಪಜಲ್ಪಿತಂ) "ಥಟ್ಟನೆ ಹೇಳಿಬಿಟ್ಟಳು" ಎಂದು ಹೇಳಿರುವುದರಿಂದ, ಆಕಾರಣದಿಂದಲೇ ತನಗೆ ಜ್ಞಾಪ ಕಕ್ಕೆ ಬರಲಿಲ್ಲವೆಂದೂ ಸೂಚಿಸಿದಂತಾಯಿತು. ಹೀಗಿದ್ದರೂ ಚೆನ್ನಾಗಿ ಜ್ಞಾಪಿಸಿಕೊಂಡು ಹೇಳುವಂತೆ ಅವರು ಪುನಃ ತನ್ನನ್ನು ನಿರ್ಬಂಧಿಸುವರೆಂಬ ಶಂಕೆಯಿಂದ (ಇದಮೇವ ಸ್ಮರಾಮಿ) ಇಷ್ಟು ಮಾತ್ರವೇ ತನಗೆ ಜ್ಞಾಪಕದಲ್ಲಿರುವುದೆಂದು ಹೇಳಿದನು. ಇವರ ಮೇಲೆ (ಪ್ರಮಾದಾತ್ಪರ್ಯುಪಸ್ಥಿತಂ ತದ್ವಾಕ್ಯಂಧ್ವಂಸಯಿತ್ವಾ) ತನ್ನಬಾಯಿಯಿಂದ ಆ ಕಸ್ಮಿಕವಾಗಿ ತನಗೂ ತಿಳಿಯದೆ ಆಮಾತುಗಳು ಹೊರಟು ಬರುತ್ತಿರುವುದನ್ನು ಕಂಡು, ಅವುಗಳನ್ನು ಅಷ್ಟರಲ್ಲಿಯೇ ಮರೆಸಿಟ್ಟು (ಹ್ಲಾದನಂ) ಅವರಮನಸ್ಸಿಗೆ ಆಪ್ಯಾಯನ ತರವಾದ ಬೇರೆಮಾತುಗಳನ್ನಾಡಿದನೆಂದು ಭಾವವು. ಆದರೆ ಇಲ್ಲಿ ಸೀತೆಯು ಕೈಕೇ ಯಿಯ ವಿಷಯವಾಗಿ ಹೇಳಿದಮಾತುಗಳನ್ನು ಕೇಳಿದರೆ, ಕೌಸಲ್ಯೆಗೆ ಮತ್ತಷ್ಟು ಸಂಕ ಟವು ಹೆಚ್ಚುವುದೆಂಬುದೇನೋ ಸಹಜವು. ಅದನ್ನು ಸುಮಂತ್ರನು ಮರೆಸಿದುದೂ

ಜ್ಞಾಪಕದಲ್ಲಿರುವುದು ಆಕೆಯು ಎಂದಿಗೂ ಹಾಗೆ ಆಡತಕ್ಕವಳಲ್ಲದಿದ್ದರೂ

---

ನ್ಯಾಯವಾಗಿಯೇ ಇರಬಹುದು. ಆದರೆ ಆಮಾತುಗಳಾವುವು? ಅದು ಈ ವಿಧವಾದು ದೆಂದು ತಿಳಿಯುವ ಬಗೆಹೇಗೆ? ಅದನ್ನು ತಿಳಿಯುವುದಕ್ಕೆ ಬೇರೆಪ್ರಮಾಣವೇನು? ಎಂ ದುಶಂಕೆಗೆ ಕಾರಣನಾಗುವುದು. ಸಂದರ್ಭವಶದಿಂದ, ಆಮಾತನ್ನು ಇಲ್ಲಿ ಮರೆಸಿಟ್ಟರೂ, ಸರ್ವಜ್ಞನಾದ ವಾಲ್ಮೀಕಿಗೆನಿಜತತ್ವವು ಚೆನ್ನಾಗಿ ತಿಳಿಯದೇ ಇರದು.ಅದನ್ನು ಬೇರೊಂದು ಸಂದರ್ಭ ವಿಶೇಷದಲ್ಲಿಯಾದರೂ ಸ್ಪಷ್ಟಪಡಿಸದಿದ್ದರೆ ಆತನ ಸರ್ವಜ್ಞತ್ವದಲ್ಲಿಯೇ ಶಂಕೆಯುಂಟಾಗುವುದಲ್ಲವೆ! ಆಮಾತುಗಳು ಯಾವಸಂದರ್ಭಗಳಲ್ಲಿಯೂ ಅನಿ ವಾರ್ಯವಾಗಿಯೇ ಇದ್ದಪಕ್ಷದಲ್ಲಿ ಅದನ್ನು ಋಷಿಯೂ ಸೂಚಿಸುತ್ತಲೇ ಇರಲಿಲ್ಲವು. ಆದುದರಿಂದ ಈ ವಿಷಯವು ಬೇರೊಂದುಕಡೆಯಾದರೂ ವ್ಯಕ್ತವಾಗಿ ಹೇಳಲ್ಪಟ್ಟಿರಬೇ ಕೆಂಬುದೇ ಸಿದ್ಧವು. ಅದಕ್ಕಾಗಿಯೇ ಇಲ್ಲಿ ಸೂಕ್ಷ್ಮವಾಗಿ ಹೇಳಿ,ಅಷ್ಟಕ್ಕೇ ಬಿಟ್ಟುಬಿಟ್ಟಿರು ವನು. ಅದು ಯಾವ ಸಂದರ್ಭವೆಂಬುದನ್ನು ತಿಳಿಯಬೇಕಲ್ಲವೆ! ಯುದ್ಧಕಾಂಡದಲ್ಲಿ ಸೀತೆಯ ವಿಷಯವನ್ನು ಹೇಳುವಾಗ"ವಿಜಗರ್ಹೇಽತ್ರ ಕೈಕೇಯೀಂ ಕ್ರೋಶಂತೀಕರು ರರೀಯಥಾ |" ಕುರರಿಯಂತೆ ಕೂಗಿಡುತ್ತ ಸೀತೆಯು ಈವಿಷಯದಲ್ಲಿ ಕೈಕೇಯಿಯನ್ನು ನಿಂದಿಸಿದಳು? ಎಂದಾರಂಭಿಸಿ, "ಸಕಾಮಾ ಭವ ಕೈಕೇಯಿ ಹತೋಽಯಂಕುಲನಂ ದನಃ" ವಂಶಕ್ಕೆ ಆನಂದ ವರ್ಧಕನಾದ ಈರಾಮನನ್ನು ಸಂಪೂರ್ಣವಾಗಿ ಕೆಡಿಸಿಬಿಟ್ಟೆ! ಇನ್ನುನಿನ್ನ ಕೋರಿಕೆಯು ಕೈಗೂಡಿತು! ಎಂದು ಹೇಳಿದುದಾಗಿ ತಿಳಿಸಲ್ಪಟ್ಟಿರುವುದು. ರಾಮನನ್ನು ಕಾಡಿಗೆ ಕಳುಹಿಸಿ ಬಿಟ್ಟಮಾತ್ರಕ್ಕೆ ಕೈಕೇಯಿಯ ಕೋರಿಕೆಯು ಹೇಗೆ ಈ ಡೇರಿದಂತಾಯಿತು! ಎಂದರೆ, ರಾಮನನ್ನು ಊರುಬಿಟ್ಟು ಹೊರಡಿಸಿದರೆ ಆತನನ್ನು ಕ್ಷಣಕಾಲವೂ ಅಗಲಿರಲಾರದೆ ಸೀತೆಯೂ ಕಾಡಿಗೆಹೊರಡಬೇಕಾಗುವುದು.ಲೋಕೋತ್ತರ ಸೌಂದರ್ಯವುಳ್ಳ ಸೀತೆಯನ್ನು ಕಾಡಿನಲ್ಲಿ ಯಾವಾದರೂ ರಾಕ್ಷಸರು ಅಪರಿಸಿಕೊಂಡು ಹೋಗಬಹುದು.ಇದರಿಂದ ಪತ್ನೀವಿಯೋಗವನ್ನು ಸಹಿಸಲಾರದೆ ರಾಮನೂತಾನಾಗಿಯೇ ಪ್ರಾಣತ್ಯಾಗವನ್ನು ಮಾಡಿಕೊಳ್ಳುವನು.ಆಗ ರಾಜ್ಯವು ತನ್ನ ಮಗನಿಗೇ ಸ್ಥಿರಪಡುವುದು. ರಾಮನನ್ನು ನಿಶ್ಶೇಷವಾಗಿ ನಾಶಮಾಡದಿದ್ದರೆ ಆತನ ಗುಣಕ್ಕೆ ಪರವಶರಾಗಿರುವ ಪ್ರಜೆ ಗಳು, ಅವನು ಹಿಂತಿರುಗಿ ಬಂದ ಮೇಲೆಯಾದರೂ ಅವನಿಗೆ ವಶರಾಗಿ, ಭರತನನ್ನು ಉ ದಾಸೀನಮಾಡುವರು. ಆಗ ಇಷ್ಟು ಪ್ರಯತ್ನಪಟ್ಟು ರಾಜ್ಯವನ್ನು ಸಂಪಾದಿಸಿದುದೂ ವಿಫಲವಾಗುವುದು." ಎಂಬ ಬಹುದೂರದೃಷ್ಟಿಯಿಂದಲೇ ಕೈಕೇಯಿಯು ರಾಮನಿಗೆ ಅರಣ್ಯವಾಸವನ್ನು ನಿಯಮಿಸಿರುವಳೆಂದೂ, ಹಾಗೆಯೇ ಅವೆಲ್ಲವೂ ಕ್ರಮವಾಗಿ ಕೈಗೂ ಡಿ ಬಂದು ಅವಳ ಉದ್ದೇಶವು ಕೊನೆಸಾಗಿತೆಂದೂ ಸೀತೆಯ ಅಭಿಪ್ರಾಯವು. ಆದುದ

ಕೈಕೇಯಿಯ ವಿಷಯವಾಗಿ ತಪ್ಪನೆ ಅದೊಂದುಮಾತನ್ನು ಮಾತ್ರಹೇ

---

ರಿಂದಲೇ "ಸಕಾಮಾಭವ ಕೈಕೇಯಿ ಹತೋಽಯಂ ಕುಲನಂದನಃ" ಎಂದು ಸೀತೆಯು ಹೇಳಿರುವಳು. ಈ ಅಭಿಪ್ರಾಯವನ್ನೇ ಅನುಸರಿಸಿ, ರಾಮನೂ ಅರಣ್ಯಕಾಂಡದಲ್ಲಿ "ಕಚ್ಚಿತ್ಸ ಕಾಮಾ ಕೈಕೇಯೀ ಸುಖಿತಾ ಸಾಭವಿಷ್ಯತಿ । ಯಾ ನ ತುಷ್ಯತಿ ರಾಜ್ಯೇನ ಪುತ್ರಾರ್ಥೇ ದೀರ್ಘದರ್ಶಿನೀ ॥ " ತನ್ನ ಮಗನವಿಷಯದಲ್ಲಿ ಬಹುದೂರ ದೃಷ್ಟಿಯುಳ್ಳವಳಾದುದರಿಂದಲೇ, ಕೈಕೇಯಿಯು ಮಗನಿಗೆ ರಾಜ್ಯವು ಲಭಿಸಿದಮಾತ್ರಕ್ಕೆ ತೃಪ್ತಿಪಡದೆ ನನ್ನನ್ನು ಕಾಡಿಗೆ ಕಳುಹಿಸಿದಳು. ಈಗಲಾದರೂ ಅವಳು ಕೃತಾರ್ಥಳಾಗಿರಬಹುದೆ" ಎಂಬುದಾಗಿ ರಾಜ್ಯಪ್ರಾಪ್ತಿ ಮಾತ್ರದಲ್ಲಿ ತೃಪ್ತಿ ಹೊಂದದೆ ತನ್ನವಿನಾಶವನ್ನೂ ಕೋರಿದಳೆಂದು ಹೇಳಿರುವನು. ಹಾಗೆಯೇ ಮತ್ತೊಂದು ಕಡೆಯಲ್ಲಿ ರಾಮನು "ಯದಭಿಪ್ರೇತಮಸ್ಮಾಸು ಪ್ರಿಯಂ ವರವೃತಂ ಚಯತ್ । ಕೈಕೇಯ್ಯಾ ಸ್ತತ್ಸಸಂವೃತ್ತಂ ಕ್ಷಿಪ್ರಮದ್ಯೈವ ಲಕ್ಷ್ಮಣ ॥" ಕೈಕೇಯಿಯು ನನ್ನ ವಿಷಯದಲ್ಲಿ ಅಭಿಪ್ರಾಯ ಪಟ್ಟದ್ದು, ಅವಳಿಗೆ ಪ್ರಿಯವಾದುದು, ಅವಳು ವರರೂಪವಾಗಿ ಬೇಡಿದುದು, ಇವೆಲ್ಲವೂ ನಿರ್ವಿಘ್ನವಾಗಿ ಬಹುಶೀಘ್ರದಲ್ಲಿಯೇ ಅವಳಿಗೆ ಕೈಗೂಡಿತು." ಎಂದು ತನ್ನ ವಿನಾಶವನ್ನು ಕೋರಿಯೇ ಕೈಕೇಯಿಯು ತನ್ನನ್ನು ಕಾಡಿಗೆ ಕಳುಹಿಸುವಂತೆ ವರವನ್ನು ಕೇಳಿರುವಳೆಂಬ ಅಭಿಪ್ರಾಯವನ್ನು ತೋರಿಸಿರುವನು. ಈ ಅಭಿಪ್ರಾಯವೇ ಸೀತೆಗೂ ಉಂಟಾಗಿರುವುದೆಂದು ಇದರ ಹಿಂದಿನ ಸರ್ಗದ ಕೊನೆಯಲ್ಲಿ ಸುಮಂತ್ರನೂ ಸೂಚಿಸಿರುವನು. ಹೇಗೆಂದರೆ; "ಜಾನಕೀತು ಮಹಾರಾಜ ನಿಶ್ವಸಂತೀ ಮನಸ್ವಿನೀ । ಭೂತೋಪಹತಚಿತ್ತೇವ ವಿಷ್ಠಿತಾವಿಸ್ಮಿತಾಸ್ಥಿತಾ ॥ ಅದೃಷ್ಟಪೂರ್ವವ್ಯಸನಾ ರಾಜಪುತ್ರೀ ಯಶಸ್ವಿನೀ । ತೇನದುಃಖೇನ ರುದತೀ ನೈವಮಾಂಕಿಂಚಿದಬ್ರವೀತ್ ॥ ಉದ್ವೀಕ್ಷಮಾಣಾಭರ್ತಾರಂ ಮುಖೇನ ಪರಿಶುಷ್ಯತಾ । ಮುಮೋಚ ಸಹಸಾಬಾಷ್ಪಂ ಮಾಂಪ್ರಯಾಂತ ಮುದೀಕ್ಷ್ಯಸಾ ॥ " ಎಲೈ ಮಹಾರಾಜನೆ! ತಪಸ್ವಿನಿಯಾದ ಆಸೀತೆಯು ನಿಟ್ಟುಸಿರನ್ನು ಬಿಡುತ್ತ, ಗ್ರಹಾವಿಷ್ಟಳಾದವಳಂತೆ ಸ್ತಬ್ಧಳಾಗಿದ್ದಳು. ರಾಜಪುತ್ರಿಯಾದ ಆಕೆಯು ಇದುವರೆಗೆ ಎಂದಿಗೂ ವ್ಯಸನವೆಂಬುದನ್ನೇ ಕಂಡವಳಲ್ಲ.ಈಗಲಾದರೋ ಮಹಾಸಂಕಟದಿಂದ ಗೋಳಿಡುತ್ತ, ನನ್ನನ್ನು ನೋಡಿ ಯಾವುದೊಂದು ಮಾತನ್ನೂ ಆಡಲಿಲ್ಲ ಬಾಡಿದ ಮುಖದಿಂದ ಪತಿಯಾದ ರಾಮನನ್ನು ನೋಡುತ್ತ, ಮತ್ತಲಾಗಿ ಪ್ರಯಾಣಸನ್ನದ್ಧನಾದ ನನ್ನನ್ನೂ ನೋಡಿ, ಇದ್ದಕ್ಕಿದ್ದಹಾಗೆ ಕಣ್ಣೀರನ್ನು ಸುರಿಸಲಾರಂಭಿಸಿದಳು" ಎಂದು ಹೇಳಿರುವನು. ಇಲ್ಲಿ ರೋದಿಸುವಿಕೆ, ಮಾತಾಡದಿರುವಿಕೆ, ಮುಖಶೋಷಣದಿಂದ ಪತಿಯನ್ನು ನೋಡಿದುದು, ಆಗಾಗ ಸುಮಂತ್ರನನ್ನು ನೋಡಿದುದು, ಕಣ್ಣೀರು ಸುರಿಸಿದುದು

ಳಿಬಿಟ್ಟಳು. ಏನು ಹೇಳಿದಳೆಂದು ನನಗೆ ಈಗ ಚೆನ್ನಾಗಿ ಸ್ಮರಣೆಗೆ ಬರಲಿಲ್ಲ" ಎಂದು ಆ ಸುಮಂತ್ರನು ಸೀತೆಯು ಪ್ರಮಾದವಶದಿಂದ ಹೇಳಿದ ಆ ಮಾತನ್ನು ಇಲ್ಲಿ ವ್ಯಕ್ತವಾಗಿ ಹೇಳಿಬಿಟ್ಟರೆ ವೃದ್ಧರಾದ ಕೌಸಲ್ಯಾ ದಶರಥರು ತಮ್ಮ ಪ್ರಾಣದಲ್ಲಿಯೇ ಸಂಪೂರ್ಣವಾದ ನಿರಾಶೆಯನ್ನು ಹೊಂದಿ ಬಿಡುವರೆಂದು ತಿಳಿದು, ಅದನ್ನು ಹಾಗೆಯೇ ಮರೆಸಿಬಿಟ್ಟನು. ಆ ಮೇಲೆ ಕೌಸಲ್ಯೆಯ ಮನಸ್ಸಿಗೆ ಸಮಾಧಾನಕರವಾದ ಮಾತುಗಳನ್ನೇ ಆಡಬೇಕೆಂದೆಣಿಸಿ, ಪುನಃ ಕೌಸಲ್ಯೆಯನ್ನು ಕುರಿತು "ಸೀತೆಯು ಬಹುದೂರದವರೆಗೆ ಕಾಲುನಡೆಯಿಂದಲೇ ಪ್ರಯಾಣಮಾಡಿದರೂ, ಎಷ್ಟೇ ಬಿರುಗಾಳಿಯು ಬೀಸುತಿದ್ದರೂ, ಹುಲಿ ಕರಡಿಗಳು ಮೊದಲಾದ ಎಷ್ಟೇ ಕ್ರೂರಮೃಗಗಳು ಕಣ್ಣಿಗೆ ಬಿದ್ದರೂ, ಎಷ್ಟೇ ಬಿಸಿಲು ಕಾಯುತಿದ್ದರೂ ಚಂದ್ರಕಿರಣದಂತೆ ನೇತ್ರಾನಂದಕರವಾದ ಆಕೆಯ ದೇಹಕಾಂತಿಯು ಸ್ವಲ್ಪವಾದರೂ ಕುಂದುವುದಿಲ್ಲ. ಅರಳಿದ ಕಮಲದಂತೆಯೂ, ಪೂರ್ಣಚಂದ್ರನಂತೆಯೂ ಪ್ರಕಾಶಿಸುತ್ತಿರುವ ಆಕೆಯ ಮುಖವು ಸ್ವಲ್ಪವಾದರೂ, ಕಳೆಗುಂದುವುದಿಲ್ಲ. ಸ್ವಾಭಾವಿಕವಾಗಿಯೇ ಅರಗಿನ ರಸದಿಂದ ಲೇಪಿಸಲ್ಪಟ್ಟಂತೆ ಕೆಂಪಾಗಿರುವ ಆಕೆಯ ಪಾದಗಳು, ಈಗ ರಾಜಯೋಗ್ಯವಾದ ಅಲಂಕಾರಸಂಸ್ಕಾರಗಳೊಂದೂ ಇಲ್ಲದಿದ್ದರೂ,ತಮ್ಮ ನಿಜಸೌಂದರ್ಯವನ್ನು ಬಿಡದೆ ಕಮಲಗಳಂತೆಯೇ ಶೋಭಿಸುತ್ತಿರುವುವು. [1]ಆಸೀತೆಯು ಕಾಡಿನಲ್ಲಿ ನಡೆಯುತ್ತಿರು

---

ಇವೆಲ್ಲವೂ ಸೀತೆಯಲ್ಲಿ ಉಂಟಾಗಬೇಕಾದರೆ, ಹಿಂದೆ ಹೇಳಿದ ಅಭಿಪ್ರಾಯವೇ ಆಕೆಯ ಮನಸ್ಸಿಗೆ ಬಂದಿರಬೇಕೆಂದು ಸ್ಪಷ್ಟವಾಗಿ ಊಹಿಸಬೇಕಾಗಿದೆ. ಇದರ ಹಿಂದಿನ ಸರ್ಗದಲ್ಲಿ ಸೀತೆಯು ಪ್ರಮಾದವಶದಿಂದ ಹೇಳಿದ ಮಾತೆಂಬುದಕ್ಕಾಗಿ ಅದನ್ನು ಸುಮಂತ್ರನು ಮರೆಸಿಟ್ಟನು. ಈ ಸರ್ಗದಲ್ಲಿ ತಾನೇ ಪ್ರಾಮಾದಿಕವಾಗಿ ಹೇಳತೊಡಗಿದ ಆ ಮಾತನ್ನು ವ್ಯಾಜಾಂತರದಿಂದ ಮರೆಸಿದನೆಂದು ಗ್ರಹಿಸಬೇಕು.

1 ಸೀತೆಯು ರಾಮನನ್ನು ಹಿಂಬಾಲಿಸಿ ಹೋಗಬೇಕೆಂಬ ಆತುರದಿಂದ, ದಾರಿನಡೆಯುವಾಗ ತೊಡರಿಕೊಳ್ಳುವ ಆಭರಣಗಳನ್ನು ತೆಗೆದು ಬರುತ್ತಿದ್ದರೂ, ಹಿಂದಿನ ವಿಲಾಸವನ್ನು ಬಿಡದೆ ಅವುಗಳ ಘಲಘಲಧ್ವನಿಯನ್ನೂ ತೋರಿಸುತ್ತಾ ಹೋಗುವಂತೆ ಕುಲುಕುನಡೆಯಿಂದಲೇ ಹೋಗುತಿದ್ದಳೆಂದು ಅರ್ಥಾಂತರವು.

ವಾಗಲೂ, ಆಭರಣಗಳಲ್ಲಿ ಆಸೆಯನ್ನು ಬಿಡದೆ, ಕಾಲಂದುಗೆ ಮೊದಲಾದು ವುಗಳನ್ನು ಧರಿಸಿ, ಅವುಗಳಿಂದ ಘುಲಘುಲಧ್ವನಿಯುಂಟಾಗುವಂತೆ ಜಗ್ಗಿಸುತ್ತ ವಿಲಾಸದಿಂದಲೇ ನಡೆಯುವಳು. ರಾಮನ ಭುಜಗಳನ್ನವಲಂಬಿಸಿ ವಿಲಾಸ ದಿಂದ ನಡೆಯುತ್ತಿರುವ ಆಕೆಯು, ಕಾಡಿನಲ್ಲಿ ಆನೆಗಳು, ಹುಲಿಗಳು, ಸಿಂಹ ಗಳು ಮೊದಲಾದ ಎಷ್ಟೋ ಕ್ರೂರಮೃಗಗಳು ಇದಿರಿಗೆ ಬಂದರೂ, ಅವುಗ ಳನ್ನು ನೋಡಿ ಸ್ವಲ್ಪವಾದರೂ ಅಂಜುವುದಿಲ್ಲ. ಎಲೆ, ಕೌಸಲ್ಯೆ! ಆದುದ ರಿಂದ ಅವರ ವಿಷಯವಾಗಿ ನೀನು ಸ್ವಲ್ಪವೂ ಚಿಂತಿಸಬೇಕಾದುದಿಲ್ಲ. ನಿಮ ಗಾಗಿ ಅವರೂ ದುಃಖಿಸುವುದಿಲ್ಲ. ರಾಜನಿಗಾಗಿಯೂ ನೀನು ಚಿಂತಿಸಬೇಕಾ ದುದಿಲ್ಲ ಪಿತೃವಚನಪಾಲನರೂಪವಾದ ಈರಾಮನ ಚರಿತ್ರವು ಲೋಕದಲ್ಲಿ ಆಚಂದ್ರಾರ್ಕಸ್ಥಾಯಿಯಾಗಿ ಎಲ್ಲರಿಗೂ ಶಾಶ್ವತವಾದ ಕೀರ್ತಿಯನ್ನು ತರು ವುದು. ಆದುದರಿಂದ ಇಲ್ಲಿ ಒಬ್ಬರಿಗಾಗಿ ಒಬ್ಬರು ದುಃಖಿಸಬೇಕಾದುದೇ ಇಲ್ಲವು. ಅವರು ಅಲ್ಲಿ ಕಷ್ಟವೆಂಬುದನ್ನೇ ಎಣಿಸದೆ ಸಂತುಷ್ಟಚಿತ್ತರಾಗಿ ಮಹರ್ಷಿಗಳ ಮಾರ್ಗವನ್ನನುಸರಿಸಿ ಫಲಮೂಲಾದಿಗಳನ್ನು ತಿನ್ನುತ್ತಾ ಪಿತೃವಚನಪರಿಪಾಲನವೆಂಬ ಸರ್ವೋತ್ತಮವಾದ ವ್ರತವನ್ನು ನಡೆಸುತ್ತಿರು ವರು" ಎಂದನು. ಹೀಗೆ ಸುಮಂತ್ರನು ಕಾಲೋಚಿತವಾದ ಮಾತುಗಳಿಂದ ಕೌಸಲ್ಯೆಯನ್ನು ಅನೇಕವಿಧದಲ್ಲಿ ಸಮಾಧಾನಮಾಡಿ ತಡೆದರೂ, ಪುತ್ರ ಶೋಕದಿಂದ ಕಂದಿದ ಆಕೆಯು ಸಂಕಟವನ್ನು ತಡೆಯಲಾರದೆ, ಅಪ್ಪಾ! ಮಗೂ!! ರಾಮಾ!!!" ಎಂದು ಎಡೆಬಿಡದೆ ಪ್ರಲಾಪಿಸುತ್ತಲೇ ಇದ್ದಳು. ಇಲ್ಲಿಗೆ ಅರುವತ್ತನೆಯಸರ್ಗವು.

---

ಕೌಸಲ್ಯೆಯು, ರಾಮನನ್ನು ಕಾಡಿಗೆ ಕಳುಹಿಸಿದುದ ಕ್ಕಾಗಿ ದಶರಥನನ್ನು ಆಕ್ಷೇಪಿಸಿ ಪ್ರಲಾಪಿಸಿದುದು. ಅದನ್ನು ಕೇಳಿ ರಾಜನು ಮೂರ್ಛಿತ ನಾದುದು.

ಧಾರ್ಮಿಕನಾಗಿಯೂ ಲೋಕರಂಜಕನಾಗಿಯೂ ಇರುವ ರಾಮನು ಕಾಡಿಗೆ ಹೋದುದನ್ನೇ ಆಗಾಗ ಸ್ಮರಿಸಿಕೊಂಡು ಕೌಸಲ್ಯೆಯು ಬಹುದೀನ ಸ್ವರದಿಂದ ಗೋಳಿಡುತ್ತ, ಪತಿಯಾದ ದಶರಥನನ್ನು ನೋಡಿ, "ಎಲೆ

ಆರ್ಯನೆ! ಮೂರುಲೋಕಗಳಲ್ಲಿಯೂ ನಿನ್ನ ಕೀರ್ತಿಯು ಪ್ರಸಿದ್ಧಿಹೊಂದಿರು ವುದೆಂಬುದರಲ್ಲಿ ಸಂದೇಹವಿಲ್ಲ. ನೀನು ದಯಾಳುವೆಂದೂ, ಉದಾರಿಯೆಂ ದೂ, ಪ್ರಿಯವಾದಿಯೆಂದೂ, ಲೋಕವೆಲ್ಲವೂ ನಿನ್ನನ್ನು ಕೊಂಡಾಡುತ್ತಿರು ವುದು. ಹೀಗೆ ಮಹಾಯಶಸ್ವಿಯಾದ ನೀನು ಬಹುಕಾಲದಿಂದ ರಾಜಭೋ ಗದಲ್ಲಿಯೇ ಸುಖವಾಗಿ ಬಳೆದ ಆಮಕ್ಕಳನ್ನು ಸೀತೆಯೊಡನೆ ಕಾಡಿಗೆ ಕಳು ಹಿಸಿವೆಯಲ್ಲವೆ ? ಅವರು ಈಗ ನಿರ್ಜನವಾದ ಕಾಡಿನಲ್ಲಿ ಸಂಚರಿಸುತ್ತಿ ರಬೇಕೆಂದರೆ ಆಕಷ್ಟವನ್ನು ಹೇಗೆತಾನೇ ಸಹಿಸಬಲ್ಲರು ? ಸೀತೆಯಾದ ರೋ ಇನ್ನೂ ಚಿಕ್ಕವಯಸ್ಸಿನವಳು. ಬಹುಕೋಮಲವಾದ ಮೈಯ್ಯುಳ್ಳವ ಳು. ಹುಟ್ಟಿದುದು ಮೊದಲು ಸುಖದಲ್ಲಿಯೇ ಬಳೆದವಳು.ಆಕೆಯು ಈಗ ಕಾ ಡಿನಲ್ಲಿ ಯಾರಿಂದಲೂ ಸಹಿಸಲಾರದ ಬಿಸಿಲುಮಳೆಗಾಳಿಗಳನ್ನು ಹೇಗೆ ತಾನೇ ತಡೆಯಬಲ್ಲಳು!ತೊವ್ವೆ,ಕಜ್ಜಾಡಿ,ಮೊದಲಾದ ವಿಧವಿಧವಾದ ವ್ಯಂಜನಗಳಿಂದ ಕೂಡಿದ ಮೃಷ್ಟಾನ್ನವನ್ನೇ ಯಾವಾಗಲೂಭುಜಿಸುತಿದ್ದ ಆವಿಶಾಲಾಕ್ಷಿಯು, ಈಗ ಕಾಡಿನಲ್ಲಿ ಗೆಡ್ಡೆಗೆಣಸುಗಳನ್ನು ತಿಂದು ಕಾಲವನ್ನು ಕಳೆಯಬೇಕೆಂದರೆ ಹೇಗೆ ತಾನೇಸಾಧ್ಯವು? ಸುಶೀಲೆಯಾದ ಆಸೀತೆಯು ಅನವರತವೂ ಮಂಗಳ ಕರಗಳಾದ ಗಾನಧ್ವನಿಗಳನ್ನೂ ವಾದ್ಯಧ್ವನಿಗಳನ್ನೂ ಕೇಳಿ ವಿನೋದಿಸು ತ್ತಿದ್ದವಳಲ್ಲವೆ ? ಈಗ ಕಾಡಿನಲ್ಲಿ ಮಾಂಸಾಹಾರಿಗಳಾದ ಕ್ರೂರಮೃಗಗಳು ಕರ್ಣಕಠೋರವಾಗಿ ಕೂಗುತ್ತಿರುವ ಗರ್ಜನೆಗಳನ್ನು ಕೇಳಿ ಹೇಗೆತಾನೇ ಸಹಿ ಸುವಳು? ಇಂದ್ರಧ್ವಜದಂತೆ ಲೋಕಾಭ್ಯುದಯಹೇತುವಾಗಿರುವ ಮಹಾ ಭುಜನಾದ ರಾಮನು, ಪರಿಘದಂತೆ ಕಠಿನವಾದ ತನ್ನ ತೋಳುಗಳನ್ನೇ ತಲೆ ದಿಂಬಾಗಿಟ್ಟುಕೊಂಡು ಕಾಡಿನಲ್ಲಿ ಎಲ್ಲಿಮಲಗುವನೋ ? ತಾವರೆಯೆಸಳಿನಂತೆ ಲೋಕಮೋಹಕವಾದ ವರ್ಣವುಳ್ಳುದಾಗಿಯೂ, ಅಂದವಾದ ಮುಂಗುರು ಳುಗಳುಳ್ಳುದಾಗಿಯೂ,ಕಮಲದ ವಾಸನೆಯುಳ್ಳ ನಿಶ್ವಾಸಗಳಿಂದ ಲೋಕಾ ಹ್ಲಾದಕವಾಗಿಯೂ, ಕಮಲದಳದಂತೆ ವಿಸ್ತಾರವಾದ ಕಣ್ಣುಗಳುಳ್ಳುದಾ ಗಿಯೂ ಇರುವ ರಾಮನ ಮುಖವನ್ನು ಇನ್ನು ನಾನೆಂದಿಗೆ ನೋಡುವೆನು? ಆ ರಾಮನನ್ನು ಕಣ್ಣೆದಿರಿಗೆ ಕಾಣದಿದ್ದಾಗಲೂ ನನ್ನ ಈಹೃದಯವು ಸಹಸ್ರ ಭಾಗವಾಗಿ ಒಡೆದುಹೋಗದಿರುವುದನ್ನು ನೋಡಿದರೆ, ಇದು ವಜ್ರದಿಂದಲೇ ನಿರ್ಮಿಸಲ್ಪಟ್ಟಿರುವುದೆಂದು ಎಣಿಸಬೇಕಾಗಿದೆ. ಇದರಲ್ಲಿ ಸಂದೇಹವಿಲ್ಲ. ಎಲೈ ವ

ಲ್ಲಭನೆ! ಸುಖಾರ್ಹರಾದ ಮತ್ತು ನನಗೆ ಪ್ರಿಯಬಂಧುಗಳಾದ ಆಸೀತಾರಾಮ ಲಕ್ಷ್ಮಣರು ಮೂವರನ್ನೂ ನೀನು ಅನಾದರಿಸಿ ಪಟ್ಟಣದಿಂದ ಹೊರಡಿಸಿ ಕಾಡಿಗಟ್ಟಿದೆಯಲ್ಲಾ! ಹೀಗೆ ನೀನು ಮಾಡಿದುದು ಬಹಳ ಘಾತುಕಕೃತ್ಯವಲ್ಲವೆ? [1]ರಾಮನು ಈ ಹದಿನಾಲ್ಕುವರ್ಷಗಳನ್ನೂ ಕಾಡಿನಲ್ಲಿಯೇ ಕಳೆದು, ಆಮೇಲೆ ಹಿಂತಿರುಗಿ ಅಯೋಧ್ಯೆಗೆ ಬಂದರೂ, ಅತನಿಗೆ ರಾಜ್ಯವು ಸಿಕ್ಕುವುದೆಂದು ನನಗೆ ತೋರಲಿಲ್ಲ. ಹದಿನಾಲ್ಕುವರ್ಷಗಳವರೆಗೆ ಯಥೇಚ್ಛವಾಗಿ ರಾಜ್ಯಸುಖವನ್ನನುಭವಿಸಿ ರುಚಿಯನ್ನು ಕಂಡ ಭರತನು, ಕೈಗೆ ಸಿಕ್ಕಿರುವ ರಾಜ್ಯವನ್ನೂ, ಬೊಕ್ಕಸವನ್ನೂ ಹಿಂತಿರುಗಿ ಕೊಟ್ಟುಬಿಡುವನೆ? ಎಂದಿಗೂ ಕೊಡಲಾರನು. ಲೋಕದಲ್ಲಿ ಕೆಲವುಬ್ರಾಹ್ಮಣರು ಶ್ರಾದ್ಧಕಾರ್ಯಗಳನ್ನು ಮಾಡುವಾಗ, ನಿಮಂತ್ರಣಕ್ಕೆ ಶ್ರೋತ್ರಿಯರಾದ ಇತರಬ್ರಾಹ್ಮಣರನೇಕರು ಸಿಕ್ಕಬಹುದಾಗಿದ್ದರೂ, ತಾವು ಕೊಡತಕ್ಕ ಭೋಜನದಕ್ಷಿಣಾದಿಗಳು ತಮ್ಮ ಕಡೆಯವರಿಗೇ ಸೇರಬೇಕೆಂಬ ದುರುದ್ದೇಶದಿಂದ, ಸತ್ಪಾತ್ರಗಳನ್ನು ಬಿಟ್ಟು, ತಮ್ಮ ಬಂಧುಗಳನ್ನೇ ನಿಮಂತ್ರಣಕ್ಕಿರಿಸುವರು. ಈ ಮುಖ್ಯಭೋಜನವು ನಡೆದುಹೋದ ಮೇಲೆ ಇತರಬ್ರಾಹ್ಮಣೋತ್ತಮರನ್ನು ಕರೆದು ಇಷ್ಟಪಜ್ತಿಗೆ ನಿಯಮಿಸುವರು. ಆದರೆ, ಗುಣವಂತರಾಗಿಯೂ, ವಿದ್ವಾಂಸರಾಗಿಯೂ ದೇವಸಮಾನರಾಗಿಯೂ, ಇರುವ ಬ್ರಾಹ್ಮಣೋತ್ತಮರು ಮೊದಲು ತಮ್ಮನ್ನು ಬಿಟ್ಟು ಅಪಾತ್ರಗಳಿಗೆ ಶ್ರಾದ್ಧಭೋಜನವನ್ನು ಮಾಡಿಸಿದ ಕಡೆಗಳಲ್ಲಿ ಇಷ್ಟಪಜ್ತಿ ಭೋಜನಗಳಿಗೆ ಎಂದಿಗೂ ಸಮ್ಮತಿಸಲಾರರು. ಅಲ್ಲಿ ತಮಗೆ ಅಮೃತವೇ ಸಿಕ್ಕಿದರೂ ಆದರಿಸಲಾರರು. ಮೊದಲು ಶ್ರಾದ್ಧಭೋಜನವನ್ನು ಮಾಡಿದವರೂ ತಮ್ಮಂತೆ ಜಾತಿಯಲ್ಲಿ ಬ್ರಾಹ್ಮಣರೇ ಆಗಿದ್ದರೂ, ಪ್ರಾಜ್ಞರಾದವರು ಆ ಅನ್ನಶೇಷವನ್ನು ಭುಜಿಸುವುದಕ್ಕೆ ಸಮ್ಮತಿಸರು. ಎತ್ತುಗಳಿಗೆ ಕೊಂಬುಗಳನ್ನು ಕಡಿದುಹಾಕಿದರೂ ಅವು ಹೇಗೆ ಸಹಿಸಲಾರವೋ, ಹಾಗೆ, ಮೊದಲು ತಮ್ಮನ್ನು ಬಿಟ್ಟುದೇ ತಮಗೊಂದು ದೊಡ್ಡ ಅವಮಾನವೆಂದೆಣಿಸುವರು. (ಲೋಕದಲ್ಲಿ ಇತರಪಶು

---

1 ರಾಮನು ಬಂದುವೇಳೆ ಹದಿನೈದನೆಯ ವರ್ಷದಲ್ಲಿ ಹಿಂತಿರುಗಿ ಇಲ್ಲಿಗೆ ಬಂದರೂ, ಈ ರಾಜ್ಯಕೋಶಾದಿಗಳು ಭರತನಿಂದ ಅನುಭವಿಸಲ್ಪಟ್ಟುದಾದುದರಿಂದ, ಅವುಗಳನ್ನು ಬಿಟ್ಟು ಬಿಡುವನೇ ಹೊರತು ಅಂಗೀಕರಿಸಲಾರನೆಂದೂ ಅಭಿಪ್ರಾಯವು

ಗಳು ಮೇದಗರಿಕೆಯನ್ನು ಎತ್ತುಗಳುಹೇಗೆಮೇಯಲಾರವೋ,ಹಾಗೆ ಉತ್ತಮ ಬ್ರಾಹ್ಮಣರಾದವರು ಭುಕ್ತಶೇಷವಾದುದನ್ನು ಎಂದಿಗೂ ಭುಜಿಸಲಾರರು) ಹೀಗೆಯೇ,ತನಗಿಂತಲೂಕನಿಷ್ಠನಾದಭರತನು ಅದುವರೆಗೂಅನುಭವಿಸಿಭುಕ್ತಶೇಷವಾದ ರಾಜ್ಯವನ್ನು ಗುಣಗಳಲ್ಲಿಯೂ, ವಯಸ್ಸಿನಲ್ಲಿಯೂ ಹಿರಿಯನಾದ ರಾಮನು ಹೇಗೆ ತಾನೇ ನಿರಾಕರಿಸದಿರುವನು? ಕ್ರೂರಸ್ವಭಾವವುಳ್ಳ ಹುಲಿಯೂಕೂಡ ಇತರಮೃಗಗಳು ತಿಂದುಳಿಸಿದ ಆಹಾರವನ್ನು ತಿನ್ನುವುದಕ್ಕಿಷ್ಟಪಡಲಾರದು. ಹೀಗಿರುವಾಗ ಪುರುಷಶ್ರೇಷ್ಠನಾದ ರಾಮನು ಇತರರು ಅನುಭವಿಸಿ ಬಿಟ್ಟುದನ್ನು ಹೇಗೆತಾನೇ ಆದರಿಸುವನು? ಹವಿಸ್ಸು ಆಜ್ಯಗಳು, ಪುರೋಡಾಶಗಳು, ದರ್ಭೆಗಳು,ಯೂಪಸ್ತಂಭಗಳು,ಇವೇಮೊದಲಾದ ಯಜ್ಞಸಾಮಗ್ರಿಗಳನ್ನು,ಒಂದುಯಾಗದಲ್ಲಿ ಉಪಯೋಗಿಸಿಬಿಟ್ಟಮೇಲೆ, ಅವು ಮತ್ತೊಂದು ಯಾಗಕ್ಕೆ ಉಪಯೋಗಪಡುವುವೆ?ಹಾಗೆಯೇ ರಾಮನಿಗೆ ನೀನು ಪುನಃ ಈರಾಜ್ಯವನ್ನು ಒಪ್ಪಿಸಿದರೂ,ಸಾರವನ್ನು ಹೀರಿಬಿಟ್ಟ ಮದ್ಯದಂತೆಯೂ,ಇತರರಿಂದ ಸೋಮಪಾನಮಾಡಲ್ಪಟ್ಟ ಯಜ್ಞದಂತೆಯೂ, ಈರಾಜ್ಯವು ಆತನಿಗೆ ಎಂದಿಗೂ ರುಚಿಸಲಾರದು. ರಾಮನು ಇಲ್ಲಿಂದ ಭಯಪಟ್ಟು ಹೋದವನಲ್ಲ. ಆತನು ಕೋಪಿಸಿದ್ದರೆ ಮಾತ್ರ ಈ ತಿರಸ್ಕಾರವನ್ನು ಎಂದಿಗೂ ಅನುಭವಿಸುತ್ತಿರಲಿಲ್ಲ. ಆತನಿಗೆ ಕೋಪವುಂಟಾದರೆ ತನ್ನ ತೀಕ್ಷ್ಣವಾದ ಬಾಣಗಳಿಂದ ಮಂದರಪರ್ವತವನ್ನಾದರೂ ಭೇದಿಸಬಲ್ಲನು!ಎಲೆರಾಜನೆ! ನಿನ್ನಲ್ಲಿ ತಂದೆಯೆಂಬ ಗೌರವವನ್ನಿಟ್ಟು ಈಗಲೂ ನಿನ್ನನ್ನು ಕೊಲ್ಲದೇ ಬಿಟ್ಟಿರುವನೆಂದು ತಿಳಿ! ಆತನಿಗೆ ಕೋಪವುಂಟಾದರೆ ಮಾತ್ರ ಈ ತ್ರೈಲೋಕ್ಯವೂ ಇದಿರಾಗಿನಿಲ್ಲಲಾರದು.ಸೂರ್ಯಚಂದ್ರಾದಿಗ್ರಹಗಳೊಡನೆಯೂ, ಅಶ್ವಿನ್ಯಾದಿನಕ್ಷತ್ರಗಳೊಡನೆಯೂ ಕೂಡಿದ ಈಆಕಾಶವನ್ನೂ ಕೂಡ,ಆತನು ತನ್ನಬಾಣಗಳಿಂದ ಪುಡಿಪುಡಿಮಾಡಿ ಕೆಳಕ್ಕೆ ಉದುರಿಸಿ ಬಿಡಬಲ್ಲನು.ಸ್ವರ್ಗವನ್ನಾದರೂ ಭೇದಿಸಬಲ್ಲನು. ನೀನು ತಂದೆಯಾದುದರಿಂದ ನಿನ್ನಲ್ಲಿಮಾತ್ರ ಗೌರವವನ್ನಿರಿಸಿ ನಿನ್ನನ್ನು ಮೀರಲಾರದಿರುವನು. ಆತನಿಗೆ ಕೋಪವುಂಟಾದರೆ ನೂರಾರು ಪರ್ವತಗಳಿಂದ ಕೂಡಿದ ಈ ಭೂಮಂಡಲವನ್ನಾದರೂ ತಲೆಕೆಳಗಾಗಿ ಮಾಡಿಬಿಡಬಲ್ಲನು.ತಂದೆಯೆಂಬ ಗೌರವದಿಂದಲೇ ನಿನ್ನ ಆಜ್ಞೆಗೆ ಬದ್ಧನಾಗಿ ನಿಂತಿರುವನು. ಹುಲಿಯು ತನ್ನ ಬಾಲವನ್ನು ಮುಟ್ಟಿದರೂ

ಹೇಗೆ ಸಹಿಸಲಾರದೋ, ಹಾಗೆ ರಾಮನು ಸ್ವಲ್ಪವಾದ ಅವಮಾನವನ್ನೂ ಸಹಿಸಲಾರನು. ಹೀಗಿರುವಾಗ ಬಲಾಢ್ಯನಾದ ಆತನು ಇಂತಹ ಅವಮಾನವನ್ನು ಸಹಿಸುವನೆ? ಮೂರುಲೋಕಗಳೂ ಒಟ್ಟುಗೂಡಿ ಬಂದು ಯುದ್ಧಕ್ಕೆನಿಂತು ಆತನನ್ನಿದಿರಿಸಿದರೂ ಅಂಜತಕ್ಕವನಲ್ಲ. ಆತನು ಪೌರುಷವಿಲ್ಲದುದಕ್ಕಾಗಿ ಹೀಗೆ ಸುಮ್ಮನಿರುವನೆಂದು ತಿಳಿಯಬೇಡ! ಅವನು ಧರ್ಮಾತ್ಮನಾದುದರಿಂದ, ಅಧರ್ಮದಲ್ಲಿ ಪ್ರವರ್ತಿಸುವ ಈಲೋಕಕ್ಕೆ ಧರ್ಮಮಾರ್ಗವನ್ನು ತೋರಿಸಿಕೊಡುವುದಕ್ಕಾಗಿ, ಧರ್ಮವನ್ನೇ ಅನುಸರಿಸಿ ಕಾಡಿಗೆ ಹೊರಟುಹೋದನು. ಎಲೈಮಹಾರಾಜನೆ! ಮಹಾವೀರ್ಯನಾಗಿಯೂ,ಮಹಾಬಾಹುವಾಗಿಯೂ ಇರುವ ಆರಾಮನು ಸಾಮಾನ್ಯನೆಂದು ತಿಳಿಯಬೇಡ! ಮಹಾಪ್ರಳಯವು ಪಂಚಮಹಾಭೂತಗಳನ್ನೂ ಹೆದರಿಸುವಂತೆ ಆತನು ಚಿನ್ನದಹಿಡಿಗಳುಳ್ಳ ಅಮೋಘವಾದ ತನ್ನ ಬಾಣಗಳಿಂದ ಸಪ್ತಸಮುದ್ರಗಳನ್ನೂ ನಿಮಿಷಮಾತ್ರದಲ್ಲಿ ಶೋಷಿಸಿಬಿಡಬಲ್ಲನು. ಹೀಗೆ ಮಿತಿಯಿಲ್ಲದ ಪರಾಕ್ರಮವುಳ್ಳವನಾಗಿ, ಸಿಂಹಬಲವುಳ್ಳವನಾಗಿ,ವೃಷಭದಂತೆ ವಿಸ್ತಾರವಾದ ಕಣ್ಣುಳ್ಳವನಾಗಿ, ಪುರುಷಶ್ರೇಷ್ಠನೆನಿಸಿಕೊಂಡಿರುವ ಆರಾಮನು ನಿನಗಾಗಿಯೇ ಈ ಅವಸ್ಥೆಯನ್ನು ಅನುಭವಿಸುತ್ತಿರುವನು. ಮೀನು ತನ್ನ ಮರಿಯನ್ನೇ ಕೊಲ್ಲುವಂತೆ ನೀನೇ ಆತನನ್ನು ಕೆಡಿಸಿದೆ. ಧರ್ಮಪರಾಯಣನಾದ ಪುತ್ರನನ್ನು ನೀನೇ ಕಾಡಿಗೆ ಕಳುಹಿಸಿದೆ! ಬ್ರಾಹ್ಮಣರಿಂದ ಆ ಚ ರಿ ಸ ಲ್ಪ ಟ್ಟ ಶಾಸ್ತ್ರವಿಹಿತವಾದ ಸನಾತನಧರ್ಮವನ್ನು ನೀನು ಬಲ್ಲವನಾಗಿದ್ದರೆ, ಹೀಗೆ ಮಾಡುತ್ತಿದ್ದೆಯಾ? ಎಂದಿಗೂ ನೀನು ಈದುರ್ಮಾರ್ಗಕ್ಕೆ ಪ್ರವರ್ತಿಸುತ್ತಿರಲಿಲ್ಲ. ಎಲೈ ಆರ್ಯನೆ! [1]ಸ್ತ್ರೀಯರಿಗೆ ಪತಿಯೇ ಪರದೈವವು. ಅವರಿಗೆ ಆತನೇ ಮುಖ್ಯಗತಿಯು. ಮಗನು ಎರಡನೆಯದು. ಮೂರನೆಯದು ಜ್ಞಾತಿಗಳು. ಇವರನ್ನು ಬಿಟ್ಟರೆ ಸ್ವಾತಂತ್ರ್ಯರೂಪವಾದ ನಾಲ್ಕನೆಯಗತಿಯು ಅವರಿಗೆ ಈಲೋಕದಲ್ಲಿ ಇಲ್ಲವೇ ಇಲ್ಲವು. ಈಗ ನನ್ನ ಪಾಲಿಗೆ ನೀನಂತೂ

---

1 "ಪಿತಾರಕ್ಷತಿ ಕೌಮಾರೇ ಭರ್ತಾರಕ್ಷತಿಯೌವನೇ । ವಾರ್ಧಕೇತನಯೋ ರಕ್ಷೇನ್ನಸ್ತ್ರೀ ಸ್ವಾತಂತ್ರ್ಯ ಮರ್ಹತಿ ॥" ಎಂಬ ನೀತಿ ವಚನವನ್ನು ಇಲ್ಲಿ ಅನುಸಂಧಿಸಬೇಕು.

ಇಲ್ಲವೇ ಹೋದೆ! ಹೊಟ್ಟೆಯಲ್ಲಿ ಹುಟ್ಟಿದಮಗನೂ ಕಾಡಿಗೆ ಹೊರಟುಹೋದನು. ನನ್ನ ಬಂಧುವರ್ಗವು ದೂರದೇಶದಲ್ಲಿರುವುದರಿಂದ ನನ್ನ ಭಾಗಕ್ಕೆ ಅವರೂ ಇಲ್ಲವು. ಪತಿಯಾದ ನಿನ್ನನ್ನು ಬಿಟ್ಟು ನಾನು ಸ್ವತಂತ್ರಿಸಿ ಕಾಡಿಗೆ ಹೋಗುವುದಕ್ಕೂ ಇಲ್ಲ. ಸಮಸ್ತವಿಧದಲ್ಲಿಯೂ ನನ್ನನ್ನು ಸಂಪೂರ್ಣವಾಗಿ ಕೆಡಿಸಿಬಿಟ್ಟೆ. ಹೀಗೆ ನಿನ್ನಿಂದ ಕೆಟ್ಟವಳು ನಾನೊಬ್ಬಳೇ ಅಲ್ಲ! ನಿನ್ನಿಂದ ಈ ರಾಜ್ಯವೇ ಕೆಟ್ಟಿತು! ನಿನಗಧೀನವಾದ ಇತರರಾಷ್ಟ್ರಗಳೂ ಕೆಟ್ಟುವು! ನೀನೂ ಕೆಟ್ಟೆ! ನಿನ್ನಮಂತ್ರಿಗಳನ್ನೂ ಕೆಡಿಸಿದೆ! ನನ್ನನ್ನೂ ಕೆಡಿಸಿದೆ! ನನ್ನಮಗನನ್ನೂ ಕೆಡಿಸಿದೆ! ಪುರಜನರನ್ನೂ ಕೆಡಿಸಿದೆ! ಎಲೈ ಮಹಾರಾಜನೆ! ನಮ್ಮಪಾಡು ಹೇಗಾದರೇನು? ಮುಖ್ಯವಾಗಿ ನಿನ್ನ ಮುದ್ದುಮಗನಾದ ಭರತನೂ, ನಿನ್ನ ಮೋಹದ ಹೆಂಡತಿಯಾದ ಕೈಕೇಯಿಯೂ ಸಂತೋಷಪಡುತ್ತಿರುವರಲ್ಲವೆ? ಇದಕ್ಕಿಂತ ನಿನಗೆ ಆಗಬೇಕಾದುದೇನು?" ಎಂದಳು. ಹೀಗೆ ಅತಿಕ್ರೂರವಾಗಿಯೂ, ಮರ್ಮೋದ್ಘಾಟಕವಾಗಿಯೂ ಇರುವ ಕೌಸಲ್ಯೆಯ ಮಾತನ್ನು ಕೇಳಿ ದಶರಥನು ದುಃಖದಿಂದ ಹಾಗೆಯೇ ಮೂರ್ಛೆಬಿದ್ದನು. ಸ್ವಲ್ಪಹೊತ್ತಿನಮೇಲೆ ಚೇತರಿಸಿಕೊಳ್ಳಲು, ತನಗುಂಟಾದ ಈ ವ್ಯಸನಕ್ಕೆ ಕಾರಣವಾದ ತನ್ನ ಮೊದಲಿನ ದುಷ್ಕೃತ್ಯವು ಆತನ ಸ್ಮರಣೆಗೆ ಬಂದಿತು. ಅದನ್ನು ನೆನೆಸಿಕೊಂಡು ಮತ್ತಷ್ಟು ದುಃಖಿತನಾಗಿದ್ದನು. ಇಲ್ಲಿಗೆ ಅರುವತ್ತೊಂದನೆಯ ಸರ್ಗವು.

---

ಮೂರ್ಛೆಹೊಂದಿದ ರಾಜನನ್ನು ಕೌಸಲ್ಯೆಯು ಸಮಾಧಾನಪಡಿಸಿದುದು. ಕೌಸಲ್ಯೆಯು ತಾನು ಕ್ರೂರವಾಕ್ಯಗಳನ್ನಾಡಿದುದಕ್ಕಾಗಿ ದಶರಥನ ಮನ್ನಣೆಯನ್ನು ಕೇಳಿದುದು.

ಹೀಗೆ ಕೋಪಗೊಂಡ ಕೌಸಲ್ಯೆಯು ಹೇಳಿದ ಕ್ರೂರವಾಕ್ಯಗಳನ್ನು ಕೇಳಿ ರಾಜನು ಪರಮದುಃಖಿತನಾಗಿ, ಏನೂತೋರದೆ ಚಿಂತಿಸುತಿದ್ದು, ಹಾಗೆಯೇ ಕಲಗಿದ ಇಂದ್ರಿಯವುಳ್ಳವನಾಗಿ ಪುನಃಪ್ರಜ್ಞೆತಪ್ಪಿದನು. ಬಹುಕಾಲದಮೇಲೆ ಚೇತರಿಸಿಕೊಂಡು, ಬಿಸಿಬಿಸಿಯಾದ ನಿಟ್ಟುಸಿರನ್ನು ಬಿಟ್ಟು, ಪಕ್ಕದಲ್ಲಿನಿಂತಿದ್ದ ಕೌಸಲ್ಯೆಯನ್ನು ಕಣ್ಣಿಟ್ಟು ನೋಡಿದನು. ಆತನಿಗೆ ಮೇಲೆಮೇಲೆ

ವಿಧವಿಧವಾದ ಮನೋವಿಕಾರಗಳುಂಟಾಗಿ, ಈ ನಡುವೆ ತಾನು ಬಹುಕಾಲದ ಹಿಂದೆ ಮಾಡಿದ ದುಷ್ಕಾರ್ಯವೊಂದು ನೆನಪಿಗೆಬಂದಿತು. ಶಬ್ದವನ್ನೇ ಗುರಿಹಿಡಿದು ಬಾಣಪ್ರಯೋಗವನ್ನು ಮಾಡತಕ್ಕ ಶಸ್ತ್ರಚಾತುರ್ಯವುಳ್ಳ ತಾನು, ಪೂರ್ವದಲ್ಲಿ ಅಜ್ಞಾನದಿಂದ ಮಾಡಿದ ಆ ಮಹಾಘೋರಕೃತ್ಯವು ನೆನಪಿಗೆ ಬಂದ ಮೇಲೆ, ಆತನ ವ್ಯಸನವು ಮತ್ತಷ್ಟು ಹೆಚ್ಚಿತು. ಆ ಮಹಾದುಃಖದಿಂದಲೂ ರಾಮವಿಷಯವಾದ ಚಿಂತೆಯಿಂದಲೂ ಬುದ್ಧಿಗೆಟ್ಟವನಾಗಿ, ಒಳಗೊಳಗೆ ಈ ಶೋಕಾಗ್ನಿಗಳಿಂದ ಬೇಯುತ್ತಿದ್ದನು. ಕೊನೆಗೆ ಪಕ್ಕದಲ್ಲಿ ನಿಂತಿದ್ದ ಕೌಸಲ್ಯೆಯನ್ನುನೋಡಿ ನಡುಗುತ್ತಾ ಕೈಮುಗಿದು, ತಲೆಯನ್ನು ತಗ್ಗಿಸಿಕೊಂಡು, ಅವಳ ಮನ್ನಣೆಯನ್ನು ಬೇಡುವುದಕ್ಕಾಗಿ "ಎಲೆ, ಕೌಸಲ್ಯೆ! ನನ್ನ ತಪ್ಪನ್ನು ಮನ್ನಿಸಬೇಕೆಂದು ಬೇಡುವೆನು. ಇದೋ ಕೈಮುಗಿದು ಪ್ರಾರ್ಥಿಸುವೆನು. ಶತ್ರುಗಳಿಗೂ ನೀನು ಕೇಡನ್ನು ಬಯಸುವವಳಲ್ಲ. ಸಮಸ್ತ ಜನರಲ್ಲಿಯೂ ಬಹಳದಯೆಯನ್ನು ತೋರಿಸತಕ್ಕವಳು. ಪತಿವ್ರತಾಧರ್ಮವನ್ನು ನೀನು ಚೆನ್ನಾಗಿ ಬಲ್ಲವಳು. ಲೋಕದಲ್ಲಿ ಗಂಡನು ಗುಣವಂತನಾಗಿದ್ದರೂ, ಅಥವಾ ಗುಣಹೀನನಾಗಿದ್ದರೂ ಸ್ತ್ರೀಯರಿಗೆ ಆತನೇ ಪ್ರತ್ಯಕ್ಷದೈವವಲ್ಲವೆ? ಅದರಲ್ಲಿಯೂ ಧರ್ಮವನ್ನು ಚೆನ್ನಾಗಿ ಪರಾಮರ್ಶಿಸತಕ್ಕ ನಿನ್ನಂತಹ ಕುಲಸ್ತ್ರೀಯರಿಗೆ ಈವಿಷಯವನ್ನು ಹೇಳಿ ತಿಳಿಸಬೇಕಾದುದೇನು? ಯಾವಾಗಲೂ ಧರ್ಮರತೆಯಾಗಿ,ಲೋಕದ ನ್ಯೂನಾತಿರೇಕಗಳೆಲ್ಲವನ್ನೂ ಚೆನ್ನಾಗಿ ತಿಳಿದ ನೀನೂ, ಹೀಗೆ ಮೊದಲೇ ದುಃಖಿತನಾದ ನನ್ನನ್ನು ಈ ಕ್ರೂರವಾಕ್ಯಗಳಿಂದ ತಿರಸ್ಕರಿಸಬಹುದೆ? ಎಷ್ಟೇ ದುಃಖದಲ್ಲಿದ್ದರೂ ನಿನ್ನಂತಹ ಪತಿವ್ರತೆಯರು ಗಂಡನೊಡನೆ ಈವಿಧವಾದ ಅಪ್ರಿಯವಾಕ್ಯಗಳನ್ನಾಡುವುದು ಉಚಿತವಲ್ಲ" ಎಂದನು. ಹೀಗೆ ದೈನ್ಯದಿಂದ ಬೇಡುತ್ತಿರುವ ರಾಜನಮಾತನ್ನುಕೇಳಿ, ದೋಣಿಗಳಿಂದ ನೀರುಸುರಿಯುವಂತೆ ಆಕೆಯ ಕಣ್ಣಿನಿಂದ ಪಳಪಳನೆ ಬಾಷ್ಪಧಾರೆಯು ಸುರಿಯಿತು. ಆಗ ಆಕೆಯು ಬಹಳವಾಗಿ ರೋದಿಸುತ್ತಾ, ತನ್ನ ಕೈಗಳೆರಡನ್ನೂ ಕಮಲದಮೊಗ್ಗಿನಂತೆ ಜೋಡಿಸಿ ತಲೆಯಮೇಲಿಟ್ಟುಕೊಂಡು, ಧರ್ಮಭಯದಿಂದ ಕೂಡಿದವಳಾಗಿ, ಅತ್ಯಾತುರದಿಂದ ಮಾತುಗಳು ತಡವರಿಸುತ್ತಿರಲು, "ಎಲೆ, ಆರ್ಯನೆ! ಪ್ರಸನ್ನನಾಗು. ನಿನಗೆ ಸಾಷ್ಟಾಂಗಪ್ರಣಾಮಮಾಡಿ ಪ್ರಾರ್ಥಿಸುವೆನು. ನೀನು ನನ್ನನ್ನು ದೈನ್ಯದಿಂದ ಯಾಚಿಸಿದ

ಮೇಲೆ ನನ್ನ ಬಾಳೇತಕ್ಕೆ? ಇಂತಹ ಮಹಾಪಾಪಕ್ಕೆ ನನ್ನನ್ನು ಒಳಗಾಗಿಸಿ ನೀನು ನನ್ನನ್ನು ಕೆಡಿಸಿಬಿಡಬೇಡ! ನಾನು ನಿನಗೆ ದಾಸಿಯಂತಲ್ಲವೆ? ಯಾವ ವಿಧದಲ್ಲಿಯೂ ನೀನು ನನ್ನನ್ನು ಶಿಕ್ಷಿಸುವುದಕ್ಕೆ ಬಾಧ್ಯನಾಗಿರುವೆ. ಶ್ಲಾಘ್ಯ ಗುಣವುಳ್ಳ ಮತ್ತು ಬುದ್ಧಿಶಾಲಿಯಾದ ಪತಿಯು ತನ್ನಲ್ಲಿ ಯಾಚಿಸು ವಹಾಗೆ ಯಾವಸ್ತ್ರೀಯು ಮಾಡುವಳೋ, ಆಕೆಯು ಹೆಂಗಸೆನಿಸಿಕೊಳ್ಳುವ ಳೆ? ಇಂತವರು ಇಹಪರಲೋಕಗಳೆರಡಕ್ಕೂ ಬಹಿಷ್ಕೃತರಾದಂತೆಯೇ ಎ ಣಿಸಬೇಕು. ಎಲೈ ಮಹಾವೀರನೆ! ಧರ್ಮಜ್ಞನಾದ ನಿನ್ನ ಧರ್ಮಸಂಕಲ್ಪವನ್ನು ನಾನು ಬಲ್ಲೆನು. ನೀನು ಸತ್ಯವಾದಿಯೆಂಬುದನ್ನೂ ಬಲ್ಲೆನು. ಆದರೆ ಪುತ್ರ ಶೋಕವೆಂಬುದು ನನಗೆ ಯುಕ್ತಾಯುಕ್ತವಿವೇಚನೆಯಿಲ್ಲದಂತೆ ಮಾಡಿ ತು. ಆ ಸಂಕಟದಿಂದ ಹಿಂದುಮುಂದುನೋಡದೆ ನಾನು ಏನೋ ಹೇಳಿಬಿಟ್ಟೆ ನು. ಲೋಕದಲ್ಲಿ ದುಃಖವೆಂಬುದು ಮೊದಲು ಧೈರ್ಯವನ್ನು ಕೆಡಿಸುವುದು. ಆ ದುಃಖದಿಂದಲೇ ವಿವೇಕವೂ ಕೆಡುವುದು. ದುಃಖವು ಸಮಸ್ತವನ್ನೂ ಕೆಡಿ ಸುವುದು. ಮನುಷ್ಯನಿಗೆ ದುಃಖಕ್ಕಿಂತಲೂ ಬೇರೆ ಶತ್ರುಗಳಿಲ್ಲ. ಶತ್ರುವಾದ ವನು ಒಂದುವೇಳೆ ಕೈಯಿಂದ ಹೊಡೆದರೂ ಸಹಿಸಬಹುದು. ಈ ದುಃಖದ ಪೆಟ್ಟನ್ನುಮಾತ್ರ ಎಷ್ಟೇ ಅಲ್ಪವಾಗಿದ್ದರೂ ಸಹಿಸುವುದು ಕಷ್ಟವು. (ಎಲೈ. ವೀರನೆ! ಅಜ್ಞಾನಿಗಳಾದ ನಮ್ಮಂತವರ ವಿಷಯವುಹಾಗಿರಲಿ! ವಿಶೇ ಷಧರ್ಮಗಳನ್ನು ತಿಳಿದವರಾಗಿ, ವೇದಶಾಸ್ತ್ರಗಳೆಲ್ಲವನ್ನೂ ಓದಿದವರಾಗಿ, ಧರ್ಮಾರ್ಥಗಳ ಸ್ವರೂಪಗಳೆಲ್ಲವನ್ನೂ ನಿಸ್ಸಂದೇಹವಾಗಿ ತಿಳಿದಿರತಕ್ಕ ಯತಿಗ ಳೂಕೂಡ, ಮನಸ್ಸಿನಲ್ಲಿ ದುಃಖವು ನಾಟಿದಾಗ ವಿವೇಕಶೂನ್ಯರಾಗುವರು. ಇನ್ನು ನನ್ನ ಪಾಡೇನು?) ಎಲೈ, ಮಹಾರಾಜನೆ! ರಾಮನ ವನವಾಸದಲ್ಲಿ ಈಗ ಐದುದಿನಗಳುಮಾತ್ರವೇ ಕಳೆದುವು.ದುಃಖದಿಂದ ಬುದ್ಧಿಗೆಟ್ಟಿರುವ ನನಗಾ ದರೋ ಆ ಐದುದಿನಗಳೇ ಐದುವರುಷಗಳಂತೆ ತೋರಿರುವುದು. ಆ ರಾಮು

---

1 ಇಲ್ಲಿನ ದಿನಸಂಖ್ಯೆಯಲ್ಲಿ ಕೆಲವು ವಿಚಾರಗಳುಂಟು.ತಮಸಾತೀರದಲ್ಲಿಮೊದಲನೆಯ ರಾತ್ರಿ;ಗಂಗಾತೀರದಲ್ಲಿ ಎರಡನೆಯದು; ಮರದಡಿಯಲ್ಲಿ ಮೂರನೆಯದು;ಪ್ರಯಾಗದಲ್ಲಿ ನಾಲ್ಕನೆಯದು;ಯಮುನಾತೀರದಲ್ಲಿ ಐದನೆಯದು, ಹೀಗೆ ಐದುರಾತ್ರಿಗಳು ಕಳೆದಮೇಲೆ ಸುಮಂತ್ರನು ಆರನೆಯದಿನದಲ್ಲಿ ರಾಮನ ಚಿತ್ರಕೂಟಪ್ರಯಾಣವನ್ನು ತಿಳಿದು, ಅಲ್ಲಿಂ

ನನ್ನು ನೆನೆಸಿಕೊಂಡಮಾತ್ರಕ್ಕೆ ನನ್ನಮನಸ್ಸಿನಲ್ಲಿ ನದೀವೇಗದಿಂದ ಸಮು

---

ದ ಹೊರಟು ಅದೇ ಸಾಯಂಕಾಲಕ್ಕೆ ಅಯೋಧ್ಯೆಯನ್ನು ಸೇರಿರುವನು.ಆದುದರಿಂದಲೇ ಇಲ್ಲಿಗೆ ಐದುರಾತ್ರಿಗಳೆಂದು ಎಣಿಸಲ್ಪಟ್ಟಿರುವುದೆಂದು ಕೆಲವರು ಅಭಿಪ್ರಾಯಪಡುವರು. ಈ ವಿಷಯದಲ್ಲಿ ಬೇರೆ ಕೆಲವರ ಮತವೇನೆಂದರೆ; ಗಂಗೆಯನ್ನು ದಾಟುವವರೆಗೂ ವನವಾಸವೆಂದು ಹೇಳುವುದಕ್ಕಿಲ್ಲವಾದುದರಿಂದ,ಅದನ್ನು ದಾಟಿದಮೇಲೆ, ಕ್ರಮವಾಗಿ ವೃಕ್ಷಮೂಲದಲ್ಲಿಯೂ, ಭರದ್ವಾಜಾಶ್ರಮದಲ್ಲಿಯೂ, ಯಮುನಾತೀರದಲ್ಲಿಯೂ, ಚಿತ್ರಕೂಟದಲ್ಲಿಯೂ ಒಂದೊಂದು ರಾತ್ರಿಯಂತೆ ನಾಲ್ಕುರಾತ್ರಿಗಳು ಕಳೆದಿರುವುವು. ಆ ನಾಲ್ಕನೆಯ ರಾತ್ರಿಯಲ್ಲಿಯೇ ಸುಮಂತ್ರನು ಅಲ್ಲಿಂದ ಹಿಂತಿರುಗಿರುವನು. ಐದನೆಯರಾತ್ರಿಯಲ್ಲಿ ಕೌಸಲ್ಯೆಯು ಅವನೊಡನೆ ಕಲೆತು ಮಾತಾಡುತ್ತಿರುವಾಗ "ಪಂಚರಾತ್ರೋ ದ್ಯ ಗಣ್ಯತೇ" ಈಗ ಐದನೆಯರಾತ್ರಿಯಾಗಿರುವುದೆಂದು ಹೇಳಿದುದಾಗಿ ಗ್ರಹಿಸುವರು. ಗೋವಿಂದರಾಜೀಯ ವ್ಯಾಖ್ಯಾನಾನುಸಾರವಾಗಿ ಇದರ ವ್ಯವಸ್ಥೆಯು ಹೇಗೆಂದರೆ:— ಹಿಂದೆ ೫೭ನೆಯ ಸರ್ಗದಲ್ಲಿ, "ಭರದ್ವಾಜಾಭಿಗಮನಂ ಪ್ರಯಾಗೇ ಚ ಸಹಾಸನಂ। ಆಗಿರೇರ್ಗಮನಂ ತೇಷಾಂ ತತ್ರಸ್ಥೈರಭಿಲಕ್ಷಿತಂ॥" ಸೀತಾರಾಮಲಕ್ಷ್ಮಣರು ಭರದ್ವಾಜಾಶ್ರಮಕ್ಕೆ ಹೋದುದನ್ನೂ, ಪ್ರಯಾಗೆಯಲ್ಲಿ ಆ ಭರದ್ವಾಜಮಹರ್ಷಿಯೊಡನೆ ಸೇರಿದ್ದುದನ್ನೂ, ಚಿತ್ರಕೂಟಕ್ಕೆ ಪ್ರಯಾಣಮಾಡಿದುದನ್ನೂ ಗುಹ ಸುಮಂತ್ರರಿಬ್ಬರೂ ಅಲ್ಲಿಯೇ ಇದ್ದ ಚಾರರ ಮೂಲಕವಾಗಿ ತಿಳಿದು ಕೊಂಡರು." ಎಂದು ಹೇಳಲ್ಪಟ್ಟಿರುವುದಲ್ಲವೆ? ರಾಮನು ಅಯೋಧ್ಯೆಯನ್ನು ಬಿಟ್ಟುಹೊರಟ ಆರನೆಯದಿನದಲ್ಲಿ ಚಿತ್ರಕೂಟವನ್ನು ಸೇರಿರುವನು. ಅಲ್ಲಿಂದ ಗುಹನ ಚಾರರು ಏಳನೆಯದಿನದಲ್ಲಿಯೋ ಅಥವಾ ಎಂಟನೆಯದಿನದಲ್ಲಿಯೋ ಹಿಂತಿರುಗಿ ಶೃಂಗಿಬೇರಪುರಕ್ಕೆ ಬಂದು ಸುಮಂತ್ರನಿಗೆ ರಾಮನ ವೃತ್ತಾಂತವನ್ನು ತಿಳಿಸಿರುವರು. ಸುಮಂತ್ರನು ಆಮೇಲೆ ಅಲ್ಲಿಂದ ಹೊರಟು, "ತತಸ್ಸಾಯಾಹ್ನ ಸಮಯೇ ತೃತೀಯೇ ಹನಿ ಸಾರಥಿ:। ಅಯೋಧ್ಯಾಂಸ ಮನುಪ್ರಾಪ್ಯ" ಎಂದು ಹೇಳಲ್ಪಟ್ಟಿರುವುದರಿಂದ, ತಾನು ಹೊರಟ ಮೂರನೆಯದಿನದ ಸಾಯಂಕಾಲಕ್ಕೆ ಅಯೋಧ್ಯೆಗೆ ಸೇರಿರುವನು. ಇವೆಲ್ಲವನ್ನೂ ಕೂಡಿಸಿದರೆ ಇದುವರೆಗೆ ಹತ್ತು ದಿನಗಳು ಕಳೆದು ಹೋದಂತಾಗುವುದು. ಹೀಗಿರುವಾಗ ಐದುರಾತ್ರಿಗಳೆಂದು ಹೇಳುವುದು ಹೇಗೆ? ಎಂದು ಶಂಕೆಯುಂಟಾಗುವುದು. ಇದಕ್ಕೆ ಸಮಾಧಾನವೇನೆಂದರೆ;— "ಆಗಿರೇರ್ಗಮನಂ" ಎಂಬುದಕ್ಕೆ ಚಿತ್ರಕೂಟಪರ್ವತಕ್ಕೆ ಪ್ರಯಾಣಮಾಡುವವರೆಗೂ ಎಂದು ಅರ್ಥವನ್ನುಮಾಡದೆ, ಚಿತ್ರಕೂಟಪರ್ವತಕ್ಕೆ ಪ್ರಯಾಣಸನ್ನದ್ಧರಾಗುವವರೆಗೂ ನಡೆದ ವೃತ್ತಾಂತಗಳೆಲ್ಲವನ್ನೂಗುಹನಚಾರರು ಸುಮಂತ್ರನಿಗೆ ಬಂದುತಿಳಿಸಿದುದಾಗಿ.

ಧ್ರುವು ಉಕ್ಕುವಂತೆ ಸಂಕಟವು ಉಕ್ಕುತ್ತಿರುವುದು."ಎಂದಳು.ಹೀಗೆ ಕೌಸಲ್ಯೆ

---

ಗ್ರಹಿಸಬೇಕು. ರಾಮನು ಚಿತ್ರಕೂಟಕ್ಕೆ ಹೋಗುವುದಾಗಿ ಭರದ್ವಾಜಾಶ್ರಮದಲ್ಲಿಯೇ ನಿಶ್ಚಯಿಸಿದುದನ್ನುತಿಳಿದು,ಆಗಲೇ ಚಾರರು ಅಲ್ಲಿಂದ ಹಿಂತಿರುಗಿ ಸುಮಂತ್ರನ ಬಳಿಗೆ ಬಂದು ಆವಿಷಯವನ್ನು ತಿಳಿಸಿರುವರು. "ತತಸ್ಸಾಯಾಹ್ನಸಮಯೇ ತೃತೀಯೇಹನಿ ಸಾರಥಿ:"ಎಂಬಲ್ಲಿ"ತೃತೀಯೇಹನಿ" ಎಂಬುದಕ್ಕೂ ಮೂರನೆಯದಿನವೆಂದು ಗ್ರಹಿಸಕೂಡದು. ಆದಿನದ ಮೂರನೆಯಭಾಗವಾದ ಸಾಯಂಕಾಲಸಮಯದಲ್ಲಿ ಎಂದು ಅರ್ಥಮಾಡಬೇಕು. ಮತ್ತು ಸುಮಂತ್ರನು ಶೃಂಗಿಬೇರಪುರದಲ್ಲಿ "ದಿವಸಾ೯ಬಹೂ೯" ಬಹುದಿವಸಗಳಿದ್ದನೆಂಬುದಕ್ಕೆ ಮೂರುದಿನಗಳನ್ನುಮಾತ್ರವೇ ಗ್ರಹಿಸಬೇಕು. ಈ ಮೂರುದಿನಗಳೊಡನೆ ತಮಸಾನದೀತೀರದಲ್ಲಿದ್ದ ದಿನವೊಂದನ್ನೂ ಸೇರಿಸಿಕೊಂಡರೆ, ಆತನು ಅಯೋಧ್ಯೆಯನ್ನು ಬಿಟ್ಟು ನಾಲ್ಕುದಿನಗಳಾಗುವುವು. ನಾಲ್ಕನೆಯದಿನದಲ್ಲಿ ರಾಮನು ಭರದ್ವಾಜಾಶ್ರಮವನ್ನು ಸೇರಿದುದರಿಂದ, ಗುಹನಚಾರರು ಅಲ್ಲಿ ರಾಮನ ವೃತ್ತಾಂತವನ್ನು ತಿಳಿದು ಬಂದು, ಮಾರನೆಯದಿನವೇ ಸುಮಂತ್ರನಿಗೆ ಅದನ್ನು ತಿಳಿಸಿರುವರು, ಆ ದಿನವೇ ಸುಮಂತ್ರನು ಅಲ್ಲಿಂದ ಹಿಂತಿರುಗಿ, ಆದಿನದ ಎಂದರೆ ಐದನೆಯದಿನದ ಸಾಯಂಕಾಲಕ್ಕೆ ಸರಿಯಾಗಿ ಬಹುವೇಗದಿಂದ ಅಯೋಧ್ಯೆಗೆ ಬಂದುಬಿಟ್ಟಿರುವನು. ಆದಿನ ರಾತ್ರಿಯಲ್ಲಿ ಕೌಸಲ್ಯೆಯೊಡನೆ ಮಾತಾಡತೊಡಗಿದುದರಿಂದ ಆವಳು "ಪಂಚರಾತ್ರೋದ್ಯಗಣ್ಯತೇ" ಈಗ ಐದನೆಯರಾತ್ರಿಯು ನಡೆಯುತ್ತಿರುವುದು. ಎಂದು ಹೇಳಿದುದಾಗಿ ಗ್ರಹಿಸಬೇಕು. (ಇದು ಗೋವಿಂದರಾಜೀಯವು.)

ಇಲ್ಲಿ ಮಹೇಶ್ವರತೀರ್ಥರ ಅಭಿಪ್ರಾಯವೇನೆಂದರೆ; ರಾಮನು ಆರನೆಯದಿನದಲ್ಲಿ ಚಿತ್ರಕೂಟವನು ಸೇರಿದನಲ್ಲವೆ ? ಸುಮಂತ್ರನೂ ಆದಿನವೇ ಇತ್ತಲಾಗಿ ಅಯೋಧ್ಯೆಯನ್ನು ಸೇರಿರಬೇಕು. ಹೇಗೆಂದರೆ, ರಾಮನು ಅಯೋಧ್ಯೆಯನ್ನು ಬಿಟ್ಟು ನಾಲ್ಕನೆಯ ದಿನಕ್ಕೆ ಭರದ್ವಾಜಾಶ್ರಮವನ್ನು ಸೇರಿರುವನು. ಆದಿನವೇ ಚಾರರು ರಾಮನ ವೃತ್ತಾಂತವನ್ನು ತಿಳಿದು ಬಂದು ಸುಮಂತ್ರನಿಗೆ ತಿಳಿಸಲು, ಆದಿನವೇ ಸುಮಂತ್ರನೂ ಅಲ್ಲಿಂದ ಹೊರಟು, "ಸಾಯಾಹ್ನಸಮಯೇ ತೃತೀಯೇಹನಿ" ಹೊರಟದಿನದೊಡನೆ ಸೇರಿ ಮೂರನೆಯ ದಿನದ ಸಾಯಂಕಾಲಕ್ಕೆ ಎಂದರೆ, ಆರನೆಯದಿನದ ಸಾಯಂಕಾಲಕ್ಕೆ ಅಯೋಧ್ಯೆಯನ್ನು ಸೇರಿರುವನು. ಇದಕ್ಕೆ ಮೊದಲೇ ಐದುರಾತ್ರಿಗಳುಕಳೆದು ಹೋಗಿರುವುದರಿಂದ "ಪಂಚರಾತ್ರೋದ್ಯಗಣ್ಯತೇ" ಎಂಬ ಕೌಸಲ್ಯೆಯ ವಾಕ್ಯಕ್ಕೆ ಐದುರಾತ್ರಿಗಳು ಕಳೆದು ಹೋದುವೆಂದರ್ಥವು. (ಮಹೇಶ್ವರತೀರ್ಥರು). ಇಲ್ಲಿ ಮುಖ್ಯವಾಗಿ ಗ್ರಹಿಸಬೇಕಾದ ಸಾರಾಂಶವೇ ನೆಂದರೆ; "ತತಸ್ಸಾಯಾಹ್ನ ಸಮಯೇ ತೃತೀಯೇಹನಿ" ಎಂಬವಾಕ್ಯದಲ್ಲಿ,

ಯು ಹೇಳುತ್ತಿರುವ ಆಪ್ಯಾಯಕವಾಕ್ಯಗಳನ್ನು ದಶರಥನು ಕೇಳುತ್ತಿರುವಾಗಲೇ,ಬಿಸಿಲಿನ ವೇಗವು ಕ್ರಮಕ್ರಮವಾಗಿ ತಗ್ಗುತ್ತ ಬಂದು, ಅಸ್ತಮಯಸಮಯವಾಯಿತು. ರಾತ್ರಿಯೂ ಸಂಭವಿಸಿತು. ಕೌಸಲ್ಯಾದೇವಿಯ ಸಾಂತ್ವವಾಕ್ಯಗಳಿಂದ ದಶರಥನು ಸಮಾಧಾನಪಡಿಸಲ್ಪಡುತಿದ್ದರೂ, ದುಃಖಪೀಡಿತನಾಗಿಯೇ ಇದ್ದು,ಬಳಲಿಕೆಯಿಂದ ಹಾಗೆಯೇ ಮೈಮರೆತು ನಿದ್ರಿತನಾದನು. ಇಲ್ಲಿಗೆ ಅರುವತ್ತೆರಡನೆಯಸರ್ಗವು.

---

**ದಶರಥನು ಪೂರ್ವದಲ್ಲಿ ಸರಯೂತೀರದಲ್ಲಿ ಒಬ್ಬ ಋಷಿಕುಮಾರನನ್ನು ತಾನು ಕೊಂದ ವೃತ್ತಾಂತವನ್ನು ಕೌಸಲ್ಯೆಗೆ ಹೇಳಿದುದು.**

ಮನಸ್ಸಂಕಟದಿಂದ ದಶರಥನಿಗೆ ಚೆನ್ನಾಗಿ ಮೈಮರೆತು ನಿದ್ರೆಯೂ ಬರಲಿಲ್ಲ. ಒಂದುಮುಹೂರ್ತಕಾಲದೊಳಗಾಗಿಯೇ ಪುನಃ ಎಚ್ಚರಗೊಂಡು ಕೇವಲಚಿಂತಾಪರವಶನಾಗಿಯೇ ಇದ್ದನು. ರಾಕ್ಷಸರ ಕುಲದಲ್ಲಿ ಹುಟ್ಟಿದ ರಾಹುವು ಸೂರ್ಯನನ್ನು ಆವರಿಸುವಂತೆ, ರಾಮಲಕ್ಷ್ಮಣರ ಅಗಲಿಕೆಯಿಂದುಂಟಾದ ಮಹಾದುಃಖವು ಆತನನ್ನು ಸಂಪೂರ್ಣವಾಗಿ ಆವರಿಸಿಕೊಂಡಿತು. ರಾಮನು ಸೀತಾಸಮೇತನಾಗಿ ಕಾಡಿಗೆ ಹೋದುದನ್ನು ನೆನೆಸಿಕೊಂಡಹಾಗೆಲ್ಲಾ ದುಃಖದಿಂದ ತತ್ತಳಿಸುತ್ತಾ,ತಾನು ಪೂರ್ವದಲ್ಲಿ ಮಾಡಿದ ದುಷ್ಕೃತ್ಯವನ್ನು ಸ್ಮರಿಸಿಕೊಂಡು ಪಶ್ಚಾತ್ತಾಪಪಡುತ್ತಾ,ಆಗಲೇ ಕೋಪಸಮಾಧಾನವನ್ನು ಹೊಂದಿ ಪ್ರಸನ್ನದೃಷ್ಟಿಗಳಿಂದ ತನ್ನನ್ನು ನೋಡುತ್ತಿರುವಕೌಸಲ್ಯೆಯನ್ನು ಕುರಿತು ಆ ವೃತ್ತಾಂತಗಳನ್ನಾಡತೊಡಗಿದನು. ರಾಮನು ಪಟ್ಟಣವನ್ನು ಬಿಟ್ಟುಹೊರಟು ಐದುದಿನಗಳು ಕಳೆದು ಆರನೆಯರಾತ್ರಿಯು ನಡೆಯುತ್ತಿದ್ದರೂ, ದಶರಥನು ಮೇಲೆಮೇಲೆ ಉಕ್ಕಿಬರುವ ಸಂಕಟದಿಂದ ತನ್ನದುಷ್ಕೃತ್ಯಕ್ಕಾಗಿ ತಾನೇ ಕೊರಗುತಿದ್ದು,ಅರ್ಧರಾತ್ರಿಯಲ್ಲಿ ಎದ್ದುಕುಳಿತು, ಪುತ್ರಶೋಕ

---

"ತೃತೀಯೇಽಹನಿ" ಎಂಬುದಕ್ಕೆ ಆದಿನದ ಮೂರನೆಯಭಾಗವೆಂದು ಗೋವಿಂದರಾಜರೂ, ಮೂರನೆಯದಿನವೆಂದು ಮಹೇಶ್ವರತೀರ್ಥರೂ ವ್ಯಾಖ್ಯಾನಭೇದಗಳನ್ನು ಮಾಡಿರುವರೆಂದು ತಿಳಿಯಬೇಕು.

ದಿಂದ ಬೆಂಡವನಾಗಿ, ತನ್ನಂತೆಯೇ ಕೊರಗುತ್ತಿರುವ ಕೌಸಲ್ಯೆಯನ್ನು ನೋಡಿ “ಎಲೆ ಮಂಗಳಾಂಗಿ ! ಲೋಕದಲ್ಲಿ ಮನುಷ್ಯನು ಇತರರಿಗೆ ಹಿತವನ್ನಾಗಲಿ, ಅಹಿತವನ್ನಾಗಲಿ ಯಾವುದನ್ನು ನಡೆಸುವನೋ ಅಂತಹ ಪುಣ್ಯಪಾಪಕಾರ್ಯಗಳಿಗೆ ಅನುರೂಪವಾದ ಫಲವನ್ನೇ ತಾನೂ ಅನುಭವಿಸುವನು. ಯಾರಾದರೇನು ? ತಾವು ಇತರರ ವಿಷಯದಲ್ಲಿ ನಡೆಸಿದ ಕಾರ್ಯಗಳಿಗೆ ತಕ್ಕ ಫಲವನ್ನು ಎಂದಾದರೂ ತಾವೂ ಅನುಭವಿಸಿಯೇ ತೀರಬೇಕು. ಕಾರ್ಯಗಳನ್ನಾರಂಭಿಸುವ ಕಾಲಗಳಲ್ಲಿ ಅವುಗಳಿಂದುಂಟಾಗುವ ಫಲಗಳ ಗುರುಲಘುತ್ವಗಳನ್ನೂ,ಗುಣದೋಷಗಳನ್ನೂ ಆಲೋಚಿಸದೆ, ಯಾವನು ಕಾರ್ಯಗಳನ್ನು ನಡೆಸಿಬಿಡುವನೋ, ಆತನೇಅಜ್ಞನೆನಿಸುವನು.ನಿಷ್ಫಲವಾಗಿಯಾಗಲಿ,ಅಲ್ಪಫಲವುಳ್ಳದಾಗಿಯಾಗಲಿ ಇರುವ ಒಂದುಕಾರ್ಯಕ್ಕೆ ಮಹಾಪ್ರಯತ್ನವನ್ನುಮಾಡುವವನೇ ಬುದ್ಧಿಹೀನನು. ಸ್ವಲ್ಪಪ್ರಯತ್ನದಿಂದ ಬಹುಫಲವನ್ನುಂಟುಮಾಡತಕ್ಕ ಕಾರ್ಯಗಳನ್ನು ನಡೆಸುವವನೇ ಬುದ್ಧಿಶಾಲಿಯು. ಯಾವನು ಬಣ್ಣವಿಲ್ಲದ ಸಣ್ಣಹೂಗಳುಳ್ಳ ಮಾವಿನಮರವನ್ನು ಕಡಿದು, ಮುತ್ತುಗದ ಮರದಲ್ಲಿರುವ ಪುಷ್ಪಗಳ ಅಂದವನ್ನೂ ವಿಸ್ತಾರವನ್ನೂ ನೋಡಿ ಮೋಸಹೋಗಿ, ಅದರಿಂದ ಉತ್ತಮವಾದ ದೊಡ್ಡಫಲಗಳನ್ನು ಪಡೆಯಬಹುದೆಂಬ ಭ್ರಾಂತಿಯಿಂದ ಅವುಗಳನ್ನು ಬೆಳೆಸುವನೋ, ಅಂತವನು ಫಲಪ್ರಾಪ್ತಿಯ ಕಾಲದಲ್ಲಿ ಆಶಾಭಂಗವನ್ನು ಹೊಂದಿ ಕೊರಗಬೇಕಾಗುವುದು. ಆದುದರಿಂದ ಯಾವನು ಫಲಸ್ವರೂಪವನ್ನು ಚೆನ್ನಾಗಿ ಆಲೋಚಿಸದೆ ಕಾರ್ಯಗಳನ್ನಾರಂಭಿಸುವನೋ, ಆತನು ಫಲಕಾಲದಲ್ಲಿ ಪಶ್ಚಾತ್ತಾಪಪಟ್ಟು, ಸಂಕಟಪಡಬೇಕೆಂಬುದರಲ್ಲಿ ಸಂದೇಹವೇ ಇಲ್ಲ. ಎಲೆ ದೇವಿ! ನಾನೂ ಈಗ ಅದರಂತೆಯೇ ಮಾವಿನ ಮರವನ್ನು ಕಡಿದು ಮುತ್ತುಗದ ಮರವನ್ನು ಬೆಳೆಸಿದವನಂತೆ, ಮೊದಲು ಅಜ್ಞಾನದಿಂದ ರಾಮನನ್ನು ತೊರೆದುಬಿಟ್ಟೆನು. ಈಗ ಫಲಕಾಲದಲ್ಲಿ ದುಃಖಿಸಬೇಕಾಗಿ ಬಂದೊದಗಿತು. ಮುತ್ತುಗದಹೂವನ್ನು ನೋಡಿ ಮರುಳಾದವರಂತೆ ಕೈಕೇಯಿಯ ಮಾತಿಗೆ ಮರುಳಾಗಿ ಈಗ ಈ ಕಷ್ಟದಲ್ಲಿ ಕೊರಗುವೆನು. ನನ್ನ ದುರ್ಬುದ್ಧಿಯೇ ನನ್ನನ್ನು ಕೆಡಿಸಿತು.ಎಲೆಪ್ರಿಯೆ!ಈಗ ಪಶ್ಚಾತ್ತಾಪಪಟ್ಟು ಫಲವೇನು? ಮುಖ್ಯವಾಗಿ ಈಗ ನಾನು ಅನುಭವಿಸುತ್ತಿರುವ ದುಃಖಕ್ಕೆ ಮುಖ್ಯಕಾರಣವೊಂದುಂಟು. ಅದನ್ನೂ ತಿಳಿಸುವೆನು ಕೇಳು: ನಾ

ನು ಕುಮಾರವಯಸ್ಸಿನಲ್ಲಿದ್ದಾಗಲೇ ನನಗೆ ಶಬ್ದವೇಧಿಯೆಂಬ ಖ್ಯಾತಿಯುಂಟಾಯಿತು. ಆಗ ಧನುರ್ಧಾರಿಯಾಗಿ ಹೊರಟು, ಯಾವುದೋ ಒಂದುಶಬ್ದವನ್ನು ಕೇಳಿ ಅದನ್ನು ಗುರಿಯಿಟ್ಟು ಹೊಡೆದು ಒಂದು ಮಹಾಪಾಪಕಾರ್ಯವನ್ನು ಮಾಡಿಬಿಟ್ಟೆನು. ಸ್ವಯಂಕೃತವಾದ ಆ ಅಪರಾಧಕ್ಕೆ ತಕ್ಕಫಲವನ್ನು ಈಗ ಅನುಭವಿಸುತ್ತಿರುವೆನು. ಕರ್ಮಫಲವನ್ನು ಲೋಕಾಂತರದಲ್ಲಿಯೋ ಅಥವಾ ಜನ್ಮಾಂತರದಲ್ಲಿಯೋ ಅನುಭವಿಸುವುದುಂಟು. ನನಗಾದರೋ ಮಕ್ಕಳು ಅಜ್ಞಾನದಿಂದ ವಿಷವನ್ನು ಭಕ್ಷಿಸಿದಂತೆಯೂ, ಉತ್ತಮಫಲವನ್ನು ಪಡೆಯಬೇಕೆಂಬ ಆಶೋತ್ತರದಿಂದ ಮುತ್ತುಗದ ಮರವನ್ನು ಬೆಳೆಸಿದಂತೆಯೂ,ಶಬ್ದವೇಧಿಯೆಂಬ ಖ್ಯಾತಿಗೆ ಆಸೆಪಟ್ಟು ಹಿಂದುಮುಂದುನೋಡದೆ ಅಜ್ಞಾನದಿಂದ ಮಹಾಘೋರಕೃತ್ಯವನ್ನು ಮಾಡಿದುದಕ್ಕೆ ತಕ್ಕಫಲವು ಈಜನ್ಮದಲ್ಲಿಯೇ ಅನುಭವಕ್ಕೆ ಬಂದಿತು. ಎಲೆ ದೇವಿ ! ಆಗ ನಿನಗೆ ಇನ್ನೂ ಮದುವೆಯಾಗಿರಲಿಲ್ಲ. ನನ್ನತಂದೆಯೂ ಜೀವಿಸಿದ್ದನು. ಒಂದಾನೊಂದುಕಾಲದಲ್ಲಿ ಕಾಮಮದಗಳನ್ನು ಹೆಚ್ಚಿಸತಕ್ಕ ವರ್ಷಾಕಾಲವು ಪ್ರಾಪ್ತವಾಯಿತು. ಭೂಮಿಯಮೇಲಿನ ನೀರೆಲ್ಲವನ್ನೂ ಹೀರಿ,ಕಿರಣಗಳಿಂದ ಲೋಕವನ್ನು ತಪಿಸುವ ಸೂರ್ಯನು,ಪ್ರೇತಗಳಿಗೆ ವಾಸಸ್ಥಾನವಾಗಿ ಭಯಂಕರವಾದ ದಕ್ಷಿಣದಿಕ್ಕಿಗೆಹೋಗಿ ಸೇರಿದ್ದನು. ವರ್ಷಾಕಾಲವಾದುದರಿಂದ ನೆಲದಮೇಲಿನ ಉಷ್ಣವೆಲ್ಲವೂ ಆರಿ, ಆಕಾಶದಲ್ಲಿ ತಂಪಾದ ಮೇಘಪರಂಪರೆಗಳು ಕಾಣುತಿದ್ದುವು. ಕಪ್ಪೆಗಳೂ, ಚಾತಕಪಕ್ಷಿಗಳೂ, ನವಿಲುಗಳೂ ಉಲ್ಲಾಸಗೊಂಡಿದ್ದುವು. ಹಕ್ಕಿಗಳೆಲ್ಲವೂ ಸ್ನಾನಮಾಡಿಬಂದಂತೆ, ಮಳೆಯಲ್ಲಿ ನನೆದ ಗರಿಗಳುಳ್ಳುದಾಗಿ,ಮಳೆಗಾಳಿಗಳಿಂದ ಬಲವಾಗಿ ತೂಗಾಡುತ್ತಿರುವ ಗಿಡಗಳ ಗೂಡುಗಳಲ್ಲಿ ಅಡಗಿಕೊಂಡಿದ್ದುವು. ನಿರಂತರವೂ ಸುರಿಯುತ್ತಿರುವ ಮಳೆಯ ನೀರಿನಿಂದ ಬೆಟ್ಟಗಳೆಲ್ಲವೂ ನೆನೆದು, ಅಲೆಯಾಡದ ಸಮುದ್ರದಂತೆ ಜಲಮಯವಾಗಿ ಕಾಣುತಿದ್ದುವು. ಅಲ್ಲಲ್ಲಿ ಬೆಟ್ಟದಮೇಲೆ ಹರಿದು ಬರುವ ಧಾತುಮಿಶ್ರವಾದ ನೀರಿನಿಂದ ಕಲೆತು, ಜಲಪ್ರವಾಹಗಳೆಲ್ಲವೂ ಬಿಳುಪು,ಕೆಂಪು,ಮುಂತಾದ ವಿಚಿತ್ರವರ್ಣಗಳಿಂದ ಕೂಡಿ,ಅಲ್ಲಲ್ಲಿ ಕಾಡುಗಿಚ್ಚುಗಳಿಂದ ಬೆಂದುಬೂದಿಯಾಗಿರುವ ಗಿಡಗಳ ಭಸ್ಮರಾಶಿಯಿಂದ ಕಲೆತು ಸರ್ಪಗಳಂತೆ ವಕ್ರಗತಿಯಿಂದ ಹರಿಯುತಿದ್ದುವು. ಅನವರತವೂ ಮಳೆಯು ಸುರಿಯುತಿತ್ತು. ಹೀಗೆ ಸುಖಾಸ್ಪದವಾದ ಆ ಮಳೆಗಾಲದಲ್ಲಿಯೂ, ನಾನು ಧನು

ಬಾಣಗಳನ್ನು ಹಿಡಿದು ರಥಾರೂಢನಾಗಿಬೇಟೆಯಾಡಬೇಕೆಂದು ನಿಶ್ಚಯಿಸಿ, ಸರಯೂನದಿಯ ತೀರಕ್ಕೆ ಹೋದೆನು. ಇಂತಹ ದುರ್ವ್ಯಸನಗಳಲ್ಲಿ ಇಂದ್ರಿಯಗಳನ್ನು ತಡೆಹಿಡುವಷ್ಟು ಮನೋದಾರ್ಢ್ಯವಿಲ್ಲದ ನಾನು, ರಾತ್ರಿಕಾಲಗಳಲ್ಲಿಯೂ ಬೇಟೆಯಾಡುತ್ತಾ, ಆ ನದಿಯಲ್ಲಿ ನೀರುಕುಡಿಯುವುದಕ್ಕಾಗಿ ಇಳಿದುಬಂದ ಕಾಡೆಮ್ಮೆಗಳನ್ನೂ, ಆನೆಗಳನ್ನೂ, ಇತರದುಷ್ಟಮೃಗಗಳನ್ನೂ ಕೊಲ್ಲಬೇಕೆಂದಪೇಕ್ಷಿಸಿ, ಆ ತೀರಪ್ರದೇಶದಲ್ಲಿಯೇ ಶಸ್ತ್ರಧಾರಿಯಾಗಿ ಸಂಚರಿಸುತಿದ್ದೆನು. ಆ ರಾತ್ರಿಯಲ್ಲಿ ಒಂದಾನೊಂದು ವಿವಿಕ್ತವಾದ ಸ್ಥಳದಲ್ಲಿ ಧನುಸ್ಸನ್ನು ಹಿಡಿದು ಸಿದ್ಧವಾಗಿ ನಿಂತು, ನದೀತೀರಕ್ಕೆ ಬಂದ ಒಂದಾನೊಂದು ಕಾಡಾನೆಯನ್ನೂ, ಹಾಗೆಯೇ ಅಲ್ಲಿಗೆ ಬಂದ ಕೆಲವುಕ್ರೂರಮೃಗಗಳನ್ನೂ ಕೊಂದುಹಾಕಿದೆನು. ಸುತ್ತಲೂ ಗಾಢಾಂಧಕಾರವು ಕವಿದಿದ್ದುದರಿಂದ ಕಣ್ಣಿಗೆ ಯಾವವಸ್ತುಗಳೂ ಗೋಚರಿಸದಿದ್ದರೂ, ನಾನು ಶಬ್ದವನ್ನೇ ಗುರಿಹಿಡಿದು ಆ ಮೃಗಗಳೆಲ್ಲವನ್ನೂ ಕೊಲ್ಲುತಿದ್ದೆನು. ಈನಡುವೆ ಆ ನದಿಯಲ್ಲಿ ನೀರನ್ನು ಮೊಗೆಯುವ ಒಂದು ಧ್ವನಿಯು ನನ್ನ ಕಿವಿಗೆ ಬಿದ್ದಿತು. ಮಹಾಂಧಕಾರದಲ್ಲಿ ಆ ಧ್ವನಿಯು ಎಲ್ಲಿಂದ ಹೊರಟತೆಂಬುದನ್ನು ತಿಳಿಯುವುದು ಅಸಾಧ್ಯವಾಗಿದ್ದುದರಿಂದ, ಅದನ್ನು ನಾನು ಒಂದು ಕಾಡಾನೆಯ ಶಬ್ದವೆಂದೆಣಿಸಿದೆನು. ಒಡನೆಯೇ ಸರ್ಪದಂತೆ ಮಹಾಕ್ರೂರವಾಗಿ ಜ್ವಲಿಸುತ್ತಿರುವ ಒಂದಾನೊಂದುಬಾಣವನ್ನು ತೆಗೆದು, ಆಶಬ್ದವನ್ನೇ ಗುರಿಹಿಡಿದು ಆಕಡೆಗೆ ಬಾಣವನ್ನು ಬಿಟ್ಟೆನು. ತೀಕ್ಷ್ಣವಾದ ಆ ಬಾಣವನ್ನು ಬಿಟ್ಟೊಡನೆಯೇ ಆಕಡೆಯಿಂದ “ಹಾ!” ಎಂದು ಯಾವನೋ ಒಬ್ಬ ತಪಸ್ವಿಯು ಕೂಗಿಕೊಳ್ಳುವಂತೆ ಒಂದು ಧ್ವನಿಯು ನನ್ನ ಕಿವಿಗೆ ಕೇಳಿಸಿತು. ಒಬ್ಬ ತಪಸ್ವಿಯು ಮರ್ಮಸ್ಥಾನದಲ್ಲಿ ಗಾಯಪಟ್ಟು ಬಿದ್ದಿರಬಹುದೆಂದೂ ತೋರಿತು. ಇದಾದ ಉತ್ತರಕ್ಷಣದಲ್ಲಿಯೇ ಮನುಷ್ಯನೊಬ್ಬನು ಬಹುದೀನಧ್ವನಿಯಿಂದ ಪ್ರಲಾಪಿಸುತ್ತ, “ಅಯ್ಯೋ! ತಪಸ್ವಿಯಾದ ನಮ್ಮಂತವರಲ್ಲಿಯೂ ಹೀಗೆ ಶಸ್ತ್ರವು ಬೀಳುವುದೆಂದರೇನು ? ಈ ರಾತ್ರಿಯಲ್ಲಿ ನೀರು ಮೊಗೆಯುವುದಕ್ಕಾಗಿ ವಿವಿಕ್ತವಾದ ಈ ನದಿಗೆ ಬಂದೆನು. ಯಾವನೋ ಬಾಣದಿಂದ ಹೊಡೆದುಬಿಟ್ಟನಲ್ಲಾ! ನಾನು ಯಾರಲ್ಲಿ ಯಾವ ಅಪರಾಧವನು ಮಾಡಿರುವೆನು? ಮನೋವಾಕ್ಕಾಯಗಳೆಂಬ ತ್ರಿಕರಣಗಳಿಂದಲೂ

ಇದುವರೆಗೆ ನಾನು ಯಾರನ್ನೂ ಹಿಂಸಿಸಿದವನಲ್ಲ ! ಕಾಡಿನಲ್ಲಿ ಸಿಕ್ಕಿದು ದನ್ನು ತಿಂದು ಬದುಕುತ್ತಿರುವ ಋಷಿಯಾದ ನನಗೆ ಇಂತಹ ಮಹಾವಿಪ ತ್ತೆಂಪರೇನು ?, ನಮ್ಮಂಥವರಿಗೆ ಹೀಗೆ ಶಸ್ತ್ರದಿಂದ ಕೊಲೆಯೆಂಬುದುಂಟೇ ? ಅಯ್ಯೋ! ಜಡೆಯನ್ನು ಧರಿಸಿ, ನಾರುಮಡಿಯನ್ನುಟ್ಟು, ನನ್ನಪಾಡಿಗೆ ನಾನು ತಿರುಗುತಿದ್ದರೆ, ನನ್ನನ್ನು ಕೊಲ್ಲಬೇಕೆಂದು ಉದ್ದೇಶಿಸಿ ಬಂದವ ನಾವನೋ ತಿಳಿಯಲಿಲ್ಲವಲ್ಲಾ ? ನಾನು ಯಾರಿಗೆ ಏನಪಕಾರವನ್ನು ಮಾಡಿ ರುವೆನು?ನನ್ನನ್ನು ಕೊಂದು ಯಾರಿಗೇನು ಪ್ರಯೋಜನವು? ಈನಿಷ್ಫಲವಾದ ಕಾರ್ಯಕ್ಕೆ ಯಾವನು ಪ್ರಯತ್ನಿಸಿದನೋ ತಿಳಿಯದಲ್ಲಾ ! ಇದರಿಂದ ಕೇವಲ ಅನರ್ಥಗಳೇ ಹೊರತು ಬೇರೊಂದೂ ಇಲ್ಲವು. ಗುರುದಾರಪರಿ ಗ್ರಹದಂತಿರುವ ಈ ಅಕಾರ್ಯವು ಯಾರಿಗೆ ತಾನೇ ಉಚಿತವೆಂದು ತೋರಿರ ಬಹುದು ? ನನ್ನ ಸಾವಿಗಾಗಿ ನಾನು ಸ್ವಲ್ಪವೂ ಚಿಂತಿಸುವುದಿಲ್ಲ. ಮುಖ್ಯ ವಾಗಿ ನನ್ನ ತಾಯಿತಂದೆಗಳಿಗೆ ದಿಕ್ಕಿಲ್ಲದೇ ಹೋಯಿತೆಂಬ ಚಿಂತೆಯೇ ನನಗೆ ಬಹಳವಾಗಿರುವುದು. ಅವರಿಗಾಗಿಯೇ ನಾನು ಕೊರಗುತ್ತಿರುವೆನು. ವೃದ್ಧರಾದ ಆ ದಂಪತಿಗಳನ್ನು ನಾನು ಸ್ವಲ್ಪವೂ ಶ್ರಮಪಡಿಸದೆ ಉಪ ಚರಿಸುತ್ತಾ ಬಹುಕಾಲದಿಂದ ಕಾಪಾಡುತಿದ್ದೆನು. ನಾನು ಸತ್ತಮೇಲೆ ಅವರ ಗತಿಯೇನು ? ಅವರಿಬ್ಬರೂ ಪರಮವೃದ್ಧರು. ಈಗ ಈ ಒಂದು ಬಾಣದಿಂದಲೇ ನಾವುಮೂವರೂ ಹತರಾದಂತೆ ಎಣಿಸಬೇಕಾಗಿದೆ. ವಿವೇಕ ಶೂನ್ಯನಾದ ಯಾವನು ಈ ಘೋರಕೃತ್ಯವನ್ನು ನಡೆಸಿದನೋ ತಿಳಿಯ ಲಿಲ್ಲವಲ್ಲಾ!"ಎಂದು ಪ್ರಲಾಪಿಸುತ್ತಿದ್ದುದನ್ನು ಕೇಳಿದೆನು. ಈ ದೀನಧ್ವನಿ ಯನ್ನು ಕೇಳಿದಮೇಲೆಯೇ ನನಗೆ ಧರ್ಮದಮೇಲೆ ದೃಷ್ಟಿಯು ಹೋಯಿತು. ಮನಸ್ಸಿನಲ್ಲಿ ಸಂಕಟವುಂಟಾಯಿತು. ಹಾಗೆಯೇ ಭೀತಿಯಿಂದ ನಡುಗುತ್ತಿರುವ ನನ್ನ ಕೈಯ್ಯಲ್ಲಿದ್ದ ಧನುರ್ಬಾಣಗಳೆರಡೂ ಜಾರಿ ಬಿದ್ದುಹೋದುವು. ಅರ್ಧ ರಾತ್ರಿಯಲ್ಲಿ ಅರಣ್ಯಮಧ್ಯದಿಂದ ಹೊರಟ ಬಹುವಿಧವಾದ ಆ ಪ್ರಲಾಪ ಗಳನ್ನು ಕೇಳಿದಹಾಗೆಲ್ಲಾ ನನ್ನ ಮನಸ್ಸಿನಲ್ಲಿ ದುಃಖವು ಹೆಚ್ಚುತಿತ್ತು. ಹಾ ಗೆಯೇ ಬುದ್ಧಿಭ್ರಮವುಂಟಾಯಿತು. ಪ್ರಜ್ಞೆತಪ್ಪಿದವನಂತೆ ಸ್ತಬ್ಧನಾಗಿ ದ್ದೆನು. ಕೊನೆಗೆ ದುಃಖದಿಂದ ಶಕ್ತಿಗುಂದಿದವನಾಗಿ, ಆ ದೀನಧ್ವನಿಯು ಹೊ ರಟ ಸ್ಥಳವನ್ನೇ ಹುಡುಕಿಕೊಂಡು ಬಂದೆನು. ಅಲ್ಲಿ ಒಂದುನದಿಯ ತೀರದಲ್ಲಿ

ತಾಪಸಕುಮಾರನೊಬ್ಬನು ಬಾಣದಿಂದ ಹೊಡೆಯಲ್ಪಟ್ಟು ಪ್ರಾಣಸಂಕಟ ದಿಂದ ನರಳುತ್ತಿರುವುದನ್ನು ನೋಡಿದೆನು. ಆತನ ಜಡೆಗಳೆಲ್ಲವೂ ಬಿಚ್ಚಿಹೋಗಿದ್ದುವು. ಪಕ್ಕದಲ್ಲಿ ಆತನು ಹಿಡಿದಿದ್ದ ಜಲಕುಂಭಗಳು ಉರುಳಿ ಬಿದ್ದಿದ್ದುವು. ಆತನ ಮೈಯ್ಯೆಲ್ಲವೂ ರಕ್ತಮಯವಾಗಿ ನೆಲದ ಮಣ್ಣಿನಿಂದ ಮಲಿನವಾಗಿತ್ತು. ಬಾಣವು ಮೈಯ್ಯಲ್ಲಿ ನಾಟಿಕೊಂಡಿರಲು, ನೆಲದಮೇಲೆ ಬಿದ್ದು ಸಂಕಟದಿಂದ ತತ್ತಳಿಸುತ್ತಿದ್ದನು. ನಾನು ಆತನ ಸಮೀಪದಲ್ಲಿ ಹೋಗಿ ನಿಂತೊಡನೆಯೇ, ಅವನು ನನ್ನನ್ನು ತನ್ನ ತೇಜಸ್ಸಿನಿಂದಲೇ ಸುಟ್ಟುಬಿಡುವಂತೆ ಕಣ್ಣಿಟ್ಟು ನೋಡಿದನು. ಮೊದಲೇ ಭಯದಿಂದ ತತ್ತಳಿಸುತ್ತಿರುವ ನನ್ನನ್ನು ನೋಡಿ ಆತನು "ಎಲೆ ರಾಜನೆ! ಯಾವವಿಚಾರಕ್ಕೂ ಹೋಗದೆ, ಕಾಡಿನಲ್ಲಿ ಜೀವಿಸುತ್ತಿರುವ ನಾನು ನಿನಗೆ ಮಾಡಿದ ಅಪರಾಧವೇನು ? ತಂದೆತಾಯಿಗಳಿಗೆ ಕುಡಿಯುವ ನೀರನ್ನುತೆಗೆದುಕೊಂಡು ಹೋಗುವುದಕ್ಕಾಗಿ ನಾನು ಇಲ್ಲಿಗೆಬಂದರೆ, ನೀನು ನನ್ನಮೇಲೆ ಬಾಣವನ್ನು ಪ್ರಯೋಗಿಸಬಹುದೆ? ಈಗ ನೀನು ನನ್ನೊಬ್ಬನನ್ನೇ ಕೊಂದೆಯೆಂದೆಣಿಸಬೇಡ ! ನನ್ನೊಡನೆ ಕಣ್ಣುಕಾಣದ ವೃದ್ಧರಾಗಿರುವ ನಮ್ಮ ತಾಯಿತಂದೆಗಳನ್ನೂ ನೀನು ಕೊಂದಂತಾಯಿತಲ್ಲಾ ! ದೇಹದಲ್ಲಿ ಬಲವಿಲ್ಲದೆ, ಕುರುಡರಾಗಿ, ನನ್ನನ್ನೇ ನಂಬಿಕೊಂಡಿದ್ದ ಆ ತಾಯಿತಂದೆಗಳನ್ನು ಇನ್ನು ಕಾಪಾಡುವವರಾರು? ಅವರ ಬಾಯಾರಿಕೆಯನ್ನು ತೀರಿಸುವವರಾರು?ನಾನುಹೋಗಿ ನೀರನ್ನುತಂದುಕೊಡುವೆನೆಂದು ಅವರುಇನ್ನೂಆಶೋತ್ತರವನ್ನಿಟ್ಟುಕೊಂಡಿರುವರಲ್ಲಾ?ನಾನು ಬರುವೆನೆಂದು ಆ ಬಾಯಾರಿಕೆಯನ್ನು ಇನ್ನೆಷ್ಟುಹೊತ್ತಿನವರೆಗೆತಾನೇ ಅವರುತಡೆಯಬಲ್ಲರು?ಲೋಕದಲ್ಲಿಎಷ್ಟು ಶಾಸ್ತ್ರಗಳನ್ನೋದಿದರೇನು? ಎಷ್ಟು ತಪಸ್ಸುಗಳನ್ನು ಮಾಡಿದರೇನು? ಯಾವುದರಿಂದಲೂ ಫಲವಿಲ್ಲವೆಂದೇ ತೋರುವುದು. ನಾನು ಇಲ್ಲಿ ನೆಲದಮೇಲೆ ಬಿದ್ದು ಅರ್ಧಪ್ರಾಣದಿಂದ ನರಳುತ್ತಿರುವುದನ್ನು ನನ್ನ ತಂದೆಯು ತಿಳಿಯನಲ್ಲಾ! ಅಥವಾ ಆತನಿಗೆ ತಿಳಿದೂ ಪ್ರಯೋಜನವೇನು? ಕಾಲಿಲ್ಲದ ಆ ವೃದ್ಧನು ಏನುಮಾಡಬಲ್ಲನು? ಒಂದು ಮರವನ್ನು ಶಸ್ತ್ರದಿಂದ ಕಡಿಯುವಾಗ ಸಜಾತೀಯವಾದ ಮತ್ತೊಂದು ಮರವು ಏನುಮಾಡಬಲ್ಲುದು? ಹಾಗೆ ಆತನು ಈಗ ನನಗೆ ಏನುಸಹಾಯವನ್ನು ಮಾಡಬಲ್ಲನು? ಎಲೆ ರಾಜನೆ! ನೀನೇ ಹೋಗಿ ನನ್ನ ತಂದೆಗೆ ಈ ವಿಷಯವನ್ನು ತಿಳಿಸು! ನಿನಗೆ ಯಾವುದೊಂದು

ಅಪಾಯವೂ ಉಂಟಾಗಲಾರದು. ಹಾಗಿಲ್ಲದಿದ್ದರೆ ಕಾಡುಗಿಚ್ಚು ಕಾಡನ್ನು ಸುಡುವಂತೆ ಆತನು ನಿನ್ನನ್ನು ದಹಿಸಿಬಿಡುವನು.ನಮ್ಮ ತಂದೆಯ ಆಶ್ರಮವು ಬಹುದೂರವೆಂದೆಣಿಸಬೇಡ. ಒಂದೇ ನಡೆಯಿಂದ ಆ ಆಶ್ರಮವನ್ನು ಸೇರಬಹುದು. ನೀನೇಹೋಗಿ ಆತನನ್ನು ಸಮಾಧಾನಪಡಿಸು. ನಿಜಸ್ಥಿತಿಯನ್ನು ನೀನೇಹೋಗಿ ತಿಳಿಸಿದರೆ ಆತನು ಕೋಪಿಸಲಾರನು. ಆತನು ಶಪಿಸುವನೆಂದೂ ನೀನು ಅಂಜಬೇಡ. ಎಲೆ ರಾಜನೆ! ಮೊದಲು ಈನನ್ನ ದೇಹದಲ್ಲಿ ನಾಟಿಕೊಂಡಿರುವ ಬಾಣವನ್ನು ತೆಗೆದುಬಿಡು. ನಾನು ನೋವನ್ನು ಸಹಿಸಲಾರೆನು. ಮರ್ಮಸ್ಥಾನದಲ್ಲಿ ಸೇರಿಕೊಂಡು ಇದು ನನ್ನನ್ನು ಬಹಳಸಂಕಟಪಡಿಸುತ್ತಿರುವುದು. ಮರಳಿನಿಂದ ಕಟ್ಟಿದ ದಡವನ್ನು ನದೀಪ್ರವಾಹವೇಗವು ಹೇಗೆ ಬಹುಸುಲಭವಾಗಿ ಭೇದಿಸಿಕೊಂಡು ಹೋಗುವುದೋ, ಹಾಗೆ ಈ ಬಾಣವು ನನ್ನ ದೇಹದಲ್ಲಿ ಮರ್ಮಸ್ಥಾನವನ್ನು ಹಿಡಿದು ಬಹುದೂರದವರೆಗೆ ಹೋಗಿ ನಾಟಿಕೊಂಡಿರುವುದು. ಆದುದರಿಂದ ಈ ಬಾಣವನ್ನು ಈಗಲೇ ಕಿತ್ತು ನನ್ನ ನೋವನ್ನು ತಪ್ಪಿಸು" ಎಂದನು. ಆಗ ನಾನು ಮಾಡಬೇಕಾದುವೇನು?ಬಾಣವನ್ನು ಕಿತ್ತರೆ ಒಡನೆಯೇಆತನುಸಾಯುವನು.ಕೀಳದಿದ್ದರೆ ನೋವನ್ನುತಡೆಯಲಾರದೆಸಂಕಟಪಡುವನು. ಆದುದರಿಂದ ನನಗೆ ಏನೊಂದುನಿಶ್ಚಯವೂತೋರಲಿಲ್ಲ. ಹಿಂದುಮುಂದುನೋಡುತ್ತಾ,ನಾನುಸುಮ್ಮನೆಚಿಂತಿಸುತಿದ್ದೆನು.ಹೀಗೆ ದುಃಖದಿಂದಲೂ, ದೈನ್ಯದಿಂದಲೂ, ತತ್ತಳಿಸುತ್ತಿರುವ ನನ್ನನ್ನು ನೋಡಿ, ಆ ಋಷಿಕುಮಾರನು ಸಂಕಟದಿಂದ ಮಾತಾಡುವುದಕ್ಕೂ ಶಕ್ತಿಯಿಲ್ಲದೆ, ಸಮೀಪಕ್ಕೆ ಕರೆದು, ಉತ್ಕ್ರಮಣಾವಸ್ಥೆಯಿಂದ ಹೊರಳುತ್ತಾ, ಬಹುಪ್ರಯತ್ನದಿಂದ ಒಂದಾನೊಂದುಮಾತನ್ನು ಹೇಳಿದನು "ಎಲೆ ರಾಜನೆ! ನಾನು ಸಾಯುವೆನೆಂಬ ದುಃಖವು ನನಗೆ ಸ್ವಲ್ಪವೂ ಇಲ್ಲ. ಸ್ಥಿರಮನಸ್ಸಿನಿಂದ ಧೈರ್ಯವನ್ನು ತಂದುಕೊಂಡಿರುವೆನು. ಇದರಿಂದ ನಿನಗೆ ಬ್ರಹ್ಮಹತ್ಯೆಯುಂಟಾಗುವುದೆಂಬ ಭಯವನ್ನೂ ಬಿಡು. ನಾನು ಬ್ರಾಹ್ಮಣನಲ್ಲ. ಶೂದ್ರಸ್ತ್ರೀಯಲ್ಲಿ ವೈಶ್ಯಬೀಜಕ್ಕೆ ಹುಟ್ಟಿದವನು. ನೀನು ಶಂಕೆಯಿಲ್ಲದೆ ಬಾಣವನ್ನು ಕಿತ್ತು ನನ್ನ ನೋವನ್ನು ತಪ್ಪಿಸು"ಎಂದನು. ಹೀಗೆ ಬಾಣದಿಂದ ಮರ್ಮಸ್ಥಾನದಲ್ಲಿ ಹೊಡೆಯಲ್ಪಟ್ಟು, ಸಂಕಟದಿಂದ ಹೊರಳುತ್ತ, ಆಗಾಗ ಪ್ರಜ್ಞೆತಪ್ಪಿ ನಿಶ್ಚೇಷ್ಟನಾಗಿ ನಡುಗುತ್ತ, ವೇದನೆಯನ್ನು ತಡೆಯಲಾರದೆ ದೇಹವೆಲ್ಲವನ್ನೂ ಉ

ಡುಗಿಸಿಕೊಂಡು ಮಲಗಿದ್ದ ಆತನ ಮೈಯ್ಯಿಂದ ನಾನು ಬಾಣವನ್ನು ಕಿತ್ತುಬಿಟ್ಟೆನು. ಆಕ್ಷಣವೇ ಆತಾಪಸಕುಮಾರನು ಒಂದಾವರ್ತಿ ನನ್ನನ್ನು ಕಣ್ಣುಬಿಟ್ಟು ನೋಡಿ ಪ್ರಾಣವನ್ನು ಬಿಟ್ಟನು. ನೀರಿನಿಂದ ನೆನೆದ ಮೈಯ್ಯುಳ್ಳವನಾಗಿ, ಮರ್ಮಸ್ಥಾನದಲ್ಲಿ ಭೇದಿಸಲ್ಪಟ್ಟು, ಮೇಲುಸಿರನ್ನು ಬಿಡುತ್ತ, ಸರಯೂನದಿಯ ತೀರದಲ್ಲಿ ಮಲಗಿದ್ದ ಋಷಿಕುಮಾರನನ್ನು ನೆನೆಸಿಕೊಂಡು ಈಗಲೂ ನನಗೆ ಸಹಿಸಲಾರದ ದುಃಖವುಂಟಾಗುವುದು" ಎಂದನು. ಇಲ್ಲಿಗೆ ಅರುವತ್ತುಮೂರನೆಯಸರ್ಗವು.

---

ದಶರಥನ ಮರಣವು.

ದಶರಥನು ಹೀಗೆ ಆ ತಾಪಸಕುಮಾರನಿಗೆ ಸಂಭವಿಸಿದ ಆಕಸ್ಮಿಕವಾದ ವಧವನ್ನು ಕುರಿತು ದುಃಖಿಸುತ್ತಾ, ನಡುನಡುವೆ ರಾಮನನ್ನೂ ನೆನೆಸಿಕೊಂಡು ಅಳುತ್ತಾ, ಪುನಃ ಕೌಸಲ್ಯೆಯನ್ನು ಕುರಿತು, "ಎಲೆ, ದೇವಿ! ನಾನು ಅಜ್ಞಾನದಿಂದ ಆ ಮಹಾಪಾಪಕೃತ್ಯವನ್ನು ಮಾಡಿದ ಮೇಲೆ, ಕದಲಿದ ಮನಸ್ಸುಳ್ಳವನಾಗಿ,ಒಬ್ಬನೇ ಏಕಾಕಿಯಾಗಿ ಚಿಂತಿಸುತಿದ್ದೆನು. ಹೇಗೆಮಾಡಿದರೆ ಉಚಿತವೆಂದು ಮನಸ್ಸಿನಲ್ಲಿ ನಾನಾವಿಧವಾಗಿ ಆಲೋಚಿಸುತಿದ್ದೆನು. ಕೊನೆಗೆ ಅಲ್ಲಿದ್ದ ಜಲಕುಂಭವನ್ನು ತೆಗೆದು,ಅದರಲ್ಲಿ ನೀರುತುಂಬಿಕೊಂಡು, ಆ ತಾಪಸಕುಮಾರನು ಹೇಳಿದ್ದ ದಾರಿಯನ್ನೇಹಿಡಿದು ವೃದ್ಧದಂಪತಿಗಳಿದ್ದ ಆಶ್ರಮಕ್ಕೆ ಹೋದೆನು. ಅಲ್ಲಿ ಕೇವಲ ದುರ್ಬಲರಾಗಿ ಕಣ್ಣುಕಾಣದವರಾಗಿ, ಸಂಚಾರಶಕ್ತಿಯಿಲ್ಲದೆ,ರಕ್ಕೆಗಳಿಲ್ಲದ ಹಕ್ಕಿಯಂತೆ ಕುಳಿತಿರುವ ಆವೃದ್ಧರನ್ನು ಕಂಡೆನು.ನಾನು ಹೋಗುವುದಕ್ಕೆಮೊದಲೇ,ಅವರಿಬ್ಬರೂ ತಮ್ಮ ಮಗನ ಪ್ರತ್ಯಾಗಮನವನ್ನೇ ನಿರೀಕ್ಷಿಸುತ್ತಾ,ಅವನವಿಷಯವಾದ ಮಾತುಗಳನ್ನೇ ಆಡುತಿದ್ದರು. ನಡೆಯುವುದಕ್ಕೂ ಕಾಲಿಲ್ಲದೆ, ತಮಗಿದ್ದ ಆ ಒಬ್ಬ ಮಗನಲ್ಲಿಯೇ ತಮ್ಮ ಜೀವದಾಸೆಯನ್ನಿಟ್ಟು,ಆತನನ್ನೇ ನಿರೀಕ್ಷಿಸುತ್ತಿದ್ದ ಆ ವೃದ್ಧದಂಪತಿಗಳು ನನ್ನಿಂದ ಆ ಆಸೆಯನ್ನೂ ಬಿಟ್ಟುಬಿಡಬೇಕಾಯಿತಲ್ಲವೆ? ಯಾವಪ್ರಯತ್ನವೂ ಸಾಗದೆ ದಿಕ್ಕಿಲ್ಲದವರಂತೆ ಕುಳಿತಿರುವ ಆದಂಪತಿಗಳನ್ನು ನೋಡಿದೊಡನೆಯೇ ನನಗೆ ಮಿತಿಮೀರಿದ ಸಂಕಟವುಂಟಾಯಿತು. ಆ ತಾಪಸಕುಮಾರನ ಸಾವನ್ನು ನೋಡಿ, ಮೊದಲೇ ದುಃಖದಿಂದ ಇಳಿದು

ಹೋಗಿದ್ದ ನನಗೆ, ಕುರುಡರಾದ ಈ ತಂದೆತಾಯಿಗಳನ್ನು ನೋಡಿದ ಮೇಲೆ ಆ ದುಃಖವು ಮತ್ತಷ್ಟುಹೆಚ್ಚಿತು. ಭಯದಿಂದ ನಡುಗುತ್ತ ಅವರಿದ್ದ ಆಶ್ರಮದೊಳಕ್ಕೆ ಪ್ರವೇಶಿಸಿದೆನು. ನನ್ನ ಹೆಜ್ಜೆಯ ಧ್ವನಿಯನ್ನು ಕೇಳಿದೊಡನೆಯೇ ಆವೃದ್ಧ ತಾಪಸನು ಆತ್ಯಾತುರದಿಂದ "ಎಲೆ, ವತ್ಸನೆ!ಇದೇನು![1]ಇಷ್ಟು ವಿಳಂಬಮಾಡಿದೆ?ದಾಹದಿಂದ ಗಂಟಲೊಣಗುತ್ತಿರುವುದಲ್ಲಾ! ಬೇಗ ನೀರನ್ನು ತಂದುಕೊಡು!ಇಷ್ಟುಹೊತ್ತಿನ ವರೆಗೆ ನೀನು ನೀರಿನಲ್ಲಿ ಆಲದಾಡುವುದುಂಟೆ? ಅಲ್ಲಿ ನೀನು ಇದುವರೆಗೆ ನಿಲ್ಲುವುದಕ್ಕೆ ಕಾರಣವೇನು? ನೀನು ಇಷ್ಟುವಿಳಂಬಮಾಡಿದುದನ್ನು ನೋಡಿ ನಿನ್ನತಾಯಿಯು, ನೀನು ಯಾವ ಅಪಾಯಕ್ಕೆ ಸಿಕ್ಕಿಬಿದ್ದೆಯೋ ಎಂದು ತತ್ತಳಿಸುತ್ತಿರುವಳು. ಅಪ್ಪಮಗು! ಬೇಗಹೋಗಿ ಆಕೆಯನ್ನು ನೋಡು! ನಮ್ಮಲ್ಲಿ ನಿನಗೆ ಯಾವಕೋಪವಿದ್ದರೂ ಬಿಟ್ಟುಬಿಡು!ನಾನಾಗಲಿ,ನಿನ್ನ ತಾಯಿಯಾಗಲಿ,ನಿನ್ನ ವಿಷಯದಲ್ಲಿಯಾವವಿಧವಾದ ಅಪ್ರಿಯವನ್ನು ಮಾಡಿದ್ದರೂ ಅದನ್ನು ಮನಸ್ಸಿನಲ್ಲಿಡಬೇಡ! ತಪಸ್ವಿಯಾದವನು ಮನಸ್ಸಿನಲ್ಲಿ ಕೋಪವನ್ನಿಡಬಾರದಲ್ಲವೆ? ದಿಕ್ಕಿಲ್ಲದ ನಮಗೆ ನೀನೇ ದಿಕ್ಕಾಗಿರುವೆ! ಕಣ್ಣಿಲ್ಲದ ನಮಗೆ ನೀನೇ ಕಣ್ಣಿನಂತಿರುವೆ! ನಮ್ಮಿಬ್ಬರ ಪ್ರಾಣಗಳೂ ನಿನ್ನೊಬ್ಬನ ಕೈಯಲ್ಲಿರುವುದು! ಹೀಗಿದ್ದರೂ ನೀನು ನಮಗೆ ಪ್ರತ್ಯುತ್ತರವನ್ನು ಕೊಡದಿರುವೆಯಲ್ಲಾ?" ಎಂದನು. ಆಗ ನಾನು ಆತನಿಗೆ ಯಾವ ಉತ್ತರವನ್ನು ಹೇಳಲಿ! ಮಾತಾಡುವುದಕ್ಕಾರಂಭಿಸಿದರೆ ಅಕ್ಷರಗಳು ತಡವರಿಸುತಿದ್ದುವು. ಅಂಜಿಕೆಯಿಂದ ಮೈಯೆಲ್ಲವೂ ನಡುಗಲಾರಂಭಿಸಿತು. ಬಾಯಿಯಿಂದ ಅಕ್ಷರಗಳು ಸ್ಫುಟವಾಗಿ ಹೊರಡುತ್ತಿರಲಿಲ್ಲ.ಆಅವಸ್ಥೆಯಲ್ಲಿಯೂ ಪ್ರಯತ್ನಪಟ್ಟು, ಮನಸ್ಸಿನಲ್ಲಿ ಭಯವಿದ್ದರೂ ಧೈರ್ಯಗೊಂಡವನಂತೆ ಅವ್ಯಕ್ತವಾದ ಮಾತುಗಳಿಂದ!ಆವರಿಗೆ ಉತ್ತರವನ್ನು ಹೇಳಲಾರಂಭಿಸಿದೆನು. ಆಗ ಊಹಾಪೋಹಾತ್ಮಕವಾದ ಮನಸ್ಸಿನ ಕಾರ್ಯದಿಂದಲೂ, ಇಂದ್ರಿಯನಿಗ್ರಹರೂಪವಾದ ವ್ಯಾಪಾರಗಳಿಂದಲೂ ಮಾತನ್ನು ಸ್ವಾಧೀನಪಡಿಸಿ

---

1 ಇಲ್ಲಿ "ಯನ್ನಿಮಿತ್ತ ಮಿದಂತಾತ" ಎಂದೂ "ಯನ್ನದತ್ತಮಿದಂತಾತ" ಎಂದೂ ಎರಡು ಪಾಠಗಳುಂಟು. ಎರಡನೆಯಪಾಠದಲ್ಲಿ "ಅಪ್ಪಾ! ನೀನು ಇದುವರೆಗೆ ನೀರನ್ನು ತರವದ್ದುದರಿಂದ ಅಲ್ಲಿ ಆಡುತಿದ್ದಹಾಗಿದೆ"ಎಂದು ಅರ್ಥವು.

ಕೊಂಡು,ಆದಂಪತಿಗಳಿಗೆ ಪುತ್ರವಿರಹವೆಂಬ ದೊಡ್ಡ ಅಪಮೃತ್ಯುವನ್ನು ತರ ತಕ್ಕಮಾತುಗಳನ್ನು ಹೇಳತೊಡಗಿದೆನು. “ಎಲೈ, ತಪೋಧನನೆ! ನಾನು ಮಹಾತ್ಮನಾದ ನಿನ್ನ ಮಗನಲ್ಲ! ನಾನುಕ್ಷತ್ರಿಯನು! ದಶರಥನೆಂದು ನನಗೆ ಹೆಸರು! ಸಜ್ಜನ ನಿಂದಿತವಾದ ಒಂದುಮಹಾದುಃಖಕಾರ್ಯವನ್ನು ನಡೆಸಿಬಿಟ್ಟೆನು. ನಾನು ಧನುರ್ಧಾರಿಯಾಗಿ ಸರಯೂನದಿಯ ತೀರದಲ್ಲಿ ಸಂಚರಿಸುತ್ತಿದ್ದೆನು. ದುಷ್ಟಮೃಗಗಳನ್ನು ಕೊಲ್ಲಬೇಕೆಂದು ಬೇಟೆಯಾಡುವುದಕ್ಕಾರಂಭಿಸಿ ಅಲ್ಲಲ್ಲಿ ಸಿಕ್ಕಿದ ಕಾಡಾನೆಗಳೇ ಮೊದಲಾದ ಕ್ರೂರಜಂತುಗಳನ್ನು ಕೊಲ್ಲುತಿದ್ದೆನು. ಇಷ್ಟರಲ್ಲಿ ಆನದಿಯಲ್ಲಿ ನೀರನ್ನು ಮೊಗೆಯುವ ಶಬ್ದವು ನನ್ನ ಕಿವಿಗೆಬಿದ್ದಿತು. ಆನೆಯೆಂಬ ಭ್ರಾಂತಿಯಿಂದ ಆಪರಕಡೆಗೆ ಬಾಣವನ್ನು ಬಿಟ್ಟೆನು. ಆಗ ಮನು ಷ್ಯರು ಕೂಗುವಂತೆ ಒಂದು ಹಾಹಾಕಾರ ಧ್ವನಿಯು ಕೇಳಿಸಿತು. ಒಡನೆಯೇ ಬೆಚ್ಚ ರಬಿದ್ದು ನದೀತೀರಕ್ಕೆ ಓಡಿಹೋದೆನು. ಅಲ್ಲಿಬಾಣದಿಂದ ನಾಟಲ್ಪಟ್ಟ ಎದೆಯುಳ್ಳವನಾಗಿ ನೆಲದಮೇಲೆ ಮಲಗಿರುವ ತಾಪಸನೊಬ್ಬನನ್ನು ಕಂಡೆನು. ಎಲೈ! ಪೂಜ್ಯನೆ! ಆನೆಯನ್ನು ಹೊಡೆಯಬೇಕೆಂದು ಶಬ್ದವನ್ನು ಗುರಿಹಿ ಡಿದು, ನಾನು ಬಿಟ್ಟ ಬಾಣವು ನಿನ್ನಮಗನಿಗೆ ತಗುಲಿ ಆತನು ಸತ್ತುಹೋ ದನು. ನಾನು ಅಲ್ಲಿಹೋಗಿ ನೋಡುವಾಗ ನಿನ್ನಮಗನು ಅರ್ಧಪ್ರಾಣದಿಂದ ನರಳುತ್ತಾ ಮರ್ಮಸ್ಥಾನದಲ್ಲಿ ನಾಟಿಕೊಂಡಿರುವ ಆಬಾಣವನ್ನು ಕಿತ್ತು ಬಿಡೆಂದು ನನಗೆ ಹೇಳಿದನು.ಆತನ ಮಾತಿನಮೇಲೆ ನಾನು ಬಾಣವನ್ನುಕಿತ್ತೊ ಡನೆಯೇ ಆತನು ಸ್ವರ್ಗಸ್ಥನಾದನು. ಪ್ರಾಣೋತ್ಕ್ರಮಣ ಕಾಲದಲ್ಲಿಯೂ ಕೂಡ ಆತನು ತಂದೆತಾಯಿಗಳಾದ ನೀವಿಬ್ಬರೂ ಕುರುಡರಾಗಿ ದಿಕ್ಕಿಲ್ಲದೆ ಕಷ್ಟಪಡುವಿರೆಂಬ ಚಿಂತೆಯಿಂದಲೇ ಗೋಳಿಡುತ್ತಿದ್ದನು.ಎಲೈ,ಮಹರ್ಷಿಯೆ! ನಿನ್ನ ಮಗನನ್ನು ಅಜ್ಞಾನದಿಂದ ನಾನೇ ಕೊಂದೆನು. ಈ ಪ್ರಮಾದಕಾರ್ಯ ವಂತೂ ನಡೆದು ಹೋಯಿತು. ಇದರ ಮೇಲೆ ಮುಂದೆನಡೆಸಬೇಕಾದ ಶಾಪ ವನ್ನೋ ಅಥವಾ ಅನುಗ್ರಹವನ್ನೋ ನನಗೆ ಕರುಣಿಸಿಬಿಡಿ.” ಎಂದನು. ಹೀಗೆ ಕ್ರೂರವಾಕ್ಯವನ್ನು ಹೇಳುತ್ತಿರುವ ನನ್ನ ಮಾತನ್ನುಕೇಳಿ ಆತಪಸ್ವಿಯುಪುತ್ರ ವ್ಯಸನವನ್ನು ತಡೆದಿಟ್ಟುಕೊಳ್ಳಲಾರದೆ ಸಂಕಟಪಡುತ್ತ ತತ್ತಳಿಸುತಿದ್ದನು. ಆತನ ಕಣ್ಣಿನಲ್ಲಿ ಬಾಷ್ಪಪ್ರವಾಹವು ಸುರಿಯುತಿತ್ತು. ದುಃಖದಿಂದ ಕಂಠ ಉದ್ಧವಾಗಿ ನಿಟ್ಟುಸಿರನ್ನು ಬಿಡುತ್ತಿದ್ದನು. ಆತನಮುಂದೆ ನಾನುಕೈಮುಗಿದ

ನಿಂತಿದ್ದೆನು. ಮಹಾತೇಜಸ್ವಿಯಾದ ಆಮುನಿಯು ನನ್ನನ್ನು ಕುರಿತು. “ಎಲೈ ರಾಜನೆ! ನೀನು ನಡೆಸಿದ ಈ ಘೋರಕೃತ್ಯವನ್ನು ನೀನಾಗಿಯೇ ಬಂದು ನಿನ್ನ ಬಾಯಿಯಿಂದ ಹೇಳದೆ, ಉದಾಸೀನನಾಗಿ ಹೊರಟುಹೋಗಿದ್ದ ಪಕ್ಷ ದಲ್ಲಿ ನಿನ್ನ ತಲೆಯು ಆಕ್ಷಣವೇ ಶತಸಹಸ್ರಭಾಗವಾಗಿ ಒಡೆದುಹೋಗು ತಿತ್ತು. ನಾನು ಆಗ ಶಾಪವನ್ನು ಕೊಡುವುದಕ್ಕೆ ಸ್ವಲ್ಪವೂ ತಡೆ ಯುತ್ತಿರಲಿಲ್ಲ. ಕ್ಷತ್ರಿಯನಾದವನು ವಾನಪ್ರಸ್ಥನನ್ನು ಕೊಂದುದೇ ಆದರೆ ಆತನಿಗೆ ಸ್ಥಾನಭ್ರಂಶವೆಂಬುದು ತಾನಾಗಿಯೇ ಸಂಭವಿಸುವುದು. ಅದರಲ್ಲಿ ಯೂ ಮುಖ್ಯವಾಗಿ ಇಂತಹ ಅಪರಾಧವನ್ನು ಜ್ಞಾನಪೂರ್ವಕವಾಗಿ ನಡೆಸಿ ದರೆ, ದೇವೇಂದ್ರನಾದರೂ ಪದವಿಯಿಂದ ಜಾರಿಬೀಳುವನು. ಮತ್ತು ತಪಸ್ಸಿ ನಲ್ಲಿರತಕ್ಕ ಒಬ್ಬ ಋಷಿಯಮೇಲೆ ಜ್ಞಾನಪೂರ್ವಕವಾಗಿ ಶಸ್ತ್ರಪ್ರಯೋಗ ವನ್ನು ಮಾಡಿದವನ ತಲೆಯುಆಕ್ಷಣವೇ ಏಳುಭಾಗವಾಗಿ ಸೀಳಿಹೋಗುವುದು. ಬ್ರಹ್ಮವಾದಿಯಾದ ಅಂತಹ ತಪಸ್ವಿಯಲ್ಲಿ ನೀನು ಈಮಹಾಪರಾಧವನ್ನು ಅಜ್ಞಾನದಿಂದ ನಡೆಸಿಬಿಟ್ಟೆಯಾದುದರಿಂದ, ಈಗಲೂ ನೀನು ಬದುಕಿರುವು ದಕ್ಕೆ ಕಾರಣವಾಯಿತು. ನೀನು ಜ್ಞಾನಪೂರ್ವಕವಾಗಿ ಈಕೆಲಸವನ್ನು ನಡೆ ಸಿದ್ದ ಪಕ್ಷದಲ್ಲಿ, ಇಷ್ಟರೊಳಗೆ ಇಕ್ಷ್ವಾಕುವಂಶವೇ ನಿರ್ನಾಮವಾಗಿ ಅಳಿಸಿ ಹೋಗುತಿತ್ತು. ಆಗ ನಿನ್ನಪಾಡನ್ನು ಹೇಳತಕ್ಕುದೇನು? ಎಲೈರಾಜನೆ! ಅದು ಹಾಗಿರಲಿ! ಈಗ ನಮ್ಮಿಬ್ಬರನ್ನೂ ಆಪ್ರದೇಶಕ್ಕೆ ತೆಗೆದುಕೊಂ ಡು ಹೋಗಿಬಿಡು! ಆತನ ದೇಹವನ್ನಾದರೂ ಕೊನೆಯಸಾರಿ ನೋಡಿ ಬಂದುಬಿಡುವೆವು., ರಕ್ತದಿಂದ ತೊಯ್ದುಮೈಯ್ಯುಳ್ಳವನಾಗಿ, ಕದಲಿದ ನಾ ರುಮಡಿಯುಳ್ಳವನಾಗಿ ಪ್ರಜ್ಞೆಯಿಲ್ಲದೆ ಮೃತ್ಯುದೇವತೆಯ ಕೈಯಲ್ಲಿ ಬಿದ್ದಿರುವ ನನ್ನ ಪುತ್ರನಿರುವಸ್ಥಳಕ್ಕೆ ನಮ್ಮನ್ನು ಕರೆದುಕೊಂಡು ಹೋ ಗಿಬಿಡು” ಎಂದನು. ಆಗ ಪರಮದುಃಖಿತರಾದ ಆದಂಪತಿಗಳನ್ನು ತಾಪ ಸನು ಸತ್ತುಬಿದ್ದಿದ್ದಸ್ಥಳಕ್ಕೆ ನಾನೊಬ್ಬನೇ ಕೊಂಡುಹೋಗಿ ಆತನದೇ ಹವನ್ನು ಅವರಿಬ್ಬರ ಕೈಯಿಂದಲೂ ಮುಟ್ಟಿಸಿದೆನು. ದುಃಖಿತರಾದ ಆತಂ ದೆತಾಯಿಗಳಿಬ್ಬರೂ ಮಗನ ದೇಹವನ್ನು ಕೈಯ್ಯಿಂದ ಸವರಿ,ಆತನ ಮೈ ಮೇಲೆ ಬಿದ್ದು ಗೋಳಿಡುತ್ತಿದ್ದರು. ಆಗ ತಂದೆಯು ಮೃತಪುತ್ರನ ಮುಂದೆ ಕುಳಿತು“ಅಯ್ಯೋಮಗನೆ!ಇನ್ನೂ ನಮಗೇಕೆ ನಮಸ್ಕಾರಮಾಡುವುದಿಲ್ಲ?ಎಂದಿ

ನಂತೆ ನನಗೇಕೆ ಪ್ರತ್ತ್ಯುತ್ತರವನ್ನು ಕೊಡುವುದಿಲ್ಲ? ಏಕೆ ನೀನುಹೀಗೆ ನೆಲದ ಮೇಲೆ ಮಲಗಿರುವೆ ? ನಮ್ಮಮೇಲೆ ನಿನಗೆ ಏನಾದರೂ ಕೋಪವುಂಟೆ ? ಒಂದುವೇಳೆ ನಾನು ನಿನಗೆ ಪ್ರಿಯನಲ್ಲದಿದ್ದರೂ ನಿನ್ನ ತಾಯಿಯನ್ನಾದರೂ ಕಣ್ಣೆಟ್ಟು ನೋಡಬಾರದೆ ? ಎಲೈ ಧರ್ಮಜ್ಞನೆ ! ಇನ್ನೂ ನೀನು ನಿನ್ನ ತೋಳು ಗಳಿಂದ ಏಕೆ ನಮ್ಮನ್ನು ಆಲಿಂಗಿಸುವುದಿಲ್ಲ? ನೀನು ನಮ್ಮೊಡನೆ ಯಾವಾಗಲೂ ಪ್ರಿಯವಾಕ್ಯಗಳನ್ನು ನುಡಿಯುತಿದ್ದವನಲ್ಲವೆ ? ಈಗ ನೀನೇಕೆ ಮಾತಾಡುವು ದಿಲ್ಲ ? ಕರ್ಣಾನಂದಕರವಾಗಿರುವಂತೆ ಶಾಸ್ತ್ರಗಳನ್ನೂ ಪುರಾಣಗಳನ್ನೂ ನೀ ನು ಆಗಾಗ ಓದುತ್ತಿರುವುದನ್ನು ಕೇಳಿ ನಾನು ಎಷ್ಟೋ ಆನಂದಿಸುತಿದ್ದೆನು. ಇನ್ನುಮೇಲೆ ನಾನು ಯಾರಬಾಯಿಯಿಂದ ಆಕಾವ್ಯಗಳನ್ನು ಕೇಳಲಿ? [1] ಸಂ ಧ್ಯೋಪಾಸನೆಯನ್ನು!ಮಾಡಿ, ಅಗ್ನಿಹೋತ್ರಕಾರ್ಯಗಳನ್ನು ಮುಗಿಸಿಕೊಂಡು ಸಮೀಪದಲ್ಲಿ ಕುಳಿತುನನ್ನನ್ನು ಇನ್ನುಮೇಲೆ ಉಪಚರಿಸುವವರಾರು ? ಅದ ರಲ್ಲಿಯೂ ಮುಖ್ಯವಾಗಿ ಪುತ್ರಶೋಕದಿಂದ ಪೀಡಿತನಾದ ನನ್ನನ್ನು ಈಗ ಸಮಾಧಾನಗೊಳಿಸುವರಾರು ? ಕಾಡಿನಲ್ಲಿ ಗಡ್ಡೆಗೆಣಸುಗಳನ್ನು ಸಂಗ್ರಹಿಸಿ ತಂದು ಅತಿಥಿಗಳನ್ನು ಆದರಿಸುವಂತೆ ನನಗೆ ಇನ್ನುಮೇಲೆ ಪ್ರೀತಿಯಿಂದ ಭೋಜನವನ್ನಿಡುವವರಾರು?ಈಗ ನಾನು ಕರ್ಮಾನುಷ್ಠಾನಗಳನ್ನು ಮಾಡು ವುದಕ್ಕೂ ಶಕ್ತನಲ್ಲ! ಕಾಡಿನಲ್ಲಿ ಧಾನ್ಯಗಳನ್ನು ಆಯ್ದು ತರುವುದಕ್ಕೂ ನನಗೆ ಸಾಧ್ಯವಿಲ್ಲ.ಅನಾಥನಾಗಿ ದಿಕ್ಕಿಲ್ಲದೆ ಸಂಕಟಪಡುವ ನನಗೆ ಇನ್ನು ಸಹಾಯಕ ರಾರು ? ವೃದ್ಧಳಾಗಿ ಕಣ್ಣುಕಾಣದೆ ದುಃಖಿಸುತ್ತಿರುವನಿನ್ನ ತಾಯಿಯನ್ನು ಇನ್ನುನಾನು ಹೇಗೆ ಭರಿಸಲಿ ! ಪುತ್ರವಿರಹದಿಂದ ದುಃಖಿಸುತ್ತಿರುವ ಆಕೆಯ ಸಂಕಟವನ್ನು ನಾನುಹೇಗೆ ನೋಡಿಸಹಿಸಲಿ? ಎಲೈ ಮಗನೆ ! ನಿಲ್ಲು ! ನನ್ನ

---

1 ಇಲ್ಲಿ ಸಂಧ್ಯೋಪಾಸನೆಯೆಂದರೆ ತಂತ್ರೋಕ್ತವಾದ ಸಂಧ್ಯಾನಮಸ್ಕಾರಮಾತ್ರ ವೆಂದು ಗ್ರಹಿಸಬೇಕು. ಅಗ್ನಿಹೋತ್ರವೆಂದರೆ ಹೋಮವು!"ವೈಶ್ಯನಿಗೆಶೂದ್ರಸ್ತ್ರೀಯಲ್ಲಿ ಹುಟ್ಟಿದವನು ಕರಣನೆನಿಸುವನು. ಇಂತವನಿಗೆ ಹೋಮಾಧಿಕಾರವುಂಟೆ?"ಎಂದು ಶಂಕೆ ಯುಟಾಗಬಹುದಲ್ಲವೆ? ಅದರ ಸಮಾಧಾನವೇನೆಂದರೆ; "ನಮಸ್ಕಾರೇಣ ಮಂತ್ರೇಣ ಪಂಚಯಜ್ಞಾನ್‌ಸಮಾಪಯೇತ್" ಎಂಬುದಾಗಿ, ಕೇವಲ ಚತುರ್ಥವರ್ಣದವರಿಗೂ ಪಂ ಚಮಹಾಯಜ್ಞಾಧಿಕಾರವುಂಟೆಂದು ಸ್ಮೃತಿಪ್ರಮಾಣವಿರುವಾಗ ಅದಕ್ಕಿಂತಲೂ ಉತ್ತ ಮಜನ್ಮವುಳ್ಳವರಿಗೆ ಹೇಳಬೇಕಾದುದೇ ಇಲ್ಲವು.

ಕಡೆಗೆ ತಿರುಗು ! ನನ್ನನ್ನು ಬಿಟ್ಟು ಯಮಪುರಿಗೆ ಹೋಗುವುದುಚಿತವೆ ? ನಾಳೆ ನಾವುಮೂವರೂ ಒಟ್ಟಿಗೆ ಸೇರಿ ಯಮಾಲಯವನ್ನು ಪ್ರವೇಶಿಸುವೆವು.ಕಾಡಿನಲ್ಲಿ ದಿಕ್ಕಿಲ್ಲದೆ ಪುತ್ರಶೋಕದಿಂದ ಕೊರಗುತ್ತಿರುವ ನಾವು ಇನ್ನು ಮೇಲೆ ನಿನ್ನನ್ನು ಬಿಟ್ಟು ಈ ಭೂಮಿಯಲ್ಲಿರಲಾರೆವು. ಅಥವಾ ನಾನೇ ಮೊದಲು ಯಮನ ಬಳಿಗೆ ಹೋಗಿ ಆತನನ್ನು ಕುರಿತು, "ಎಲೈ ಧರ್ಮರಾಜನೆ! ಪ್ರಸನ್ನನಾಗು. ನಿನ್ನಲ್ಲಿ ನನ್ನದೊಂದು ವಿಜ್ಞಾಪನೆಯುಂಟು.ನನ್ನ ಈಮಗನು ನಮ್ಮಿಬ್ಬರಿಗೂ ದಿಕ್ಕಾಗಿರುವನು. ಆತನನ್ನು ನಮ್ಮವಶಕ್ಕೆ ಹಿಂತಿರುಗಿ ಕೊಟ್ಟುಬಿಡು !" ಎಂದು ವಿನಯದಿಂದ ಪ್ರಾರ್ಥಿಸಿಕೊಳ್ಳುವೆನು. ಮಹಾಯಶಸ್ವಿಯಾಗಿ ಲೋಕಪಾಲಕನಾಗಿ ಧರ್ಮಾತ್ಮನೆನಿಸಿಕೊಂಡಿರುವ ಆಯಮನು ನನಗೆ ಇದೊಂದು ಅಭಯದಕ್ಷಿಣೆಯನ್ನು ಕೊಡದೆ ಇರಲಾರನು. ಆತನು ನನ್ನ ಮಾತನ್ನು ಲಾಲಿಸಿ ನಿನ್ನನ್ನು ಹಿಂತಿರುಗಿ ಕೊಟ್ಟೇಬಿಡುವನು.ಎಲೆ ವತ್ಸನೆ ! ನೀನು ಹುಟ್ಟಿದುದು ಮೊದಲು ಪಾಪಕೃತ್ಯವನ್ನೇ ಕಂಡವನಲ್ಲ. ಪಾಪಿಯಾದ ಕ್ಷತ್ರಿಯನೊಬ್ಬನು ನಿನ್ನನ್ನು ಕೊಂದನು. ಅಥವಾ ನೀನು ಹಿಂದೆ ಅಜ್ಞಾನದಿಂದ ಯಾವುದಾದರೂ ಪಾಪಮಾಡಿದ್ದರೂ ಈ ಶಸ್ತ್ರಹತಿಯಿಂದ ನಿನ್ನ ಆಪಾಪವು ಹೋಗಲಿ! ಆ ಸತ್ಯದಿಂದಲಾದರೂ ನೀನು ರಣನಿಹತರಾದ ವೀರರಿಗೆ ಯೋಗ್ಯವಾದ ಲೋಕಗಳನ್ನು ಪಡೆದು ಸುಖಿಸುತ್ತಿರು! ಯುದ್ಧದಲ್ಲಿ ಹಿಂತಿರುಗದೆ ಪ್ರಾಣವನ್ನು ಬಿಟ್ಟಶೂರರಿಗೆ ಯಾವಸದ್ಗತಿಯುಂಟಾಗುವುದೋ ಆಸದ್ಗತಿಯು ನಿನಗೂ ಉಂಟಾಗಲಿ ! ಸಗರನೂ, ಶೈಬ್ಯನೂ, ದಿಲೀಪನೂ, ಜನಮೇಜಯನೂ, ನಹುಷನೂ, ಧುಂಧುಮಾರನೂ ಯಾವಯಾವ ಸದ್ಗತಿಗಳನ್ನು ಪಡೆದಿರುವರೋ ಆಸದ್ಗತಿಯು ನಿನಗೂ ಉಂಟಾಗಲಿ ! ಸಮಸ್ತ ಸಾಧುಜನಗಳೂ ಪಡೆಯತಕ್ಕ ಗತಿಯು ನಿನಗೂ ಉಂಟಾಗಲಿ ! ವೇದಾಧ್ಯಯನದಿಂದಲೂ, ತಪಸ್ಸಿನಿಂದಲೂ ಉಂಟಾಗತಕ್ಕ ಸದ್ಗತಿಗಳೆಲ್ಲವೂ ನಿನಗುಂಟಾಗಲಿ ! ಭೂದಾನಮಾಡಿದವರಿಗೂ, ಆಹಿತಾಗ್ನಿಗಳಿಗೂ, ಏಕಪತ್ನೀವ್ರತದವನಿಗೂ ಯಾವಗತಿಯು ಸಿದ್ಧಿಸುವುದೋ ಆ ಗತಿಯು ನಿನಗೂ ಸಿದ್ಧಿಸಲಿ! ಸಹಸ್ರಗೋದಾನಗಳನ್ನು ಮಾಡಿದವರು ಯಾವಸದ್ಗತಿಯನ್ನು ಪಡೆಯುವರೋ ಆ ಸದ್ಗತಿಯನ್ನು ನೀನೂ ಹೊಂದು. ಗುರುಶುಶ್ರೂಷೆಮಾಡಿದ ಪುಣ್ಯ

ಶಾಲಿಗಳಿಗೂ, ಮಹಾಪ್ರಸ್ಥಾನಾದಿಗಳಿಂದಲಾಗಲಿ, ಗಂಗಾಯಮುನಾಸಂಗಮಾದಿ ಸ್ಥಳಗಳಲ್ಲಿಯಾಗಲಿ, ಅಗ್ನಿಯಲ್ಲಿಯಾಗಲಿ ಸಂಕಲ್ಪಪೂರ್ವಕವಾಗಿ ದೇಹತ್ಯಾಗವನ್ನು ಮಾಡಿದವರಿಗೆ ಯಾವಸದ್ಗತಿಯುಂಟಾಗುವುದೋ ಆ ಸದ್ಗತಿಯು ನಿನಗೂ ಉಂಟಾಗಲಿ! ತಪೋನಿಷ್ಠರಾದ ನಮ್ಮಕುಲದಲ್ಲಿ ಹುಟ್ಟಿದವರಾರೂ ದುರ್ಗತಿಯನ್ನು ಹೊಂದಲಾರರು. ನನ್ನ ಮುದ್ದುಮಗನಾದ ನಿನ್ನನ್ನು ಕೊಂದಪಾಪಿಯು ಮಾತ್ರವೇ ದುರ್ಗತಿಯನ್ನು ಹೊಂದುವನು.'' ಎಂದುಹೇಳಿ ಆ ವೃದ್ಧಮುನಿಯೂ ಎಡೆಬಿಡದೆ ಪ್ರಲಾಪಿಸುತಿದ್ದನು. ಆಮೇಲೆ ಪುತ್ರನಿಗೆ ಅಪರಕ್ರಿಯೆಗಳನ್ನು ಮಾಡಲಾರಂಭಿಸಿದನು. ಒಡನೆಯೇ ಆ ತಾಪಸಕುಮಾರನಿಗೆ ಆತನ ಪುಣ್ಯಕರ್ಮದ ಬಲದಿಂದ ದಿವ್ಯರೂಪವುಂಟಾಯಿತು. ಆಗಲೇ ಸಿದ್ಧವಾಗಿಬಂದ ಒಂದುದಿವ್ಯರಥವನ್ನೇರಿ ಇಂದ್ರನೊಡಗೂಡಿ ಸ್ವರ್ಗಕ್ಕೆ ಹೊರಡಲು ಸಿದ್ಧನಾದನು. ಆಗ ಆಮುನಿಕುಮಾರನೂ ಇಂದ್ರನೂ ಸ್ವಲ್ಪಕಾಲದವರೆಗೆ ವೃದ್ಧದಂಪತಿಗಳನ್ನು ಸಮಾಧಾನಪಡಿಸುತಿದ್ದರು. ಆಗ ತಾಪಸಕುಮಾರನು ತನ್ನ ತಂದೆತಾಯಿಗಳನ್ನು ನೋಡಿ, ‹‹ಎಲೈ ಆರ್ಯನೆ! ನಾನು ನಿಮ್ಮ ಶುಶ್ರೂಷೆಯನ್ನು ತಪ್ಪದೆ ನಡೆಸುತ್ತಬಂದ ಪುಣ್ಯವಿಶೇಷದಿಂದಲೇ ನಿರಾಮಯವಾದ ಈ ಪದವಿಯನ್ನು ಪಡೆದೆನು. ನೀವೂ ಶೀಘ್ರದಲ್ಲಿಯೇ ನಾನಿರತಕ್ಕಸ್ಥಳಕ್ಕೆಬರುವಿರಿ!" ಎಂದನು. ಆಮೇಲೆ ಜಿತೇಂದ್ರಿಯನಾದ ಆತಾಪಸ ಪುತ್ರನು ಆ ದಿವ್ಯ ವಿಮಾನದಿಂದಲೇ ಸ್ವರ್ಗವನ್ನು ಸೇರಿಬಿಟ್ಟನು. ಇತ್ತಲಾಗಿ ಆ ವೃದ್ಧತಾಪಸನೂ ಪತ್ನಿಯೊಡನೆ ಪುತ್ರನಿಗೆ ಜಲತರ್ಪಣಾದಿಗಳನ್ನುಮಾಡಿ, ಪಕ್ಕದಲ್ಲಿ ಬದ್ಧಾಂಜಲಿಯಾಗಿನಿಂತಿದ್ದ ನನ್ನನ್ನು ನೋಡಿ, ‹‹ಎಲೆ ರಾಜನೆ! ನೀನು ಈಗಲೇ ನನ್ನನ್ನು ಕೊಂದುಬಿಡು. ಸತ್ತಹೊರತು ಈ ನನ್ನ ಸಂಕಟವು ಅಡಗುವುದಿಲ್ಲ. ‹‹ಸಾಯುವುದರಲ್ಲಿ ಸಂಕಟವಿಲ್ಲವೆ?" ಎಂದು ನೀನು ಕೇಳಬಹುದು. ಏಕಪುತ್ರನಾಗಿದ್ದ ಆತನನ್ನು ಕಳೆದುಕೊಂಡು ಬದುಕಿರುವುದಕ್ಕಿಂತಲೂ ಮರಣವೇ ಮೇಲು. ನಮಗಿದ್ದ ಆ ಒಬ್ಬಮಗನನ್ನು ನೀನು ಬಾಣದಿಂದಕೊಂದುಬಿಟ್ಟೆ. ಅದನ್ನು ನೋಡಿ ಸಹಿಸುವುದಕ್ಕಿಂತಲೂ ಲೋಕದಲ್ಲಿ ಬೇರೆ ಸಂಕಟವೇನುಂಟು? ಶುದ್ಧಾತ್ಮನಾದ ನನ್ನ ಮಗನನ್ನು ನೀನು ಅಜ್ಞಾನವಶದಿಂದ ಸಂಹರಿಸಿದೆಯಾದಕಾರಣ ನಿನ್ನನ್ನು ಮನ್ನಿಸಬೇಕಾ

ಗಿದೆ. ಈ ಕೆಲಸವನ್ನುಮಾತ್ರ ನೀನು ಜ್ಞಾನಪೂರ್ವಕವಾಗಿಯೇ ನಡೆಸಿದ್ದ ರೆ ಆ ಕ್ಷಣವೇ ನಾನು ನನ್ನ ತಪಃಪ್ರಭಾವದಿಂದ ನಿನ್ನನ್ನು ಸುಟ್ಟು ಭಸ್ಮ ಮಾಡುತಿದ್ದೆನು. ಈಗಲೂ ನನ್ನ ಸಂಕಟವನ್ನಾರಿಸಿಕೊಳ್ಳುವುದಕ್ಕಾಗಿ ನಿನಗೊಂದು ಕ್ರೂರವಾದ ಶಾಪವನ್ನು ಕೊಡದೆ ಬಿಡಲಾರೆನು. ನನಗೆ ಈ ಅಂತ್ಯಕಾಲದಲ್ಲಿ ಪುತ್ರವಿಯೋಗವನ್ನುಂಟುಮಾಡಿ,ಆದರಿಂದ ಮರಣಾಂ ತವಾದ ದುಃಖವನ್ನು ತಂದಿಟ್ಟೆಯಲ್ಲವೆ? ನೀನೂಹೀಗೆಯೇ ಪುತ್ರಶೋಕದಿಂ ದಲೇ ಮರಣವನ್ನು ಹೊಂದುವೆ! ಆದರೆ ಎಲೈ ರಾಜನೆ! ನೀನು ಋಷಿಪುತ್ರ ನನ್ನು ಏನೋ ಅಜ್ಞಾನವಶದಿಂದ ಕೊಂದುಬಿಟ್ಟೆ.ಆಹುದರಿಂದ,ಅದರಿಂದುಂ ಟಾಗಬೇಕಾದ ಬ್ರಹ್ಮಹತ್ಯಾಪಾತಕಕ್ಕೆ ಸಮಾನವಾದ ಪಾಪವೂ ನಿನಗೆ ಸಂಭವಿಸದಿರಲಿ!ಮತ್ತು ನೀನು ಈಗನನಗೆ ಪ್ರಾಣಾಂತಕರವಾದ ಈಘೋ ರಸ್ಥಿತಿಯುನ್ನುಂಟುಮಾಡಿರುವೆಯಾದುದರಿಂದ, ದಕ್ಷಿಣೆಯನ್ನು ಕೊಟ್ಟ ವನು ಆ ದಕ್ಷಿಣೆಗೆ ತಕ್ಕ ಫಲವನ್ನು ಪಡೆಯುವಂತೆ,ನೀನೂ ಈಜನ್ಮದ ಲ್ಲಿಯೇ ನನ್ನಂತೆ ಮಹಾವಿಪತ್ತನ್ನು ಹೊಂದುವೆ." ಎಂದು ಶಪಿಸಿರುವನು. ಹೀಗೆ ನನಗೆ ಶಾಪವನ್ನುಕೊಟ್ಟ.ಮೇಲೆ ಆದಂಪತಿಗಳಿಬ್ಬರೂ ಬಹು ದೈನ್ಯ ದಿಂದ ಕಲ್ಲುಕರಗುವಂತೆ ಪ್ರಲಾಪಿಸುತಿದ್ದು,ಕೊನೆಗೆ ತಮ್ಮಿಬ್ಬರ ದೇಹವ ನ್ನೂ ಒಂದಾಗಿ ಸೇರಿಸಿ ಕಟ್ಟಿಕೊಂಡು,ಚಿತೆಯನ್ನೇರಿ ಸ್ವರ್ಗವನ್ನುಹೊಂದಿ ದರು. ಎಲೆ ದೇವಿ!ಈಗ ನನಗೆ ಸಂಭವಿಸಿರುವ ಮರಣಾಂತವಾದ ಈ ಪುತ್ರ ಶೋಕಕ್ಕೆ ಇದೇ ಕಾರಣವು. ಬಾಲ್ಯದಲ್ಲಿ ಶಬ್ದವೇಧಿಯೆಂಬ ಖ್ಯಾತಿಯಿಂದ ನಾನು ಗರ್ವಪಟ್ಟುನಡೆಸಿದ ಕೃತ್ಯವು ಈಗ ಸ್ಮರಣೆಗೆ ಬಂದಿದೆ. ಅಪ ಥ್ಯಪದಾರ್ಥಗಳೊಡನೆ ಅನ್ನವನ್ನು ತಿಂದವನಿಗೆ ಆಗಲೇ ವ್ಯಾಧಿಯು ಬಂದು ಆವರಿಸಿಕೊಳ್ಳುವಂತೆ, ನಾನು ನಡೆಸಿದ ಪಾಪಕಾರ್ಯಕ್ಕೆ ಈಗ ದುಃ ಖರೂಪವಾದ ಫಲವುಪ್ರಾಪ್ತವಾಯಿತು. ನಾನು ಈಪುತ್ರಶೋಕದಿಂದಲೇ ಪ್ರಾಣವನ್ನೂ ಬಿಡಬೇಕಾಗಿ ಸಂಭವಿಸಿದೆ. ಮಹಾತ್ಮನಾದ ಆ ಋಷಿಯ ಶಾಪವೂ ಈಗಲೇ ಸಿದ್ಧಿಸುವಕಾಲವೆಂದುತೋರಿದೆ. ಎಲೆಪ್ರಿಯೆ! ನನ್ನ ಕ ಣ್ಣುಗಳಲ್ಲಿ ದೃಷ್ಟಿಸಾಟವವೂ ತಪ್ಪಿಹೋಯಿತು. ನಿನ್ನನ್ನು ನಾನು ನೋಡ ಲಾರೆನು. ನನ್ನನ್ನು ನಿನ್ನಕೈಯಿಂದಲಾದರೂ ಚೆನ್ನಾಗಿ ಮುಟ್ಟಿನವರಿ ನನಗೆ ಆಪ್ಯಾಯನವನ್ನುಂಟು ಮಾಡುವೆಯಾ?" ಎಂದುಹೇಳಿ, ಬಾರಿಬಾರಿಗೂ ಪ್ರ

ಲಾಪಿಸುತ್ತ, ಹಾಗೆಯೇ ಬೆಚ್ಚಿಬಿದ್ದಂತೆ ನಡುಗುತ್ತ, ‹‹ಎಲೆ ದೇವಿ! ರಾಮ ವಿಷಯದಲ್ಲಿ ನಾನು ಮಾಡಿದ ಮಹಾಪರಾಧವು ಪಾಪಿಯಾದ ನನಗೆ ಉ ಚಿತವಾಗಿಯೇ ಇರುವುದು. ಅಯ್ಯೋ! ಮಹಾತ್ಮನಾದ ಆರಾಮನ ಸದ್ಗು ಣವನ್ನೇನೆಂದುಹೇಳಲಿ! ಅವನು ನನ್ನಮಾತಿಗೆ ಸಲ್ಪವಾದರೂ ಹಿಂತೆಗೆ ಯದೆ, ಒಂದು ಪ್ರತಿವಾಕ್ಯವನ್ನಾದರೂ ಆಡದೆ ಆಕ್ಷಣವೇ ಕಾಡಿಗೆ ಹೊರ ಟನಲ್ಲವೆ? ಇಂತಹ ಮಹಾಮಹಿಮೆಯು ಆಮಹಾತ್ಮನಿಗೊಬ್ಬನಿಗೆ ಹೊರ ತು ಬೇರೊಬ್ಬರಿಗೂ ಸಲ್ಲದು. ಹೊಟ್ಟೆಯಲ್ಲಿ ಹುಟ್ಟಿದ ಮಗನು ಎಷ್ಟೇ ದುರ್ಮಾರ್ಗನಾಗಿದ್ದರೂ ಕಾಡಿಗೆ ಕಳುಹಿಸುವವರುಂಟೆ? ವಿವೇಕಿಯಾದವ ನೊಬ್ಬನೂ ಹಾಗೆ ಮಾಡಲಾರನು. ಅಥವಾ ತಂದೆಯು, ಒಂದುವೇಳೆ ಕೋ ಪದಿಂದ ಕಾಡಿಗೆ ಹೋಗೆಂದು ಹೇಳಿದಮಾತ್ರಕ್ಕೆ ಲೋಕದಲ್ಲಿ ಯಾವ ಮ ಕ್ಕಳು ತಾನೇ ಕೋಪಿಸದೆ ಆಮಾತನ್ನು ಗೌರವಿಸುವರು? ರಾಮನು ಈಗ ಲೇ ಬಂದು ನನ್ನನ್ನು ತನ್ನ ಕೈಯಿಂದಮುಟ್ಟಿದರೆ, ಅಥವಾ ಅವನುಬಂದು ನನ್ನ ಮುಂದೆ ನಿಂತರೆ ನನ್ನಪ್ರಾಣವು ನಿಲ್ಲುವುದೇ ಹೊರತು ಅದಿಲ್ಲದಿದ್ದರೆ ನಾನು ಬದುಕಿರಲಾರೆನು. ಯಮಲೋಕವನ್ನು ಸೇರಿದ ಮೇಲೆ ಮನುಷ್ಯ ರು ತಮ್ಮ ಬಂಧುಗಳನ್ನು ನೋಡುವ ಸಂಭವವಿಲ್ಲವಲ್ಲವೆ ? ಆದುದರಿಂದ ಈ ಪ್ರಾಣವಿರುವಾಗಲೇ ರಾಮನನ್ನು ನೋಡಬೇಕೆಂದಿರುವೆನು. ಎಲೆ ಕೌಸಲ್ಯೆ! ನೀನು ಕಣ್ಣೆದಿರಿಗಿರುವಾಗಲೂ ನಾನು ನಿನ್ನನ್ನು ನೋಡಲಾರೆನು. ನನಗೆ ಸ್ಮರಣೆಯೂ ತಪ್ಪುತ್ತ ಬಂದಿರುವುದು.ಇದೋ ಇಲ್ಲಿ ಯಮದೂತರು ಬಂದು ನನನ್ನು ತ್ವರೆಪಡಿಸುತ್ತಿರುವರು. ಎಲೆ ದೇವಿ! ಅವೆಲ್ಲವೂ ಹೇಗಾದ ರೂ ಹೋಗಲಿ. ಇದೊಂದಕ್ಕೂ ನಾನಂಜುವವನಲ್ಲ! ಈ ಪ್ರಾಣವು ಹೋ ಗುವಕಾಲದಲ್ಲಿಯೂ ಧರ್ಮಜ್ಞನಾದ, ಮತ್ತು ಸತ್ಯಪರಾಕ್ರಮಿಯಾದ ಆ ರಾಮನನ್ನು ನೋಡದಿರುವೆನಲ್ಲವೆ? ಇದಕ್ಕಿಂತಲೂ ಇನ್ನು ನನಗೆ ದುಃಖ ವೇನಿರುವುದು. ರಾಮನು ಸಂಕಲ್ಪಿಸಿದಕಾರ್ಯಕ್ಕೆ ಯಾರೂ ಅಡ್ಡಿಮಾಡಲಾ ರರು. ಅಂತಹ ರಾಮನ ಅಗಲಿಕೆಯಿಂದುಂಟಾದ ದುಃಖವು ಈಗೀಗ ನನ್ನ ಪ್ರಾಣಗಳನ್ನೇ ಸುಡುತ್ತಿರುವುದು. ಅಲ್ಪಜಲವುಳ್ಳ ಕೊಳವನ್ನು ಸೂರ್ಯನ ಬಿಸಿಲು ನಿಶ್ಶೇಷವಾಗಿ ಹೀರಿಬಿಡುವಂತೆ ನಿಸ್ಸಾರವಾದ ನನ್ನ ಪ್ರಾಣವನ್ನು ಶೋಕಾಗ್ನಿಯು ಹೀರುತ್ತಿರುವುದು. ಅಯ್ಯೋ! ಪುನಃ ಹಿಂತಿರುಗಿಬಂದ ರಾ

ಮನನ್ನು ನೋಡುವ ಭಾಗ್ಯವೂ ನನಗಿಲ್ಲದೇ ಹೋಗುವುದಲ್ಲಾ! ಈ ಹದಿನಾಲ್ಕು ವರ್ಷಗಳು ಕಳೆದುಹೋದಮೇಲೆ ಹದಿನೈದನೆಯ ವರ್ಷದಲ್ಲಿ ಕಾಡಿನಿಂದ ಹಿಂತಿರುಗಿ ಬಂದ ರಾಮನ ಕುಂಡಲಾಲಂಕೃತವಾದ ಮುಖವನ್ನು ಯಾರು ನೋಡುವರೋ, ಅವರನ್ನು [1] ದೇವಾಂಶ ಪುರುಷರೆಂದೇ ಹೇಳಬೇಕೇಹೊರತು ಮನುಷ್ಯರೆಂದೆಣಿಸಲಾರೆನು. ಕಮಲದಳದಂತೆ ಕಣ್ಣುಗಳೂ, ಅಂದವಾದ ಹುಬ್ಬುಗಳೂ, ಅತಿಮನೋಹರವಾದ ದವಡೆಯ ಹಲ್ಲುಗಳೂ ಎಸಳಾದ ಮೂಗೂ,ಶೋಭಿಸುತ್ತಿರಲು,ಚಂದ್ರಬಿಂಬಕ್ಕೆ ಸಮಾನವಾದ ಆತನಮುಖವನ್ನು ನೋಡುವವರೇ ಪರಮಭಾಗ್ಯಶಾಲಿಗಳು. ಶರತ್ಕಾಲದಚಂದ್ರನಿಗೂ, ಅರಳಿದ ಕಮಲಕ್ಕೂ ಸಮಾನವಾಗಿ, ಸುಗಂಧವನ್ನು ಸೂಸುತ್ತಿರುವ ಆ ನನ್ನ ರಾಮನ ಮುದ್ದುಮುಖವನ್ನು ನೋಡುವವರೇ ಪುಣ್ಯಾತ್ಮರು. ವನವಾಸವನ್ನು ತೀರಿಸಿಕೊಂಡು ಹಿಂತಿರುಗಿ ಅಯೋಧ್ಯೆಗೆ ಬಂದಮೇಲೆ ಮೌಢ್ಯದೆಶೆಯುಕಳೆದು ಉಚ್ಚಸ್ಥಿತಿಯಲ್ಲಿರುವ ಶುಕ್ರನಂತೆ ಪ್ರಕಾಶಿಸುವ ಆ ರಾಮನನ್ನು ನೋಡುವವರೇ ಪರಮ ಸುಖಿಗಳು. ಅಯ್ಯೋ! ನನಗೆ ಆಭಾಗ್ಯವಿಲ್ಲದೇ ಹೋಗುವುದಲ್ಲಾ ! ಇನ್ನೇನು ಮಾಡಲಿ! ಎಲೆ ಕೌಸಲ್ಯೆ! ಇನ್ನು ಮುಗಿಯಿತು. ನನ್ನ ಮನಸ್ಸಿಗೆ ಮಹಾಂಧಕಾರವು ಆವರಿಸಿ ಹೋಯಿತು. ನನ್ನ ಇಂದ್ರಿಯಗಳಲ್ಲಿ ಕ್ರಮಕ್ರಮವಾಗಿ ಪಾಟವವೂ ತಪ್ಪುತ್ತಬಂದಿರುವುದರಿಂದ, ಶಬ್ದಸ್ಪರ್ಶರಸಾದಿಗಳೊಂದೂ ನನಗೆ ತಿಳಿಯುವುದೇ ಇಲ್ಲ. ದೀಪದಲ್ಲಿ ಎಣ್ಣೆಯು ಮುಗಿದು ಹೋದಮೇಲೆ ಅದರ ಜ್ವಾಲೆಯು ತಾನಾಗಿಯೇ ನಂದಿಹೋಗುವುದಲ್ಲವೆ?ಅದರಂತೆಯೇ ಈಗ ನನಗೆ ಮೊದಲೇ ದೇಹವು ಶಿಥಿಲವಾಗಿರುವುದು. ಅದರಮೇಲೆ ಸಹಿಸಲಾರದ ದುಃಖವು ಬಂದೊದಗಿ ಮನಸ್ಸೂ ಕೆಟ್ಟಿತು.ಅದಕ್ಕೆ ಸಂಬಂಧಪಟ್ಟ ಇಂದ್ರಿಯಗಳಲ್ಲಿಯೂ, ಶಕ್ತಿಯು ಅಡಗಿಹೋಗುತ್ತಿರುವುದು. ಪ್ರವಾಹವು ತನ್ನ ದಡವನ್ನೇ ಕೊಚ್ಚಿಸುವಂತೆ. ನನ್ನ ಹೃದಯದಲ್ಲಿ ಉಂಟಾದ ಈ ಪುತ್ರಶೋಕವೇ ಅನಾಥನಾಗಿ ಪ್ರಜ್ಞೆತಪ್ಪಿರುವ ನನ್ನನ್ನು ಕೊಲ್ಲುತ್ತಿರುವುದು. ಹಾ! ರಾಮಾ! ಹಾ! ಮಹಾ

1 ಇಲ್ಲಿ ರಾಮನ ಮುಖವನ್ನು ನೋಡುತ್ತಿರುವವರೇ ದೇವತೆಗಳಂತೆ ನಿತ್ಯಯೌವನವುಳ್ಳವರೆಂದು ದಶರಥನು ತನ್ನಸ್ವಾನುಭವವನ್ನು ಹೇಳಿರುವನೆಂದು ಗ್ರಹಿಸಬೇಕು.

ಬಾಹೂ ! ನನ್ನ ಸಂಕಟವನ್ನು ಬಿಡಿಸಬಾರದೇ? ನೀನು ತಂದೆಯಲ್ಲಿ ಎಷ್ಟೋ ವಿಶ್ವಾಸವುಳ್ಳವನಲ್ಲವೇ ? ಹಾ ! ನಾಥಾ ! ಹಾ ! ಕಂದಾ ! ಅಯ್ಯೋ! ಈಗನೀನೆಲ್ಲಿರುವೆ ? ಅಯ್ಯೋ ! ಕೌಸಲ್ಯೆ ! ಅಯ್ಯೋ ! ಸುಮಿತ್ರೆ ! ಇನ್ನುನಿಮಗೇನು ಗತಿ! ಎಲೆ ಘಾತುಕಿ! ಎಲೆ ಕೈಕೇಯೀ! ನೀನೇ ನನಗೆ ಮೃತ್ಯುವಾದೆಯಲ್ಲಾ! ನೀನೇ ನಮ್ಮಕುಲಕ್ಕೆ ಕಳಂಕಪ್ರಾಯಳಾದೆಯಲ್ಲಾ ! ಅಯ್ಯೋ ! ರಾಮಾ! ಲಕ್ಷ್ಮಣಾ ! ಸೀತೇ !" ಎಂದು ದಶರಥನು ಗಟ್ಟಿಯಾಗಿ ಗೋಳಿಡುತ್ತಾ ಇತರರು ಕಿವಿಯಿಂದ ಕೇಳಿ ಸಹಿಸಲಾರದಂತೆ ಆ ಸುಮಿತ್ರಾಕೌಸಲ್ಯೆಯರ ಮುಂದೆ ಬಹುದೈನ್ಯದಿಂದ ಕೂಗಿಕೊಂಡು ಹಾಗೆಯೇ ಜೀವವನ್ನು ಬಿಟ್ಟನು. ಹೀಗೆ ದಶರಥನು ಅರ್ಧರಾತ್ರಿಸಮಯದಲ್ಲಿ ತನ್ನ ಮಗನನ್ನು ತೊರೆದಸಂಕಟವನ್ನು ಸಹಿಸಲಾರದೆ ಆಮಧ್ಯರಾತ್ರಿಯು ಕಳೆದ ಉತ್ತರಕ್ಷಣದಲ್ಲಿಯೇ ಇಹಲೋಕವನ್ನು ಬಿಟ್ಟನು. ಇಲ್ಲಿಗೆ ಅರುವತ್ತು ನಾಲ್ಕನೆಯಸರ್ಗವು.

---

ದಶರಥನ ಮರಣಕ್ಕಾಗಿ ರಾಜಪತ್ನಿಯರ ಪ್ರಲಾಪವು.

ಆ ರಾತ್ರಿಯು ಕಳೆದು ಮಾರನೆ ಯದಿನದ ಪ್ರಾತಃಕಾಲದಲ್ಲಿ ಎಂದಿನಂತೆ ವಂದಿಜನಗಳು ಬಂದು.ಅಂತಃಪುರದ್ವಾರದಲ್ಲಿ ನಿಂತರು. ಹಾಗೆಯೇ ವಂಶಾವಳಿಯನ್ನು ಹೇಳತಕ್ಕ ಸೂತರೂ,ಮಂಗಳ ಪಾಠಕರೂ,ಗಾಂಧರ್ವ ವಿದ್ಯೆಯಲ್ಲಿ ನಿಪುಣರಾದ ಗಾಯಕರೂ ಅಲ್ಲಿಗೆ ಬಂದುಸೇರಿದರು. ಅವರಲ್ಲಿ ಒಬ್ಬೊಬ್ಬರೂ ತಮ್ಮ ತಮ್ಮ ಕುಲವಿದ್ಯೆಗಳಲ್ಲಿ ಸಂಪೂರ್ಣವಾದ ಅನುಭವವುಳ್ಳವರಾದುದರಿಂದ,ತಮ್ಮ ತಮ್ಮ ಪದ್ಧತಿಯಂತೆ ಬೇರೆಬೇರೆಯಾಗಿ ಪ್ರಾಭಾತಿಕ ಸ್ತುತಿಗಳಿಂದ ಸುಪ್ರಭಾತವನ್ನು ಹೇಳತೊಡಗಿದರು. ಹೀಗೆ ಆಶೀರ್ವಾದ ವಚನಗಳೊಡನೆ ರಾಜನನ್ನು ಸ್ತುತಿಸುತಿದ್ದ ಆವಂದಿಜನಗಳ ಧ್ವನಿಯು ಆ ಅರಮನೆಯೆಲ್ಲವನ್ನೂ ವ್ಯಾಪಿಸಿತು. ಹೀಗೆ ಆ ಸ್ತುತಿಪಾಠಕರೆಲ್ಲರೂ ಹೊಗಳುತ್ತಿರುವಾಗ, ಹಸ್ತವಾದ್ಯಗಳನ್ನು ನುಡಿಸತಕ್ಕವರು ದಶರಥನ ಪೂರ್ವಜರಿತ್ರಗಳೆಲ್ಲವನ್ನೂ ಹೇಳಿ,ಕೊಂಡಾಡುತ್ತಾ, ತಮ್ಮ ವಾದ್ಯಗಳನ್ನು ನುಡಿಸುತಿದ್ದರು. ಈ ಶಬ್ದವನ್ನು ಕೇಳಿ ಹಕ್ಕಿಗಳೆಲ್ಲವೂ ಮೊದಲೇ ಎಚ್ಚರಗೊಂಡು ಗಿಡಗಳ ಮೇಲೆಯೂ, ಪಂಜರಗಳಲ್ಲಿಯೂ, ಗೋಪುರದ ಗೂಡುಗಳಲ್ಲಿಯೂ

ಸೇರಿ ಕೂಗುತಿದ್ದುವು.ಬ್ರಾಹ್ಮಣಾಶೀರ್ವಾದಗಳೂ ಉಪಕ್ರಮಿಸಲ್ಪಟ್ಟುವು. ವೀಣಾಧ್ವನಿಗಳೂ ಆರಂಭಿಸಲ್ಪಟ್ಟುವು.ಥಶರಥನ ಅರಮನೆಯಲ್ಲಿದ್ದ ಆಸ್ಥಾನ ಕವಿಗಳೆಲ್ಲರೂ ಆತನವಿಷಯವಾಗಿ ರಚಿಸಲ್ಪಟ್ಟಪ್ರಬಂಧಗಳನ್ನು ಓದುತಿದ್ದರು. ಹೀಗೆ ಆ ಅರಮನೆಯಲ್ಲಿ ಅಪರಿಮಿತವಾದ ಕೋಲಾಹಲವುಂಟಾಗಿ, ರಾಜಾ ಸ್ಥಾನವೆಲ್ಲವನ್ನೂ ತುಂಬಿತು.ಮತ್ತೊಂದುಕಡೆಯಲ್ಲಿ ಶುದ್ಧಾಚಾರವುಳ್ಳವರಾ ಗಿಯೂ,ಕಾಲೋಚಿತವಾದ ಪರಿಚರ್ಯಗಳನ್ನು ಮಾಡುವುದರಲ್ಲಿ ಸಮರ್ಥರಾಗಿ ಯೂ ಇರುವ ನಪುಂಸಕರೂ,ಸ್ತ್ರೀಯರೂ ಅಂತಃಪುರದ್ವಾರದಲ್ಲಿ ನಿಂತು,ಎಂದಿ ನಂತೆರಾಜಾಜ್ಞೆಯನ್ನು ನಿರೀಕ್ಷಿಸುತ್ತ ಕಾದಿದ್ದರು. ಸ್ನಾನವಿಧಿಗಳನ್ನು ಚೆನ್ನಾಗಿ ತಿಳಿದವರಾದ ಭೃತ್ಯರು ಸಕಾಲಕ್ಕೆ ಸರಿಯಾಗಿ ವಿಧಿಯನ್ನನುಸರಿಸಿ ಸುವರ್ಣ ಕುಂಭಗಳಲ್ಲಿ ರಾಜನ ಸ್ನಾನಾರ್ಥವಾಗಿ ಗಂಧೋದಕವನ್ನು ತಂದು ನಿಂತಿದ್ದ ರು.ಕುಮಾರವಯಸ್ಸುಳ್ಳ ಮತ್ತೆ ಕೆಲವುಸ್ತ್ರೀಯರು ಎಣ್ಣೆ ಮೊದಲಾದ ಮಂಗ ಳಾನುಲೇಪನಗಳನ್ನು ಹಿಡಿದುನಿಂತಿದ್ದರು. ಮತ್ತೆ ಕೆಲವರು ಪ್ರಾತಃಕಾಲ ದಲ್ಲಿ ರಾಜದರ್ಶನಕ್ಕಾಗಿ ಬೇಕಾದ,ಗೋವು,ಕನ್ನಡಿ ಮುಂತಾದ ವಸ್ತುಗಳನ್ನು ಸಿದ್ಧಪಡಿಸಿದ್ದರು. ಹಲ್ಲುಜ್ಜಿದಮೇಲೆ ಬಾಯಿಯ ಶುದ್ಧಿಗಾಗಿ ಪ್ರಾತಃ ಕಾಲದಲ್ಲಿ ಅಗಿದುಗುಳಬೇಕಾದ ಪದಾರ್ಥಗಳನ್ನು ತಂದು ಕೆಲವರು ನಿಂ ತಿದ್ದರು. ಮತ್ತೆ ಕೆಲವುಕನ್ನೆಯರು ರಾಜನ ಅಲಂಕಾರಕ್ಕೆ ಬೇಕಾದ ವಸ್ತ್ರಾ ಭರಣಾದಿಗಳನ್ನು ಹಿಡಿದುನಿಂತಿದ್ದರು. ಸರ್ವಲಕ್ಷಣಸಂಪನ್ನವಾದ ಆವಸ್ತ್ರ ಸಮೂಹದಿಂದ ಅರಮನೆಯಬಾಗಿಲು ಅತ್ಯಂತ ಕಾಂತಿಯುಕ್ತವಾಗಿ ಪ್ರಕಾಶಿ ಸುತಿತ್ತು. ರಾಜನಿಗೆ ಪ್ರಾತಃಕಾಲದಲ್ಲಿ ಮಂಗಳಾರ್ಥವಾಗಿ ತಂದಿಡತಕ್ಕ ವ ಸ್ತುಗಳೆಲ್ಲವೂ ಆಯಾಲಕ್ಷಣಗಳೊಡನೆ ಶಾಸ್ತ್ರೋಕ್ತವಾಗಿ ತಂದಿಡಲ್ಪಟ್ಟಿದ್ದು ವು. ಸಮಸ್ತವಸ್ತುಗಳೂ ಅವುಗಳ ಸ್ವರೂಪಕ್ಕೆ ತಕ್ಕಂತೆ ಪರಿಷ್ಕರಿಸಲ್ಪ ಟ್ಟುದಾಗಿ, ಗುಣವುಳ್ಳುದಾಗಿ ಪ್ರಕಾಶಿಸುತಿದ್ದುವು. ಅಲ್ಲಿದ್ದ ಪರಿಜನ ರೆಲ್ಲರೂ ರಾಜನನ್ನು ಎಚ್ಚರಗೊಳಿಸುವುದಕ್ಕಾಗಿ ಸೂರ್ಯೋದಯವಾ ಗುವವರೆಗೂ ತಡೆಯಲಾರದೆ ಆತುರಗೊಂಡಿದ್ದರು. ಹೀಗಿರುವಾಗ ಸೂರ್ಯೋದಯವಾದಮೇಲೆಯೂ ರಾಜನು ಎದ್ದು ಹೊರಗೆ ಬಾರ ದಿರುವುದನ್ನು ನೋಡಿ ಅಲ್ಲಿದ್ದವರೆಲ್ಲರಿಗೂ ಶಂಕೆಯುಂಟಾಯಿತು. ಇಷ್ಟ ರಲ್ಲಿ ಕೆಲವು ಅಂತಃಪುರಸ್ತ್ರೀಯರು ರಾಜನು ಮಲಗಿದ್ದ ಹಾಸಿಗೆಯ

44

ಬಳಿಗೆ ಬಂದು, ರಾಜನನ್ನು ತಟ್ಟಿ ಮೃದುವಾಕ್ಯಗಳಿಂದ ಎಬ್ಬಿಸಲಾರಂಭಿಸಿದರು. ಕಾಲೋಚಿತವಾಗಿ ಆ ಸ್ತ್ರೀಯರು ವಿನಯದಿಂದಲೂ ಯುಕ್ತಿವಾಕ್ಯಗಳಿಂದಲೂ ಮಾತಾಡಿಸುತ್ತ ಅನೇಕವಿಧದಲ್ಲಿ ಆತನನ್ನು ಎಚ್ಚರಗೊಳಿಸುತಿದ್ದರೂ, ಆತನಿಂದ ಯಾವ ಪ್ರತ್ಯುತ್ತರವನ್ನೂ ಪಡೆಯಲಿಲ್ಲ. ಸಮೀಪದಲ್ಲಿ ಕುಳಿತು ನೋಡುತಿದ್ದರೂ ಆತನಲ್ಲಿ ನಿದ್ರೆಯ ಲಕ್ಷಣಗಳೊಂದೂಕಾಣಲಿಲ್ಲ. ಆಮೇಲೆ ಆ ಸ್ತ್ರೀಯರೂ ಶಂಕಿತರಾಗಿ, ನಿದ್ರಾವಸ್ಥೆಯಲ್ಲಿರಬೇಕಾದ ಲಕ್ಷಣವನ್ನು ಚೆನ್ನಾಗಿ ಬಲ್ಲವರಾಗಿದ್ದುದರಿಂದ, ಆ ಲಕ್ಷಣವನ್ನು ಪರೀಕ್ಷಿಸುವುದಕ್ಕಾರಂಭಿಸಿದರು. ಆತನಲ್ಲಿ ಕೈಕಾಲುಗಳ ಚಲನೆಯಾಗಲಿ, ಉಚ್ಛ್ವಾಸನಿಶ್ವಾಸಗಳಾಗಲಿ, ಇತರ ಯಾವಚೇಷ್ಟೆಗಳಾಗಲಿ ಕಂಡುಬರಲಿಲ್ಲ.ಆಗ ಆ ಸ್ತ್ರೀಯರೆಲ್ಲರೂ ಬೆಚ್ಚರಬಿದ್ದರು.ರಾಜನು ಬದುಕಿರುವನೋ ಇಲ್ಲವೋ,ಎಂಬ ಶಂಕೆಯು ಆಗಲೇಅವರಮನಸ್ಸಿನಲ್ಲಿ ಅಂಕುರಿಸಿತು.ಅವರ ಮೈಯೆಲ್ಲವೂ ನಡುಗಲಾರಂಭಿಸಿತು.ಪ್ರವಾಹಕ್ಕೆ ಇದಿರಾಗಿನಿಂತಿರುವ ಜೊಂಡುಹುಲ್ಲಿನಂತೆ ಅವರೆಲ್ಲರ ದೇಹವೂ ಗಡಗಡನೆ ನಡುಗುತಿತ್ತು.ಅವರಲ್ಲಿ ಕೆಲವರು ಧೈರ್ಯತಂದುಕೊಂಡು ರಾಜನದೇಹವನ್ನು ಇನ್ನೂ ಚೆನ್ನಾಗಿ ಪರೀಕ್ಷಿಸಿನೋಡಿದಮೇಲೆ,ಅವರು ಮೊದಲು ಎಣಿಸಿದ್ದ ಶಂಕೆಯೇ ನಿಜವಾಗಿರಬಹುದೆಂದು ತೋರಿತು. ಕೌಸಲ್ಯಾಸುಮಿತ್ರೆಯರಿಬ್ಬರೂ ಅತ್ತಲಾಗಿ ಪುತ್ರಶೋಕದಿಂದ ಬಹಳ ಬಳಲಿದ್ದುದರಿಂದ, ದೇಹದಮೇಲೆ ಪ್ರಜ್ಞೆಯಿಲ್ಲದೆ ಸತ್ತವರಂತೆ ಒಂದುಕಡೆಯಲ್ಲಿ ಮಲಗಿಬಿಟ್ಟಿದ್ದರು. ಬಹಳಹೊತ್ತಿನವರೆಗೆ ಅವರಿಗೆ ಎಚ್ಚರವೇಆಗಲಿಲ್ಲ. ಅವರಲ್ಲಿ ಕೌಸಲ್ಯೆಯು ಬಣ್ಣಗುಂದಿ ಬಾಡಿದಮುಖವುಳ್ಳವಳಾಗಿ, ವ್ಯಸನದಿಂದ ಬೆಂದು ಕೃಶಳಾಗಿ ಉತ್ಪಾತಸೂಚಕವಾದ ಧೂಮಕೇತುವಿನಿಂದ ಮುಚ್ಚಲ್ಪಟ್ಟ ನಕ್ಷತ್ರದಂತೆ ಕಾಣುತಿದ್ದಳು. ಇತ್ತಲಾಗಿ ಮೃತನಾದ ದಶರಥನು ಕಳೆಗುಂದಿ ಕಾಂತಿಹೀನನಾಗಿ ಮಲಗಿದ್ದುದು ಹಾಗಿರಲಿ!ಅವನಿಗಿಂತಲೂ ಕೌಸಲ್ಯೆಯೂ ಅವಳಿಗಿಂತಹೆಚ್ಚಾಗಿ ಸುಮಿತ್ರೆಯೂ ಕಾಂತಿಹೀನರಾಗಿ, ಕಣ್ಣೀರಿನಿಂದ ಕದಲಿದ ಮುಖವುಳ್ಳವರಾಗಿ ಇದ್ದರು. ಹೀಗೆ ಶಕ್ತಿಗುಂದಿ ಮಲಗಿದ್ದ ಕೌಸಲ್ಯಾಸುಮಿತ್ರೆಯರನ್ನೂ, ಇತ್ತಲಾಗಿ ಮೃತನಾಗಿರುವ ದಶರಥನನ್ನೂ ನೋಡಿ, ಅಂತಃಪುರಸ್ತ್ರೀಯರೆಲ್ಲರೂ ಗೋಳಾಡಲಾರಂಭಿಸಿದರು. ಆ ಸ್ತ್ರೀಯರೆಲ್ಲರೂ ಕಾಡಿನಲ್ಲಿ ಸಲಗನನ್ನು ಕಳೆದುಕೊಂಡ

ಹೆಣ್ಣಾನೆಗಳ ಹಿಂಡಿನಂತೆ,ಉಚ್ಚ ಸ್ವರದಿಂದ ಒಬ್ಬರನ್ನೊಬ್ಬರು ನೋಡಿ ಪ್ರಲಾಪಿಸುತ್ತಿರಲು, ಇವರ ದೊಡ್ಡ ಆಕ್ರಂದನಧ್ವನಿಯನ್ನು ಕೇಳಿ ಕೌಸಲ್ಯಾ ಸುಮಿತ್ರೆಯರಿಗೆ ಎಚ್ಚರವುಂಟಾಗಿ, ಅವರಿಬ್ಬರೂ ಬೆಚ್ಚರಗೊಂಡು ಮುಂದೆ ಬಂದು ರಾಜನನ್ನು ಮುಟ್ಟಿನೋಡಿ, ಆತನು ಮೃತನಾದನೆಂದು ತಿಳಿದು"ಹಾ ನಾಥಾ" ಎಂದು ಕೂಗಿಡುತ್ತಾ ಮೂರ್ಛೆಹೊಂದಿ ನೆಲದಮೇಲೆ ಬಿದ್ದರು. ಆಗ ಕೌಸಲ್ಯೆಯು ಅರ್ಧಪ್ರಾಣದಿಂದ ನರಳುವಂತೆ ನೆಲದಮೇಲೆ ಬಿದ್ದು ಹೊರಳುತ್ತ, ಆಕಾಶದಿಂದ ಜಾರಿಬಿದ್ದು ಮಣ್ಣಿನಿಂದ ಮಲಿನವಾದ ನಕ್ಷತ್ರದಂತೆ ಕಾಣುತಿದ್ದಳು. ದಶರಥನ ದೇಹದಲ್ಲಿ ಉಷ್ಣಾದಿಗುಣಗಳೆಲ್ಲವೂ ಕೆಟ್ಟು ಆತನು ಸತ್ತುಬಿದ್ದಿರುವುದನ್ನು ನೋಡಿ, ಆಕೆಯು ಮೂರ್ಛೆಹೊಂದಿ ಬಿದ್ದಾಗ, ಶಸ್ತ್ರಹತವಾಗಿ ನೆಲದಮೇಲೆ ಸತ್ತು ಬಿದ್ದಿರುವ ಹೆಣ್ಣಾನೆಯಂತೆ ಕಾಣುತಿದ್ದಳು. ಈ ಅತ್ಯಾಹಿತಗಳನ್ನು ನೋಡಿ ಕೈಕೇಯಿಯೇ ಮೊದಲಾದ ಇತರರಾಜಸ್ತ್ರೀಯರೆಲ್ಲರೂ ದುಃಖದಿಂದ ಗೋಳಿಡುತ್ತಾ,ಪ್ರಜ್ಞೆತಪ್ಪಿಬಿದ್ದರು. ಹೀಗೆ ಅಂತಃಪುರಸ್ತ್ರೀಯರೆಲ್ಲರೂ ಉಚ್ಚಸ್ವರದಿಂದ ಆಕ್ರಂದಿಸುತ್ತಿರಲು, ಆ ಆಕ್ರೋಶಧ್ವನಿಗಳೆಲ್ಲವೂ ಒಟ್ಟುಗೂಡಿ ಆ ಅರಮನೆಯಲ್ಲಿ ದೊಡ್ಡ ಪ್ರತಿಧ್ವನಿಯನ್ನುಂಟುಮಾಡಿತು. ರಾಜಾಸ್ಥಾನವೆಲ್ಲವೂ ಕೇವಲ ಪ್ರಲಾಪಧ್ವನಿಯಿಂದಲೇ ತುಂಬಿಹೋಯಿತು. ಆಗ ಆ ಅರಮನೆಯ ದುಸ್ಥಿತಿಯನ್ನು ಹೇಳತಕ್ಕುದೇನು? ಮೊದಲು ಎಷ್ಟೋ ಉತ್ಸಾಹದಿಂದ ಅಲ್ಲಿಗಲ್ಲಿಗೆ ಸಂಚರಿಸುತಿದ್ದ ಜನಸಮೂಹದಿಂದ ನಿಬಿಡವಾಗಿದ್ದ ಆ ರಾಜಾಸ್ಥಾನದಲ್ಲಿ, ದಶರಥನಮರಣವಾರ್ತೆಯನ್ನು ಕೇಳಿದೊಡನೆಯೇ ಎಲ್ಲರೂ ಬೆಚ್ಚಿಬಿದ್ದು ತತ್ತಳಿಸುತ್ತ ಅಲ್ಲಲ್ಲಿ ಸ್ತಬ್ಧರಾಗಿ ನಿಂತಿದ್ದರು. ನಾಲ್ಕುಕಡೆಗಳಿಂದಲೂ ರೋದನಧ್ವನಿಗಳು ಹೊರಡುತಿದ್ದುವು.ಬಂಧುವರ್ಗಗಳೆಲ್ಲವೂ ವ್ಯಸನದಿಂದ ತತ್ತಳಿಸುತ್ತಿದ್ದುವು ಸಂತೋಷಚಿಹ್ನವೆಂಬುದು ಸ್ವಲ್ಪವೂ ಇರಲಿಲ್ಲ. ಯಾರನ್ನುನೋಡಿದರೂ ದೈನ್ಯದಿಂದ ಕಳೆಗುಂದಿರುವರಾಗಿದ್ದರು. ಯಶಸ್ವಿಯಾದ ದಶರಥನು ಮೃತಿಹೊಂದಿದುದನ್ನು ತಿಳಿದೊಡನೆಯೇ, ಆತನ ಪತ್ನಿಯರೆಲ್ಲರೂ ಅವನ ಹಾಸಿಗೆಯನ್ನು ಸುತ್ತಿಕುಳಿತು,ಒಬ್ಬರನ್ನೊಬ್ಬರುಕಟ್ಟಿಕೊಂಡುದಿಕ್ಕಿಲ್ಲದವರಂತೆಬಹುದೀನಧ್ವನಿಯಿಂದ ಗೋಳಿಡುತ್ತಿದ್ದರು. ಇಲ್ಲಿಗೆ ಅರುವತ್ತೈದನೆಯಸರ್ಗವು.

---

ಕೌಸಲ್ಯೆಯ ಪ್ರಲಾಪವು. ದಶರಥನ ದೇಹವನ್ನು ತೈಲ ದ್ರೋಣಿಯಲ್ಲಿಟ್ಟುದು. ರಾಜಸ್ತ್ರೀಯರ ದುಃಖ ವು. ಪುರಸಂಕ್ಷೋಭವು.

ಆರಿದ ಬೆಂಕಿಯಂತೆಯೂ,ನೀರಿಲ್ಲದ ಸಮುದ್ರದಂತೆಯೂ,ಕಾಂತಿಯಿಲ್ಲದ ಸೂರ್ಯನಂತೆಯೂ ಸತ್ತುಬಿದ್ದಿರುವ ದಶರಥನನ್ನು ನೋಡಿ, ಕೌಸಲ್ಯೆಯು ಕಣ್ಣೀರುತುಂಬಿಕೊಂಡು ಸಂಕಟದಿಂದ ಕುಗ್ಗಿದವಳಾಗಿ, ದಶರಥನ ತಲೆಯನ್ನು ತನ್ನ ತೊಡೆಯಮೇಲಿರಿಸಿಕೊಂಡು, ಕೈಕೇಯಿಯನ್ನು ನೋಡಿ "ಎಲೆ ಕೈಕೇಯಿ! ನಿನ್ನ ಕೋರಿಕೆಯು ಕೈಗೂಡಿತೇ? ಇನ್ನು ನೀನೇ ನಿಷ್ಕಂಟಕವಾಗಿ ರಾಜ್ಯವಾಳು. ಒಂದೇ ಹಟದಿಂದ ನಿನ್ನ ಪ್ರತಿಜ್ಞೆಯನ್ನು ಸಾಧಿಸಿದೆ. ಇನ್ನು ನಿನಗೆ ರಾಜನ ತೊಂದರೆಯೂ ತಪ್ಪಿತು. ಎಲೆ ಘಾತುಕಿ! ಎಲೆ ದುಷ್ಟೆ! ರಾಜನೂ ಸತ್ತನು! ರಾಮನೂ ಕಾಡುಪಾಲಾಗಿ ಹೊರಟುಹೋದನಲ್ಲವೆ! ನಿಷ್ಕಂಟಕವಾದ ರಾಜ್ಯವನ್ನು ನೀನೊಬ್ಬಳೇ ನೆಮ್ಮದಿಯಿಂದ ಅನುಭವಿಸಬಹುದು. ನನ್ನ ಮಗನೂ ನನ್ನನ್ನು ತೊರೆದು ಕಾಡಿಗೆ ಹೋದನು. ನನ್ನಗಂಡನೂ ಸ್ವರ್ಗಸ್ಥನಾದನು. ಕಾಡುದಾರಿಯಲ್ಲಿ ಸಂಗಡಿಗರನ್ನು ತಪ್ಪಿಸಿಕೊಂಡು ಬಂದವರಂತೆ ದಿಕ್ಕೆಟ್ಟ ನಾನು ಇನ್ನು ಹೇಗೆ ತಾನೇ ಬದುಕಿರಬಲ್ಲೆನು? ಧರ್ಮಭ್ರಷ್ಟಳಾದ ನೀನೊಬ್ಬಳುಹೊರತು ಲೋಕದಲ್ಲಿ ಬೇರೆಯಾವ ಸ್ತ್ರೀಯುತಾನೆ ತನಗೆ ಪರದೈವದಂತಿರುವ ಪತಿಯನ್ನು ಬಿಟ್ಟು ಬದುಕಬೇಕೆಂದು ಅಪೇಕ್ಷಿಸುವಳು? ಪರಮಲೋಭಿಯಾದವನು ಹಣದಾಸೆಯಿಂದ, ಮುಂದೆ ಸಂಭವಿಸಬಹುದಾದ ದೋಷಗಳನ್ನೂ ತಿಳಿಯದೆ,ವಿಷಮಿಶ್ರವಾದ ಪಾಕವನ್ನು ಭುಜಿಸುವನಲ್ಲವೆ? ಹಾಗೆಯೇ ಆ ಗೂನಿಯ ಮಾತಿಗಾಗಿ ನೀನು ರಘುಕುಲವನ್ನೇ ಕೆಡಿಸಿಬಿಟ್ಟೆಯಲ್ಲಾ!ಎಲೆದುಷ್ಟೆ!ನಿನ್ನಮಾತಿಗಾಗಿ ಮಾಡಬಾರದ ಕಾರ್ಯಕ್ಕೆ ಪ್ರಯತ್ನಿಸಿದ ಈ ದಶರಥನು, ರಾಮನನ್ನು ಆತನ ಪತ್ನಿಯೊಡನೆ ಕಾಡಿಗೆ ಕಳುಹಿಸಿದ ವಿಷಯವನ್ನು ಜನಕನು ಕೇಳಿದರೆ, ನನ್ನಂತೆಯೇ ಆತನೂ ಪರಿತಪಿಸುವನಲ್ಲಾ!ಅಯ್ಯೋ![1] ನನ್ನ ಹೊಟ್ಟೆಯಲ್ಲಿ ಹುಟ್ಟಿದ

1 ಇಲ್ಲಿ "ಸಮಾಮನಾಥಾಂವಿಧವಾಂನಾದ್ಯ ಜಾನಾತಿಧಾರ್ಮಿಕಃ । ರಾಮಃ ಕಮಲಪತ್ರಾಕ್ಷೋಜೀವನಾಶಮಿತೋಗತಃ"ಎಂಬ ಮೂಲಾನುಸಾರವಾದ ಅರ್ಥವು ಮೇಲೆ ಸೂಚಿಸಲ್ಪಟ್ಟಿರುವುದು. "ಜೀವನಾಶಮಿತೋಗತಃ" ಎಂಬ ಪಾಠಾಂತರವೂ ಉಂಟು. ಆ

ಮುದ್ದುಮಗನಾದ ರಾಮನು ಈಗ ಬದುಕಿದ್ದರೂ ನನ್ನ ಭಾಗಕ್ಕೆ ಅತನು ಸತ್ತಂತೆಯೇ ಮಾಡಿದೆಯಲ್ಲವೆ ? ಇಲ್ಲಿ ಗಂಡನನ್ನು ಕಳೆದುಕೊಂಡು ದಿಕ್ಕಿಲ್ಲದೆ ಸಂಕಟಪಡುತ್ತಿರುವ ನನ್ನ ದುರವಸ್ಥೆಯನ್ನು ಅತನು ತಿಳಿಯನಲ್ಲಾ!ಧಾರ್ಮಿಕನಾಗಿಯೂ ಕಮಲದಳದಂತೆ ಕಣ್ಣುಳ್ಳವನಾಗಿಯೂ ಇರುವ ಆ ರಾಮನು, ಈಗ ನನ್ನ ಭಾಗಕ್ಕೆ ಇಲ್ಲದೆಯೇಹೋದನು! ಹುಟ್ಟಿದುದು ಮೊದಲು ದುಃಖವೆಂಬುದನ್ನೇ ಕಂಡರಿಯದ ವಿದೇಹರಾಜನ ಮಗಳಾದ ಆ ಸೀತೆಯು ಈಗ ಅರಣ್ಯದಲ್ಲಿ ಎಷ್ಟು ದುಃಖವನ್ನನುಭವಿಸುವಳೊ? ಎಷ್ಟುಭಯದಿಂದ ತತ್ತಳಿಸುವಳೋ? ಆಕೆಯು ರಾತ್ರಿಯಲ್ಲಿ ಕರ್ಣಕಠೋರವಾಗಿ ಕೂಗುತ್ತಿರುವ ಮೃಗಗಳ ಗರ್ಜನೆಗಳನ್ನೂ, ಪಕ್ಷಿಗಳ ಕೂಗುಗಳನ್ನೂ ಕೇಳಿ ಹೇಗೆತಾನೇ ಭಯಪಡದಿರುವಳು? ಆಕೆಯು ಇವುಗಳಿಗೆ ಭಯಪಟ್ಟಾಗ ತಟ್ಟನೆ ಬಂದು ರಾಮನನ್ನು ಕಟ್ಟಿಕೊಳ್ಳುವಳು! ಇದರಲ್ಲಿ ಸಂದೇಹವಿಲ್ಲ. ವೃದ್ಧನಾಗಿ ಈ ಸೀತೆಯೊಬ್ಬಳಲ್ಲಿಯೇ ಸಂತಾನದ ಆಸೆಯನ್ನು ಇರಿಸಿಕೊಂಡಿದ್ದ ಜನಕರಾಜನು, ಈಗ ಸೀತೆಗೆ ಉಂಟಾಗಿರುವ ದುರವಸ್ಥೆಯನ್ನು ಕೇಳಿ ಪರೆ ವ್ಯಸನವನ್ನು ತಡೆಯಲಾರದೆ ಪ್ರಾಣವನ್ನೇ ಬಿಟ್ಟುಬಿಡುವನು. ಇನ್ನು ದುಃಖಿಸಿ ಪ್ರಯೋಜನವೇನು? ನಾನು ಈಗ ಪತಿಯ ಶರೀರವನ್ನೇ ಅಪ್ಪಿಕೊಂಡು ಅಗ್ನಿಪ್ರವೇಶವನ್ನು ಮಾಡಿಬಿಡುವೆನು. ನನ್ನಪಾತಿವ್ರತ್ಯವನ್ನಾದರೂ ಕಾಪಾಡಿಕೊಳ್ಳುವೆನು"ಎಂದು ನಾನಾವಿಧದಲ್ಲಿ ಪ್ರಲಾಪಿಸುತ್ತಿದ್ದಳು. ಆಗ[1] ರಾಜ್ಯವ್ಯವಹಾರಗಳನ್ನು ಚೆನ್ನಾಗಿ ಬಲ್ಲ ಮಂತ್ರಿಗಳು ಕೌಸಲ್ಯೆಯ ಸಮೀಪಕ್ಕೆ ಬಂದು, ಅಲ್ಲಿ ಪತಿಯ ದೇಹವನ್ನು ಬಲವಾಗಿ ಅಪ್ಪಿಕೊಂಡು ಪ್ರಲಾಪಿಸುತ್ತಿರುವ ಆಕೆಯನ್ನು ಸಮಾಧಾನಪಡಿಸಿದರು. ಆಮೇಲೆ ಆ ಮಂತ್ರಿಗಳೆಲ್ಲರೂ ಕಲೆತು ಆಲೋಚಿಸಿ, ದಶರಥನದೇಹವನ್ನು ಎಣ್ಣೆಯ

---

ಪಾಠದಲ್ಲಿ "ಧಾರ್ಮಿಕನಾದ ರಾಮನು ಇಲ್ಲಿಲ್ಲದುದರಿಂದ ಈಗ ಇಲ್ಲಿ ನಡೆದ ರಾಜನಸಾವನ್ನೂ, ನಾನುವಿಧವೆಯಾಗಿ ದಿಕ್ಕಿಲ್ಲದಿರುವುದನ್ನೂ ಅವನು ಕಾಣನು"ಎಂದು ಅರ್ಥಾಂತರವನ್ನು ತೇಳಿಕೊಳ್ಳಬೇಕು.

1 ಇಲ್ಲಿ "ವ್ಯಾವಹಾರಿಕಾಃ" ಎಂಬುದಕ್ಕೆ ಅಂತಃಪುರಾಧ್ಯಕ್ಷರಾದ ಸ್ತ್ರೀಯರೆಂದು ಮಹೇಶ್ವರ ತೀರ್ಥವ್ಯಾಖ್ಯಾನವು.

ಕೊಪ್ಪರಿಗೆಯಲ್ಲಿ ಇಡುವಂತೆ ಆಜ್ಞಾಪಿಸಿ,ನಡೆಯಬೇಕಾದ ಮುಂದಿನ ಕೆಲಸವನ್ನು ನೋಡುತ್ತಿದ್ದರು. ಆ ಮಂತ್ರಿಗಳು ಸಮಸ್ತಧರ್ಮಗಳನ್ನೂ ತಿಳಿದವರಾದುದರಿಂದ, ಪುತ್ರನಿಲ್ಲದೆ ಆ ದಶರಥನಿಗೆ ಅಪರಸಂಸ್ಕಾರಗಳನ್ನು ನಡೆಸಬಾರದೆಂದೆಣಿಸಿ, ಆತನ ದೇಹವು ಕೆಡದಂತೆ ಅನೇಕಸಂಸ್ಕಾರಗಳನ್ನು ಮಾಡಿ ರಕ್ಷಿಸಿಟ್ಟರು. ಹೀಗೆ ತೈಲದ್ರೋಣಿಯಲ್ಲಿಟ್ಟ ದಶರಥನ ದೇಹವನ್ನು ನೋಡಿ, ಅಲ್ಲಿದ್ದ ಅಂತಃಪುರಸ್ತ್ರೀಯರಿಗೆ ದುಃಖವು ಪುನಃ ಮರುಕೊಳಿಸಲು ಪ್ರಲಾಪಿಸತೊಡಗಿದರು. ಅವರೆಲ್ಲರೂ ಬಹಳದುಃಖಿತರಾಗಿ ಕೈಗಳನ್ನೆತ್ತಿ ಕಣ್ಣೀರುತುಂಬಿಕೊಂಡು ಕರ್ಣಕಠೋರವಾಗಿರುವಂತೆ "ಹಾ ಮಹಾರಾಜನೇ! ಸತ್ಯಸಂಧನಾಗಿಯೂ, ಪ್ರಿಯವಾದಿಯಾಗಿಯೂ ಇರುವ ರಾಮನಂತೂ ನಮ್ಮನ್ನು ಮೊದಲೇ ತೊರೆದು ಹೋದನು. ಅನಾಥರಾದ ನಮ್ಮನ್ನು ನೀನೂ ಬಿಟ್ಟುಹೋಗಬಹುದೆ? ನೀವಿಬ್ಬರೂ ನಮ್ಮನ್ನು ಬಿಟ್ಟುಹೋದ ಮೇಲೆ ನಮಗೆ ಇನ್ನು ಗತಿಯಾರು? ದುಷ್ಟೆಯಾಗಿಯೂ, ಪತಿಘಾತುಕಿಯಾಗಿಯೂ ಇರುವ ಈ ಕೈಕೇಯಿಯ ಕೈಕೆಳಗೆ ಸಿಕ್ಕಿಕೊಂಡು ನಾವು ಬದುಕುವಬಗೆಹೇಗೆ?ನಿನಗೂ ನಮಗೂ ಪ್ರಭುವಾದ ಆ ರಾಮನಂತೂ ರಾಜ್ಯಲಕ್ಷ್ಮಿಯನ್ನು ಬಿಟ್ಟು ಕಾಡಿಗೆ ಹೊರಟುಹೋದನು. ನಮ್ಮೆಲ್ಲರಿಗೂ ಒಂದೇ ದಿಕ್ಕಾಗಿಯೂ ಶ್ರೀಮಂತನಾಗಿಯೂ ಇರುವ ಆ ರಾಮನೇ ನಮ್ಮನ್ನು ಬಿಟ್ಟುಹೋದಮೇಲೆ ನಾವು ಇನ್ನು ಹೇಗೆ ಬದುಕಬಲ್ಲೆವು. ನಿಮ್ಮಿಬ್ಬರ ಅಗಲಿಕೆಯಿಂದ ಮೊದಲೇ ಶಕ್ತಿಗುಂದಿದ ನಾವು ಇತ್ತಲಾಗಿ ರಾಜ್ಯಾಧಿಕಾರಮದದಿಂದ ಕೊಬ್ಬಿ ತಿರಸ್ಕಾರವಾಕ್ಯಗಳನ್ನಾಡುವ ಆ ಕೈಕೇಯಿಯ ಮಾತುಗಳನ್ನು ಕೇಳಿ ಹೇಗೆ ಸಹಿಸಿಕೊಂಡಿರಬಲ್ಲೆವು. ಅಯ್ಯೋ! ಆ ಕೈಕೇಯಿಯು ಪತಿಯನ್ನೇ ಕೊಂದ ಪರಮಪಾಪಿನಿಯಲ್ಲವೆ? ಮುದ್ದುಮಗನಾದ ರಾಮನನ್ನೂ, ಬಲಾಢ್ಯನಾದ ಲಕ್ಷ್ಮಣನನ್ನೂ,ಸುಕುಮಾರಿಯಾದ ಸೀತೆಯನ್ನೂ ಕಾಡಿಗೆ ಕಳುಹಿಸಿದ ಆ ಮಹಾಪಾಪಿನಿಯು ಇನ್ನು ಯಾರನ್ನು ತಾನೇ ತೊರೆದುಬಿಡುವುದಕ್ಕೆಹಿಂಜರಿಯುವಳು?" ಎಂದು ಪ್ರಲಾಪಿಸತಿದ್ದರು.ಹೀಗೆ ಅಂತಃಪುರದಲ್ಲಿದ್ದ ಸ್ತ್ರೀಯರೆಲ್ಲರೂ ದುಃಖದಿಂದ ಕಣ್ಣೀರುಬಿಡುತ್ತ ನೆಲದಮೇಲೆ ಬಿದ್ದು ಹೊರಳಾಡುತ್ತಿರಲು, ಚಂದ್ರನಿಲ್ಲದ ರಾತ್ರಿಯಂತೆಯೂ, ಗಂಡನಿಲ್ಲದ ಹೆಂಗಸಿನಂತೆಯೂ, ದಶರಥನಿಲ್ಲದ ಆ ಅಯೋಧ್ಯೆಯು ಕೇವಲಕಾಂತಿ

ಹೀನವಾಗಿತ್ತು. ಅಲ್ಲಿ ಪ್ರತಿಯೊಬ ರೂ ಕಣ್ಣೀರುಬಿಡುತ್ತಿದ್ದರು. ಹೆಂಗಸರೆಲ್ಲರೂ ಹಾಹಾಕಾರವನ್ನು ಮಾಡುತ್ತಿದ್ದರು.ಆ ಪಟ್ಟಣದ ಪ್ರತಿಯೊಂದು ಮನೆಯೂ ಸಂಮ್ಮಾರ್ಜನಾದಿಸಂಸ್ಕಾರಗಳೊಂದೂ ಇಲ್ಲದೆ ಇದ್ದುದರಿಂದ, ಹಾಳುಬಿದ್ದ ನಿವೇಶನಗಳಂತೆ ಕಾಣುತಿದ್ದುವು. ರಾಮನ ವನಪ್ರಯಾಣಕಾಲದಲ್ಲಿದ್ದಂತೆಯೇ ಪಟ್ಟಣವೆಲ್ಲವೂ ವ್ಯಾಕುಲವಾಗಿತ್ತು. ಹೀಗೆ ರಾಜನು ಪುತ್ರಶೋಕದಿಂದ ಸ್ವರ್ಗಸ್ಥನಾಗಲು,ರಾಜಭಾರ್ಯೆಯರೆಲ್ಲರೂ ಪತಿವಿಯೋಗದಿಂದ ನೆಲದಮೇಲೆ ಉರುಳಿ ಗೋಳಿಡುತ್ತಿರಲು, ಈ ದುಃಖವನ್ನು ನೋಡಿ ಸಹಿಸಲಾರದವನಂತೆ ಸೂರ್ಯನೂ ಕಾಂತಿಹೀನನಾಗಿ ಅಸ್ತಮಿಸಿದನು. ರಾತ್ರಿಯೂ ಸಮೀಪಿಸಿತು. ಸುತ್ತಲೂ ಕತ್ತಲೆಯು ಆವರಿಸಿತು. ರಾಜನ ಬಂಧುಮಿತ್ರರೆಲ್ಲರೂಪುತ್ರನಿಲ್ಲದೆ ದಶರಥನಿಗೆ ಅಪರಸಂಸ್ಕಾರಗಳನ್ನು ಮಾಡಕೂಡದೆಂದು ನಿಶ್ಚಯಿಸಿ,ಆ ಮೃತದೇಹವನ್ನು ತೈಲದ್ರೋಣಿಯಲ್ಲಿಯೇ ಇರಿಸಿದ್ದರು. ಸೂರ್ಯಕಾಂತಿಯಿಲ್ಲದ ಆಕಾಶದಂತೆಯೂ, ನಕ್ಷತ್ರಗಳಿಲ್ಲದ ರಾತ್ರಿಯಂತೆಯೂ ಮಹಾತ್ಮನಾದ ದಶರಥನಿಲ್ಲದ ಆ ರಾತ್ರಿಯು ಕೇವಲಕಾಂತಿಹೀನವಾಗಿತ್ತು. ಆ ಪಟ್ಟಣದಲ್ಲಿ ರಾಜಮಾರ್ಗಗಳಲ್ಲಿಯೂ, ಚತುಷ್ಪಥಗಳಲ್ಲಿಯೂ ಜನರು ಗುಂಪುಗೂಡಿ ಕಣ್ಣೀರನ್ನು ಬಿಟ್ಟು ಅಳುತಿದ್ದರು. ಆ ಪಟ್ಟಣದ ಆಬಾಲವೃದ್ಧರೂ ಅಲ್ಲಲ್ಲಿ ಗುಂಪುಗುಂಪಾಗಿ ನಿಂತು ಕೈಕೇಯಿಯನ್ನು ಬಾಯಿಗೆ ಬಂದಹಾಗೆ ಬೈಯ್ಯುತ್ತಿದ್ದರು.ಆ ಪಟ್ಟಣದಲ್ಲಿ ಪ್ರತಿಯೊಬ್ಬರೂ ದುಃಖದಿಂದ ಕೊರಗುತಿದ್ದರು. ಯಾರ ಮನಸ್ಸಿನಲ್ಲಿಯೂ ಸಂತೋಷವಿರಲಿಲ್ಲ. ಇಲ್ಲಿಗೆ ಅರುವತ್ತಾರನೆಯಸರ್ಗವು.

---

{ ರಾಜ್ಯವು ಅರಾಜಕವಾಗಿರುವುದರಿಂದ ಉಂಟಾಗಬಹುದಾದ ದೋಷಗಳನ್ನು ತಿಳಿಸಿ ಮಾರ್ಕಂಡೇಯಾದಿಗಳು ವಸಿಷ್ಠರನ್ನು ಪ್ರಾರ್ಥಿಸಿದುದು. }

ಅಯೋಧ್ಯಾವಾಸಿಗಳೆಲ್ಲರೂ ದುಃಖದಿಂದ ಗೋಳಿಡುತ್ತ ಸಂತೋಷಶೂನ್ಯರಾಗಿ ಕಣ್ಣೀರುಬಿಟ್ಟು ಗದ್ಗದಸ್ವರದಿಂದ ಕೂಗಿಡುತ್ತಿರಲು, ಆ ರಾತ್ರಿಯು ಅವರಿಗೆ ಬಹುದೀರ್ಘಕಾಲದಂತೆ ಕಂಡು ಹೇಗೋ ಕಳೆಯಿತು. ರಾತ್ರಿಯು ಕಳೆದು ಸೂರ್ಯೋದಯವಾದಕೂಡಲೆ, ಅಭಿಷೇಕಕಾರ್ಯಗಳನ್ನು

ನಡೆಸತಕ್ಕ ಬ್ರಾಹ್ಮಣರೆಲ್ಲರೂ ಒಟ್ಟಾಗಿ ಸಭೆಗೂಡಿದರು. ಮಾರ್ಕಂಡೇಯನೂ, ಮೌದ್ಗಲ್ಯನೂ, ವಾಮದೇವನೂ, ಕಾಶ್ಯಪನೂ, ಕಾತ್ಯಾಯನನೂ, ಗೌತಮನೂ, ಮಹಾಯಶಸ್ವಿಯಾದ ಜಾಬಾಲಿ ಮುಂತಾದ ಇನ್ನೂ ಅನೇಕಬ್ರಾಹ್ಮಣೋತ್ತಮರೂ ಮಂತ್ರಿಗಳೊಡನೆ ಕಲೆತು, ಒಟ್ಟಾಗಿ ಸೇರಿಬಂದು, ರಾಜಪುರೋಹಿತನಾದ ವಸಿಷ್ಠನ ಮುಂದೆ ನಿಂತು ಬೇರೆಬೇರೆಯಾಗಿ ತಮತಮಗೆ ತೋರಿದಂತೆ ಮಾತುಗಳನ್ನು ಆಡತೊಡಗಿದರು "ಎಲೈ ಮಹಾತ್ಮನೇ! ನಮ್ಮ ದಶರಥರಾಜನಂತೂ ಪುತ್ರಶೋಕದಿಂದ ಸ್ವರ್ಗಸ್ಥನಾದನು. ಆ ದುಃಖದಲ್ಲಿ ಈ ಒಂದುರಾತ್ರಿಯನ್ನು ಕಳೆಯುವುದೇ ನೂರಾರು ವರುಷಗಳನ್ನು ಕಳೆಯುವಷ್ಟು ಕಷ್ಟವಾಯಿತು. ಇತ್ತಲಾಗಿ ಮಹಾರಾಜನೂ ಸ್ವರ್ಗಸ್ಥನಾದುದಲ್ಲದೆ ಅತ್ತಲಾಗಿ ರಾಮನೂ ಅರಣ್ಯಕ್ಕೆ ಹೊರಟುಹೋದನು. ತೇಜಸ್ವಿಯಾದ ಲಕ್ಷ್ಮಣನೂ ರಾಮನನ್ನೇ ಹಿಂಬಾಲಿಸಿ . ಕಾಡುಪಾಲಾಗಿ .ಹೊರಟುಹೋಗಿರುವನು. ಶತ್ರುನಾಶಕರಾದ ಭರತಶತ್ರುಘ್ನರೂ ಕೇಕಯದೇಶದಲ್ಲಿ ಸೇರಿ ಮಾವನಮನೆಯಲ್ಲಿರುವರು. ಈಗ ಇಕ್ಷ್ವಾಕುವಂಶದಲ್ಲಿ ಹುಟ್ಟಿದ ಯಾವನಾದರೂ ಒಬ್ಬನನ್ನು ರಾಜ್ಯಾಧಿಪತಿಯನ್ನಾಗಿ ಮಾಡಿಡಬೇಕು. ರಾಜನಿಲ್ಲದ ರಾಜ್ಯಕ್ಕೆ ಎಂದಾದರೂ ನಾಶವು ತಪ್ಪದು. ರಾಜ್ಯವು ಅರಾಜಕವಾಗಿದ್ದಪಕ್ಷದಲ್ಲಿ ಮೇಘವೂ ಕ್ರಮವಾಗಿ ವರ್ಷಿಸಲಾರದು. ಕಾಲಕಾಲಕ್ಕೆಸರಿಯಾಗಿ ಸುವೃಷ್ಟಿಯೂ ಬೀಳದು. ಅರಾಜಕವಾದ ರಾಜ್ಯದಲ್ಲಿ ಜನರು ಬೀಜಗಳನ್ನೇ ಬಿತ್ತಲಾರರು. ರಾಜ್ಯವು ಅರಾಜಕವಾದಮೇಲೆ ತಂದೆಗೆ ಮಕ್ಕಳು ವಿಧೇಯರಾಗಿರರು. ಗಂಡನಿಗೆ ಹೆಂಡತಿಯೂ ವಿಧೇಯಳಾಗಿರುವುದಿಲ್ಲ. ಅರಾಜಕವಾದ ರಾಜ್ಯದಲ್ಲಿ ಧನಸಮೃದ್ಧಿಯೂ ಕೆಡುವುದು. ಅವರವರು ತಮ್ಮ ಹೆಂಡಿರುಮಕ್ಕಳನ್ನು ಕಾಪಾಡಿಕೊಳ್ಳುವುದೇ ಅಸಾಧ್ಯವಾಗುವುದು. ಒಬ್ಬರಿಗೊಬ್ಬರು ಪರಸ್ಪರಬಾಂಧವ್ಯವನ್ನೂ ನೋಡುವುದಿಲ್ಲ. ಶಾಸ್ತ್ರೋಕ್ತವಾಗಿ ಕೈಹಿಡಿಯತಕ್ಕ ಕನ್ಯೆಯರೂ ಸಿಕ್ಕುವುದಿಲ್ಲ. ರಾಜ್ಯಕ್ಕೆರಾಜನಿಲ್ಲದಿದ್ದರೆ ಕ್ರಯವಿಕ್ರಯರೂಪವಾದ ವ್ಯವಹಾರಗಳಲ್ಲಿ ಯಾರೊಬ್ಬರೂ ಸತ್ಯದಿಂದ ನಡೆದುಕೊಳ್ಳಲಾರರು. ಇನ್ನೂ ಅನೇಕವಿಧವಾದ ಅನರ್ಥಗಳಿಗೆ ಕಾರಣವಾಗುವುದು. ಅರಾಜಕವಾದ ರಾಜ್ಯದಲ್ಲಿ ಜನಗಳಿಗೆ ಉತ್ಸಾಹವೆಂಬುದು ಸ್ವಲ್ಪವಾದರೂ ಇಲ್ಲದಿರುವುದರಿಂದ, ಸಭೆ ಮುಂತಾದ ವಿನೋದಗೋಷ್ಠಿಗ

ಳೊಂದೂ ನಡೆಯುವುದಿಲ್ಲ. ಕಳ್ಳರಭಯಕ್ಕಾಗಿ ಯಾರೊಬ್ಬರೂ ಉತ್ಕೃಷ್ಟವಾದ ತೋಟಗಳನ್ನಾಗಲಿ, ಉತ್ತಮವಾದ ಮನೆಗಳನ್ನಾಗಲಿ, ಮಾಡಿಸಿಡುವುದಿಲ್ಲ. ಬ್ರಾಹ್ಮಣರು ದುಷ್ಟರಭಯಕ್ಕಾಗಿ ತಮ್ಮತಮ್ಮ ಯಜ್ಞಾದಿಕಾರ್ಯಗಳನ್ನೂ ಕ್ರಮವಾಗಿ ನಡೆಸಲಾರರು. ವೇದಾಧ್ಯಯನಪರರಾದವರೂ,ವ್ರತನಿಷ್ಠರಾದವರೂ,ಅರಾಜಕವಾದ ರಾಜ್ಯದಲ್ಲಿ ನಿಶ್ಚಿಂತರಾಗಿ ತಮ್ಮಕೃತ್ಯಗಳನ್ನು ನಡೆಸಲಾರರು. ಯಜ್ಞಶೀಲರಾದವರು ಕಳ್ಳರಭಯದಿಂದ ತಮ್ಮತಮ್ಮ ಯಜ್ಞಗಳಿಗೆ ಬೇಕಾದ ದ್ರವ್ಯಸಂಭಾರಗಳನ್ನು ಸಂಗ್ರಹಿಸಿಡುವುದಕ್ಕೂ ಹೆದರಿ, ಶಾಸ್ತ್ರೋಕ್ತವಾದ ಭೂರಿದಕ್ಷಿಣೆಗಳನ್ನೇ ಬಿಟ್ಟು ಕಾರ್ಯಗಳನ್ನು ನಡೆಸಿಬಿಡುವರು. ಅರಾಜಕವಾದ ದೇಶದಲ್ಲಿ ಯಾವುದೊಂದುತ್ಸವಗಳೂ ನಡೆಯವು. ಆಯಾಉತ್ಸವಗಳಿಗೆ ಪ್ರೋತ್ಸಾಹಕರೂ ಇರುವುದಿಲ್ಲ. ಉತ್ಸವದ ಕೊಂಡಾಟಕ್ಕಾಗಿ ನಟನರ್ತಕಾದಿಗಳಿಗೆ ಪಾರಿತೋಷಕವನ್ನು ಕೊಡತಕ್ಕವರೂ ಇರುವುದಿಲ್ಲ. ಕಳ್ಳರಭಯಕ್ಕಾಗಿ ಯಾತ್ರಾರ್ಥಿಗಳು ತಮ್ಮ ಯಾತ್ರೆಗಳನ್ನೂ ನಿಲ್ಲಿಸಿಬಿಡುವರು. ರಾಜನಿಲ್ಲದದೇಶದಲ್ಲಿ ದಾಯಭಾಗಗಳೇ ಮೊದಲಾದ ವ್ಯವಹಾರಗಳಾಗಲಿ, ಕ್ರಯವಿಕ್ರಯಾದಿ ರೂಪವಾದ ವ್ಯಾಪಾರಗಳಾಗಲಿ ಕ್ರಮವಾಗಿನಡೆಯದೆ, ಅದರಿಂದ ಜೀವನಮಾಡುತಿದ್ದ ಜನರಿಗೆ ಜೀವನವೇ ಕಷ್ಟವಾಗುವುದು. ಮತ್ತು ಇತಿಹಾಸಪುರಾಣಾದಿಗಳನ್ನು ಹೇಳಿ ಜೀವಿಸತಕ್ಕ ಪೌರಾಣಿಕರಿಗೂ ತಕ್ಕಷ್ಟುಪಾರಿತೋಷಿಕವನ್ನು ಕೊಟ್ಟುಪ್ರೋತ್ಸಾಹಿಸತಕ್ಕ ಪ್ರಭುಗಳಿಲ್ಲದೇ ಹೋಗುವುದರಿಂದ, ದೇಶದಲ್ಲಿ ಪುಣ್ಯಕಥಾಶ್ರವಣವೆಂಬುದೇ ನಿಂತುಹೋಗುವುದು. ಅರಾಜಕವಾದ ರಾಜ್ಯದಲ್ಲಿ ಸ್ತ್ರೀಯರು ಸರ್ವಾಲಂಕಾರಭೂಷಿತರಾಗಿ ಉದ್ಯಾನವನಗಳಲ್ಲಿ ತಮ್ಮತಮ್ಮ ನಾಯಕರೊಡನೆ ವಿನೋದದಿಂದ ವಿಹರಿಸುವುದೂ ಕಷ್ಟವಾಗುವುದು. ರಾಜನಿಲ್ಲದ ರಾಜ್ಯದಲ್ಲಿ ದುಷ್ಟರಭಯಕ್ಕಾಗಿ ಕಾಮುಕರಾದವರು ತಮ್ಮ ಪತ್ನಿಯರೊಡಗೂಡಿ ವಾಹನಾರೂಢರಾಗಿ ಹೊರಟು, ವನಗಳಲ್ಲಿ ಕ್ರೀಡಿಸುತ್ತಿರುವುದಕ್ಕೂ ಅಂಜುವರು. ಅರಾಜಕವಾದ ರಾಜ್ಯದಲ್ಲಿ ಕೃಷಿಗೋರಕ್ಷಣಾದಿಗಳಿಂದ ಜೀವಿಸತಕ್ಕ ಧನವಂತರಾದ ವೈಶ್ಯರುಕೂಡ, ಕಳ್ಳರಭಯಕ್ಕಾಗಿ ರಾತ್ರಿಯಲ್ಲಿ ಬಾಗಿಲನ್ನು ತೆರೆಯದೆ,ಸುಖವಾಗಿ ನಿದ್ರೆಯನ್ನೂ ಮಾಡದೆ, ಕಳವಳಿಸುತ್ತಿರುವವರು, ರಾಜನಿಲ್ಲದ ರಾಜ್ಯದಲ್ಲಿ ಎಂದಿನಂತೆ ಅರುವತ್ತುವರುಷದ ಆನೆಗಳು ರಾಜಬೀದಿಗ

ಳಲ್ಲಿ ಘಂಟಾಧ್ವನಿಯನ್ನು ಮಾಡುತ್ತ, ಪ್ರಶಸ್ತವಾದ ಕೊಂಬುಗಳುಳ್ಳು ದಾಗಿ ಸಂತೋಷದಿಂದ ತಿರುಗುತ್ತಿರುವುದುಕ್ಕೂ ಅವಕಾಶವಿಲ್ಲದೇ ಹೋ ಗುವುದು. ಅರಾಜಕವಾದರಾಜ್ಯದಲ್ಲಿ ಅಮಂತ್ರಕವಾದ ಶಸ್ತ್ರಗಳನ್ನೂ, ಮಂ ತ್ರಪೂರ್ವಕವಾದ ಅಸ್ತ್ರಗಳನ್ನೂ ಅಭ್ಯಾಸಮಾಡುವಾಗ, ಎಡೆಬಿಡದೆ ಬಾಣ ಪ್ರಯೋಗಮಾಡುವ ಧನುಷ್ಮಂತರ ಧನುಷ್ಟಂಕಾರಗಳೂ ನಿಂತುಹೋಗು ವುವು. ಅರಾಜಕವಾದ ರಾಜ್ಯದಲ್ಲಿ ದೂರಕ್ಕೆ ವಿಕ್ರಯಪದಾರ್ಥಗಳನ್ನು ತೆಗೆದುಕೊಂಡು ಹೋಗಿ ವಿಕ್ರಯಿಸಿ ಲಾಭವನ್ನು ಸಂಪಾದಿಸತಕ್ಕ ವರ್ತ ಕರು, ಮಾರ್ಗಗಳಲ್ಲಿ ಅಪಾಯವಿಲ್ಲದೆ ಹಿಂತಿರುಗಿಬರುವುದೇ ಕಷ್ಟವಾಗು ವುದು. ಅರಾಜಕವಾದ ರಾಜ್ಯದಲ್ಲಿ ಜಿತೇಂದ್ರಿಯನಾಗಿ, ಏಕಾಕಿಯಾಗಿ ದೇಶ ಸಂಚಾರವನ್ನು ಮಾಡುತಿದ್ದ ಯತಿಯೂಕೂಡ, ಮನಸ್ಸಿನಲ್ಲಿ ಪರಮಾತ್ಮ ಧ್ಯಾನವನ್ನು ಮಾಡುತ್ತ, ಹೊತ್ತು ಮುಳುಗಿದ ಕಡೆಯಲ್ಲಿ ಮನೆಮಾಡಿಕೊಂ ಡು ಸುಖವಾಗಿರಲಾರನು. ಅರಾಜಕವಾದ ದೇಶದಲ್ಲಿ ಯೋಗಕ್ಷೇಮಗಳೂ ಸರಿಯಾಗಿನಡೆಯವು. ಅರಾಜಕವಾದ ರಾಜ್ಯದಲ್ಲಿ ತಕ್ಕ ನಿಯಾಮಕರಿಲ್ಲದು ದರಿಂದ, ಸೈನ್ಯಗಳು ಶತ್ರುಗಳಿಗೆ ಧೈರ್ಯದಿಂದ ಎದೆಗೊಟ್ಟು ನಿಲ್ಲಲಾರವು. ಅರಾಜಕವಾದ ರಾಜ್ಯದಲ್ಲಿ ಜನರು ಕಳ್ಳರಭಯಕ್ಕಾಗಿ ಎಂದಿನಂತೆ ಚೆನ್ನಾಗಿ ಅಲಂಕರಿಸಿಕೊಂಡು, ಕುದುರೆಗಳನ್ನೂ, ರಥಗಳನ್ನೂ ಏರಿ, ನಿರ್ಭಯವಾಗಿ ಸಂಚರಿಸಲಾರರು. ಅರಾಜಕವಾದ ರಾಜ್ಯದಲ್ಲಿ ದುಷ್ಟರಭಯಕ್ಕಾಗಿ ಶಾ ಸ್ತ್ರಜ್ಞರಾದ ಪಂಡಿತರು, ಋಷ್ಯಾಶ್ರಮಗಳಲ್ಲಿಯೂ, ತೋಟಗಳಲ್ಲಿಯೂ, ಸಭೆಸೇರಿ, ನೆಮ್ಮದಿಯಿಂದ ಶಾಸ್ತ್ರಾರ್ಥಗಳನ್ನು ಉಪನ್ಯಾಸಿಸಲಾರರು. ಅರಾಜಕವಾದ ರಾಜ್ಯದಲ್ಲಿ ಜನಗಳು ವಿಘ್ನಭಯಕ್ಕಾಗಿ ದೇವತಾಪೂಜೆಗಳಿಗೆ ಬೇಕಾದ ಪುಷ್ಪಮಾಲಿಕೆಗಳನ್ನಾಗಲಿ, ಭಕ್ಷ್ಯಗಳನ್ನಾಗಲಿ, ದಕ್ಷಿಣೆಗಳನ್ನಾ ಗಲಿ ಸಿದ್ಧಪಡಿಸಿಡುವುದಕ್ಕೂ ಹಿಂತೆಗೆಯುವರು. ಅರಾಜಕವಾದ ದೇಶದಲ್ಲಿ ರಾಜಕುಮಾರರು ಅಗುರುಚಂದನಾದಿಗಳನ್ನು ಲೇಪಿಸಿಕೊಂಡು, ವಸಂತ ಕಾಲದ ವೃಕ್ಷಗಳಂತೆ ಕಣ್ಣಿಗೆ ಆಹ್ಲಾದವನ್ನುಂಟುಮಾಡುವುದಿಲ್ಲ. ಅರಾಜ ಕವಾದ ರಾಜ್ಯವು ನೀರಿಲ್ಲದ ನದಿಯಂತೆಯೂ, ಹುಲ್ಲಿಲ್ಲದ ಕಾಡಿನಂತೆಯೂ, ಕಾವಲಿಲ್ಲದ ದನಗಳಮಂದೆಯಂತೆಯೂ ಪ್ರಕಾಶಿಸದು. ರಥಕ್ಕೆ ಧ್ವಜವೂ ಅಗ್ನಿಗೆ ಧೂಮವೂ, ಜ್ಞಾಪಕಚಿಹ್ನವಾಗಿರುವಂತೆ ರಾಜ್ಯಕ್ಕೆ ರಾಜನೇ ಪ್ರಕಾ

ಶಕವಾದ ಚಿಹ್ನವು. ಹೀಗೆ ನಮ್ಮೆಲ್ಲರಿಗೂ ಧ್ವಜದಂತೆ ಪ್ರಕಾಶಕನಾದ ರಾಜನು ನಮ್ಮನ್ನು ಬಿಟ್ಟು ಸ್ವರ್ಗಕ್ಕೆ ಹೊರಟುಹೋದನು. ಅರಾಜಕವಾದ ರಾಜ್ಯದಲ್ಲಿ ಯಾರಿಗೂ ತಮ್ಮತಮ್ಮ ಸ್ವತ್ತುಗಳು ತಮ್ಮದೆಂದು ಹೇಳುವುದೇ ಕಷ್ಟವಾಗುವುದು.[1] ಮೀನುಗಳಂತೆ ಮನುಷ್ಯರೂ ಒಬ್ಬರನ್ನೊಬ್ಬರುಪೀಡಿಸಿತಿಂದು ಬಿಡುವರು. ಸ್ವಾಭಾವಿಕವಾಗಿಯೇ ತಮ್ಮತಮ್ಮ ವರ್ಣಾಶ್ರಮಧರ್ಮಗಳನ್ನು ಬಿಟ್ಟು, ಮರ್ಯಾದೆಯನ್ನು ಮೀರಿ ನಡೆಯತಕ್ಕ ನಾಸ್ತಿಕಬುದ್ಧಿಯುಳ್ಳವರೆಲ್ಲರೂ ಈಗ ರಾಜದಂಡದ ಭಯವಿಲ್ಲದಿರುವುದರಿಂದ ತಮ್ಮತಮ್ಮ ದುಷ್ಕಾರ್ಯಗಳಲ್ಲಿ ನಿಶ್ಶಂಕೆಯಿಂದ ಪ್ರವರ್ತಿಸುವರು. ರಾಜ್ಯಕ್ಕೆ ರಾಜನೊಬ್ಬನಿದ್ದಪಕ್ಷದಲ್ಲಿ ರಾಜದಂಡಭಯಕ್ಕಾಗಿಯಾದರೂ ಅವರು ತಮ್ಮ ದುಸ್ಸ್ವಭಾವವನ್ನು ಬಿಟ್ಟು ಸತ್ಕಾರ್ಯದಲ್ಲಿ ಪ್ರವರ್ತಿಸುವರು. ದೇಹಕ್ಕೆ ದೃಷ್ಟಿಯು ಹೇಗೆ ಹಿತಸಾಧನವಾಗಿರುವುದೋ ಹಾಗೆರಾಷ್ಟ್ರಕ್ಕೆ ರಾಜನೇ ಕಣ್ಣು. ರಾಜನೇ ಸತ್ಕುಲದಲ್ಲಿಹುಟ್ಟಿದವರ ಕುಲಾಚಾರಗಳನ್ನು ಕಾಪಾಡಿಡಬೇಕು. ರಾಜನೇ ಸತ್ಯಸ್ವರೂಪನು. ಆತನೇ ಧರ್ಮವು. ಆತನೇ ತಂದೆಯು. ಆತನೇ ತಾಯಿಯು. ರಾಜನೇ ಪ್ರಜೆಗಳಿಗೆ ಹಿತವನ್ನುಂಟುಮಾಡತಕ್ಕವನು. ಅಷ್ಟದಿಕ್ಪಾಲಕರಲ್ಲಿಯೂಕೂಡ ಯಮನು ದಂಡಿಸುವುದಕ್ಕೆ ಮಾತ್ರವೇಸಮರ್ಥನು.ಕುಬೇರನು ದಾನಮಾಡವುದಕ್ಕೆಮಾತ್ರವೇಶಕ್ತನು. ಇಂದ್ರನು ಪ್ರಜೆಗಳನ್ನು ಸುಖವಾಗಿ ಪಾಲಿಸುವುದಕ್ಕೆ ಮಾತ್ರವೇ ಬಲ್ಲನು. ವರುಣನು ಸದಾಚಾರಗಳನ್ನು ನಿರ್ಣಯಿಸುವುದಕ್ಕೆ ಮಾತ್ರವೇ ಶಕ್ತನು. ರಾಜನಲ್ಲಿಯಾದರೋ ಈಸಮಸ್ತಶಕ್ತಿಗಳೂ ಒಂದಾಗಿ ಕಲೆತಿರುವುವು. ದುಷ್ಟರನ್ನು ದಂಡಿಸುವುದಕ್ಕೂ,ದರಿದ್ರರಿಗೆ ದಾನಮಾಡುವುದಕ್ಕೂ, ಪ್ರಜೆಗಳನ್ನು ಸುಖದಿಂದ ರಕ್ಷಿಸುವುದಕ್ಕೂ,ಜನರಿಗೆ ಯುಕ್ತಾಯುಕ್ತಗಳನ್ನು ತಿಳಿಸುವುದ

---

1 ಇಲ್ಲಿ "ಯೇಹಿಸಂಭಿನ್ನಮರ್ಯಾದಾ ನಾಸ್ತಿಕಾಶ್ಛಿನ್ನ ಸಂಶಯಾಃ । ತೇಽಪಿಭಾವಾಯಕಲ್ಪಂತೇ ರಾಜದಂಡನಿ ಪೀಡಿತಾಃ ॥" ಎಂದುಮೂಲವು. ಇದಕ್ಕೆ "ಶಾಸ್ತ್ರಮರ್ಯಾದೆಯನ್ನತಿಕ್ರಮಿಸಿದಾಗ ಮೊದಲು ರಾಜದಣ್ಡದಿಂದ ದಂಡಿಸಲ್ಪಡುತಿದ್ದ ನಾಸ್ತಿಕರೂಕೂಡ ಈಗ ಆರಾಜದಂಡದ ಭಯವಿಲ್ಲದುದಕ್ಕಾಗಿ ಧಾರಾಳವಾಗಿ ತಮ್ಮದುಷ್ಕಾರ್ಯಗಳಲ್ಲಿ ಪ್ರವರ್ತಿಸುವರೆಂಬುದೇ ಗೋವಿಂದರಾಜೀಯ ವ್ಯಾಖ್ಯಾನವು.

ಕ್ಕೊ ರಾಜನೊಬ್ಬನಿದ್ದೇ!ಇರಬೇಕು. ಇಂತಹ ರಾಜನಿಲ್ಲ ದಿರುವುದರಿಂದ ಲೋಕದಲ್ಲಿ ದೊಡ್ಡಮಹಾಂಧಕಾರವು ಮುತ್ತಿದಂತೆ ಯಾವುದೊಂದೂ ತಿಳಿಯದು. ಎಲೈ ಬ್ರಾಹ್ಮಣೋತ್ತಮನೆ! ಮಹಾರಾಜನು ಬದುಕಿರುವಾಗಲೂಕೂಡ ನಾವು ಸಮುದ್ರವು ಮೇರೆಯನ್ನು ಮೀರದಂತೆ ನಿನ್ನ ಮಾತಿಗೆ ಕಟ್ಟುಬಿದ್ದಿದ್ದೆವು. ಆತನು ಗತಿಸಿ ಹೋದಮೇಲೆ ನೀನಲ್ಲದೆ ನಮಗೆ ಬೇರೆ ನಿಯಾಮಕರಾರು? ಈಗ ಈರಾಜ್ಯಕ್ಕೆ ಒಬ್ಬ ರಾಜನನ್ನು ತಂದಿಡಬೇಕಾದ್ದು ವೇ ನಮ್ಮಮೊದಲನೆಯ ಕಲಸವು. ರಾಜನಿಲ್ಲದ ರಾಜ್ಯವು ಆರಣ್ಯಪ್ರಾಯವಾಗುವುದು. ಇದೆಲ್ಲವನ್ನೂ ನೀನು ಚೆನ್ನಾಗಿ ಪರ್ಯಾಲೋಚಿಸಿ ಇಕ್ಷ್ವಾಕುವಂಶದಲ್ಲಿ ಹುಟ್ಟಿದ ರಾಜಕುಮಾರನೊಬ್ಬನನ್ನು ಈಗಲೇಕರೆತಂದು ಪಟ್ಟಾಭಿಷೇಕವನ್ನು ನಡೆಸು" ಎಂದರು. ಇಲ್ಲಿಗೆ ಅರುವತ್ತೇಳನೆಯಸರ್ಗವು.

---

—•• —◆ { ವಸಿಷ್ಠನು ಭರತನನ್ನು ಕರೆತರುವುದಕ್ಕಾಗಿ ಕೇಕಯನಗರಕ್ಕೆ ದೂತರನ್ನುಕಳುಹಿಸಿದುದು. } ◆— ••—

ಅವರಮಾತನ್ನು ಕೇಳಿ ವಸಿಷ್ಠನು ಅಲ್ಲಿದ್ದ ಬ್ರಾಹ್ಮಣೋತ್ತಮರನ್ನೂ ಮಿತ್ರರನ್ನೂ, ಮಂತ್ರಿಗಳನ್ನೂ ಕುರಿತು. "ಎಲೈಪೂಜ್ಯರೆ! ಈಗ ಭರತನು ತಮ್ಮನಾದ ಶತ್ರುಘ್ನನೊಡನೆ ತನ್ನ ಸೋದರನಾದ ಮಾವನಾದ ಕೇಕಯ ರಾಜನ ಪಟ್ಟಣದಲ್ಲಿ ರಾಜಭೋಗಗಳನ್ನು ಅನುಭವಿಸಿಕೊಂಡು ಸುಖವಾಗಿರುವನು. ಆತನನ್ನು ಕರೆತರುವುದಕ್ಕಾಗಿ ಉತ್ತಮವಾದ ಕುದುರೆಗಳ ಮೇಲೆ ದೂತರನ್ನು ಕಳುಹಿಸುವ ಪ್ರಯತ್ನವನ್ನು ಮಾಡಿರಿ! ಅವರು ಬೇಗನೆ ಹೋಗಿ ವೀರರಾದ ಅಣ್ಣತಮ್ಮಂದಿರಿಬ್ಬರನ್ನೂ ಇಲ್ಲಿಗೆ ಕರೆತರಲಿ! ನಾವು ಈಗ ಇಲ್ಲಿ ವಿಚಾರಿಸಬೇಕಾದುದೇನೂ ಇಲ್ಲವು. ದಶರಥನು ಮೊದಲೇ ಭರತನಿಗೆ ರಾಜ್ಯವನ್ನುಕೊಡುವುದಾಗಿ ಮಾತುಕೊಟ್ಟಿದ್ದನಲ್ಲವೆ?" ಎಂದನು. ಅದನ್ನು ಕೇಳಿ ಮಂತ್ರಿಮೊದಲಾದವರೆಲ್ಲರೂ ಹಾಗೆಯೇ ಆಗಲೆಂದು ಒಪ್ಪಿದರು. ಆಗ ವಸಿಷ್ಠನು[1] ಸಿದ್ಧಾರ್ಥ, ವಿಜಯ, ಜಯಂತ, ಅಶೋಕ, ನಂದನ

---

1 ಇಲ್ಲಿ ಸಿದ್ಧಾರ್ಥಾದಿಗಳೆಲ್ಲರೂ ಮಂತ್ರಿಗಳಲ್ಲ. ಸಿದ್ಧಾರ್ಥಾದಿಮುಖ್ಯಮಂತ್ರಿಗಳ ಹೆಸರಿನಿಂದಲೇ ಕರೆಯಲ್ಪಡುವ ಬೇರೆ ಕೆಲವು ಪ್ರಧಾನದೂತರು. ಅಲ್ಲಿನಮಂತ್ರಿಗಳಲ್ಲಿ

ರೆಂಬ ಪ್ರಧಾನದೂತರನ್ನು ಕರೆದು “ಎಲೈದೂತರೆ! ನೀವೆಲ್ಲರೂ ಕೇಳಿರಿ? ಈಗ ನೀವು ಮಾಡಬೇಕಾದ ಅವಶ್ಯಕಾರ್ಯವೊಂದುಂಟು. ನಿಮ್ಮ ಮನಸ್ಸಿನಲ್ಲಿರುವ ದುಃಖವನ್ನು ಬಿಟ್ಟು, ವೇಗವುಳ್ಳ[1] ಕುದುರೆಗಳನ್ನೇರಿ, ರಾಜಗೃಹವೆಂಬ ಕೇಕಯರಾಜನ ಪಟ್ಟಣಕ್ಕೆ ಹೋಗಬೇಕು. ಅಲ್ಲಿ ಭರತನನ್ನು ನೋಡಿ ನನ್ನ ಮಾತಿನಿಂದ ಆತನಿಗೆ ಈ ವಿಷಯಗಳನ್ನು ತಿಳಿಸಿರಿ? “ ಎಲೆವತ್ಸನೆ! ಮಂತ್ರಿ ಪುರೋಹಿತಾದಿಗಳೆಲ್ಲರೂ ಇಲ್ಲಿ ನಿನ್ನ ಕ್ಷೇಮವನ್ನು ವಿಚಾರಿಸುವರು. ನೀನು ಈಗಲೇ ಅಯೋಧ್ಯೆಗೆ ಹೊರಟುಬರಬೇಕು. ಅತ್ಯವಶ್ಯವಾದ ಒಂದುಕಾರ್ಯಕ್ಕೆ ಕಾಲವು ಮಿಂಚಿಹೋಗುತ್ತಿರುವುದು. ಆ ಕಾರ್ಯವು ನಿನ್ನಿಂದಲೇ ನಡೆಯಬೇಕಾದುದರಿಂದ ಈಗಲೇ ಹೊರಟು ಬಂದುಬಿಡು.” ಎಂದು ನಾನು ಹೇಳಿದುದಾಗಿ ಹೇಳಿರಿ? ಎಲೈದೂತರೆ! ಅಲ್ಲಿ ನೀವು ಭರತನಿಗೆ ರಾಮನ ವನವಾಸವನ್ನಾಗಲಿ, ದಶರಥನ ಮರಣವನ್ನಾಗಲಿ ಸ್ವಲ್ಪಮಟ್ಟಿಗಾದರೂ ಸೂಚಿಸಕೂಡದು! ರಘುವಂಶಕ್ಕೆ ಸಂಭವಿಸಿರುವ ಈ ಮಹಾನರ್ಥಗಳಲ್ಲೊಂದನ್ನೂ ಯಾವುದೊಂದನ್ನೂ ತಿಳಿಸಬೇಡಿರಿ! ನೀವು ಬಹುಸಂತೋಷದಿಂದ ಹೊರಟುಬಂದಂತೆಯೇ ನಟಿಸುವುದಕ್ಕಾಗಿ, ಅಲ್ಲಿ ಕೇಕಯರಾಜನಿಗೂ, ಭರತನಿಗೂ ತಕ್ಕಂತೆ ರತ್ನಾಭರಣಗಳನ್ನೂ, ಪಟ್ಟೆಮಡಿಗಳನ್ನೂ ಕಾಣಿಕೆಯಾಗಿ ತೆಗೆದುಕೊಂಡು ಹೋಗಿರಿ!”ಎಂದನು. ಒಡನೆಯೇ ಅರಮನೆಯಿಂದ ಅವರಿಗೆ ದಾರಿಯವೆಚ್ಚಕ್ಕೆ ತಕ್ಕಷ್ಟು ದ್ರವ್ಯವನ್ನು ತೆಗೆಸಿಕೊಡಲು, ಅವರೆಲ್ಲರೂ ತಮ್ಮತಮ್ಮ ಮನೆಗೆ ಹೋಗಿ ಪ್ರಯಾಣಸನ್ನದ್ಧರಾಗಿ ಹೊರಟು ಬಂದು, ಉತ್ತಮವಾದ ಕುದುರೆಗಳನ್ನೇರಿ ಹೊರಡುವುದಕ್ಕೆ ಸಿದ್ಧರಾದರು. ಪ್ರಯಾಣಕ್ಕೆ ಬೇಕಾದ ಇತರ ಸನ್ನಾಹಗಳೆಲ್ಲವನ್ನೂ ಸಿದ್ಧಪಡಿಸಿಕೊಂಡಮೇಲೆ, ವಸಿಷ್ಠನ ಅನುಮತಿಯನ್ನು ಪಡೆದು ವೇಗದಿಂದ ಹೊರಟರು. ಅಯೋಧ್ಯೆಯನ್ನು ಬಿಟ್ಟಮೇಲೆ[1] ಪಶ್ಚಿಮಾಭಿಮುಖವಾಗಿ ಹೊರಟು, ಅಪರತಾಲವೆಂಬ ಬೆಟ್ಟದ

---

ನಂದನ ನೆಂಬವನೊಬ್ಬನೂ ಇಲ್ಲವು. ದೂತರಲ್ಲಿ ಸೇರಿದ ನಂದನೆಂಬವನ ಹೆಸರನ್ನು ಕೊಡಿಸಿ ಹೇಳಿರುವುದರಿಂದಲೇ ಇತರಸಿದ್ಧಾರ್ಥಾದಿಗಳೂ ದೂತರೆಂದು ಸ್ಪಷ್ಟಪಡುವುದು.

1 ಅಯೋಧ್ಯೆಗೆಮುಂದೆ ಪಶ್ಚಿಮಕ್ಕೆ ಅಪತಾಲಪರ್ವತವು ದಕ್ಷಿಣೋತ್ತರವಾಗಿ ವ್ಯಾಪಿಸಿರುವುದು. ಅದಕ್ಕೆ ಪಶ್ಚಿಮವಾಗಿ ಪ್ರಲಂಬಪರ್ವತವು ದಕ್ಷಿಣೋತ್ತರವಾಗಿ ಸ್ವಲ್ಪದೂರ

ಕೊನೆಮುಟ್ಟುವವರೆಗೂ ಪ್ರಯಾಣಮಾಡಿ, ಅಲ್ಲಿಂದ ಮುಂದೆ ಪ್ರಲಂಬವೆಂಬ ಬೆಟ್ಟದ ಉತ್ತರದಿಕ್ಕಿನ ಮಾರ್ಗವಾಗಿ ಹೋದರು. ಇವುಗಳನಡುವೆ ಇದ್ದ ಮಾಲಿನಿಯೆಂಬ ನದಿಯನ್ನೂ ದಾಟಿದರು.ಅಲ್ಲಿಂದ ಹಸ್ತಿನಪುರಕ್ಕೆಹೋಗಿ,ಅಲ್ಲಿ ಗಂಗೆಯನ್ನು ದಾಟಿ,ಅದಕ್ಕೆಮುಂದೆ ಪಶ್ಚಿಮಾಭಿಮುಖವಾಗಿ ಹೊರಟು, ಕುರುಜಾಂಗಲವೆಂಬ ದೇಶದ ನಡುವೆಹೊರಟು,ಪಾಂಚಾಲದೇಶವನ್ನು ಸೇರಿದರು. ಅಲ್ಲಿ ಜಲಪೂರ್ಣದ ಸರೋವರಗಳನ್ನೂ, ಸ್ವಚ್ಛವಾದನೀರಿನಿಂದ ಕೂಡಿದ ನದಿಗಳನ್ನೂ ನೋಡುತಿದ್ದರೂ,ಕಾರ್ಯಾತುರದಿಂದ ಬಹುವೇಗವಾಗಿಯೇ ಪ್ರಯಾಣಮಾಡಿದರು. ಅಲ್ಲಿಂದ ಮುಂದೆ ಹೋಗಿ ನಿರ್ಮಲವಾದ ನೀರಿನಿಂದಲೂ, ನಾನಾವಿಧವಾದ ಪಕ್ಷಿಗಳ ಧ್ವನಿಗಳಿಂದಲೂ, ಅತಿಮನೋಹರವಾಗಿದ್ದ ಶರದಂಡಾನದಿಯನ್ನೂ, ಅಲ್ಲಿ ಸ್ನಾನಪಾನಗಳನ್ನು ಮಾಡುತ್ತಿರುವ ಬಹುಜನಸಮೂಹವನ್ನೂ ನೋಡಿ ಸಂತೋಷಪಡುತ್ತ,ಅಲ್ಲಿಯೂ ನಿಲ್ಲದೆ ವೇಗದಿಂದ ಮುಂದೆ ಹೊರಟರು. ಸ್ವಲ್ಪದೂರಹೋದಮೇಲೆ ಅದರ ಪಶ್ಚಿಮತೀರದಲ್ಲಿ ಅನೇಕದೇವತೆಗಳಿಗೆ ನಿತ್ಯಾಶ್ರಯವಾದ ಸತ್ಯೋಪಯಾಜನವೆಂಬ ಒಂದು ಪುಣ್ಯವೃಕ್ಷದ ಅಡಿಯನ್ನುಸೇರಿದರು. ಕೋರಿದವರ ಕೋರಿಕೆಗಳೆಲ್ಲವನ್ನೂ ಈಡೇರಿಸಿಕೊಡತಕ್ಕ ಮಹಾಮಹಿಮೆಯುಳ್ಳ ಪೂಜ್ಯವಾದ ಆವೃಕ್ಷಕ್ಕೆ ನಮಸ್ಕರಿಸಿ, ಅಲ್ಲಿಂದ ಮುಂದೆ ಕುಲಿಂಗನಗರಿಯನ್ನು ಪ್ರವೇಶಿಸಿದರು. ಆಮೇಲೆ ಅಭಿಕಾಲವೆಂಬ ಗ್ರಾಮವನ್ನುಸೇರಿ, ಅದರಪಕ್ಕದಲ್ಲಿ ಬೋಧಿಭವನವೆಂಬ ಪರ್ವತದಿಂದ ಹುಟ್ಟಿಬರುವ ಇಕ್ಷುಮತಿಯೆಂಬ ಪುಣ್ಯನದಿಯನ್ನು ದಾಟಿದರು. ಆನದೀತೀರದ ಗ್ರಾಮಗಳೆಲ್ಲವೂ ದಶರಥನ ವಂಶದವರಿಂದಲೇ ಪಿತೃಪಿತಾಮಹಪರಂಪರೆಯಾಗಿ ಅನುಭವಿಸಲ್ಪಡುತ್ತಿರುವುವು. ಆನದೀತೀರದಲ್ಲಿ ಬೊಗಸೆನೀರನ್ನುಮಾತ್ರವೇ ಆಹಾರವಾಗಿ ತೆಗೆದುಕೊಂಡು,ಜಿತೇಂದ್ರಿಯರಾಗಿ ತಪ

---

ವ್ಯಾಪಿಸಿ, ಆಮೇಲೆ ಪೂರ್ವಪಶ್ಚಿಮವಾಗಿಹಬ್ಬಿರುವುದು. ದೂತರು ಅಯೋಧ್ಯೆಯಿಂದ ಪಶ್ಚಿಮಾಭಿಮುಖವಾಗಿ ಹೊರಟು,ದಕ್ಷಿಣೋತ್ತರವಾಗಿ ಹಬ್ಬಿರುವ ಅಪತಾಲಪರ್ವತದ ಪಶ್ಚಿಮಭಾಗದೆಡೆಗಾಗಿ ಹೋಗಿ, ಅದಕ್ಕೂ ಅದರ ಪಶ್ಚಿಮಕ್ಕಿರುವ ಪ್ರಲಂಬಪರ್ವತಕ್ಕೂ ನಡುವೆ, ಮಾಲಿನೀತೀರಮಾರ್ಗವಾಗಿ ಪೂರ್ವಾಭಿಮುಖವಾಗಿ ನಡೆದು ಆಮೇಲೆ ಪ್ರಲಂಬಪರ್ವತವು ಪೂರ್ವಪಶ್ಚಿಮವಾಗಿ ತಿರುಗುವ ಕಡೆಯಲ್ಲಿ ತಾವೂಪಶ್ಚಿಮಕ್ಕೆತಿರುಗಿ, ಆಪ್ರಲಂಬದ ಉತ್ತರಭಾಗದಲ್ಲಿಯೇ ಹೋಗುತಿದ್ದರೆಂದು ತಿಳಿಯಬೇಕು.

ಸ್ನುಮಾಡುತಿದ್ದ ವೇದಪಾರಂಗತರಾದ ಅನೇಕ ಬ್ರಾಹ್ಮಣರನ್ನು ದರ್ಶನ ಮಾಡಿ, ಬಾಹ್ಲಿಕದೇಶದನಡುವೆ ಹೊರಟು, ಸುದಾಮವೆಂಬ ಪರ್ವತವನ್ನು ಸೇರಿದರು. ಆಬೆಟ್ಟದಲ್ಲಿ ವಿಷ್ಣುಪಾದಾಂಕಿತವಾದ ಒಂದು ಪುಣ್ಯನದಿಯನ್ನೂ, ಅದರಪಕ್ಕದಲ್ಲಿ ಪ್ರವಹಿಸುತಿದ್ದ ವಿಪಾಶಾನದಿಯನ್ನೂ, ಆನದೀತೀರದಲ್ಲಿದ್ದ ಪ್ರಸಿದ್ಧವಾದ ಶಾಲ್ಮಲೀವೃಕ್ಷವನ್ನೂ ಕಂಡರು. ಹೀಗೆಯೇ ಅನೇಕನದಿಗಳನ್ನೂ, ಬಾವಿಗಳನ್ನೂ, ಕೆರೆಗಳನ್ನೂ, ಸರೋವರಗಳನ್ನೂ, ಮತ್ತು, ದಾರಿಯಲ್ಲಿ ಹುಲಿ, ಆನೆ, ಜಿಂಕೆ, ಸಿಂಹಗಳೇ ಮೊದಲಾದ ಮೃಗಗಳನ್ನೂ ನೋಡುತ್ತ, ರಾಜಾಜ್ಞೆಗೆ ಬದ್ಧರಾಗಿ ಬಹುದೂರಪ್ರಯಾಣವನ್ನು ಶೀಘ್ರಕಾಲದಲ್ಲಿಯೇ ಮುಗಿಸಿಕೊಂಡು ಹೋದರು. ಹೀಗೆ ಬಹುದೂರಪ್ರಯಾಣಮಾಡಿದುದರಿಂದ ಕುದುರೆಗಳುಬಹಳವಾಗಿ ಬಳಲಿರುವುದನ್ನು ನೋಡಿ, ಸಮೀಪವಾದ ಮತ್ತೊಂದುದಾರಿಯನ್ನು ಹಿಡಿದು, ಗಿರಿವ್ರಜವೆಂಬ ಕೇಕೆಯರಾಜನ ಪಟ್ಟಣಕ್ಕೆ ಬಂದುಸೇರಿದರು. ಭರತನನ್ನು ಶೀಘ್ರದಿಂದ ಕರೆತಂದು, ಆತನಿಂದ ತಮ್ಮ ರಾಜನಾದ ದಶರಥನಿಗೆ ಅಪರಸಂಸ್ಕಾರಗಳನ್ನು ಮಾಡಿಸಿ, ಆ ದಶರಥನಿಗೆ ಪುಣ್ಯಲೋಕಪ್ರಾಪ್ತಿಯನ್ನುಂಟುಮಾಡಬೇಕೆಂಬ ಸ್ವಾಮಿಭಕ್ತಿಯಿಂದಲೂ, ಇಕ್ಷ್ವಾಕುವಂಶವನ್ನು ಮುಂದಕ್ಕೆ ತರಬೇಕೆಂಬ ಮಮತೆಯಿಂದಲೂ, ದಿಕ್ಕಿಲ್ಲದೆ ಕೊರಗುತ್ತಿರುವ ರಾಜಕುಲದವರನ್ನು ರಕ್ಷಿಸಬೇಕೆಂಬ ಆತುರದಿಂದಲೂ, ಆದೂತರು ಸ್ವಲ್ಪವಾದರೂ ಅನಾದರವನ್ನು ತೋರಿಸದೆ, ಹೊತ್ತು ಮುಳುಗಿದರೂ ತಮ್ಮ ಪ್ರಯಾಣವನ್ನು ಬಿಡದೆ, ರಾತ್ರಿಯಾದಮೇಲೆ ಆಪಟ್ಟಣವನ್ನು ಸೇರಿದರು. ಇಲ್ಲಿಗೆ ಅರುವತ್ತೊಂಬನೆಯಸರ್ಗವು.

---

{ ಇತ್ತಲಾಗಿ ಕೇಕಯನಗರದಲ್ಲಿ ಭರತನು ತಾನು ಕಂಡ ದುಸ್ಸ್ವಪ್ನಗಳನ್ನು ತನ್ನ ಮಿತ್ರರಿಗೆ ಹೇಳಿದುದು. }

ದೂತರು ಗಿರಿವ್ರಜಪುರವನ್ನು ಸೇರಿದ ರಾತ್ರಿಯಲ್ಲಿಯೇ ಭರತನು ಅನೇಕದುಸ್ಸ್ವಪ್ನಗಳನ್ನು ಕಂಡನು. ಆ ರಾತ್ರಿಯು ಕಳೆದು ಬೆಳಗಾದಮೇಲೆ ತಾನು ಕಂಡ ದುಸ್ಸ್ವಪ್ನಗಳನ್ನು ನೆನೆಸಿಕೊಂಡು, [1] ಪ್ರಭಾತಕಾಲಗಳಲ್ಲಿ

---

1 "ಗೋವಿಸರ್ಜನವೇಳಾಯಾಂ ಸದ್ಯಸ್ಸ್ವಪ್ನಫಲಂಭವೇತ್" ಎಂಬಸ್ವಪ್ನ ಶಾಸ್ತ್ರಾನುಸಾರವಾಗಿ ಬೆಳಗಿನ ಜಾವದಲ್ಲಿ ಕಂಡಸ್ವಪ್ನವು ಶೀಘ್ರದಲ್ಲಿಯೇ ಫಲವನ್ನು ತೋರಿಸುವುದು.

ಕಂಡ ಆ ದುಸ್ಸ್ವಪ್ನಗಳು ಶೀಘ್ರದಲ್ಲಿಯೇ ತಮ್ಮ ದುಷ್ಫಲಗಳನ್ನು ತೋರಿಸುವುವೆಂಬ ಭಯದಿಂದ ತತ್ತಳಿಸುತಿದ್ದನು. ಹೀಗೆ ಭಯದಿಂದ ಕೊರಗುತ್ತಿರುವ ಆ ಭರತನನ್ನು ನೋಡಿ,ಆತನ ಪ್ರಿಯಮಿತ್ರರೆಲ್ಲರೂ ಆತನ ಶಂಕೆಯನ್ನು ತಪ್ಪಿಸುವುದಕ್ಕಾಗಿ ಸುತ್ತಲೂ ಗುಂಪುಗೂಡಿ, ಬಗೆಬಗೆಯಾದ ಪ್ರಿಯಕಥೆಗಳನ್ನು ಹೇಳುತ್ತ ವಿನೋದಪಡಿಸುತ್ತಿದ್ದರು. ಆತನ ದುಃಖೋಪಶಮನಾರ್ಥವಾಗಿ ಕೆಲವರು ವೀಣಾದಿವಾದ್ಯಗಳನ್ನು ನುಡಿಸುತಿದ್ದರು. ಮತ್ತೆ ಕೆಲವರು ವಿನೋದಕರಗಳಾದ ನಾಟಕಗಳನ್ನಾಡಿಸುತಿದ್ದರು. ಕೆಲವರು ನರ್ತನಗಳನ್ನು ಮಾಡುತಿದ್ದರು.ಇನ್ನು ಕೆಲವರು ಪರಿಹಾಸಕವಾದ ಮಾತುಗಳನ್ನಾಡುತಿದ್ದರು. ಹೀಗೆ ತನ್ನ ಮಿತ್ರರೆಲ್ಲರೂ ಸಭೆಗೂಡಿ ಪ್ರಿಯವಾಕ್ಯಗಳನ್ನೂ, ಹಾಸ್ಯದಮಾತುಗಳನ್ನೂ ಆಡುತಿದ್ದರೂ ಭರತನಿಗೆ ಯಾವುದೊಂದೂ ರುಚಿಸಲಿಲ್ಲ. ಆತನು ಮನಸ್ಸಿನಲ್ಲಿ ಕೊರಗುತ್ತಲೇ ಇದ್ದನು.ಆಗ ಮಿತ್ರಮಂಡಲಿಯಿಂದ ಪರಿವೃತನಾದ ಭರತನನ್ನು ನೋಡಿ ಆತನಿಗೆ ಅಂತರಂಗಸಖನಾದವನೊಬ್ಬನು “ಎಲೈಮಿತ್ರನೆ! ನಿನ್ನ ಪ್ರಿಯಮಿತ್ರರೆಲ್ಲರೂ ಅನೇಕವಿಧದಲ್ಲಿ ನಿನ್ನನ್ನು ವಿನೋದಗೊಳಿಸುತಿದ್ದರೂ ನೀನು ಸಂತೋಷಿಸದಿರುವೆಯಲ್ಲವೆ? ಇದಕ್ಕೆ ಕಾರಣವೇನು ?” ಎಂದನು. ಅವನನ್ನು ನೋಡಿ ಭರತನು “ಎಲೈಪ್ರಿಯನೆ ! ನನಗೆ ಈಗ ಈ ಮನಃಕಾಲುಷ್ಯವುಂಟಾಗುವುದಕ್ಕೆ ಕಾರಣವನ್ನು ಹೇಳುವೆನು ಕೇಳು. ನಿನ್ನೆ ರಾತ್ರಿಯಲ್ಲಿ ನನ್ನ ತಂದೆಯು ತಲೆಯನ್ನು ಕೆದರಿಕೊಂಡು, ಮಲಿನದೇಹದಿಂದ ಕೂಡಿ, ಪರ್ವತಶಿಖರದಿಂದ ಗಂಜಲದಮಡುವಿನಲ್ಲಿ ಉರುಳಿ ಬೀಳುವಹಾಗೆ ಸ್ವಪ್ನವನ್ನು ಕಂಡೆನು.ಮತ್ತು ಆತನು ಆ ಮಡುವಿನಲ್ಲಿಯೇ ಬಹಳಹೊತ್ತಿನವರೆಗೆ ತೇಲಾಡುತಿದ್ದಹಾಗೂ, ಆತನು ಬೊಗಸೆಯಲ್ಲಿ ಎಣ್ಣೆಯನ್ನು ತುಂಬಿಕೊಂಡು ಕುಡಿಯುವಹಾಗೂ, ಆಗಾಗ ವಿಕಾರವಾಗಿ ನಗುತ್ತ ಎಳ್ಳನ್ನವನ್ನು ತಿಂದು, ತಲೆಯನ್ನು ತಗ್ಗಿಸಿ, ಮೈಗೆಲ್ಲಾ ಎಣ್ಣೆಯನ್ನು ಸವರಿಕೊಂಡಿರುವಹಾಗೂ, ಆಗಾಗ ಆ ಎಣ್ಣೆಯಲ್ಲಿಯೇ ಆತನುಮುಳುಗಿ ಏಳುತ್ತಿದ್ದಹಾಗೂ ಕಂಡೆನು. ಮತ್ತು ನಾನು ಆ ಸ್ವಪ್ನದಲ್ಲಿ ಸಮುದ್ರವು ಒಣಗಿಹೋದಹಾಗೂ, ಚಂದ್ರನು ನೆಲದಮೇಲೆ ಬಿದ್ದಿರುವಹಾಗೂ, ಪ್ರಪಂಚವೆಲ್ಲವೂ ಅಂಧಕಾರದಿಂದ ಮುಚ್ಚಿ ಯಾವುದೊಂದೂ ಕಣ್ಣಿಗೆಬೀಳದಹಾಗೂ ಕಂಡೆನು.ನಮ್ಮ ಮಹಾರಾಜನ ಪಟ್ಟದಾನೆಯ ಕೊಂ

ಬುಗಳೆರಡೂ ಪುಡಿಪುಡಿಯಾಗಿ ಉದಿರಿ ಬೀಳುತಿದ್ದುವು. ಉರಿಯುತಿದ್ದ ಬೆಂಕಿ ಯು ಇದ್ದಕ್ಕಿದ್ದಹಾಗೆ ನಂದಿಹೋಯಿತು. ಭೂಮಿಯು ಕೆಳಕೆಳಗೆ ಇಳಿದು ಹೋಗುವಂತೆಯೂ,ಮರಗಳೆಲ್ಲವೂ ಒಣಗಿಹೋದಂತೆಯೂ, ಬೆಟ್ಟಗಳೆಲ್ಲವೂ ಉರಿದು ಭಸ್ಮವಾಗಿ ಹೊಗೆಯಾಡುತ್ತಿರುವಂತೆಯೂ ತೋರಿತು.ರಾಜನಾದ ನನ್ನ ತಂದೆಯು ಕರೀಬಟ್ಟೆಯನ್ನುಟ್ಟು,ಕಬ್ಬಿಣದ ಪೀಠದಲ್ಲಿ ಕುಳಿತಿರುವುದನ್ನು ನೋಡಿ, ಕಪ್ಪುಮತ್ತುಹಳದಿಯ ಮೈಬಣ್ಣವುಳ್ಳ ಕೆಲವುಸ್ತ್ರೀಯರು ಅಟ್ಟ ಹಾಸದಿಂದ ಹಾಸ್ಯಮಾಡಿ ನಗುತಿಪ್ಪರು. ಧರ್ಮಾತ್ಮನಾದ ನನ್ನತಂದೆಯು ರಕ್ತವರ್ಣವುಳ್ಳ ಪುಷ್ಪಮಾಲಿಕೆಯನ್ನೂ, ಕೆಂಪುಗಂಧವನ್ನೂ ಧರಿಸಿ,ಕತ್ತೆ ಯಿಂದ ಕಟ್ಟಲ್ಪಟ್ಟ ರಥವನ್ನೇರಿ ದಕ್ಷಿಣಾಭಿಮುಖವಾಗಿ ಓಡಿಸಿಕೊಂಡು ಹೋಗುತ್ತಿದ್ದನು. ಕೆಂಪುಬಟ್ಟೆಯನ್ನುಟ್ಟು ವಿಕೃತಾಕಾರವುಳ್ಳ ರಾಕ್ಷಸ ಸ್ತ್ರೀಯೊಬ್ಬಳು ರಾಜನನ್ನು ನೋಡಿ ನಗುತ್ತ ಆತನನ್ನು ಕೈಹಿಡಿದೆಳೆ ಯುತ್ತಿದ್ದಳು. ಇಂತಹ ಭಯಂಕರವಾದ ದುಸ್ಸ್ವಪ್ನಗಳನ್ನು ನಾನು ನಿನ್ನೆಯರಾತ್ರಿಯಲ್ಲಿ ಕಂಡೆನು. ಮಹಾಘೋರವಾದ ಈ ದುಸ್ಸ್ವಪ್ನದ ಸ್ಥಿತಿ ಯನ್ನುನೋಡಿದರೆ, ನನಗೋ,ರಾಮನಿಗೋ, ರಾಜನಾದ ದಶರಥನಿಗೋ ಅಥವಾ ಲಕ್ಷ್ಮಣನಿಗೋ ಮರಣವುಂಟಾಗುವುದರಲ್ಲಿ ಸಂದೇಹವಿಲ್ಲ. ಸ್ವಪ್ನ ದಲ್ಲಿ ಯಾವಮನುಷ್ಯನು ಕತ್ತೆಯಿಂದೆಳೆಯಲ್ಪಡುವ ರಥದಲ್ಲಿ ಕುಳಿತು ಹೋಗುವಹಾಗೆ ಕಾಣುವವೋ, ಆತನ ಹೊಗೆಯು ಸ್ವಲ್ಪಕಾಲದೊಳಗಾಗಿ ಯೇ ಚಿತೆಯಲ್ಲಿ ಹೊರಡುವುದನ್ನೂ ಕಾಣುವೆವು.ಇದಕ್ಕಾಗಿಯೇ ನಾನು ಈಗ ಬಹಳಚಿಂತಾಕ್ರಾಂತನಾಗಿರುವೆನು. ನಿಮ್ಮಉಪಚಾರಗಳೊಂದೂ ನನಗೆ ಆ ಪ್ಯಾಯಕಗಳಾಗಿಲ್ಲವು. ದುಃಖದಿಂದ ನನ್ನ ಗಂಟಲೊಣಗಿಹೋಗುವಂತಿರು ವುದು. ಮನಸ್ಸಿನಲ್ಲಿ ಸ್ವಲ್ಪವಾದರೂ ಉಲ್ಲಾಸವಿಲ್ಲ. ನಿಜವಾಗಿ ಭಯಕ್ಕೆ ಕಾರಣವೊಂದಾದರೂ ಇಲ್ಲ.ಆದರೂ ನನ್ನಮನಸ್ಸುನಡುಗುತ್ತಿರುವುದು!ನನ್ನ ಕಂಠದಿಂದ ಸ್ವರವೇ ಹೊರಡುವುದಿಲ್ಲ. ದೇಹಕಾಂತಿಯೂ ಕಂದಿಹೋಯಿತು. ನನ್ನ ಅವಸ್ಥೆಯೇ ನನಗೆ ಅಸಹ್ಯಕರವಾಗಿರುವಂತೆ ತೋರಿರುವುದು. ಇದರ ಕಾರಣವೇನೆಂದು ನನಗೇ ತಿಳಿಯಲಿಲ್ಲ. ಹೀಗೆ ಆಕಸ್ಮಿಕವಾಗಿ ಕಂಡು ಬಂದ ಬಗೆಬಗೆಯಾದ ದುಸ್ಸ್ವಪ್ನಗಳನ್ನು ನೋಡಿದುದುಮೊದಲು, ನನ್ನಮನಸ್ಸಿ ನಲ್ಲಿ ಅಪಾರವಾದ ಭಯವು ನಾಟಿಹೋಗಿರುವುದು. ಯಾವಯಾವ ಉಪಾ

ಯಗಳಿಂದಲೂ ಅದು ತಗ್ಗುವಹಾಗಿಲ್ಲ. ರಾಜನಾದ ನಮ್ಮ ತಂದೆಯ ಸ್ಥಿತಿಯನ್ನು ನೆನೆಸಿಕೊಂಡಹಾಗೆಲ್ಲಾ ನನ್ನ ಮನಸ್ಸಿನ ಭೀತಿಯು ಬೇರೂರಿದಂತೆ ಬಿಟ್ಟುಹೋಗದಿರುವುದು."ಎಂದನು. ಇಲ್ಲಿಗೆ ಅರುವತ್ತೊಂಬತ್ತನೆಯ ಸರ್ಗವು.

---

ಭರತನು ಅಯೋಧ್ಯೆಗೆ ಪ್ರಯಾಣಮಾಡಿ ಬಂದುದು.

ಅತ್ತಲಾಗಿ ಭರತನು ಹೀಗೆ ತನ್ನ ದುಸ್ಸ್ವಪ್ನವೃತ್ತಾಂತಗಳನ್ನು ಹೇಳಿ ಮುಗಿಸುತ್ತಿರುವಾಗಲೇ, ಬಳಲಿದಕುದುರೆಗಳುಳ್ಳ ದೂತರು ರಾಜದ್ವಾರಕ್ಕೆ ಬಂದಿಳಿದರು. ಶತ್ರುಗಳಿಂದ ದಾಟುವುದಕ್ಕಸಾಧ್ಯವಾದ ಅಗುಳುಳ್ಳ, ಅತಿರಮ್ಯವಾದ ಆರಾಜಗೃಹಪುರಿಯನ್ನು ಅವರು ಬಂದು ಮುಟ್ಟಿದೊಡನೆಯೇ, ಕೇಕಯರಾಜನೂ ಆತನ ಪುತ್ರನೂ ಬಂದು ಅವರನ್ನು ಮನ್ನಿಸಿಕರೆದುಕೊಂಡುಹೋದರು.ಅವರು ರಾಜನ ಮನ್ನಣೆಯನ್ನು ಪ್ರೀತಿಯಿಂದ ಸ್ವೀಕರಿಸಿ,ಪಾದಗಳಿಗೆ ವಿನಯದಿಂದ ನಮಸ್ಕರಿಸಿ, ಭರತನಿದ್ದ ಕಡೆಗೆ ಬಂದು ಆತನನನ್ನು ಕುರಿತು, "ರಾಜಪುತ್ರನೆ! ಕುಲಪುರೋಹಿತನಾದ ವಸಿಷ್ಠನೂ ಇತರಮಂತ್ರಿಗಳೂ ನಿನ್ನ ಕ್ಷೇಮಲಾಭಗಳನ್ನು ವಿಚಾರಿಸಿರುವರು. ನೀನು ಶೀಘ್ರದಲ್ಲಿಯೇ ಅಯೋಧ್ಯೆಗೆ ಹೊರಡಬೇಕು.ನಿನ್ನಿಂದ ನಡೆಯಬೇಕಾದ ಅವಶ್ಯಕಾರ್ಯವೊಂದುಂಟು. ಕಾಲವು ಮಿಂಚಿಹೋಗುತ್ತಿರುವುದು. ಇದೋ! ಕೇಕಯರಾಜನಿಗೆ ಕಾಣಿಕೆಯಾಗಿ ಬೆಲೆಯುಳ್ಳ ವಸ್ತ್ರಾಭರಣಗಳನ್ನು ತಂದಿರುವೆವು. ಇವುಗಳನ್ನು ನಿನ್ನ ಅಜ್ಜನಾದ ಕೇಕಯರಾಜನಿಗೂ ಮಾವನಿಗೂ ಸಲ್ಲಿಸು ! ಎಲೈರಾಜಕುಮಾರನೆ! ನಿನ್ನ ಅಜ್ಜನಾದ ಕೇಕಯರಾಜನಿಗಾಗಿ ತಂದಿರತಕ್ಕ ವಸ್ತ್ರಭೂಷಣಾದಿಗಳನ್ನು ನೋಡು!ಇವು ಇಪ್ಪತ್ತುಕೋಟಿ ದ್ರವ್ಯಗಳ ಬೆಲೆಯುಳ್ಳವುಗಳಾಗಿರುವುವು" ಎಂದರು. ಭರತನು ಅವರಲ್ಲಿ ಮಿತ್ರವಾತ್ಸಲ್ಯವನ್ನು ತೋರಿಸುತ್ತ,ಅವೆಲ್ಲವನ್ನೂ ಪ್ರೀತಿಯಿಂದ ಸ್ವೀಕರಿಸಿ, ಅಜ್ಜನಾದ ಕೇಕಯರಾಜನಿಗೂ,ಮಾವನಾದ ಯುಧಾಜಿತ್ತಿಗೂ ಸಲ್ಲಿಸಿ, ದೂತರಿಗೆ ಬೇಕಾದ ಪದಾರ್ಥಗಳನ್ನು ಕೊಡಿಸಿ ಅವರನ್ನು ಪಚರಿಸಿ " ಎಲೈದೂತರೆ!ನಮ್ಮ ತಂದೆಯಾದ ದಶರಥರಾಜನು ಕ್ಷೇಮದಿಂದಿರುವನೆ ? ರಾಮನು ಕ್ಷೇಮದಿಂದಿರುವನೆ ? ಮಹಾತ್ಮನಾದ ಲಕ್ಷ್ಮಣನು ಸೌಖ್ಯದಿಂದಿರುವನೆ ? ಪೂಜ್ಯಳಾಗಿ, ಧರ್ಮಪರಾಯಣೆಯಾಗಿ, ಸಮಸ್ತ ಧರ್ಮಗಳನ್ನೂ ಬಲ್ಲವಳಾಗಿ, ಗುಣಗ್ರಾಹಿಣಿಯಾದ ಕೌಸ

ಲ್ಯೆಯು ಆರೋಗ್ಯದಿಂದಿರುವಳೆ ? ವೀರರಾದ ಲಕ್ಷ್ಮಣಶತ್ರುಘ್ನರಿಂದ ವೀರ ಮಾತೆಯೆನಿಸಿ ಧರ್ಮಜ್ಞಳಾಗಿರುವ ಸುಮಿತ್ರೆಯು ಆರೋಗ್ಯದಿಂದಿರುವಳೆ ? [1] ಸ್ವಪ್ರಯೋಜನಪರಳಾಗಿ, ಯಾವಾಗಲೂ ಜಂಡಿಹಿಡಿಯುವ ಕೋಪ ಸ್ವಭಾವವುಳ್ಳವಳಾಗಿ,ತಾನೇ ಪ್ರಾಜ್ಞಳೆಂಬ ಗರ್ವದಿಂದುಬ್ಬಿದ ನನ್ನ ತಾಯಿ ಯಾದ ಕೈಕೇಯಿಯು ಕ್ಷೇಮದಿಂದಿರುವಳೆ ! ಅವಳು ಇಲ್ಲಿಗೆ ನಿಮ್ಮ ಮೂಲ ಕವಾಗಿ ಏನಾದರೂ ಹೇಳಿಕಳುಹಿಸಿರುವಳೆ ? "ಎಂದನು. ಅದಕ್ಕಾದೂತರು ವಿನಯದಿಂದ ಭರತನನ್ನುನೋಡಿ ‹‹ ಎಲೈರಾಜಪುತ್ರನೆ ! ನೀನು ಯಾರ ಯಾರ ಕ್ಷೇಮವನ್ನು ಕೋರುವೆಯೋ ಅವರೆಲ್ಲರೂ ಕುಶಲದಿಂದಿರುವರು. [2] ಪದ್ಮಹಸ್ತೆಯಾದ ಲಕ್ಷ್ಮಿಯು !ನಿನ್ನನ್ನು ವರಿಸಲಿ ! ರಥವನ್ನು ಸಿದ್ಧಪಡಿಸು ? ಹೊರಡಬೇಕು!" ಎಂದರು. ಆಗ ಭರತನು ಆದೂತರನ್ನು ಕುರಿತು ‹‹ ನಾನು ಈಗಲೇ ನೀವು ಬಂದು ತ್ವರೆಪಡಿಸುವುದಾಗಿ ಕೇಕ ಯರಾಜನಿಗೆ ತಿಳಿಸಿ, ಅವನ ಅನುಮತಿಯನ್ನು ಪಡೆದು ಬರುವೆನು" ಎಂದು ಹೇಳಿ, ಕೇಕಯರಾಜನ ಬಳಿಗೆ ಬಂದನು. ಆತನನ್ನುನೋಡಿ ‹‹ ಎಲೆತಾತನೆ ! ನನ್ನತಂದೆಯಕಡೆಯಿಂದ ದೂತರು ಬಂದು ನನ್ನನ್ನು ಕರೆಯುತ್ತಿರುವರು. ನಾನು ಹೋಗಿಬರುವೆನು. ಪುನಃ ನೀವು ಯಾವಾಗ ನನ್ನನ್ನು ಬರಬೇಕೆಂದು ಅಪೇಕ್ಷಿಸುವಿರೋ, ಆಕ್ಷಣವೇ ನಾನು ಇತ್ತಲಾಗಿ ಹೊರಟುಬರುವೆನು. ನೀವು ನನ್ನನ್ನು ಮನಸ್ಸಿನಲ್ಲಿ ಸ್ಮರಿಸಿದಮಾತ್ರಕ್ಕೇ ನಾನು ಇಲ್ಲಿ ಸಿದ್ಧನಾಗಿರುವೆನು" ಎಂದನು. ಆಗ ಕೇಕಯರಾಜನು ಭರತನ ಮಾತುಗಳನ್ನು ಲಾಲಿಸಿ, ಪುತ್ರ ವಾತ್ಸಲ್ಯದಿಂದ ಆತನ ತಲೆಯನ್ನಾಘ್ರಾಣಿಸಿ, ಪ್ರೀತಿಯುಕ್ತವಾದ ಮಾ

---

1 ಭರತನು ಮೊದಲೇ ಕೈಕೇಯಿಯನ್ನು ಹೀಗೆ ನಿಂದಿಸಿರುವುದನ್ನು ನೋಡಿ ದರೆ,ತನಗುಂಟಾದ ದುಸ್ಸ್ವಪ್ನಗಳನ್ನೂ, ಆಕಸ್ಮಿಕವಾದ ದೂತಾಗಮನವನ್ನೂ ಭಾವಿಸಿ, ಆ ಕೈಕೇಯಿಯಿಂದ ಅಯೋಧ್ಯೆಯಲ್ಲಿ ಏನೋ ಅನರ್ಥಗಳುಂಟಾಗಿರಬಹುದೆಂದು ತಾನೇ ಊಹಿಸಿಕೊಂಡಿರುವುದಾಗಿ ತಿಳಿಯಬೇಕು.

2. ಇದರಲ್ಲಿ "ರಾಜ್ಯಲಕ್ಷ್ಮಿಯು ನಿನ್ನನ್ನು ಹೊಂದುವ"ಳೆಂದು ದೂತರ ಅಭಿ ಪ್ರಾಯವು. ತನ್ನ ಶ್ರೇಯಃಪ್ರಾರ್ಥನಾರೂಪವಾಗಿ ಆ ದೂತರು ಈಮಾತನ್ನು ಹೇಳಿದು ದಾಗಿ ಭರತನ ಭಾವವು.

ತುಗಳಿಂದ,“ಎಲೈಪ್ರಿಯವತ್ಸನೆ! ನೀನು ಹೋಗಿಬಾ! ನಿನ್ನಿಂದ ನಮ್ಮ ಕೈಕೇಯಿಯು ಸುಪುತ್ರವತಿಯೆಂಬ ಖ್ಯಾತಿಯನ್ನು ಪಡೆದಳಲ್ಲವೆ? ನಿನ್ನತಾಯಿಗೂ ನಿನ್ನತಂದೆಗೂ ನಮ್ಮಕ್ಷೇಮವನ್ನು ತಿಳಿಸು. ಪುರೋಹಿತನಾದ ವಸಿಷ್ಠನಿಗೂ. ಇನ್ನೂ ಇತರಬ್ರಾಹ್ಮಣೋತ್ತಮರಿಗೂ ನಮ್ಮ ಕ್ಷೇಮವನ್ನುತಿಳಿಸು! ಮಹಾಧನುರ್ಧಾರಿಗಳಾಗಿರುವ ರಾಮಲಕ್ಷ್ಮಣರೆಂಬ ಆ ಅಣ್ಣತಮ್ಮಂದಿರಿಬ್ಬರಿಗೂ ನಾವು ಕ್ಷೇಮವನ್ನು ವಿಚಾರಿಸಿದುದಾಗಿ ಹೇಳು” ಎಂದನು. ಹೀಗೆ ಹೇಳಿ ಕೇಕಯರಾಜನು ಆ ಭರತನಿಗೆ ಸತ್ಕಾರಪೂರ್ವಕವಾಗಿ ಅನೇಕವಾದ ಉತ್ತಮಗಜಗಳನ್ನೂ, ಚಿತ್ರಕಂಬಳಗಳನ್ನೂ, ವಿಚಿತ್ರವಾದ ಅಜಿನಗಳನ್ನೂ ವಿಶೇಷಧನರಾಶಿಯನ್ನೂ ಕೊಟ್ಟನು. ಮತ್ತು ಆತನನ್ನು ಅನೇಕವಿಧದಲ್ಲಿ ಸತ್ಕರಿಸಿ, ಆತನಿಗೆ ಕಂಠಾಭರಣಯೋಗ್ಯವಾದ ಎರಡುಸಾವಿರಸಂಖ್ಯೆಯುಳ್ಳ ಚಿನ್ನದವರಹಗಳನ್ನೂ, ಒಂಭನಾವಿರದ ಆರುನೂರು ಕುದುರೆಗಳನ್ನೂ ಕೊಟ್ಟನು. ಮತ್ತು ತಮ್ಮಪ್ರಭುವಿಗಾಗಿ ತಮ್ಮಪ್ರಾಣವನ್ನೇ ಬಿಡುವಷ್ಟು ಸ್ವಾಮಿಭಕ್ತಿಯುಳ್ಳ ಅನೇಕಪರಿಜನರನ್ನೂ ಆತನ ಸಂಗಡಕಳುಹಿಸಿಕೊಟ್ಟನು. ಅವರೆಲ್ಲರೂ ಬಹಳಗುಣಾಢ್ಯರಾಗಿಯೂ,ನಂಬಿಕೆಯುಳ್ಳವಾರಾಗಿಯೂ ಇದ್ದರು ಆತನ ಮಾವನಾದ ಯುಧಾಜಿತ್ತು,ಕೂಡ, ಭರತನಿಗೆ ಇರಾವಂತ ಮತ್ತು ಇಂದ್ರಶಿರವೆಂಬ ಪರ್ವತಗಳಲ್ಲಿಹುಟ್ಟಿದುವುಗಳಾಗಿಯೂ, ಅಂದವಾದ ಆಕಾರವುಳ್ಳವುಗಳಾಗಿಯೂ ಇರುವ ಅನೇಕ ಗಜಸೈನ್ಯವನ್ನು ಕೊಟ್ಟನು.ಮತ್ತುಬಹುವೇಗಶಾಲಿಗಳಾಗಿಯೂ ಕಾರ್ಯಸಮರ್ಥಗಳಾಗಿಯೂ ಇರುವ ಖರಸಮೂಹಗಳನ್ನೂ,ಇನ್ನೂ ಅನೇಕಧನರಾಶಿಯನ್ನೂ ಕೊಟ್ಟನು. ಮತ್ತು ಅಂತಃಪುರದಲ್ಲಿ ಬಹುಕಾಲದಿಂದ ಪೋಷಿಸಲ್ಪಟ್ಟು, ಹುಲಿಗಳಂತೆ ಮಹಾವೀರ್ಯವುಳ್ಳವುಗಳಾಗಿ, ಶಸ್ತ್ರದಂತಿರುವ ಕೋರೆಹಲ್ಲುಗಳಿಂದ ಕೂಡಿದ ದೊಡ್ಡದೊಡ್ಡ ನಾಯಿಗಳನ್ನೂ ಉಡುಗೊರೆಯಾಗಿಕೊಟ್ಟನು. ಹೀಗೆ ಅಜ್ಜನಾದ ಕೇಕಯರಾಜನೂ,ಮಾವನಾದ ಯುಧಾಜಿತ್ತೂ,ತನಗಾಗಿ ತಂದುಕೊಟ್ಟ ಈವಸ್ತುಸಮೂಹಗಳೆಲ್ಲವನ್ನೂ ನೋಡಿ ಭರತನು, ಪ್ರಯಾಣದ ಆತುರದಿಂದ ಅವೊಂದನ್ನೂ ಅಕ್ಕರೆಯಿಂದ ಆದರಿಸಿ ಸಂತೋಷಿಸಲಿಲ್ಲ. ಹಿಂದಿನರಾತ್ರಿಯಲ್ಲಿ ತಾನು ಘೋರವಾದ ದುಸ್ಸ್ವಪ್ನಗಳನ್ನು ಕಂಡುದೂ, ಈಗ ದೂತರು ಬಂದು ತ್ವರೆಪಡಿಸಿದುದೂ,ಆತನಿಗೆ ಮನಸ್ಸಿನಲ್ಲಿ ಬಂದು ದೊ

ಡ್ಡಶಂಕೆಯನ್ನುಂಟುಮಾಡಿತ್ತು. ಹೀಗೆ ಚಿಂತೆಯಿಂದ ತನ್ನ ಅರಮನೆಯನ್ನು ಬಿಟ್ಟು ಹೊರಟು, ಗಜತುರಗಪದಾತಿಗಳಿಂದ ತುಂಬಿದ ದೊಡ್ಡರಾಜಬೀದಿಗೆ ಬಂದನು. ಅಲ್ಲಿಂದ [1] ಆ ದಾರಿಯನ್ನು ಹಿಡಿದು ಅಂತಃಪುರಕ್ಕೆಬಂದು ಒಳಗೆ ಪ್ರವೇಶಿಸಿದನು. ಅಲ್ಲಿಯೂ ಶತ್ರುಘ್ನನೊಡಗೂಡಿ ಕೇಕಯರಾಜನಿಗೂ, ಯುಧಾಜಿತ್ತಿಗೂ ನಮಸ್ಕರಿಸಿ,ಅವರ ಅನುಮತಿಯನ್ನು ಪಡೆದು ರಥವನ್ನೇರಿ ಪ್ರಯಾಣಮಾಡಿದನು. ಹೀಗೆ ಭರತನು ಪ್ರಯಾಣಮಾಡುತ್ತಿರುವಾಗ, ಅಂದವಾದ ಚಕ್ರಗಳುಳ್ಳ ಅನೇಕರಥಗಳು, ಒಂಟೆಗಳು, ಎತ್ತುಗಳು, ಕುದುರೆಗಳು, ಹೇಸರಗತ್ತೆಗಳು, ಮೊದಲಾದುವುಗಳನ್ನು ಸಾಗಿಸಿಕೊಂಡು, ಪರಿಜನರೆಲ್ಲರೂ ಆತನನ್ನು ಹಿಂಬಾಲಿಸಿ ಬರುತಿದ್ದರು. ಹೀಗೆ ಭರತನು ಕೇಕಯರಾಜನ ಸೈನ್ಯದಿಂದ ರಕ್ಷಿಸಲ್ಪಟ್ಟವನಾಗಿ. ಶತ್ರುಘ್ನನೊಡಗೂಡಿ ತನಗೆ ಸಮಾನವಾದ ಇತರಮಂತ್ರಿಗಳನ್ನೂ ಸಂಡಗಕರೆದುಕೊಂಡು, ಇಂದ್ರಲೋಕವನ್ನು ಬಿಟ್ಟು ಹೊರಟ ಸಿದ್ಧನಂತೆ ಬರುತಿದ್ದನು. ಇಲ್ಲಿಗೆ ಎಪ್ಪತ್ತನೆಯ ಸರ್ಗವು.

---

ಭರತನು ಅಯೋಧ್ಯೆಗೆ ಬಂದು ತಂದೆಯಮನೆಗೆ ಪ್ರವೇಶಿಸಿದುದು.

ಹೀಗೆ ರಘುವಂಶವರ್ಧಕನಾಗಿಯೂ, ಶ್ರೀಮಂತನಾಗಿಯೂ ಇರುವ ಭರತನು, ಆ ರಾಜಗೃಹವೆಂಬ ಪಟ್ಟಣದ ಪೂರ್ವದಿಕ್ಕಿನ ಬಾಗಿಲಿನಿಂದ ಹೊರಟುಬರುತ್ತ, ಸುದಾಮಾನದಿಯನ್ನು ನೋಡಿ ಸಂತೋಷದಿಂದ ಆಪುಣ್ಯನದಿಗೆ ನಮಸ್ಕರಿಸಿ,ಅದನ್ನು ದಾಟಿ, ಅಲ್ಲಿಂದ ಮುಂದೆಹೊರಟು ವಿಸ್ತಾರವಾದ ಹ್ಲಾದಿನಿಯೆಂಬ ನದಿಯಬಳಿಗೆಬಂದನು. ಆ ನದಿಯನ್ನು ಏಲಾಧಾನವೆಂಬ ಗ್ರಾಮದ ಸಮೀಪದಲ್ಲಿ ದಾಟಿ, ಮುಂದಿದ್ದ ಅಪರಪರ್ಪಟವೆಂಬ ಗ್ರಾಮದಲ್ಲಿ ಸ್ವಲ್ಪಹೊತ್ತಿನವರೆಗೆ ಮಾರ್ಗಾಯಾಸವನ್ನು ಕಳೆದು, ತನ್ನ ಪ್ರವಾಹವೇಗ

---

1. ಇದರಿಂದ ಭರತನಿಗುಂಟಾದ ದುಸ್ಸ್ವಪ್ನಗಳನ್ನೂ, ದೂತಾಗಮನವನ್ನೂ ಕೇಳಿ, ಕೇಕಯನೂ, ಯುಧಾಜಿತ್ತೂ, ಭರತನ ಮನೆಗೆ ತಾವೇ ಬಂದು ಕಾಣಿಕೆಗಳನ್ನು ಕೊಟ್ಟರೆಂದೂ,ಆಮೇಲೆ ಭರತನು ಅವರೆಲ್ಲರೊಡನೆಯೂ ತನ್ನಮನೆಯನ್ನು ಬಿಟ್ಟುಹೊರಟು,ಮಾತಾಮಹಿಮೊದಲಾದವರನ್ನು ನೋಡುವುದಕ್ಕಾಗಿ ಬಂದನೆಂದೂಗ್ರಹಿಸಬೇಕು.

ಧಿಂದ ಕಲ್ಲುಗಳನ್ನೂ ಎಳೆದುಕೊಂಡು ಹೋಗುವ ಸ್ವಭಾವವುಳ್ಳ ಶಿಲಾವಹೆ ಯೆಂಬ ನದಿಯನ್ನು ದಾಟಿ, ಅದರ ಆಗ್ನೇಯದಿಕ್ಕಿನಲ್ಲಿರುವ ಶಲ್ಯಕರ್ತನವೆಂಬ ಗ್ರಾಮವನ್ನು ಸೇರಿದರು. ಸತ್ಯಸಂಧನಾಗಿಯೂ ಶುದ್ಧಾತ್ಮನಾಗಿಯೂ ಶ್ರೀಮಂತನಾಗಿಯೂಇರುವ ಆಭರತನು ಆನದಿಯನ್ನೂ,ಗ್ರಾಮವನ್ನೂನೋ ಡುತ್ತ, ಆ ಗ್ರಾಮವಾಸಿಗಳಿಗೆ ಸಂಭವಿಸುತಿದ್ದ ಕೆಲವು ಈತಿಬಾಧೆಗಳನ್ನು ತ ಪ್ಪಿಸಿ ಮುಂದೆ ಹೊರಟು, ದೊಡ್ಡದೊಡ್ಡ ಅನೇಕಪರ್ವತಗಳನ್ನು ದಾಟಿ, ಚೈತ್ರರಥವೆಂಬ ವನವನ್ನು ನೋಡಬೇಕೆಂಬ ಕುತೂಹಲದಿಂದ ಅಲ್ಲಿಗೆ ಬಂ ದನು. ಅಲ್ಲಿಂದ ಮುಂದೆ ಸರಸ್ವತೀನದಿಯನ್ನೂ, ಗಂಗೆಯೆಂಬ ಹೆಸರುಳ್ಳ ಪಶ್ಚಿಮಸಮುದ್ರಗಾಮಿನಿಯಾದ ಮತ್ತೊಂದುನದಿಯನ್ನೂ ನೋಡಿ, ಅವೆರ ಡರ ಸಂಗಮಸ್ಥಳವನ್ನು ಸೇರಿ, ಅಲ್ಲಿಂದ ಮುಂದೆಹೊರಟು, ವೀರಮತ್ಸ್ಯದೇ ಶದ ಉತ್ತರದಿಕ್ಕಿನಲ್ಲಿರುವ ಭಾರುಂಡವೆಂಬ ವನವನ್ನು ಪ್ರವೇಶಿಸಿದನು. ಅಲ್ಲಿಂ ದಮುಂದೆ ಬಂದಾಗ,ಅಲ್ಲಿ ಬಹುವೇಗದಿಂದ ಪ್ರವಹಿಸುತ್ತ,ಅನೇಕಪರ್ವತಗಳಿಂ ದ ಸುತ್ತಲ್ಪಟ್ಟು ನೇತ್ರಾನಂದಕರವಾದ ಕುಳಿಂಗಾನದಿಯನ್ನು ನೋಡಿ,ಆಸ್ಥ ಳದಲ್ಲಿಯೇ ಅದನ್ನು ದಾಟುವುದು ಅಸಾಧ್ಯವೆಂದು ತೋರಿಬಂದುದರಿಂದ, ಆ ನದಿಯು ಯಮುನೆಯೊಡನೆ ಸೇರತಕ್ಕ ಸಂಗಮಸ್ಥಳದಲ್ಲಿ ಅದನ್ನು ದಾಟಿ,ಬಿಸಿ ಲಿನ ತಾಪಕ್ಕಾಗಿ ಬಹಳ ಬಳಲಿದ ತನ್ನ ಸೈನ್ಯಕ್ಕೆ ತೀರಪ್ರದೇಶದಲ್ಲಿ ಸ್ವಲ್ಪ ವಿಶ್ರಾಂತಿಯನ್ನು ಕೊಟ್ಟನು. ಆ ಸಂಗಮಸ್ಥಳದಲ್ಲಿ, ಆನೆ, ಕುದುರೆ ಮೊದ ಲಾದ ಮೃಗಗಳನ್ನೆಲ್ಲಾ ನೀರಿಗೆ ಬಿಟ್ಟು, ಕುದುರೆಗಳ ಬಳಲಿಕೆಯನ್ನಾರಿಸಿ, ತಾನೂ ಸ್ನಾನಮಾಡಿ ನೀರನ್ನು ಕುಡಿದು, ಮುಂದೆ ಬಹುದೂರದವರೆಗೆ ನೀ ರುಸಿಕ್ಕುವುದು ಕಷ್ಟವೆಂದು ತೋರಿದುದರಿಂದ ಅಲ್ಲಿಂದಲೇ ಸ್ವಲ್ಪನೀರನ್ನು ಸಂಗ್ರಹಿಸಿಟ್ಟುಕೊಂಡು ಹೊರಟನು. ಶುಭಾಚಾರವುಳ್ಳ ಆ ರಾಜಪುತ್ರನು ಭದ್ರಲಕ್ಷಣವುಳ್ಳ ಆನೆಯನ್ನೇರಿ, ವಾಯುವು ವಿಸ್ತಾರವಾದ ಆಕಾಶವನ್ನು ದಾಟುವಹಾಗೆ ವಿಶೇಷಜನಸಂಚಾರವಿಲ್ಲದ ಆ ಮಹಾರಣ್ಯವನ್ನು ವೇಗದಿಂದ ಬಹುಸುಲಭವಾಗಿ ದಾಟಿದನು. ಮುಂದೆ ಆತನು ಅಂಶುಧಾನವೆಂಬ ಪಟ್ಟ ಣದ ಸಮೀಪಕ್ಕೆಹೋದನು. ಅಲ್ಲಿ ಮಹಾನದಿಯಾದ ಗಂಗೆಯನ್ನು ದಾಟು ವುದಸಾಧ್ಯವೆಂದು ತೋರಿಬಂದುದರಿಂದ, ಈ ಗಂಗಾತರಣಕ್ಕೆ ಅನುಕೂಲ ವೆಂದು ಪ್ರಸಿದ್ಧವಾದ ಪ್ರಾಗ್ವಟವೆಂಬ ಪಟ್ಟಣಕ್ಕೆ ಬಂದು, ಅಲ್ಲಿ ಗಂಗೆ

ಯನ್ನು ದಾಟಿ 'ಮುಂದೆಹೊರಟು, ಕುಟಿಕೋಷ್ಠಿಕೆಯೆಂಬ ನದಿಯ ಬಳಿಗೆ ಬಂದನು. ಸಮಸ್ತಸೈನ್ಯಗಳೊಡನೆ ಆ ನದಿಯನ್ನೂ ದಾಟಿ, ಧರ್ಮವರ್ಧನ ವೆಂಬ ಗ್ರಾಮಕ್ಕೆ ಬಂದು, ಅಲ್ಲಿಂದ ತೋರಣವೆಂಬ ಊರಿಗೆ ಹೋಗಿ, ಅದ ಕ್ಕೆ ದಕ್ಷಿಣದಲ್ಲಿರುವ ಜಂಬೂಪ್ರಸ್ಥವೆಂಬ ಗ್ರಾಮವನ್ನೂ, ಅಲ್ಲಿಂದ ಮುಂ ದೆ ವರೂಥವೆಂಬ ಗ್ರಾಮವನ್ನೂ ದಾಟಿಬಂದನು. ಮುಂದೆ ಅತಿಮನೋ ಹರವಾದ ಒಂದುವನಪ್ರದೇಶದಲ್ಲಿ ಸ್ವಲ್ಪಹೊತ್ತಿನವರೆಗೆ ಇಳಿದಿದ್ದು, ಅಲ್ಲಿಂ ದ ಪೂರ್ವಾಭಿಮುಖವಾಗಿ ಹೊರಟು, ಉಜ್ಜಿಹಾನವೆಂಬ ಪಟ್ಟಣದ ಉದ್ಯಾ ನವನವನ್ನು ಸೇರಿದನು. ಆ ವನದಲ್ಲಿ ಕಡವದ ಮರಗಳೇ ಹೆಚ್ಚಾಗಿ ತುಂಬಿ ರಲು,ಆ ಗಿಡಗಳನ್ನು ನೋಡುತ್ತ, ಸ್ವಲ್ಪಹೊತ್ತುಸಂತೋಷದಿಂದಿದ್ದು, ವೇ ಗವತ್ತಾದ ಕುದುರೆಗಳನ್ನು ರಥಕ್ಕೆ ಕಟ್ಟಿಕೊಂಡು ಮುಂದೆಹೊರಟನು. ಆ ಉಜ್ಜಿಹಾನಾಪುರಿಯನ್ನು ಕಳೆದ ಮೇಲೆ ಮುಂದಿರತಕ್ಕ ಪ್ರಾಂತ್ಯಗಳೆಲ್ಲವೂ ತಮ್ಮ ದೇಶಕ್ಕೆ ಸೇರಿದುವುಗಳಾಗಿದ್ದುದರಿಂದ, ಸೈನಿಕರಿಗೆ ನಿರ್ಭಯವಾಗಿ ಮೆಲ್ಲಗೆ ಬರಬಹುದೆಂದು ಹೇಳಿ, ತಾನುಮಾತ್ರ ರಥವನ್ನು ವೇಗವಾಗಿ ನಡೆ ಸಿಕೊಂಡು ಅತ್ಯಾತುರದಿಂದ ಹೊರಟನು. ಮುಂದೆ [1]ಸರ್ವತೀರ್ಥವೆಂಬ ಊ ರಿನಲ್ಲಿ ಒಂದು ರಾತ್ರಿಯಿದ್ದು, ಅಲ್ಲಿಂದ ಹೊರಟು ಉತ್ತಾನಿಕಾನದಿಯನ್ನೂ ಇನ್ನೂ ಕೆಲವು ನದಿಗಳನ್ನೂ ದಾಟಿಹೋದನು. ಪರ್ವತಪ್ರದೇಶಗಳಲ್ಲಿ ಹು ಟ್ಟಿ ಕಾಡುಬೆಟ್ಟಗಳಲ್ಲಿ ನಡೆದು ಪರಿಚಯವುಳ್ಳ ಕುದುರೆಗಳಿಂದಲೇ ಆ ವನ ಪ್ರದೇಶಗಳನ್ನು ದಾಟಿ, ಮುಂದೆ[1]ಹಸ್ತಿಪೃಷ್ಠಕವೆಂಬ ಗ್ರಾಮದ ಬಳಿಗೆಬಂ ದು, ಅಡ್ಡಲಾಗಿದ್ದ ಕುಟಿಕಾನದಿಯನ್ನು ದಾಟಿ, ಅಲ್ಲಿಂದ ಮುಂದೆ ಲೋಹಿ ತ್ಯವೆಂಬ ಪಟ್ಟಣವನ್ನು ಸೇರಿ, ಅದರ ಪಕ್ಕದಲ್ಲಿ ಕಪೀವರೆಯೆಂಬ ಮತ್ತೊಂ ದು ನದಿಯನ್ನು ದಾಟಿಹೋದನು. ಹಾಗೆಯೇ ಮುಂದೆ ಏಕಸಾಲವೆಂಬ ಗ್ರಾ ಮಕ್ಕೆ ಹೋಗಿ, ಅಲ್ಲಿ ಸ್ಥಾಣುಮತೀನದಿಯನ್ನು ದರ್ಶನಮಾಡಿದನು. ಅಷ್ಟ ರೊಳಗಾಗಿ ಕುದುರೆಗಳು ಬಹಳ ಬಳಲಿರುವುದನ್ನು ನೋಡಿ, ಕಳಿಂಗನಗರದ

---

1. ಇಲ್ಲಿ ಸರ್ವತೀರ್ಥವೆಂಬುದಕ್ಕೆ ಸರ್ಪತೀರ್ಥವೆಂದೂ ಪಾಠಾಂತರವುಂಟು. ಹಸ್ತಿಪೃಷ್ಠವೆಂದು ಒಂದು ಗ್ರಾಮದ ಹೆಸರು. ಅಥವಾ ಆನೆಯ ಹೆಗಲನ್ನೇರಿ ಕು ಟಿಕಾನದಿಯನ್ನು ದಾಟಿದರೆಂದು ಮಹೇಶ್ವರತೀರ್ಥರ ವ್ಯಾಖ್ಯಾನವು.

ಸಮೀಪದಲ್ಲಿರುವ ಸಾಲವನದಲ್ಲಿ ಸ್ವಲ್ಪಕಾಲದವರೆಗೆ ದಣಿವಾರಿಸಿಕೊಂಡು, ಆಗಲೇ ಅಲ್ಲಿಂದ ಹೊರಟನು. ಆ ರಾತ್ರಿಯಲ್ಲಿಯೇ ಸಾಲವನವನ್ನು ಕಳೆದು ಅರುಣೋದಯಕಾಲಕ್ಕೆ ಸರಿಯಾಗಿ ಅಯೋಧ್ಯಾನಗರದ ಉಪ್ಪರಿಗೆಗಳು ಕಣ್ಣಿಗೆ ಕಾಣುವಷ್ಟುದೂರದವರೆಗೆ ಬಂದುಬಿಟ್ಟನು. ಪುರುಷಶ್ರೇಷ್ಠನಾದ ಆ ಭರತನು ಮಾವನಮನೆಯನ್ನು ಬಿಟ್ಟುಹೊರಟು ಏಳುದಿವಸಗಳಾಗಿದ್ದುವು. ಎಡೆಬಿಡದೆ ಹೀಗೆ ಪ್ರಯಾಣಮಾಡಿ ಎಂಟನೆಯದಿವಸದಲ್ಲಿ ಮನುನಿರ್ಮಿತ ವಾದ ಅಯೋಧ್ಯಾನಗರವನ್ನು ಕಂಡು, ಸಾರಥಿಯನ್ನು ಕುರಿತು ಸಂತೋಷ ದಿಂದ “ಎಲೆಸೂತನೆ! ಅನೇಕಪುಣ್ಯೋದ್ಯಾನಗಳಿಂದ ಕೂಡಿ ಸಾರವುಳ್ಳ ಕ್ಷೇ ತ್ರಗಳಿಂದ ಅತಿಮನೋಹರವಾದ ಅಯೋಧ್ಯಾನಗರವು ಅದೋ ಅಲ್ಲಿ ಕಾಣು ತ್ತಿರುವುದು ನೋಡು ! ಈ ಪುರದಲ್ಲಿ ಅನೇಕಯಾಗಗಳನ್ನು ಮಾಡಿದವರೂ ಶಮದಮಾದಿಗುಣಗಳುಳ್ಳವರೂ, ವೇದಪಾರಂಗತರೂ ಹೇರಳವಾಗಿ ತುಂ ಬಿರುವರು. ಇನ್ನೂ ಧನಿಕರಾದ ಅನೇಕಬ್ರಾಹ್ಮಣೋತ್ತಮರಿರುವರು. ಈ ನಮ್ಮ ಅಯೋಧ್ಯೆಯುಪರಂಪರೆಯಾಗಿ ರಾಜರ್ಷಿಗಳಿಂದಲೇಪರಿಪಾಲಿತವಾ ದುದು. ಆದರೆ ಈ ಅಯೋಧ್ಯೆಯ ಸ್ಥಿತಿಯು ಮೊದಲಿನಂತೆ ಕಾಣುವುದಿಲ್ಲ. ಜನಗಳಲ್ಲಿ ಮೊದಲಿದ್ದಷ್ಟು ಉತ್ಸಾಹವಿರುವಂತೆ ತೋರಲಿಲ್ಲ. ಮೊದಲು ಇಷ್ಟುದೂರದಲ್ಲಿರುವಾಗಲೇ ಆ ಪುರವಾಸಿಗಳ ಕೋಲಾಹಲಧ್ವನಿಯು ಒ ಟ್ಟಾಗಿ ಸೇರಿ, ಸುತ್ತಲೂ ವ್ಯಾಪಿಸಿ ಬಹುದೂರಕ್ಕೆ ಕೇಳಿಸುತ್ತಿತ್ತು. ಈಗ ಆ ಶಬ್ದವೇ ಇಲ್ಲ! ಹೀಗೆ ನಿಶ್ಯಬ್ದವಾಗಿರುವಂತೆ ತೋರುವುದಕ್ಕೆ ಕಾರಣ ವೇನೋ ತಿಳಿಯಲಿಲ್ಲ! ಪೂರ್ವದಲ್ಲಿ ಅನೇಕಜನರು [1] ಸಾಯಂಕಾಲದ:ಹೊತ್ತಿ ನಲ್ಲಿ ಊರ ಹೊರಗಿನ ಈ ಉದ್ಯಾನಗಳಿಗೆ ಬಂದು, ಇಲ್ಲಿ ಬಹುಹೊತ್ತಿನವರೆಗೆ ವಿನೋದದಿಂದ ವಿಹರಿಸುತಿದ್ದು, ಕತ್ತಲೆಯು ಆರಂಭಿಸಿದೊಡನೆಯೇ ತಮ್ಮ ಆಟಪಾಟಗಳನ್ನು ಬಿಟ್ಟು ಆತುರದಿಂದ ಊರಿನ ಕಡೆಗೆ ಹೊರಡುತ್ತಿರುವರು. ನೋಡುವುದಕ್ಕೆ ಅವರ ಸಂಭ್ರಮವು ಎಷ್ಟೋ ಆನಂದಕರವಾಗಿತ್ತು.

---

1. ಇಲ್ಲಿ “ ಪೂರ್ವದಲ್ಲಿ ಕೆಲವುಕಾಮುಕರು ಸಂಜೆಯಾದ ಕೂಡಲೆ. ರಾತ್ರಿಕಾ ಲಗಳಲ್ಲಿ ಈ ತೋಟಗಳಿಗೆ ಬಂದು ಕ್ರೀಡಿಸುತಿದ್ದು, ಬೆಳಗಾದಮೇಲೆ ಅತ್ಯಾತುರದಿಂದ ಮನೆಯ ಕಡೆಗೆ ಹೋಗುತಿದ್ದರು.” ಎಂದು ಗೋವಿಂದರಾಜರ ಅರ್ಥವು.

ಈಗ ಅದೊಂದನ್ನೂ ಕಾಣೆನು. ಆಗ ನಗುತ್ತಿದ್ದ ಉದ್ಯಾನವನಗಳೆಲ್ಲವೂ ಈಗ ಅಳುವಂತೆ ಕಾಣುವುವು. ಎಲೈ ಸೂತನೆ! ಇವೆಲ್ಲವನ್ನೂ ನೋಡಿದರೆ ನಮ್ಮ ಅಯೋಧ್ಯಾಪಟ್ಟಣವೇ ಅರಣ್ಯಪ್ರಾಯವಾಗಿ ಹೋಗಿರಬಹುದೆಂದೆಣಿಸಬೇಕಾಗಿದೆ. ಮೊದಲಿನಂತೆ ನಮ್ಮ ಊರಿನಲ್ಲಿ ಪ್ರಮುಖರಾದ ಪುರುಷರು ರಥಗಳನ್ನೂ ಆನೆಗಳನ್ನೂ, ಕುದುರೆಗಳನ್ನೂ ಏರಿ ಪಟ್ಟಣದಿಂದ ಹೊರಕ್ಕೆ ಹೋಗುವುದಾಗಲಿ,ಪಟ್ಟಣಕ್ಕೆ ಬರುವುದಾಗಲಿ ಯಾವುದೊಂದೂ ಕಾಣುವುದಿಲ್ಲ. ಪೂರ್ವದಲ್ಲಿ ತೋಟಗಳೆಲ್ಲವೂ ಪುಷ್ಪಫಲಭರಿತವಾಗಿ ಮಕರಂದಪಾನಮಾಡಿ ಕೊಬ್ಬಿದ ಗಿಳಿ, ಕೋಗಿಲೆ. ಮೊದಲಾದ ಹಕ್ಕಿಗಳಿಂದ ನಗುವಂತೆ ಕಾಣುತಿದ್ದುವು. ಈ ತೋಟಗಳೆಲ್ಲವೂ ರತಿಕ್ರೀಡೆಗಾಗಿ ಬರತಕ್ಕ ಜನರ ಮನಸ್ಸಿಗೆ ಸಮಸ್ತವಿಧದಲ್ಲಿಯೂ ಎಷ್ಟೋ ಸಂತೋಷವನ್ನುಂಟುಮಾಡುತಿದ್ದುವು.ಅಂತಹ ಉಪವನಗಳೆಲ್ಲವೂ ಈಗಸ್ವಲ್ಪವೂ ಉಲ್ಲಾಸವಿಲ್ಲದೆ ಅಳುವಂತೆ ಕಾಣುವುವು. ದಾರಿಯಲ್ಲಿರುವ ಸಾಲುಮರಗಳೆಲ್ಲವೂ ಬಣ್ಣಗುಂದಿರುವುವು. ಮದಿಸಿದ ಮೃಗಗಳಾಗಲಿ,ಪಕ್ಷಿಗಳಾಗಲಿ ಯಾವುದೊಂದರ ಧ್ವನಿಯೂ ಕೇಳಿಸುವುದಿಲ್ಲ. ಕರ್ಣಾನಂದಕರವಾಗಿ ಕೂಗುತಿದ್ದ ಹಕ್ಕಿಗಳೆಲ್ಲವೂ ಸದ್ದುಮಾಡದಿರುವುವು. ಎಲೈ ಸೂತನೆ! ಪೂರ್ವದಲ್ಲಿ ಈ ಸ್ಥಳಕ್ಕೆ ಬಂದಾಗಲೇ ಆ ಅಯೋಧ್ಯಾಪಟ್ಟಣದಲ್ಲಿ ಧೂಪಹಾಕಿದ ಅಗುರುಚಂದನಗಳ ಸುವಾಸನೆಯು ಎಷ್ಟೋ ಆನಂದಕರವಾಗಿರುತಿತ್ತು. ಈಗ ಆ ಸುವಾಸನೆಯುಳ್ಳ ಗಾಳಿಯೂ ಆ ಕಡೆಯಿಂದ ಬಾರದಿರುವುದಕ್ಕೇನುಕಾರಣವೋ ತಿಳಿಯಲಿಲ್ಲ, ಭೇರಿ, ಮದ್ದಳೆ, ವೀಣೆ, ಮುಂತಾದ ವಾದ್ಯಗಳನ್ನು ವಾದಿಸುವಾಗ, ಎಡೆಬಿಡದೆ ಗಂಭೀರವಾಗಿ ಹೊರಟುಬರುತ್ತಿದ್ದ ಶಬ್ದಗಳು ಈಗ ಕೇಳಿಸುವುದೇಇಲ್ಲವಲ್ಲಾ! ಇದಕ್ಕೆ ಕಾರಣವೇನು! ಅನಿಷ್ಟಸೂಚಕಗಳಾಗಿ, ಬಹುಕ್ರೂರಗಳಾಗಿ, ನೋಡುವಾಗಲೇ ಮಹಾಭಯವನ್ನುಂಟುಮಾಡತಕ್ಕ ಅನೇಕ ದುಶ್ಶಕುನಗಳು ಕಾಣುತ್ತಿರುವುವು. ಇದರಿಂದ ನನ್ನ ಮನಸ್ಸಿಗೆ ಬಹಳ ಚಿಂತೆಯುಂಟಾಗಿರುವುದು. ಎಲೆ, ಸೂತನೆ! ಈದುಃಖವುಂಟಾಗುವುದಕ್ಕೆ ಎಷ್ಟೆಷ್ಟು ಊಹಿಸಿ ನೋಡಿದರೂ ಕಾರಣವೇ ತಿಳಿಯಲಿಲ್ಲ. ಹೀಗಿದ್ದರೂ ನನ್ನ ಮನಸ್ಸು ತತ್ತಳಿಸುತ್ತಿರುವುದು." ಎಂದು ಹೇಳುತ್ತಾ,ಉತ್ಸಾಹಹೀನನಾಗಿ, ಕದಲಿದಮನಸ್ಸುಳ್ಳವನಾಗಿ, ಭಯದಿಂದ ಕಲಗಿದ ಇಂದ್ರಿಯಗಳುಳ್ಳ

ವನಾಗಿ, ಇಕ್ಷ್ವಾಕುರಾಜರಿಂದ ಸುರಕ್ಷಿತವಾಗಿ ಪರಿಪಾಲಿಸಲ್ಪಟ್ಟ ಅಯೋಧ್ಯಾಪುರಕ್ಕೆ ಅತ್ಯಾತುರದಿಂದ ಪ್ರವೇಶಿಸಿದನು. ಎಡೆಬಿಡದೆ ಬಹುದೂರ ಪ್ರಯಾಣಮಾಡಿದುದರಿಂದ ಆತನ ಕುದುರೆಗಳೆಲ್ಲವೂ ಬಹಳವಾಗಿ ಬಳಲಿದ್ದುವು. ಹಾಗಿದ್ದರೂ ಅವುಗಳನ್ನು ವೇಗದಿಂದಲೇ ನಡೆಸುತ್ತಾ,[1] ವೈಜಯಂತವೆಂಬ ಹೆಸರುಳ್ಳ, ಹೊರಬಾಗಿಲಿನ ಮಾರ್ಗದಿಂದ ಪಟ್ಟಣದೊಳಕ್ಕೆ ಪ್ರವೇಶಿಸಿದನು. ಆಗ ಅಲ್ಲಿದ್ದ ದ್ವಾರಪಾಲಕರು ತಟ್ಟನೆ ಇದಿರೆದ್ದು, "ವಿಜಯೀಭವ" ಎಂದು ಹೇಳುತ್ತಾ ಆತನನ್ನು ಹಿಂಬಾಲಿಸಿ ಬರುತ್ತಿರಲು,ಭರತನು ಕದಲಿದ ಮನಸ್ಸಿನಿಂದ ತತ್ತಳಿಸುತ್ತಾ,ತನ್ನನ್ನು ಹಿಂಬಾಲಿಸಿಬರುತಿದ್ದ ಆ ದ್ವಾರಪಾಲಕರನ್ನು ಉಪಚಾರವಾಕ್ಯಗಳಿಂದ ಹಿಂತಿರುಗಿಸಿ, ತನಗೆ ಪ್ರಿಯನಾದ ಅಶ್ವಪತಿಯ ಸಾರಥಿಯನ್ನು ನೋಡಿ "ಎಲೆ, ಭದ್ರನೆ ! ನಿಷ್ಕಾರಣವಾಗಿ ವಸಿಷ್ಠನು ನನ್ನನ್ನು ಇಷ್ಟು ಆತುರದಿಂದ ಕರೆಸಿರುವುದೇಕೆ ? ಏನೋ ಅನರ್ಥವು ಸಂಭವಿಸಿರಬಹುದೆಂದು ನನ್ನ ಮನಸ್ಸಿಗೆ ಒಂದು ಶಂಕೆಯುಂಟಾಗಿದೆ!ನನ್ನ ಸ್ವಭಾವವೇ ವಿಪರೀತವಾಗಿ ಪರಿಣಮಿಸಿರುವಂತೆ ತೋರಿದೆ ! ಪೂರ್ವಕಾಲದಲ್ಲಿ ರಾಜ್ಯಾಧಿಪತಿಗಳಿಗೆ ಯಾವುದಾದರೂ ಒಂದು ಮಹಾವಿಪತ್ತು ಸಂಭವಿಸುವಾಗ, ದೇಶದಲ್ಲಿ ಯಾವಯಾವ ದುರ್ನಿಮಿತ್ತಗಳು ಕಾಣುವುವೆಂದು ನಮ್ಮ ಹಿರಿಯರು ಹೇಳುತ್ತಿದ್ದರೋ,ಅಂತಹ ಸೂಚನೆಗಳೆಲ್ಲವೂ ಈಗ ನಮಗೆ ಕಾಣುತ್ತಿರುವುವು. ಎಲೆ ಸೂತನೆ ! ಇದೋ! ಇಲ್ಲಿ ನೋಡು! ಗೃಹಸ್ಥರ ಮನೆಗಳು ಸಮ್ಮಾರ್ಜನಾದಿಸಂಸ್ಕಾರಗಳೊಂದೂ ಇಲ್ಲದೆ ನೋಡುವುದಕ್ಕೆ ಅಸಹ್ಯವಾಗಿರುವುವು.ಒಬ್ಬರಾದರೂ ಬಾಗಿಲುಗಳನ್ನು ಮುಚ್ಚಿಲ್ಲವು. ಎಲ್ಲಿ ನೋಡಿದರೂ ಕಣ್ಣಿಗೆ ಅಂದವನ್ನು ಕೊಡುವುದಿಲ್ಲ. ಈ ಪಟ್ಟಣದಲ್ಲಿ ಯಾರೊಬ್ಬರೂ ಬಲಿಕಾರ್ಯಗಳನ್ನು ನಡೆಸಿದಂತೆ ಕಾಣಿಸಲಿಲ್ಲ.ಯಾವ ಕಡೆಯಿಂದಲೂ ಧೂಪವಾಸನೆಗಳೇ ಹೊರಡುವುದಿಲ್ಲ. ಕುಟುಂಬಿಗಳೊಬ್ಬರಾದರೂ ಊಟಮಾಡಿದಂತೆ ತೋರಲಿಲ್ಲ. ಯಾರ ಮುಖದಲ್ಲಿಯೂ ಕಳೆಯಿಲ್ಲ.ಗೃಹಸ್ಥರ ಮ

1. ಇಲ್ಲಿ "ದ್ವಾರೇಣ ವೈಜಯಂತೇನ ಪ್ರಾವಿಶಚ್ಛ್ರಾಂತವಾಹನಃ।" ಎಂದು ಮೂಲವು. ಇದರಲ್ಲಿರುವ "ರೇ" ಎಂಬವರ್ಣವು ಗಾಯತ್ರಿಯ ಆರನೆಯ ಅಕ್ಷರವಾದ "ರೇ" ಎಂಬ ವರ್ಣವೆಂದು ಗ್ರಹಿಸಬೇಕು. ಇದರಿಂದ ಇಲ್ಲಿಗೆ ಐದುಸಹಸ್ರಗ್ರಂಥಗಳು ಮುಗಿದು ಆರನೆಯಸಹಸ್ರವು ಆರಂಭಿಸಲ್ಪಡುವುದಾಗಿ ತಿಳಿಯಬೇಕು.

ನೆಗಳೆಲ್ಲವೂ ಎಂದಿನಂತೆ ಅಲಂಕರಿಸಲ್ಪಡದೆ ಕಾಂತಿಹೀನವಾಗಿರುವುವು. ದೇವಾಲಯದ ಬಾಗಿಲಿಗೂ ಪುಷ್ಪಮಾಲಿಕಾದ್ಯಲಂಕಾರಗಳನ್ನು ಮಾಡದೆ ಹಾಳುಬಿಟ್ಟಿರುವರು. ಅದರ ಅಂಗಳಗಳನ್ನು ಚೆನ್ನಾಗಿ ಗುಡಿಸಿ ಸಾರಿಸದೆ ಹಾಗೆಯೇ ಬಿಟ್ಟಿರುವರು. ಈ ಪಟ್ಟಣದ ಸ್ಥಿತಿಯು ಮೊದಲಿನಂತಿಲ್ಲವು. ನನಗೇನೋ ಕೇವಲಶೂನ್ಯಪ್ರದೇಶದಂತೆ ಕಾಣುತ್ತಿರುವುದು. ದೇವತಾರ್ಚನಾದಿಕಾರ್ಯಗಳೊಂದೂ ನಡೆಯುವಂತೆ ಕಾಣಲಿಲ್ಲ. ಇದುವರೆಗೆ ಒಂದು ಯಜ್ಞಧ್ವನಿಯಾದರೂ ನನ್ನ ಕಿವಿಗೆ ಬಿಳಲಿಲ್ಲ.ಹೂವಿನಂಗಡಿಗಲ್ಲಿ ಅಂದವಾದ ಒಂದು ಪುಷ್ಪಹಾರವಾದರೂ ಕಾಣುವುದಿಲ್ಲ. ಇದೋ! ಈ ಅಂಗಡಿಗಳಲ್ಲಿರುವ ವರ್ತಕರೂಕೂಡ ಮನಸ್ಸಿನಲ್ಲಿ ಸ್ವಲ್ಪವೂ ಉತ್ಸಾಹವಿಲ್ಲದೆ ಚಿಂತೆಯಿಂದ ಕೊರಗುತ್ತ ಕ್ರಯವಿಕ್ರಯಾದಿವ್ಯಾಪಾರಗಳನ್ನೂ ಬಿಟ್ಟು ಕುಳಿತಿರುವರು. ಮೊದಲಿನಂತೆ ಎಲ್ಲಿಯೂ ಉತ್ಸಾಹವೇ ಕಾಣುವುದಿಲ್ಲ. ಮನುಷ್ಯರ ಸ್ಥಿತಿಯು ಹಾಗಿರಲಿ! ಇದೋ ಇಲ್ಲಿನೋಡು! ದೇವಾಲಯಗಳಲ್ಲಿಯೂ, ಚೌಕಗಳಲ್ಲಿಯೂ. ವಾಸನಾಗಿರತಕ್ಕ ಪಕ್ಷಿಸಮೂಹವೂಕೂಡ, ಹಾಗೆಯೇ ದುಃಖದಿಂದ ಕೊರಗುವಂತೆ ತೋರುವುದು. ಪಟ್ಟಣದಲ್ಲಿರುವ ಸ್ತ್ರೀಪುರುಷರೆಲ್ಲರೂ ಸ್ನಾನಮಾಡದೆ ಮಲಿನದೇಹವುಳ್ಳವರಾಗಿ ಕಣ್ಣುಗಳಲ್ಲಿ ನೀರುಬಿಡುತ್ತಾ, ದೈನ್ಯದಿಂದ ತತ್ತಳಿಸುತ್ತಿರುವಂತೆ ತೋರುವುದು." ಎಂದನು. ಹೀಗೆ ಭರತನು ಅಯೋಧ್ಯೆಯಲ್ಲಿ ಹೋಗುತ್ತಿರುವಾಗ, ಅಲ್ಲಿಯೂ ಅನೇಕ ದುಶ್ಶಕುನಗಳನ್ನು ಕಂಡು, ಮೇಲೆಮೇಲೆ ದುಃಖದಿಂದ ತತ್ತರಪಡುತ್ತ, ಆ ವಿಷಯಗಳೆಲ್ಲವನ್ನೂ ಆಗಾಗ ಸಾರಥಿಗೆ ತಿಳಿಸುತ್ತಾ, ನೆಟ್ಟಗೆ ತನ್ನ ತಂದೆಯಾದ ದಶರಥಮಹಾರಾಜನ ಅರಮನೆಗೆ ಹೋದನು. ಅಮರಾವತಿಯಂತೆ ಪ್ರಕಾಶಿಸುತ್ತಿದ್ದ ಆ ಅಯೋಧ್ಯೆಯಲ್ಲಿ, ಚೌಕಗಳಲ್ಲಿಯಾಗಲಿ, ರಾಜಬೀದಿಗಳಲ್ಲಿಯಾಗಲಿ, ಮನೆಗಳಲ್ಲಿಯಾಗಲಿ, ಜನಸಂಚಾರವಿಲ್ಲದೆ ಕೇವಲಶೂನ್ಯಪ್ರದೇಶದಂತೆ ಕಾಣುತಿತ್ತು. ಮನೆಯ ಬಾಗಿಲುಗಳೆಲ್ಲವೂ ಕೆಂದೂಳಿಯಿಂದ ಮುಚ್ಚಿಹೋಗಿ ಮಲಿನವಾಗಿದ್ದುವು. ಈ ಸ್ಥಿತಿಯನ್ನು ನೋಡಿ ಆ ಭರತನು ದುಃಖದಲ್ಲಿ ಮುಳುಗಿದವನಾಗಿ, ತಾನು ಅಯೋಧ್ಯೆಯಲ್ಲಿ ಹಿಂದೆ ಎಂದೂ ಕಾಣದ ಅವಲಕ್ಷಣಗಳೆಲ್ಲವನ್ನೂ ಕಂಡು ತಲೆಯನ್ನು ತಗ್ಗಿಸಿಕೊಂಡು, ಕುಗ್ಗಿದ ಮನಸ್ಸುಳ್ಳವನಾಗಿ,ಮನಸ್ಸಿನಲ್ಲಿ ಸ್ವಲ್ಪವಾದರೂ ಉತ್ಸಾಹವಿಲ್ಲದೆ ತಂದೆಯ ಅರಮನೆಯೊಳಕ್ಕೆ ಪ್ರವೇಶಿಸಿದನು. ಇಲ್ಲಿಗೆ ಎಪ್ಪತ್ತೊಂದನೆಯ ಸರ್ಗವು.

ಕೈಕೇಯಿಯು ಭರತನಿಗೆ ದಶರಥನ ಮರಣವನ್ನೂ ರಾಮನ ವನಪ್ರಯಾಣವನ್ನೂ ತಿಳಿಸಿ, ರಾಜ್ಯಾಧಿಕಾರವನ್ನು ವಹಿಸಿಕೊಳ್ಳುವ ಹಾಗೆ ಹೇಳಿದುದು.

ಭರತನು ತಂದೆಯ ಅರಮನೆಯನ್ನು ಪ್ರವೇಶಿಸಿ, ಅಲ್ಲಿ ತಂದೆಯನ್ನು ಕಾಣದೆ, ಅಲ್ಲಿಂದ ತಟ್ಟನೆ ಹಿಂತಿರುಗಿ ತಾಯಿಯಾದ ಕೈಕೇಯಿಯ ಅಂತಃಪುರಕ್ಕೆ ಬಂದನು. ಆಗ ಕೈಕೇಯಿಯು ಇದುವರೆಗೂ ತನ್ನ ಮುದ್ದುಮಗನಾದ ಭರತನು ಕಣ್ಮರೆಯಾಗಿ ದೇಶಾಂತರಗತನಾಗಿದ್ದು ಹಿಂತಿರುಗಿ ಬಂದುದನ್ನು ನೋಡಿ, ತಟ್ಟನೆ ತಾನು ಕುಳಿತಿದ್ದ ಸುವರ್ಣಪೀಠದಿಂದೆದ್ದು, ಅತ್ಯಾತುರದಿಂದ ಇದಿರುಗೊಂಡು ಬಂದಳು. ಆಗ ಭರತನು ಕಾಂತಿಹೀನವಾದ ಆ ಅಂತಃಪುರಪ್ರದೇಶವನ್ನು ಸುತ್ತಲೂನೋಡಿ ಚಿಂತಾಕುಲನಾಗಿದ್ದರೂ, ವಿನಯದಿಂದ ಮುಂದೆ ಹೋಗಿ ತಾಯಿಯ ಪಾದವನ್ನು ಹಿಡಿದು ಸಾಷ್ಟಾಂಗಪ್ರಣಾಮವನ್ನುಮಾಡಿದನು. ಕೈಕೇಯಿಯು ಪರಮಸಂತೋಷದಿಂದ ಆತನ ತಲೆಯನ್ನಾಘ್ರಾಣಿಸಿ, ಪ್ರೇಮದಿಂದ ಆತನನ್ನಪ್ಪಿಕೊಂಡು, ತೊಡೆಯಮೇಲೆ ಕುಳ್ಳಿರಿಸಿ ಕುಶಲಪ್ರಶ್ನವನ್ನು ಮಾಡಲಾರಂಭಿಸಿದಳು. “ಎಲೆವತ್ಸನೆ! ನೀನು ಮಾವನ ಮನೆಯನ್ನು ಬಿಟ್ಟು ಹೊರಟು ಎಷ್ಟುದಿನಗಳಾಗಿರಬಹುದು? ರಥದಲ್ಲಿ ಬಹುವೇಗದಿಂದ ಬಂದಿರುವಹಾಗಿದೆ? ನಿನಗೆ ಮಾರ್ಗದಲ್ಲಿ ಬಹಳ ಆಯಾಸವಾಗಿರಲಾರದೆ? ನಿನ್ನ ಅಜ್ಜನಾದ ಕೇಕಯರಾಜನೂ, ನಿನ್ನ ಸೋದರಮಾವನಾದ ಯುಧಾಜಿತ್ತೂ ಕ್ಷೇಮದಲ್ಲಿರುವರೆ? ನೀನು ಅಲ್ಲಿರುವವರೆಗೂ ಸೌಖ್ಯದಿಂದಿದ್ದೆಯಾ? ನನಗೆ ಅಲ್ಲಿನ ವಿಶೇಷಗಳೆಲ್ಲವನ್ನೂ ವಿಸ್ತಾರವಾಗಿ ತಿಳಿಸು!” ಎಂದಳು. ಇದನ್ನು ಕೇಳಿ ಭರತನು “ಅಮ್ಮಾ! ನಾನು ತಾತನ ಮನೆಯನ್ನು ಬಿಟ್ಟು ಈಗ ಏಳು ದಿನಗಳಾದುವು. ನಿನ್ನ ತಂದೆಯು ಕ್ಷೇಮದಲ್ಲಿರುವನು. ಮಾವನೂ ಕ್ಷೇಮದಲ್ಲಿರುವನು. ನಾನು ಹೊರಟು ಬರುವಾಗ ನನಗಾಗಿ ತಾತನು ಕೊಟ್ಟ ಧನರಾಶಿಗಳೂ, ರತ್ನಗಳೂ ಅಪರಿಮಿತವಾಗಿರುವುವು. ಅವೆಲ್ಲವನ್ನೂ ಹೊರಿಸಿಕೊಂಡು ಬರುತಿದ್ದಾಗ, ನಮ್ಮ ವಾಹನಾದಿಗಳು ಮಾರ್ಗದಲ್ಲಿ ಬಹಳ ಆಯಾಸಪಟ್ಟುದನ್ನು ನೋಡಿ, ಆ ನನ್ನ ಪರಿವಾರಗಳೆಲ್ಲವನ್ನೂ ಮಾರ್ಗದಲ್ಲಿ ವಿಶ್ರಾಂತಿತೆಗದುಕೊಂಡು



7I6. ಭರತನು ಅಯೋಧ್ಯೆಗೆ ಬಂದು ತನ್ನತಾಯಿಗೆ ನಮಸ್ಕರಿಸಿದುದು.

ಸಾವಕಾಶವಾಗಿ ಹೊರಟುಬರುವಂತೆ ನಿಯಮಿಸಿ, ನಾನು ಆತುರ ದಿಂದ ಮೊದಲು ಹೊರಟು ಬಂದುಬಿಟ್ಟೆನು. ಇಲ್ಲಿಂದ ನನ್ನನ್ನು ಕರೆಯುವು ದಕ್ಕಾಗಿ ಬಂದ ದೂತರು ಬಹಳ ಆತುರಪಡಿಸಿದುದರಿಂದ ನಾನು ಅವೆಲ್ಲವ ನ್ನೂ ಬಿಟ್ಟು ಹೊರಟು ಬರಬೇಕಾಯಿತು. ಆಮ್ಮಾ! ಅದೆಲ್ಲವೂ ಹೋಗಲಿ! ಈಗ ನಿನ್ನನ್ನು ನಾನು ಮುಖ್ಯವಾಗಿ ಒಂದುಮಾತನ್ನು ಕೇಳಬೇಕೆಂದಿರು ವೆನು! ಮೊದಲು ಅದಕ್ಕೆ ಪ್ರತ್ಯುತ್ತರವನ್ನು ಕೊಡು! ಈಗ ನೀನು ಮಲಗ ತಕ್ಕ ಚಿನ್ನದ ಮಂಚವು ಎಂದಿನಂತೆ ತಂದೆಯಿಲ್ಲದುದರಿಂದ ಹಾಳುಬಿದ್ದಂತೆ ಕಾಣುತ್ತಿರುವುದಲ್ಲಾ! ಹಿಂದೆ ಯಾವಾಗಲೂ ಹೀಗಿದ್ದುದನ್ನು ನಾನು ಕಂ ಡವನಲ್ಲ. ಇದಲ್ಲದೆ ನಮ್ಮ ತಂದೆಯ ಕಡೆಯ ಜನರೊಬ್ಬರಾದರೂ ಮೊದ ಲಿನಂತೆ ಉತ್ಸಾಹವುಳ್ಳವರಾಗಿ ತೋರಲಿಲ್ಲ! ತಂದೆಯು ಯಾವಾಗಲೂ ನಿನ್ನ ಅಂತಃಪುರವನ್ನು ಬಿಟ್ಟು ಹೋದವನಲ್ಲ. ಆತನು ಇಲ್ಲಿರಬಹುದೆಂದೇ ಎಣಿಸಿ ಮೊದಲು ಆತನನ್ನು ನೋಡಬೇಕೆಂದು ಇಲ್ಲಿಗೆ ಬಂದೆನು. ಇಲ್ಲಿಯೂ ಆತ ನನ್ನು ಕಾಣಲಿಲ್ಲವಲ್ಲಾ! ಮೊದಲು ನಾನು ಹೋಗಿ ತಂದೆಯಪಾದಗಳಿಗೆ ನಮಸ್ಕರಿಸಿ ಬರಬೇಕೆಂದಿರುವೆನು. ಈಗ ಅವನೆಲ್ಲಿರುವನು ಹೇಳು? ಒಂದು ವೇಳೆ ಆತನು ನಮ್ಮದೊಡ್ಡಮ್ಮನಾದ ಕೌಸಲ್ಯೆಯ ಅಂತಃಪುರಕ್ಕೆಹೋಗಿರ ಬಹುದೆ"? ಎಂದನು. ಆಗ ಕೈಕೇಯಿಯು ಇದುವರೆಗೆ ತಾನು ನಡೆಸಿದ ತಂತ್ರಗಳೆಲ್ಲವೂ ಭರತನಿಗೆ ಬಹುಪ್ರಿಯವಾಗಿರುವುದೆಂದೂ, ಅದನ್ನು ಕೇಳಿ ಆತನು ಎಷ್ಟೋಸಂತೋಷಪಡುವನೆಂದೂ ಮನಸ್ಸಿನಲ್ಲಿಯೇ ಹಿಗ್ಗುತ್ತ, ಕ ರ್ಣಕಠೋರವಾದ ಮಾತುಗಳನ್ನು ಹೇಳಲಾರಂಭಿಸಿದಳು. ಇಲ್ಲಿನ ನಿಜಸ್ಥಿತಿ ಯೊಂದನ್ನೂ ತಿಳಿಯದೆ ತಂದೆಯನ್ನು ನೋಡಬೇಕೆಂದು ಆತುರಪಡುತ್ತಿ ರುವ ಆಭರತನ ಸ್ವಭಾವವನ್ನು ತಿಳಿಯದೆ, ತನ್ನಂತೆಯೇ ಆತನೂ ರಾಜ್ಯ ಲೋಭಕ್ಕೆ ಒಳಗಾಗಿರುವನೆಂದೆಣಿಸಿ, ಆತನನ್ನು ಕುರಿತು “ಎಲೆವತ್ಸನೆ! ಈ ಪ್ರಪಂಚದಲ್ಲಿ ಹುಟ್ಟಿದ ಸಮಸ್ತಪ್ರಾಣಿಗಳಿಗೂ ಅವಶ್ಯವಾಗಿ ಯಾವಗತಿ ಯುಂಟಾಗಬೇಕೋ ನಿನ್ನತಂದೆಗೂ ಅದೇ ಗತಿಯುಂಟಾಯಿತು. ಇದಕ್ಕಾಗಿ ಉಳಿದವರು ಚಿಂತಿಸಿ ಫಲವಿಲ್ಲವೆಂಬುದನ್ನು ಸರ್ವಜ್ಞನಾದ ನಿನಗೆ ನಾನು ತಿಳಿಸಬೇಕಾದುದೇ ಇಲ್ಲವಲ್ಲವೆ? ರಾಜನಾದರೋ ಮಹಾತ್ಮನು. ಮಹಾ ತೇಜಸ್ವಿಯು. ಅನೇಕಯಾಗಗಳನ್ನು ಮಾಡಿದವನು. ಸತ್ಪುರುಷರಿಗೆ ಆತನೇ

ಒಂದು ದಿಕ್ಕಾಗಿದ್ದನು. ಆತನಿಗೆ ಅವನ ಪುಣ್ಯಕರ್ಮಾನುಸಾರವಾದ ಸದ್ಗತಿ ಯುಂಟಾಗುವುದರಲ್ಲಿ ಸಂದೇಹವೇನಿರುವುದು?" ಎಂದಳು. ಇದನ್ನು ಕೇಳಿ ದೊಡನೆಯೇ ಭರತನಿಗೆ ಪ್ರಜ್ಞೆತಪ್ಪಿತು. ಧರ್ಮಾತ್ಮನಾಗಿಯೂ, ಕುಲೀನ ನಾಗಿಯೂ, ಪರಿಶುದ್ಧಸ್ವಭಾವವುಳ್ಳವನಾಗಿಯೂ ಇದ್ದ ಆಭರತನು ಸಂ ಕಟವನ್ನು ತಡೆಯಲಾರದೆ "ಅಯ್ಯೋ! ಕೆಟ್ಟೆನು"! ಎಂದು ಉಚ್ಚಸ್ವರದಿಂದ ಕೂಗಿಡುತ್ತ ನೆಲದಮೇಲೆ ಬಿದ್ದುಬಿಟ್ಟನು. ಎರಡುತೋಳುಗಳನ್ನೂ ನೀಡಿ ಅರ್ಧಪ್ರಾಣದಲ್ಲಿ ನರಳುವವರಂತೆ ಸಂಕಟವನ್ನು ತಡೆಯಲಾರದೆ ನೆಲದ ಮೇಲೆ ಹೊರಳುತಿದ್ದನು. ಹೀಗೆ ಮಹಾತೇಜಸ್ವಿಯಾದ ಆಭರತನಿಗೆ ಪಿತೃ ಮರಣದಿಂದುಂಟಾದ ಮಹಾದುಃಖವು ಬಲವಾಗಿ ಆವರಿಸಿಕೊಂಡಿತು. ಪ್ರ ಜ್ಞೆಯೂತಪ್ಪಿತು. ಹುಚ್ಚುಹಿಡಿದಂತಾಯಿತು. ಆಗ ಆತನು "ಅಯ್ಯೋ! ರಾ ತ್ರಿಯಲ್ಲಿ ಶರತ್ಕಾಲದ ಚಂದ್ರನಿಂದ ಪ್ರಕಾಶಿಸುತ್ತಿರುವ ಆಕಾಶಪ್ರದೇಶ ದಂತೆ, ಹಿಂದೆ ಯಾವಾಗಲೂ ಈ ಹಾಸಿಗೆಯು ನಮ್ಮ ತಂದೆಯಿಂದ ಅಲಂ ಕರಿಸಲ್ಪಡುತಿತ್ತಲ್ಲವೆ? ಈಗ ಆತನಿಲ್ಲದುದರಿಂದ ಚಂದ್ರನಿಲ್ಲದ ರಾತ್ರಿಯಂ ತೆಯೂ, ನೀರಿಲ್ಲದ ಮಹಾಸಮುದ್ರದಂತೆಯೂ, ಈ ಪ್ರದೇಶವೆಲ್ಲವೂ ಕಳೆ ಗುಂದಿ ಶೂನ್ಯವಾಗಿರುವುದಲ್ಲಾ" ಎಂದು ಪ್ರಲಾಪಿಸಿದನು. ಕಣ್ಣಿನಲ್ಲಿ ಧಾ ರೆಧಾರೆಯಾಗಿ ನೀರು ಸುರಿಯುತಿತ್ತು. ದುಃಖದಿಂದ ಆತನ ಕಂಠಸ್ವರವು ಕುಗ್ಗಿಹೋಯಿತು. ತಾನು ಹೊದೆದಿದ್ದ ಬಟ್ಟೆಯಿಂದ ಮುಖವನ್ನು ಮರೆಸಿ ಕೊಂಡು ಅಳುವುದಕ್ಕಾರಂಭಿಸಿದನು. ಹೀಗೆ ದೇವತೆಗಳಿಗೆ ಸಮಾನವಾದ ದಿ ವ್ಯತೇಜಸ್ಸುಳ್ಳ ತನ್ನ ಮಗನಾದ ಭರತನು,ಕೊಡಲಿಯಿಂದ ಕಡಿದು ಹಾಕಿದ ಮರದತುಂಡಿನಂತೆ ನೆಲದಮೇಲೆ ಬಿದ್ದು ವ್ಯಸನದಿಂದ ಗೋಳಿಡುತ್ತಿರುವು ದನ್ನು ಕೈಕೇಯಿಯು ನೋಡಿದಳು. ಮದ್ದಾನೆಯಂತೆ ನೇತ್ರಾನಂದಕರವಾ ಗಿಯೂ, ಚಂದ್ರಸೂರ್ಯರಂತೆ ಮಹಾತೇಜಸ್ವಿಯಾಗಿಯೂ ಇದ್ದ ಆತನನ್ನು ಎತ್ತಿ ಕುಳ್ಳಿರಿಸಿ, ದುಃಖದಿಂದ ಮೈಮರೆತಿರುವ ಅವನನ್ನು ನೋಡಿ ಕೈಕೇ ಯಿಯು "ಎಲೆವತ್ಸನೆ! ಏಳೇಳು! ಹೀಗೆ ನೆಲದಮೇಲೆ ಮಲಗುವುದುಂಟೇ! ನೀನು ಮಹಾಯಶಸ್ವಿಯಾದ ರಾಜಕುಮಾರನಲ್ಲವೆ! ಸತ್ಪುರುಷರ ಗೋಷ್ಠಿ ಗೂ ವಿಶೇಷಮಾನ್ಯರಾದ ನಿನ್ನಂತವರು ಈ ವಿಷಯಗಳಿಗಾಗಿ ಹೀಗೆ ದುಃಖಿಸಬಹುದೆ! ನಿನ್ನ ಬುದ್ಧಿಯಾದರೋ ಯಜ್ಞದಾನಾದಿಸತ್ಕಾರ್ಯಗಳಲ್ಲಿ

ವಿಶೇಷವಾದ;ಅನುಭವವುಳ್ಳುದು. ಸದಾಚಾರದಲ್ಲಿಯೇ ಪ್ರವರ್ತಿಸತಕ್ಕುದು. ವೇದವಾಕ್ಯಗಳೆಲ್ಲವನ್ನೂ ಚೆನ್ನಾಗಿ ಅಧಿಕರಿಸಿರತಕ್ಕುದು. ಸೂರ್ಯಮಂಡಲದಲ್ಲಿ ಕಾಂತಿಯು ಪ್ರಕಾಶಿಸುವಂತೆ, ನಿನ್ನ ಬುದ್ಧಿಯಲ್ಲಿ ಶಾಸ್ತ್ರಜ್ಞಾನ ಲೋಕಾನುಭವಗಳೆಲ್ಲವೂ ಎಡೆಬಿಡದೆ ತುಂಬಿರುವುವು. ಇಂತಹ ನೀನು ಹೀಗೆ ದುಃಖಿಸಬಹುದೆ?" ಎಂದಳು. ಇದನ್ನು ಕೇಳುತಿದ್ದರೂ ಭರತನು ತನ್ನ ಪ್ರಲಾಪವನ್ನು ಬಿಡದೆ ಬಹುಕಾಲದವರೆಗೆ ಗೋಳಿಡುತಿದ್ದು, ನೆಲದಮೇಲೆ ಬಿದ್ದು ಹೊರಳುತ್ತ, ಮೇಲೆಮೇಲೆ ದುಃಖದಿಂದ ಪೀಡಿತನಾಗಿ ತಾಯಿಯನ್ನು ಕುರಿತು. "ಅಮ್ಮಾ! ರಾಜನು ಈಗ ನನ್ನನ್ನು ಕರೆಕಳುಹಿಸಿದನಲ್ಲವೆ? ದೂತರು ನನ್ನನ್ನು ಅಷ್ಟು ಆತುರದಿಂದ ಕರೆದುದನ್ನು ನೋಡಿ ನನಗೆ ಮನಸ್ಸಿನಲ್ಲಿ ನಾನಾವಿಧವಾದ ಆಲೋಚನೆಯುಂಟಾಯಿತು. ರಾಮನಿಗೆ ಯುವರಾಜಪಟ್ಟವನ್ನು ಕಟ್ಟುವುದಕ್ಕಾಗಿಯೋ, ಅಥವಾ ಯಾವುದೋ ಒಂದು ಯಜ್ಞವನ್ನುಮಾಡುವುದಕ್ಕಾಗಿಯೋ ನಮ್ಮ ತಂದೆಯು ಉದ್ದೇಶಿಸಿರಬಹುದೆಂದು ತಿಳಿದು. ನಾನು ಎಷ್ಟೋಸಂತೋಷದಿಂದ ಹೊರಟುಬಂದೆನು. ಅಯ್ಯೋ! ಇಲ್ಲಿನೋಡಿದರೆ ಅವೆಲ್ಲವೂ ವಿಪರೀತವಾಗಿ ಪರಿಣಮಿಸಿತಲ್ಲಾ? ನನ್ನ ಎದೆಯು ದುಃಖದಿಂದ ಒಡೆದು ಹೋಗುವಹಾಗಿರುವುದು! ಪುತ್ರವತ್ಸಲನಾಗಿ ಎಷ್ಟೋಪ್ರೇಮದಿಂದಕಾಪಾಡುತಿದ್ದ ನಮ್ಮ ತಂದೆಯನ್ನು ನೋಡುವುದಕ್ಕಿಲ್ಲದೆ ಹೋಯಿತಲ್ಲಾ! ಅಮ್ಮಾ! ಹೀಗೆ ತಂದೆಯು ಆಕಸ್ಮಿಕವಾಗಿ ಸಾಯುವುದಕ್ಕೆ ಕಾರಣವೇನು? ಆತನನ್ನು. ಕೊಲ್ಲುವುದಕ್ಕೆ ಬಂದೊದಗಿದ ಮಹಾಕ್ರೂರವಾದ ವ್ಯಾಧಿಯಾವುದು? ಅಯ್ಯೋ! ರಾಮಲಕ್ಷ್ಮಣರಿಬ್ಬರೇ ಧನ್ಯರು! ತಂದೆಯು ಸಾಯುವಾಗ ಸಮೀಪದಲ್ಲಿದ್ದು, ಆತನನ್ನು ಪರಿಚರಿಸಿ, ಆತನುಸತ್ತಮೇಲೆ ಅಪರಸಂಸ್ಕಾರಗಳನ್ನು ಮಾಡತಕ್ಕ ಭಾಗ್ಯವಾದರೂ ಅವರಿಗೆ ಲಭಿಸಿತಲ್ಲವೆ? ಆ ಭಾಗ್ಯವೂ ನನಗಿಲ್ಲದೇ ಹೋಯಿತಲ್ಲಾ! ನಾನು ಎಷ್ಟೋ ಆತುರದಿಂದ ಆತನನ್ನು ನೋಡುವುದಕ್ಕಾಗಿ ಇಲ್ಲಿಗೆ ಬಂದಿರುವ ಅಂಶವು ಆತನಿಗೆ ತಿಳಿಯದೆಹೋಯಿತಲ್ಲಾ! ಯಶಸ್ವಿಯಾದ ಆ ನನ್ನ ತಂದೆಯು ನನ್ನನ್ನು ಕಂಡೊಡನೆಯೇ ಎಷ್ಟೋ ಆತುರದಿಂದ ಬಂದು ಪ್ರೇಮದಿಂದ ತಲೆಯನ್ನಾಘ್ರಾಣಿಸುತಿದ್ದನು. ಸುಖವಾದ ಆತನ ಹಸ್ತಸ್ಪರ್ಶವು ಇನ್ನು ನನಗೆ ಲಭಿಸುವುದೆಲ್ಲಿ? ನನ್ನ ಮೈಮೇಲೆ ಬಿದ್ದ ಧೂಳನ್ನು ತಾನೇ

ಬಂದು ತನ್ನ ಕೈಯಿಂದ ಒರಸುತಿದ್ದನಲ್ಲಾ! ಅಂತಹ ಮೃದುವಾದ ಹಸ್ತ ಸ್ಪರ್ಶದ ಸುಖವನ್ನು ನಾನು ಇನ್ನೆಲ್ಲಿ ಕಾಣುವೆನು!ಅಮ್ಮಾ!ಅದು ದಾಯಿತು. ಮೊದಲು ನನಗೆ ರಾಮನನ್ನು ತೋರಿಸು? ಯಾವನು ನನಗೆ ಒಡಹುಟ್ಟಿದ ವನಾಗಿದ್ದರೂ, ತಂದೆಯಂತೆಯೂ, ಸರ್ವವಿಧಬಂಧುವಿನಂತೆಯೂ ಇರುವ ನೋ, ಯಾವನಿಗೆ ನಾನು ದಾಸಾನುದಾಸನೆಂಬ ಭಾವವನ್ನಿಟ್ಟುಕೊಂಡಿರು ವೆನೋ, ಆರಾಮನಿಗಾದರೂ ನಾನು ಬಂದಿರುವ ವಿಷಯವನ್ನು ಈಗಲೇ ತಿ ಳಿಸು! ಧರ್ಮವನ್ನು ಪರ್ಯಾಲೋಚಿಸಿನೋಡಿದರೆ ಜ್ಯೇಷ್ಠಭ್ರಾತೃವೇ ತಂದೆ ಯಂತಲ್ಲವೆ? ನಾನು ಮೊದಲು ಹೋಗಿ ತಂದೆಗೆ ನಮಸ್ಕಾರಮಾಡಬೇಕೆಂಬ ಆತುರದಿಂದ ಬಂದೆನು. ಈಗ ನನಗೆ ತಂದೆಯಂತಿರುವ ಅಣ್ಣನಾದ ರಾಮನ ಪಾದಗಳನ್ನಾದರೂ ಹಿಡಿದು ನನ್ನ ಉದ್ದೇಶವನ್ನು ಈಡೇರಿಸಿಕೊಳ್ಳುವೆನು. ತಂದೆಯು ಹೋದಮೇಲೆ ಆತನೇ ನನಗೆ ಗತಿಯು. ಧರ್ಮಜ್ಞನಾಗಿ, ಧರ್ಮನಿರ ತನಾಗಿ, ಸತ್ಯಸಂಧನಾಗಿ, ದೃಢವ್ರತನಾಗಿ,ಸತ್ಯಪರಾಕ್ರಮವುಳ್ಳ, ಪೂಜ್ಯ ನಾದ ನಮ್ಮ ತಂದೆಯು ಸಾಯುವಾಗ ಏನುಹೇಳಿದನು? ಆತನ ಕೊನೆಯ ಬುದ್ಧಿವಾದಗಳನ್ನು ಕೇಳಬೇಕೆಂದು ನನಗೆ ಬಹಳಕುತೂಹಲವಿರುವುದು. ಅದನ್ನಾದರೂ ತಿಳಿಸು" ಎಂದನು. ಇದನ್ನು ಕೇಳಿ ಕೈಕೇಯಿಯು ನಡೆದು ದನ್ನು ನಡೆದಹಾಗೆಯೇ ತಿಳಿಸುವುದಾಗಿ ಭಾವಿಸಿಕೊಂಡು; ಭರತನನ್ನು ಕುರಿ ತು. "ವತ್ಸನೆ! ನಿನ್ನತಂದೆಯು ಪರಲೋಕಪ್ರಯಾಣಕ್ಕೆ ಮೊದಲು [1] ಹಾ ರಾಮಾ! ಹಾಸೀತೇ!! ಹಾಲಕ್ಷ್ಮಣಾ!!!ಎಂದುಗೋಳಿಡುತ್ತ ಪ್ರಾಣವನ್ನು ಬಿಟ್ಟನು. ಇವೇ ಆತನು ಹೇಳಿದ ಕೊನೆಯ ವಾಕ್ಯಗಳು! ಮದ್ದಾನೆಯು ಹಗ್ಗಗಳಿಂದ ಕಟ್ಟಿ ಎಳೆಯಲ್ಪಡುವಂತೆ ಕಾಲಧರ್ಮದಿಂದ ಆತನು ಎಳೆಯಲ್ಪ ಟ್ಟು ಉತ್ತಮಗತಿಯನ್ನು ಹೊಂದಿದನು. ಮತ್ತು ಆತನು ತನ್ನ ಮರಣಕಾಲ ದಲ್ಲಿ ಹೇಳಿದ ಇನ್ನು ಕೆಲವು ಮಾತುಗಳೇನೆಂದರೆ "ಸೀತಾ ಲಕ್ಷ್ಮಣರೊ

---

1 ಇಲ್ಲಿ ಕೈಕೇಯಿಯು ಭರತನಿಗೆ ತಂದೆಯಲ್ಲಿರುವ ಪ್ರೇಮವನ್ನು ತಪ್ಪಿಸುವು ದಕ್ಕಾಗಿ, "ನಿನ್ನತಂದೆಯು ಪ್ರಾಣಬಿಡುವಾಗಲೂ ರಾಮಾದಿಗಳನ್ನೇ ಸ್ಮರಿಸಿಕೊಂ ಡನೇ ಹೊರತು ನಿನ್ನನ್ನು ಒಂದಾವರ್ತಿಯಾದರೂ ನೆನೆಸಿಕೊಳ್ಳಲಿಲ್ಲ" ವೆಂದು ಹೇಳಿದು ದಾಗಿ ಗ್ರಹಿಸಬೇಕು.

ಡನೆ ಅಯೋಧ್ಯೆಗೆ ಹಿಂತಿರುಗಿ ಬಂದ ಮಹಾಬಾಹುವಾದ ರಾಮನನ್ನು ಪುನಃ ನೋಡತಕ್ಕವರೇ ಧನ್ಯರಲ್ಲವೆ?" ಎಂದು ಹೇಳುತ್ತ ಪ್ರಾಣವನ್ನು ಬಿಟ್ಟನು" ಎಂದಳು. ರಾಮನು ಪಟ್ಟಣದಲ್ಲಿಲ್ಲವೆಂಬ ಈ ಎರಡನೆಯ ದುಃಖವಾರ್ತೆಯ ನ್ನೂ ಕೇಳಿದಮೇಲೆ ಭರತನು,ಮಹಾವ್ಯಸನದಿಂದ ಕಂದಿದ ಮುಖವುಳ್ಳವ ನಾಗಿ ಪುನಃ ತಾಯಿಯನ್ನು ಕುರಿತು. "ಅಮ್ಮಾ! ಇದೇನು ಹೀಗೆಹೇಳುವೆ! ಧರ್ಮಾತ್ಮನಾಗಿ ಕೌಸಲ್ಯಾನಂದವರ್ಧಕನಾದ ರಾಮನು ಸೀತಾಲಕ್ಷ್ಮಣ ರೊಡನೆ ಎಲ್ಲಿಗೆ ಹೋಗಿರುವನು?" ಎಂದನು. ಅದಕ್ಕಾ ಕೈಕೇಯಿಯು ತಾನು ಮುಂದೆ ಹೇಳುವ ಮಾತುಗಳಾದರೂ ಭರತನಿಗೆ ಸಂತೋಷವನ್ನುಂ ಟುಮಾಡಬಹುದೆಂದೆಣಿಸಿ, ನಿಜಸ್ಥಿತಿಯನ್ನು ಆತನಿಗೆ ತಿಳಿಸಲಾರಂಭಿಸಿ "ಎಲೈ ಪುತ್ರನೆ! ರಾಜಪುತ್ರನಾದ ರಾಮನು ನಾರುಮಡಿಯನ್ನುಟ್ಟು ಸೀತಾಲ ಕ್ಷ್ಮಣರೊಡನೆ ದಂಡಕಾರಣ್ಯಕ್ಕೆ ಹೊರಟುಹೋದನು."ಎಂದಳು ಇದನ್ನು ಕೇಳಿ ಭರತನು, "ತನ್ನ ಇಕ್ಷ್ವಾಕುವಂಶದವರಿಗೆ ಸದಾಚಾರಸಂಪನ್ನರೆಂಬ ಕೀರ್ತಿಯು ಯಾವಾಗಲೂ ತಪ್ಪಿದುದಲ್ಲ. ರಾಮನು ಕಾಡಿಗೆ ಹೊರಟು ಹೋಗುವಷ್ಟು ಮಹಾಪರಾಧವನ್ನು ಮಾಡಿರುವನೆ?" ಎಂದು ಶಂಕಿಸುತ್ತ ಪುನಃತಾಯಿಯನ್ನು ಕುರಿತು ಭಯದಿಂದ "ಅಮ್ಮಾ! ರಾಮನು ಕಾಡಿಗೆ ಹೋಗುವಷ್ಟು ಮಾಡಿದ ತಪ್ಪೇನು? ಆತನು ಯಾವನಾದರೂ ಬ್ರಾಹ್ಮ ಣನಸ್ವತ್ತನ್ನು ಅಪಹರಿಸಲಿಲ್ಲವಷ್ಟೆ? ಅಥವಾ ಧನಿಕನನ್ನಾಗಲಿ, ದರಿದ್ರನ ನ್ನಾಗಲಿ ನಿರಪರಾಧಿಯಾದ ಯಾವನನ್ನಾಗಲಿ ಹಿಂಸಿಸಲಿಲ್ಲವಷ್ಟೆ? ಅಥ ವಾ ಆತನು ಪರಸ್ತ್ರೀಯರನ್ನು ಅಪೇಕ್ಷಿಸುವದುಸ್ಸ್ವಭಾವವುಳ್ಳವನಂತೆಯೂ ಕಾಣಲಿಲ್ಲ.ಆದರೂ ಶ್ರೋತ್ರಿಯರನ್ನು ಕೊಂದ ಮಹಾಪಾಪಿಯಂತೆ ಆತನು ಕಾಡಿಗೆಕಳುಹಿಸಲ್ಪಡುವುದಕ್ಕೆ ಕಾರಣವೇನು?"ಎಂದನು. ಇದನ್ನು ಕೇಳಿ ಚ ಪಲಸ್ವಭಾವವುಳ್ಳ ಆ ಕೈಕೇಯಿಯು,ಸ್ತ್ರೀಸ್ವಭಾವಕ್ಕೆ ತಕ್ಕಂತೆ ತಾನು ನಡೆ ಸಿದ ತಂತ್ರಗಳೆಲ್ಲವೂ ಪರಮಶ್ಲಾಘ್ಯಗಳಾಗಿರಬಹುದೆಂದೆಣಿಸಿ, ಸಂತೋ ಷದಿಂದ, ಮಹಾತ್ಮನಾದ ಆಭರತನನ್ನು ನೋಡಿ,"ಎಲೆವತ್ಸನೆ! ರಾಮ ನು ಯಾವಬ್ರಾಹ್ಮಣನ ಧನವನ್ನೂ ಅಪಹರಿಸಲಿಲ್ಲ. ನಿರಪರಾಧಿಗಳಾದ ಯಾರೊಬ್ಬರನ್ನೂ ಆತನು ಹಿಂಸಿಸಿದವನಲ್ಲ. ಪರಸ್ತ್ರೀಯರೆಂದರೆ ಆತನು ಕಣ್ಣೆತ್ತಿಯೂ ನೋಡತಕ್ಕವನಲ್ಲ. ಆತನಲ್ಲಿ ಯಾವುದೊಂದು ದುರ್ಗುಣವೂ

ಗೋಚರಿಸುವುದಿಲ್ಲ. ಆದರೆ ಇಲ್ಲಿ ನಡೆದ ರೀತಿಯೇ ಬೇರೆ! ನಿಜಸ್ಥಿತಿಯನ್ನು ತಿಳಿಸುವೆನು ಕೇಳು? ನಿನ್ನ ತಂದೆಯಾದ ದಶರಥನು ರಾಮನಿಗೆ ಯುವರಾಜ ಪಟ್ಟವನ್ನು ಕಟ್ಟಬೇಕೆಂದು ಸನ್ನಾಹಮಾಡುತಿದ್ದನು. ಇದನ್ನು ನಾನು ಕೇಳಿದೊಡನೆಯೇ, ನಿನಗೆ ಪಟ್ಟವನ್ನು ಕಟ್ಟಬೇಕೆಂದೂ, ರಾಮನನ್ನು ಕಾಡಿಗೆ ಹೊರಡಿಸಬೇಕೆಂದೂ ನಿನ್ನ ತಂದೆಯನ್ನು ನಿರ್ಬಂಧಿಸಿದೆನು. ನಿನ್ನ ತಂದೆಯು ಸತ್ಯಕ್ಕೆಕಟ್ಟುಬಿದ್ದು ನನ್ನಮಾತಿನಂತೆಯೇ ಒಪ್ಪಿ ರಾಮನನ್ನು ಕಾಡಿಗೆ ಕಳುಹಿಸಿಬಿಟ್ಟನು. ಆ ರಾಮನೊಡನೆ ಸೀತಾಲಕ್ಷ್ಮಣರೂ ಕಾಡಿಗೆ ಹೊರಟುಹೋದರು. ಇತ್ತಲಾಗಿ ದಶರಥನು, ತನ್ನ ಪ್ರಿಯಪುತ್ರನಾದ ರಾಮನನ್ನು ಕಾಣದ ಸಂಕಟಕ್ಕಾಗಿ, ಆ ವ್ಯಸನದಿಂದಲೇ ಪ್ರಾಣವನ್ನು ಬಿಟ್ಟನು. ಎಲೆ ವತ್ಸನೆ! ನೀನು ರಾಜಧರ್ಮಗಳೆಲ್ಲವನ್ನೂ ಚೆನ್ನಾಗಿ ಬಲ್ಲವನು. ಇನ್ನು ನೀನೇ ಇಲ್ಲಿ ರಾಜನಾಗಿರಬಹುದು ! ನೆಮ್ಮದಿಯಿಂದ ರಾಜ್ಯಸುಖವನ್ನನುಭವಿಸಬಹುದು! ನಿನಗಾಗಿಯೇ ನಾನು ಇಷ್ಟು ತಂತ್ರಗಳನ್ನು ನಡೆಸಬೇಕಾಯಿತು. ಎಲೈ ಪುತ್ರನೆ! ಇನ್ನು ತಂದೆಯು ಸತ್ತನೆಂಬ ದುಃಖವನ್ನು ಬಿಟ್ಟು ಬಿಡು ! ಮನಸ್ಸಿನ ಚಿಂತೆಯನ್ನೂ ಬಿಟ್ಟುಬಿಡು. ಧೈರ್ಯವನ್ನವಲಂಬಿಸು. ಇನು ಈ ರಾಜ್ಯವೆಲ್ಲವೂ ನಿನ್ನ ಕೈಗೆ ಸೇರಿತು. ಇದಕ್ಕೆ ಬೇರೊಬ್ಬರ ಉಪದ್ರವವಿಲ್ಲ. ಈಗ ಶಾಸ್ತ್ರಜ್ಞರಾದ ವಸಿಷ್ಠಾದಿಬ್ರಾಹ್ಮಣರೊಡನೆ ಕೂಡಿ, ನಿನ್ನ ತಂದೆಗೆ ಮಾಡಬೇಕಾದ ಅಪರಸಂಸ್ಕಾರಗಳನ್ನು ಶಾಸ್ತ್ರೋಕ್ತವಾಗಿ ಶೀಘ್ರದಲ್ಲಿಯೇ ಮುಗಿಸಿಬಿಟ್ಟು, ಪಟ್ಟಾಭಿಷೇಕವನ್ನುನಡೆಸಿಕೊಳ್ಳುವನಾಗು."ಎಂದಳು

ಇಲ್ಲಿಗೆ ಎಪ್ಪತ್ತೆರಡನೆಯಸರ್ಗವು.

---

## ಭರತನು ಕೈಕೇಯಿಯನ್ನು ನಿಂದಿಸಿದುದು.

ಭರತನು ತಂದೆಯ ಮರಣವಾರ್ತೆಯನ್ನೂ, ತನ್ನ ಅಣ್ಣತಮ್ಮಂದಿರು ಕಾಡಿಗೆ ಹೋದುದನ್ನೂ ಕೇಳಿ ವ್ಯಸನದಿಂದ ಕೊರಗುತ್ತ, "ಅಯ್ಯೋ ! ತಂದೆಯನ್ನು ಕಳೆದುಕೊಂಡುದಲ್ಲದೆ, ಆ ತಂದೆಗೆ ಸಮಾನನಾದ ಹಿರಿಯಣ್ಣನನ್ನೂ ತೊರೆದು, ದಿಕ್ಕುಗೆಟ್ಟ ನನಗೆ ಇನ್ನು ರಾಜ್ಯಸುಖವೇಕೆ ? ಎಲೆ ಕ್ರೂರಳೆ ! ಕೈಹಿಡಿದ ಗಂಡನನ್ನು ಮೃತ್ಯುವಿಗೊಪ್ಪಿಸಿದುದಲ್ಲದೆ, ಲೋಕೋ

ತ್ತರಗುಣವುಳ್ಳ ರಾಮನನ್ನೂ ತಾಪಸನಂತೆ ಕಾಡುಪಾಲಾಗಿ ಮಾಡಿಬಿಟ್ಟೆಯಲ್ಲಾ! ಉರಿಯುವ ಹುಣ್ಣಿಗೆ ಉಪ್ಪುಹಾಕಿದಂತೆ ದುಃಖದ ಮೇಲೆ ದುಃಖವನ್ನು ತಂದಿಟ್ಟೆಯಲ್ಲವೆ?ನಮ್ಮ ಕುಲವನ್ನು ಕೆಡಿಸುವುದಕ್ಕಾಗಿಯೇ ಕಾಳರಾತ್ರಿಯಂತೆ ನೀನು ಬಂದು ಸೇರಿದೆ! ಉರಿಯುವ ಕೆಂಡವನ್ನಪ್ಪಿಕೊಳ್ಳುವಂತೆ ನನ್ನ ತಂದೆಯು ನಿನ್ನನ್ನು ಅಜ್ಞಾನದಿಂದ ಪತ್ನಿಯೆಂದು ಭಾವಿಸಿ ಲಾಲಿಸುತಿದ್ದನು. ಎಲೆ ಪಾಪಿನಿ! ನಮ್ಮ ರಾಜನನ್ನು ಕೊಲ್ಲುವುದಕ್ಕೆ ನೀನೇ ಮೃತ್ಯುಸ್ವರೂಪಳಾದೆ! ಎಲೆ ಕುಲಘಾತುಕಿ! ಅಜ್ಞಾನದಿಂದ ನಮ್ಮ ಕುಲಕ್ಕೆ ಈ ಗತಿಯನ್ನು ತಂದಿಟ್ಟೆಯಾ!ಈ ನಮ್ಮ ವಂಶಕ್ಕೆ ಸುಖವೇ ಇಲ್ಲದಂತೆ ಮಾಡಿದೆಯಾ? ನನ್ನ ತಂದೆಯಾದರೋ ಬಹಳ ಸತ್ಯಸಂಧನು. ಮಹಾಯಶಸ್ವಿಯು. ಅಂತವನು ನಿನ್ನನ್ನು ಕೈಹಿಡಿದುದರಿಂದಲ್ಲವೇ ಇಂತಹ ಮಹಾಘೋರವಾದ ವ್ಯಸನಕ್ಕೆ ಗುರಿಯಾಗಿ, ಕೊನೆಗೆ ಅದರಿಂದಲೇ ಪ್ರಾಣವನ್ನೂ ಬಿಡಬೇಕಾಯಿತು. ಧರ್ಮವತ್ಸಲನಾಗಿ ಮಹಾರಾಜನೆನಿಸಿಕೊಂಡ ನನ್ನ ತಂದೆಯನ್ನು ಹೀಗೆ ನೀನು ಅನ್ಯಾಯವಾಗಿ ಕೊಲ್ಲಬಹುದೆ? ಎಲೆ ಪಾಪಿನಿ! ನೀನು ರಾಮನನ್ನೇಕೆ ಕಾಡಿಗೆ ಕಳುಹಿಸಬೇಕಾಗಿತ್ತು? ಅವನನ್ನು ಕಾಡಿನಲ್ಲಿರಿಸಿದುದರಿಂದ ನಿನಗೆ ಬಂದ ಭಾಗ್ಯವೇನು? ನೀನು ನನಗೆ ತಾಯಿಯೆನಿಸಿಕೊಂಡಿದ್ದು, ಕೌಸಲ್ಯಾಸುಮಿತ್ರೆಯರಿಬ್ಬರನ್ನೂ ಪುತ್ರಶೋಕದಿಂದ ಕೊರಗುವಹಾಗೆ ಮಾಡಿದೆಯಲ್ಲಾ! ನಿನ್ನಿಂದ ಅವರು ಪ್ರಾಣವನ್ನೇ ಕಳೆದುಕೊಳ್ಳತಕ್ಕ ಸಂಭವವು ಬಂದೊದಗಿತೆಂದು ನನಗೆ ತೋರಿರುವುದು. ಒಂದುವೇಳೆ ಅವರು ಬದುಕಿದ್ದರೂ ನಿನ್ನ ಕೈಕೆಳಗೆ ಸಿಕ್ಕಿಕೊಂಡು ಜೀವಿಸುವುದು ಅವರಿಗೆ ಹೇಗೆತಾನೇ ಸಾಧ್ಯವು? ಪೂಜ್ಯನಾದ ರಾಮನು ಧರ್ಮಸ್ವರೂಪದಂತಿರುವನು. ಗುರುಜನಗಳಲ್ಲಿ ಹೇಗೆ ನಡೆದುಕೊಳ್ಳಬೇಕೆಂಬ ಮರ್ಯಾದೆಯನ್ನು ಆತನು ಚೆನ್ನಾಗಿ ಬಲ್ಲನು. ಅವನು ಹೆತ್ತ ತಾಯಿಯಾದ ಕೌಸಲ್ಯೆಯಲ್ಲಿ ಹೇಗೆ ನಡೆದುಕೊಳ್ಳುತಿದ್ದನೋ ಹಾಗೆಯೇ ನಿನ್ನಲ್ಲಿಯೂ ಎಷ್ಟೋಭಕ್ತಿಯಿಂದ ನಡೆದುಕೊಳ್ಳುತಿದ್ದವನಲ್ಲವೆ? ಬಹುದೂರದೃಷ್ಟಿಯುಳ್ಳ ನನ್ನ ದೊಡ್ಡಮ್ಮನಾದ ಕೌಸಲ್ಯೆಯೂ ಹಾಗೆಯೇ ನಿನ್ನಲ್ಲಿ ಒಡಹುಟ್ಟಿದವಳಂತೆ ಪ್ರೇಮವನ್ನು ತೋರಿಸುತಿದ್ದಳಲ್ಲವೆ? ಇವೆರಡನ್ನೂ ನೀನು ಚೆನಾಗಿ ಪರ್ಯಾಲೋಚಿಸಬೇಡವೆ? ನಿನಗೆ ಅಕೆಯಲ್ಲಿಗಲಿ, ರಾಮನಲ್ಲಿಯಾಗಲಿ, ದ್ವೇ

ಷವಿರುವುದಕ್ಕೆ ಕಾರಣವೇಇಲ್ಲವಲ್ಲಾ!ಎಲೆ ಪಾಪಿನಿ! ಅಂತಹ ಧಾರ್ಮಿಕಳಾದ ಕೌಸಲ್ಯೆಗೆ ಮಗನಾಗಿ ಮಹಾಧೀಮಂತನೆನಿಸಿಕೊಂಡ ರಾಮನನ್ನು ಕಾಡಿಗೆ ಕಳುಹಿಸಿದೆಯಾ? ಆತನಿಗೆ ನಾರುಮಡಿಯನ್ನುಡಿಸಿದೆಯಾ? ಎಲೆ ಕ್ರೂರೆ! ಇಷ್ಟುಮಾಡಿದಮೇಲೆಯೂ ನಿನಗೆ ದುಃಖವುಂಟಾಗಲಿಲ್ಲವೆ? ಆ ರಾಮನಾದ ರೋ ಎಂದಿಗೂ ಪಾಪಕಾರ್ಯಕ್ಕೆ ಹೋದವನಲ್ಲ!ಬಹಳಧೀಮಂತನು! ಮಹಾ ಶೂರನು! ಯಶಸ್ವಿಯು! ಅಂತವನಿಗೆ ನಾರುಮಡಿಯನ್ನುಡಿಸಿ ಕಾಡಿಗೆ ಕಳು ಹಿಸುವುದಕ್ಕೆ ಈಗ ಬಂದೊದಗಿದ ಕಾರಣವೇನು? ಎಲೆ ಮೂಢಳೆ! ರಾಜ್ಯ ದಲ್ಲಿ ದುರಾಶೆಯುಳ್ಳ ನಿನಗೆ, ನಾನಾದರೂ ರಾಮನ ವಿಷಯದಲ್ಲಿ ಹೇಗೆ ನಡೆದುಕೊಳ್ಳುತ್ತಿರುವೆನೆಂಬ ಅಂಶವು ತಿಳಿಯದೆಹೋಯಿತೆ?ಈ ರಾಜ್ಯಕ್ಕಾಗಿ ಇಷ್ಟು ಮಹಾನರ್ಥಗಳನ್ನೂ ತಂದಿಟ್ಟೆಯಲ್ಲಾ! ಪುರುಷಶ್ರೇಷ್ಠರಾದ ರಾ ಮಲಕ್ಷ್ಮಣರಿಬ್ಬರನ್ನೂ ಬಿಟ್ಟು ನಾನು ಯಾವ ಶಕ್ತಿಯಿಂದ ರಾಜ್ಯವನ್ನು ನಡೆಸಲಿ? ಅವರಿಬ್ಬರೂ ಇಲ್ಲದಮೇಲೆ ನನಗೆ ಬೇರೆ ಬಲವೇನು? ನನ್ನ ವಿಷ ಯವು ಹಾಗಿರಲಿ! ಮಹಾಬಲಾಢ್ಯನಾಗಿ, ಧರ್ಮಾತ್ಮನಾಗಿ, ಮಹಾರಾಜನೆನಿ ಸಿಕೊಂಡ ನಮ್ಮ ತಂದೆಯೂಕೂಡ, [1]ಮೇರುಪರ್ವತವು ತನ್ನ ರಕ್ಷಣೆಗಾಗಿ ತನ್ನ ಅರಣ್ಯವನ್ನೇ ನಂಬಿಕೊಂಡಿದ್ದಂತೆ, ಬಲವಂತನಾದ ರಾಮನನ್ನೇ ನಂಬಿಕೊಂಡು, ಆತನ ಬಲದಿಂದಲೇ ರಾಜ್ಯವನ್ನು ನಡೆಸುತಿದ್ದನು. ಸಮ ರ್ಥವಾದ ಮಹಾವೃಷಭದಮೇಲೆ ಹೊರಿಸತಕ್ಕ ದೊಡ್ಡಭಾರವನ್ನು ಎಳಗ ರುವಿನಮೇಲೆ ಹೊರಿಸಿದಂತೆ,ನನ್ನಮೇಲೆ ಈ ರಾಜ್ಯಭಾರವನ್ನು ಹೊರಸಿದರೆ ಯಾವ ಶಕ್ತಿಯಿಂದ ಅದನ್ನು ನಾನು ತಡೆಯಲಿ?ಒಂದುವೇಳೆ ನಾನು ರಾಜ ವಂಶದಲ್ಲಿ ಹುಟ್ಟಿರುವುದರಿಂದ, ಸಾಮಾದ್ಯುಪಾಯಗಳಿಂದಾಗಲಿ, ಗ್ರಹ ಣಧಾರಣಾದಿಗಳಾದ ಅಷ್ಟಾಂಗಗಳುಳ್ಳ ಸ್ವಬುದ್ಧಿಬಲದಿಂದಾಗಲಿ, ರಾಜ್ಯ ವನ್ನು ಪಾಲಿಸುವುದಕ್ಕೆ ಶಕ್ತನಾಗಿದ್ದರೂ, ದುರಾಶೆಯಿಂದ ಇಷ್ಟು ಮಹಾ ನರ್ಥಗಳನ್ನು ತಂದಿಟ್ಟ ನಿನ್ನನ್ನು ಮಾತ್ರ ನಾನು ಎಂದಿಗೂ ಸುಖದಲ್ಲಿ

---

1 ಮೇರುಪರ್ವತದಲ್ಲಿ ಅನೇಕಘೋರಾರಣ್ಯಗಳಿರುವುದರಿಂದ, ಅದು ಇತರರಿಗೆ ದುಷ್ಪ್ರವೇಶವಾಗಿರುವಂತೆ, ರಾಮನೂ ದಶರಥನಿಗೆ ಒಂದು ದೊಡ್ಡಬೆಂಬಲವಾಗಿ ರಕ್ಷಕ ನಾಗಿದ್ದನೆಂದುಭಾವವು.

ರಿಸಲಾರೆನು ! ರಾಮನು ಮಾತ್ರ ತನ್ನ ಹೆತ್ತತಾಯಿಯಂತೆ ನಿನ್ನನ್ನು ಗೌರವಿಸದಿದ್ದಪಕ್ಷದಲ್ಲಿ,ಮಹಾಪಾಪಿನಿಯಾದ ನಿನ್ನನ್ನು ಈಗಲೇ ತೊರೆದು ಬಿಡುತಿದ್ದೆನು. ಆತನು ನಿನ್ನಲ್ಲಿ ಗೌರವವನ್ನಿಟ್ಟಿರುವುದರಿಂದಲೇ ನಾನೂ ನಿನ್ನನ್ನು ಸುಮ್ಮನೆ ಬಿಟ್ಟಿರುವೆನೆಂದು ತಿಳಿ! ಆತನ ಕೋಪಕ್ಕೆ ಹೆದರಿಯೇ ನಾನು ಉದಾಸೀನನಾಗಿರುವೆನು. ಎಲೆ ಪಾಪಿನಿ! ಈ ಬುದ್ಧಿಯು ನಿನಗೆ ಹೇಗೆ ಹುಟ್ಟಿತೆ? ನಿನ್ನಲ್ಲಿ ಸಜ್ಜನರ ನಡತೆಯು ಸ್ವಲ್ಪವಾದರೂ ಬೇಡವೆ? ನಮ್ಮ ವಂಶಕ್ಕೇ ನಿಂದ್ಯವಾದ ಈ ದುರ್ಬುದ್ಧಿಯು ನಿನಗೇಕೆ ಹುಟ್ಟಿತು? ನಮ್ಮ ವಂಶದಲ್ಲಿ ಜ್ಯೇಷ್ಠಪುತ್ರನಿಗೆ ರಾಜ್ಯಾಭಿಷೇಕಮಾಡುವುದೇ ಕುಲಕ್ರಮಾಗತವಾಗಿ ಬಂದ ಸಂಪ್ರದಾಯವೆಂಬುದನ್ನು ನೀನು ತಿಳಿಯೆಯಾ? ಒಡಹುಟ್ಟಿದವರೆಲ್ಲರೂ ಅಣ್ಣನಿಗೆ ವಿಧೇಯರಾಗಿ ನಡೆದುಕೊಳ್ಳುತಿದ್ದರೆಂಬುದನ್ನು ನೀನರಿಯೆಯಾ? ಆ ರಾಜಧರ್ಮವೆಲ್ಲವನ್ನೂ ನೀನು ತಿಳಿದವಳಾಗಿದ್ದರೆ ನಿನಗೇಕೆ ಈ ದುರ್ಬುದ್ಧಿಯು ಹುಟ್ಟುತಿತ್ತು? ಎಲೆಘಾತುಕಿ! ನಿನಗೆ ಈ ರಾಜಧರ್ಮಗಳೊಂದೂ ತಿಳಿದಂತೆ ನನಗೆ ತೋರಲಿಲ್ಲ! ರಾಜಧರ್ಮದ ರೀತಿಯು ಹೇಗೆಂಬುದೇ ನಿನಗೆ ತಿಳಿಯದು! ಇದು ನಮ್ಮ ವಂಶಕ್ಕೆಮಾತ್ರವೇ ಅಲ್ಲ ! ಈ ವೃತ್ತಿಯು ಸಮಸ್ತರಾಜವಂಶಕ್ಕೂ ವಿಹಿತವಾಗಿರುವುದು. ಅದರಲ್ಲಿಯೂ ಲೋಕವಿಖ್ಯಾತವಾದ ನಮ್ಮ ಇಕ್ಷ್ವಾಕುವಂಶಕ್ಕೆ ಈ ಧರ್ಮವು ವಿಶೇಷಾದರಣೀಯವೆಂಬುದನ್ನು ಹೇಳತಕ್ಕುದೇನು? ಈ ನಮ್ಮ ಇಕ್ಷ್ವಾಕುವಂಶದವರು ಧರ್ಮವೇ ತಮಗೆ ರಕ್ಷೆಯೆಂದು ನಂಬಿರತಕ್ಕವರಲ್ಲವೆ? ಕುಲಕ್ರಮಾಗತವಾದ ಆಚಾರಸಂಪ್ರದಾಯಗಳನ್ನು ಯಾವಾಗಲೂ ಬಿಟ್ಟುನಡೆಯತಕ್ಕವರಲ್ಲ. ಅಂತವರಿಗೆ ಈ ನಡತೆಯ ವಿಷಯದಲ್ಲಿದ್ದ ಹೆಮ್ಮೆಯನ್ನು ಈಗ ನೀನು ಮುರಿದುಹಾಕಿಬಿಟ್ಟೆಯಲ್ಲ!ನಮ್ಮ ಇಕ್ಷ್ವಾಕುವಂಶವು ಹಾಗಿರಲಿ!ನಿನ್ನ ವಂಶದ ಪೂರ್ವರಾಜರ ಪದ್ಧತಿಯನ್ನಾದರೂ ನೀನು ನೋಡಬೇಡವೆ! ಅವರೂ [1]ಹಿರಿಯ ಮಗನಿಗೆ ಪಟ್ಟವನ್ನು ಕಟ್ಟುತಿದ್ದರೆಂಬ ಕುಲಸಂಪ್ರದಾಯವನ್ನು ನೀನು

---

1 ಇಲ್ಲಿ "ಜ್ಯೇಷ್ಠ ಏವ ತು ಗೃಹ್ಣೀಯತ್ ಪಿತ್ರ್ಯಂ ಧನಮಶೇಷತಃ। ಶೇಷಾಸ್ತಮನುಜೀವೇಯುಃ" ಎಂಬ ಮನುಸ್ಮೃತಿ ವಾಕ್ಯಪ್ರಮಾಣವನ್ನು ಅನುಸಂಧಿಸಿಕೊಳ್ಳಬೇಕು.

ತಿಳಿಯೆಯಾ? ಅಂತಹ ಮಹನೀಯರ ವಂಶದಲ್ಲಿ ಹುಟ್ಟಿಯೂ ನಿನಗೆ ಈವಿಪ ರೀತಬುದ್ಧಿಯುಂಟಾಗಬಹುದೆ! ಎಲೆ ಪಾಪಬುದ್ಧಿಯುಳ್ಳವಳೆ ! ನನ್ನ ಕೈಸಾಗುವವರೆಗೂ ನಿನ್ನ ಕೋರಿಕೆಯೊಂದಾದರೂ ಕೈಗೂಡುವುದೆಂಬ ಆಸೆಯನ್ನು ಬಿಟ್ಟುಬಿಡು! ನೀನೇ ಈಗ ನನಗೆ ಪ್ರಾಣಾಂತಕರವಾದ ವ್ಯಸನ ವನ್ನು ತಂದಿಟ್ಟಿರುವೆ!ಇದಕ್ಕಾಗಿ ನಾನು ನಿನ್ನ ಇಷ್ಟದಂತೆ ನಡೆಯದಿರುವುದು ಮಾತ್ರವೇ ಅಲ್ಲ ! ಒಂದೊಂದುಭಾಗದಲ್ಲಿಯೂ ನಿನ್ನ ಇಷ್ಟಕ್ಕೆ ವಿರೋಧವಾ ಗಿಯೇ ನಡೆಸಿ, ನಿನಗೆ ಅನಿಷ್ಟವನ್ನೇ ತಂದಿಡಬೇಕೆಂದು ಸಂಕಲ್ಪಿಸಿಬಿಟ್ಟಿರು ವೆನು! ಇದೋ!ಈಗಲೇ ನಾನು ಸರ್ವಲೋಕಪ್ರಿಯನೆನಿಸಿಕೊಂಡಿರುವ ಅಣ್ಣ ನಾದ ರಾಮನನ್ನು ಕಾಡಿನಿಂದ ಹಿಂತಿರುಗಿಸಿ ಕರೆತರುವೆನು ! ನಿನಗೆ ಅಪ್ರಿಯ ವನ್ನುಂಟುಮಾಡುವುದಕ್ಕಾಗಿಯೇ ನಾನು ಮೊದಲು ಆತನಲ್ಲಿಗೆಹೋಗುವೆನು. ಮಹಾತೇಜಸ್ವಿಯಾದ ಆತನನ್ನೇ ಪಟ್ಟದಲ್ಲಿರಿಸುವೆನು !ಆತನಿಗೆ ನಾನು ಕೇ ವಲದಾಸಾನುದಾಸನಾಗಿ ಅವನು ಹೇಳಿದ ಕೆಲಸಗಳನ್ನು ಮಾಡುತ್ತಿರುವೆನು. ಇದು ನಿಜವು! ಆಗಲೇ ನನ್ನ ಮನಸ್ಸು ನೆಮ್ಮದಿಯಿಂದಿರುವುದು" ಎಂದನು. ಮಹಾತ್ಮನಾದ ಭರತನು,ಹೀಗೆ ದುಃಖಕರವಾದ ಮಾತುಗಳಿಂದ ಆ ಕೈಕೇ ಯಿಯನ್ನು ಕೊರಗಿಸುತ್ತ,ತಾನೂ ಮಹಾವ್ಯಸನದಿಂದ ಕೊರಗುತ್ತ, ಪರ್ವತ ಗುಹೆಯಲ್ಲಿ ಅಡಗಿ ಕೂಗುತ್ತಿರುವ ಸಿಂಹದಂತೆ ಆಗಾಗ ಕೋಪದಿಂದ ಗರ್ಜಿ ಸುತ್ತಿದ್ದನು. ಇಲ್ಲಿಗೆ ಎಪ್ಪತ್ತುಮೂರನೆಯ ಸರ್ಗವು.

---

{ ಭರತನು ಕೋಪಾವೇಶದಿಂದ ಕೈಕೇಯಿಯನ್ನು ಬಹು ಕ್ರೂರವಾಗಿ ನಿಂದಿಸಿ, ಕೊನೆಗೆ ಮೂರ್ಛೆಬಿದ್ದುದು. }

ಹೀಗೆ ಭರತನು ತನ್ನ ತಾಯಿಯನ್ನು ಮೊದಮೊದಲು ಮರ್ಮೋ ದ್ಘಾಟಕವಾದ ಮೃದುವಾಕ್ಯಗಳಿಂದ ನಿಂದಿಸುತ್ತಿದ್ದನು. ಕೊನೆಕೊನೆಗೆ ಆ ಕೋಪವೇ ಮಿತಿಮೀರಿತು. ಆಗ ಆಕೆಯನ್ನು ನೋಡಿ "ಎಲೆ ಕ್ರೂರೆ! ಎಲೆ ! ದುಷ್ಟೆ! ನೀನು ಧರ್ಮದಲ್ಲಿ ಸ್ವಲ್ಪವಾದರೂ ದೃಷ್ಟಿಯನ್ನಿಡಬೇಡವೆ? ನೀನೂ ನಿನ್ನ ತಾಯಿಯಂತೆ ರಾಜ್ಯಭ್ರಷ್ಟಳಾಗಬೇಕಾದುದೇ ನ್ಯಾಯವು. ನಿನ್ನ ಭಾಗಕ್ಕೆ ನಾನು ಸತ್ತಂತೆಯೇ ತಿಳಿದು ಗೋಳಿಡುತ್ತಿರು!ಎಲೆ ಪಾಪಿನಿ! ನೀನು ನಮ್ಮಮಹಾರಾಜನಿಗೆ ಮರಣವನ್ನೂ,ರಾಮನಿಗೆವನವಾಸವನ್ನೂ ಏಕೆ

ಕಾಲದಲ್ಲಿಯೇ ತಂದಿಟ್ಟೆಯಲ್ಲಾ!ರಾಜನಾಗಲಿ,ಅಥವಾ ಪರಮಧಾರ್ಮಿಕನಾದ ರಾಮನಾಗಲಿ ನಿನಗೆ ಮಾಡಿದ ಅನ್ಯಾಯವೇನು ? ನಿನ್ನ ಚರಿತ್ರೆಯನ್ನಾಗಲಿ ಗುಣಗಳನ್ನಾಗಲಿ ಅವರು ದೂಷಿಸಿದುದೇನು? ನಮ್ಮ ಕುಲವನ್ನು ಕೆಡಿಸಿದು ದರಿಂದ ನೀನು ಭ್ರೂಣಹತ್ಯಾಪಾತಕಕ್ಕೊಳಗಾದೆಯಲ್ಲ! ಎಲೆ ಕೈಕೇಯಿ! ನಿನಗೆ ನರಕವೇ ಗತಿ! ಎಂದಿಗೂ ನೀನು ಪತಿಸಾಲೋಕ್ಯವನ್ನು ಹೊಂದ ಲಾರೆ!ಅಯ್ಯೋ! ಈಭಯಂಕರವಾದ ಕಾರ್ಯಕ್ಕೆ ಪ್ರವರ್ತಿಸಿ,ರಾಮನನ್ನು ಕಾ ಡಿಗೆ ಕಳುಹಿಸಿ, ಮಹಾಪಾಪಕ್ಕೆ ಗುರಿಯಾದೆಯಲ್ಲಾ! ನನಗೆ ರಾಜ್ಯವನ್ನು ಕೊಡಿಸಬೇಕೆಂದು ಸರ್ವಲೋಕಪ್ರಿಯನಾದ ಆ ರಾಮನನ್ನು ನೀನು ಕಾ ಡಿಗೆ ಕಳುಹಿಸಿದೆಯಾ? ಇದರಿಂದ ನನಗೆ ನೀನು ಉಪಕಾರಮಾಡಬೇಕೆಂದೆ ಣಿಸಿದೆಯಾ? ಈ ವ್ಯಾಜದಿಂದ ನೀನು ನನಗೂ ಅಪಮೃತ್ಯುವನ್ನೇ ತಂದಿಟ್ಟಂತಾಯಿತೇಹೊರತು ಬೇರೆಯಲ್ಲ. ಇದರಿಂದ ಒಂದೆರಡನರ್ಥ ಗಳೇ ಅಲ್ಲ! ನಿನ್ನಿಂದ ನನ್ನ ತಂದೆಯೂ ಸಾಯಬೇಕಾಯಿತು! ಅತ್ತಲಾಗಿ ರಾಮನೂ ದೇಶಭ್ರಷ್ಟನಾಗಿ ಹೋಗಬೇಕಾಯಿತು ! ನಾನೂ ಈ ಲೋಕ ದಲ್ಲಿ ಮಹಾಪವಾದಕ್ಕೆ ಗುರಿಯಾಗಬೇಕಾಯಿತು. ನಿನಗೇಕೆ ಹೀಗೆ ದುರಾಶೆಯು ಹುಟ್ಟಿತೆ? ಪತಿಯನ್ನು ಕೊಂದ ಮಹಾಪಾಪಿನಿಯಾದ ನೀನು ನನ್ನೊಡನೆ ಸಂಭಾಷಿಸುವುದಕ್ಕೂ ಅರ್ಹಳಲ್ಲ! ಇನ್ನುಮೇಲೆ ನೀನು ನನ್ನ ನ್ನು ಮಾತಾಡಿಸಬೇಡ! ಕೌಸಲ್ಯೆಯೂ, ಸುಮಿತ್ರೆಯೂ, ಇನ್ನೂ ನನ್ನ ಇತರಮಾತೆಯರೆಲ್ಲರೂ, ಕುಲಘಾತುಕಿಯಾದ ನಿನಗಾಗಿ ಮಹಾವ್ಯಸನಕ್ಕೆ ಗುರಿಯಾಗಬೇಕಾಯಿತಲ್ಲವೆ? ನಿನ್ನನ್ನು ಆ ಅಶ್ವಪತಿಗೆ ಮಗಳೆಂದೇ ಹೇಳ ಬಾರದು! ಅತನು ಮಹಾಧೀಮಂತನು! ಧರ್ಮಸ್ವರೂಪನು ! ಅತನ ಹೊಟ್ಟೆ ಯಲ್ಲಿ ನೀನು ಹುಟ್ಟಿರಲೇಬಾರದು. ಅವನ ವಂಶವನ್ನು ಕೆಡಿಸುವುದಕ್ಕಾಗಿ ರಾ ಕ್ಷಸಸ್ವರೂಪಿಣಿಯಾಗಿಯೇ ನೀನು ಹುಟ್ಟಿರುವೆ! ಯಾವಾಗಲೂ ಸತ್ಯಪರಾ ಯಣನಾಗಿ ಧಾರ್ಮಿಕನೆನಿಸಿಕೊಂಡಿರುವ ರಾಮನನ್ನು ಕಾಡುಪಾಲುಮಾಡಿದೆ! ನಿನಗೆ ಪಾಪಕಾರ್ಯವೇ ಪ್ರಧಾನವೆಂದು ನನಗೆ ತೋರಿರುವುದು! ನಿನ್ನ ಪಾಪ ಕಾರ್ಯದ ಫಲಕ್ಕೆ ನಾನೂ ಭಾಗಿಯಾಗಬೇಕಾಗಿಬಂದೊದಗಿ ತಲ್ಲೆ!ಇತ್ತಲಾಗಿ ತಂದೆಯನ್ನೂ ಕಳೆದುಕೊಂಡೆನು. ಅತ್ತಲಾಗಿ ನನ್ನ ಅಣ್ಣತಮ್ಮಂದಿರೂ ನನ್ನ ನ್ನು ತೊರೆದುಬಿಟ್ಟರು. ನಾನೂ ಈ ಲೋಕಕ್ಕೇ ವಿರೋಧಿಯಾದೆನು. ಈ ಅನ

ರ್ಥಗಳೆಲ್ಲವೂ ನಿನ್ನಿಂದಲೇ ನನಗೆ ಬಂದೊದಗಿತು ! ಪಾಪವೆಂಬುದನ್ನೇ ಕಂಡ ರಿಯದೆ, ಯಾವಾಗಲೂ ಧರ್ಮದಲ್ಲಿಯೇ ನಿರತಳಾದ ಆ ಕೌಸಲ್ಯೆಗೆ ನೀನು ಇಷ್ಟು ದುಃಖವನ್ನು ತಂದಿಟ್ಟಮೇಲೆ, ನಿನಗೆ ಯಾವ ಪುಣ್ಯಲೋಕ ವುಂಟು ? ನಿನಗೆ ನರಕವೇ ಗತಿಯಲ್ಲದೆ ಬೇರೆಯಿಲ್ಲ. ನಿನ್ನ ಈ ದುಷ್ಕೃ ತ್ಯಕ್ಕೆ ಈಗ ಸಿದ್ಧವಾಗಿರುವ ನರಕಗಳೂಕೂಡ ಸಾಲದೆಂದೇ ತೋರುವುದು ? ಎಲೆ ಕ್ರೂರೆ! ಕೌಸಲ್ಯೆಯ ಮಗನಾದ ಆ ರಾಮನು ಶುದ್ಧಸ್ವಭಾವವುಳ್ಳವ ನೆಂದೂ, ಬಂಧುಗಳಿಗೆಲ್ಲಾ ಆತನೇ ಮುಖ್ಯಾಶ್ರಯನೆಂದೂ, ಜ್ಯೇಷ್ಠನಾದ ಆತನು ನನಗೆ ತಂದೆಗೆ ಸಮಾನನೆಂದೂ ನೀನು ತಿಳಿಯಲಿಲ್ಲವೆ? ಅಂತಹ ಮ ಹನೀಯನನ್ನು ನನಗೆ ದ್ವೇಷಿಯೆಂದು ಯೋಚಿಸಿದೆಯಾ? [1] ಪುತ್ರನಾದ ವನು ತಾಯಿಯ ಮುಖ, ಕಂಠ, ಮೊದಲಾದ ಅಂಗಗಳಿಂದಲೂ ಕಣ್ಣು, ಮೂಗು, ಮೊದಲಾದ ಉಪಾಂಗಗಳಿಂದಲೂ ಹುಟ್ಟುವನು. ತಾಯಿಯ ಅಂಗಾಂಗಗಳ ತೇಜಸ್ಸೂ ಮಗನೊಡನೆ ಸೇರಿ ಬರುವುವು. ಅನುರಾಗಾ ಶ್ರಯವಾದ ಹೃದಯದಿಂದಲೂ ಅವನು ಹುಟ್ಟಿಬರುವನು. ಆದುದರಿಂದ ತಾಯಿಗೆ ಮಗನೇ ಎಲ್ಲಕ್ಕಿಂತಲೂ ಪ್ರಿಯತಮನೆನಿಸಿಕೊಳ್ಳುವನಲ್ಲವೆ? ಇತರ ಬಂಧುಗಳು ರಕ್ತಸಂಬಂಧಮಾತ್ರದಿಂದ ಪ್ರಿಯರೆನಿಸಿಸಿಕೊಂಡಿದ್ದರೂ, ಮ ಗನಂತೆ ಪ್ರಿಯತಮರಾಗುವರೆ ? ಬಂಧುಗಳಲ್ಲಿ ಪುತ್ರನೆಂಬವನೇ ಕೇವಲ ಪ್ರಿಯತಮನು. ತಾಯಿಗೆ ಆತನನ್ನು ಸಾಮಾನ್ಯವಾದ ಇತರಬಂಧುವಿನಂತೆ ಎಣಿಸಕೂಡದು. ಪೂರ್ವದಲ್ಲಿ ಒಂದಾನೊಂದುಕಾಲದಲ್ಲಿ,ದೇವಋಷಿಗಳಿಗೂ ಪೂ ಜ್ಯವಾಗಿ ಸಕಲಧರ್ಮಗಳನ್ನೂ ತಿಳಿದ ಕಾಮಧೇನುವು, ಭೂಮಿಯಲ್ಲಿ ನೇಗಿಲ ನ್ನು ಹೊತ್ತು ನೆಲವನ್ನುತ್ತು ಬಹಳವಾಗಿ ಆಯಾಸಪಟ್ಟು, ಬಳಲಿಮೂರ್ಛೆ

---

1 ಇಲ್ಲಿ "ಅಂಗಾದಂಗಾತ್ಸಂಭವಸಿ ಹೃದಯಾದಧಿಜಾಯಸೇ | ಆತ್ಮಾವೈಪುತ್ರ ನಾಮಾಸಿ " ಇತ್ಯಾದಿಶ್ರುತಿಪ್ರಮಾಣಗಳನ್ನು ಅನುಸಂಧಿಸಿಕೊಳ್ಳಬೇಕು. ಮತ್ತು ಅಂಗ ಪ್ರತ್ಯಂಗಜತ್ವವೆಂದರೆ, ಸರ್ವಾಂಗ ಸಂಬಂಧವಾದ ತೇಜಸ್ಸಿನಿಂದಲೂ ಹುಟ್ಟಿದುದೆಂ ದರ್ಥವು. "ಯದೇತದ್ರೇತಸ್ತತ್ಸರ್ವೇಭ್ಯೋಽಂಗೇಭ್ಯಸ್ತೇಜಸ್ಸಂಭೂತಂ " ಎಂದು ಶ್ರುತಿಪ್ರಮಾಣವು. ಸ್ತ್ರೀಯರಿಗಾದರೋ ಶೋಣಿತವೇ ರೇತಸ್ಸೆನಿಸುವುದು. "ಹೃದ ಯಾಚ್ಚ " ಎಂದು ಮೂಲದಲ್ಲಿರುವುದರಿಂದ, ಪ್ರತ್ಯಗಾತ್ಮಸ್ಥಾನವಾದ ಹೃದಯಪುಂಡ ರೀಕದಿಂದಲೂ ಪುತ್ರೋತ್ಪತ್ತಿಯಾಗುವುದೆಂದು ಪ್ರಮಾಣವು.

ಬಿದ್ದಿದ್ದ ತನ್ನವಂಶದ ಹೋರಿಗಳೆರಡನ್ನು ಕಂಡಿತು. ಬೆಳಗಿನಿಂದ ಮಧ್ಯಾಹ್ನ ದವರೆಗೂ ನೇಲವನ್ನುತ್ತು ಬಳಲಿ ಬಿದ್ದಿರುವ ಅವುಗಳ ದುಸ್ಥಿತಿಯನ್ನು ಕಂಡಾಗ,ಆಕಾಮಧೇನುವಿನ ಮನಸ್ಸಿನಲ್ಲಿ ಮರುಕಹುಟ್ಟಿತು.ಆದುಃಖದಿಂದಲೇ ಅದು ಕಣ್ಣೀರುಬಿಡುತ್ತಾರೋದಿಸುತಿತ್ತು. ಆಸಮಯಕ್ಕೆ ಸರಿಯಾಗಿ ಮಹಾತ್ಮನಾದ ದೇವೇಂದ್ರನು ವಿಮಾನಚಾರಿಯಾಗಿ ಕೆಳಗಡೆಯಲ್ಲಿ ಅಕಸ್ಮಾತ್ತಾಗಿ ಹೋಗುತ್ತಿರಲು, ಆಕಾಮಧೇನುವಿನ ಕಣ್ಣೀರಿನ ಹನಿಗಳು ಇಂದ್ರನ ಮೈಮೇಲೆಬಿದ್ದುವು.ವಾಸನೆಯಿಂದ ಘಮಘಮಿಸುತ್ತಿರುವ ಬಿಸಿಯಾದ ಜಲಬಿಂದುಗಳು ತನ್ನಮೈಮೇಲೆ ಬಿದ್ದುದನ್ನುನೋಡಿ ಇಂದ್ರನು,ದಿವ್ಯಧೇನುವು ರೋದನಮಾಡುವುದರಿಂದಲೇ ಈ ಕಣ್ಣೀರು ಸುರಿದಿರಬಹುದೆಂದುನಿಶ್ಚಯಿಸಿ,ನಾಲ್ಕುಕಡೆಗೂ ಕಣ್ಣಿಟ್ಟು ನೋಡಿದನು.ಆಗ ಆಕಾಶದಲ್ಲಿ ಕಾಮಧೇನುವು ಬಹಳದುಃಖದಿಂದ ದೀನಧ್ವನಿಯನ್ನು ಮಾಡುತ್ತಾ ಅಳುತ್ತಿರುವುದನ್ನು ಕಂಡನು. ಯಶಸ್ವಿನಿಯಾದ ಕಾಮಧೇನುವು ಮಹಾವ್ಯಸನದಿಂದ ಬೆಂದು ಗೋಳಿಡುತ್ತಿರುವುದನ್ನು ನೋಡಿ ಕೈಮುಗಿದು ‘‘ಎಲೈ ಪುಣ್ಯಧೇನುವೆ ! ನಿನಗೆ ನಮ್ಮಕಡೆಯ ದೇವತೆಗಳಿಂದ ಯಾವಾಗಲೂ ಬಾಧೆಯುಂಟಾಗಲಾರದಲ್ಲವೆ ? ಹಾಗಿದ್ದರೂ ಈ ನಿನ್ನದುಃಖಕ್ಕೆ ಕಾರಣವೇನು ? ಸಮಸ್ತ ಭೂತಗಳಿಗೂ ಹಿತವನ್ನುಂಟುಮಾಡತಕ್ಕ ನೀನೇ ಹೀಗೆ ದುಃಖಿಸಬಹುದೆ?" ಎಂದನು. ದೇವೇಂದ್ರನ ಈ ಮಾತುಗಳನ್ನು ಕೇಳಿ ಕಾಮಧೇನುವು ಗಂಭೀರಧ್ವನಿಯಿಂದ ಆತನನ್ನು ಕುರಿತು ‘‘ಎಲೆ ದೇವೇಂದ್ರನೆ! ಬಿಟ್ಟಿತು! ಬಿಟ್ಟಿತು! ನಿಮ್ಮಕಡೆಯವರಿಂದ ನನಗೆ ಭಯವೆಂದರೇನು ? ಅದನ್ನು ಬಾಯಿಯಿಂದಲೂ ಹೇಳಬಾರದು. ನಿಮ್ಮಲ್ಲಿ ಯಾರೂ ನನ್ನನ್ನು ಹಿಂಸಿಸಲಿಲ್ಲ. ಈಗ ನನ್ನ ದುಃಖಕ್ಕೆ ಕಾರಣವೇ ಬೇರೆ! ಅದೋ! ಅಲ್ಲಿನೋಡು! ಭೂಮಿಯಮೇಲೆ ನನ್ನ ವಂಶದ ಎರಡುಹೋರಿಗರುಗಳು ಕಷ್ಟಕ್ಕೆ ಸಿಕ್ಕಿಬಿದ್ದಿರುವುದನ್ನು ನೋಡಿ ನನಗೆ ಸಂಕಟವಾಯಿತು. ಆ ಕರುಗಳೆರಡೂ ಬಿಸಿಲಿನಲ್ಲಿ ಬಳಲಿ ಕಂದಿ ಕೃಶವಾಗಿರುವುವು. ಹೀಗಿದ್ದರೂ ಬಿಡದೆ ಕರ್ಷಕನೊಬ್ಬನು ಅವುಗಳನ್ನು ಹಿಂಸಿಸಿ ನೇಗಿಲನ್ನುಕಟ್ಟಿ ಎಳೆಸುತ್ತಿದ್ದುದರಿಂದ ಅವು ಮೂರ್ಛೆಬಿದ್ದುವು. ಅವುಗಳ ಕಷ್ಟವನ್ನುನೋಡಿ ನಾನು, ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳೆಂಬ ವಾತ್ಸಲ್ಯದಿಂದ ಹೀಗೆ ಸಂಕಟಪಡುತ್ತಿರುವೆನು. ಅವು ಭಾರವನ್ನೆಳೆಯುತಿದ್ದರೆ ನಾನು ಅದನ್ನುನೋಡಿ ಸಹಿ

ಸಲಾರೆನು.ಲೋಕದಲ್ಲಿ ಹೊಟ್ಟೆಯಲ್ಲಿ ಹುಟ್ಟಿದಮಕ್ಕಳಿಗಿಂತಲೂ ಪ್ರಿಯವಾ ದುದುಬೇರೊಂದೂ ಇಲ್ಲವು."ಎಂದಿತು.ಇದನ್ನುಕೇಳಿ ದೇವೇಂದ್ರನುಮನಸ್ಸಿನಲ್ಲಿ "ಅಹಾ!ಈ ಕಾಮಧೇನುವಿಗಾಗರೋ ಈಪ್ರಪಂಚವೆಲ್ಲವೂ ತುಂಬಿಹೋಗುವಷ್ಟು ಅನೇಕಸಹಸ್ರಸಂಖ್ಯೆಯುಳ್ಳ ಮಕ್ಕಳು ಹುಟ್ಟಿರುವರು. ಹೀಗಿದ್ದರೂ ಈ ಎರಡುಕರುಗಳು ಕಷ್ಟಪಡುತಿದ್ದ ಮಾತ್ರಕ್ಕೆ ಈ ಧೇನುವು ಇಷ್ಟು ಸಂಕಟಪಡುತ್ತಿರವುದಲ್ಲವೆ ? ಇದನ್ನುನೋಡಿದರೆ ಲೋಕದಲ್ಲಿ ಮಕ್ಕಳಿಗಿಂತ ಮೇಲಾದ ಪ್ರಿಯವಸ್ತುವು ಬೇರೊಂದೂ ಇಲ್ಲವೆಂದೇ ತೋರುವುದು " ಎಂದು ನಿಶ್ಚಯಿಸಿಕೊಂಡನು. ಎಲೆ ನಿರ್ದಯಳೆ! ಎಣೆಯಿಲ್ಲದ ನಡತೆಯುಳ್ಳವಳಾಗಿ, ಸದ್ಗುಣಭರಿತಳಾಗಿ, ಆಶ್ರಿತರ ಕೋರಿಕೆಗಳನ್ನೆಲ್ಲಾ ಆಗಾಗಲೇ ಕೈಗೂಡಿಸತಕ್ಕ ಮಹಾಮಹಿಮೆಯುಳ್ಳವಳಾಗಿ, ದಿವ್ಯಲಕ್ಷಣಗಳಿಂದ ಕೂಡಿದ ಆ ಕಾಮಧೇನುವೂಕೂಡ,ಸ್ತ್ರೀಪುರುಷರಿಗೆ ಸ್ವಾಭಾವಿಕವಾದ ಮೈಥುನವ್ಯಾಪಾರಪರಂಪರೆಯಿಂದ ಲೋಕಸಂಗ್ರಹವನ್ನು ಮಾಡಬೇಕೆಂಬುದಕ್ಕಾಗಿ ಅನೇಕಪುತ್ರರನ್ನು ಪಡೆದಿದ್ದರೂ,ಆ ಎರಡುಮಕ್ಕಳಿಗಾಗಿ ಎಷ್ಟುಸಂಕಟಪಟ್ಟಳು! ನೋಡಿದೆಯಾ? ಹೀಗಿರುವಾಗ ರಾಮನೊಬ್ಬನನ್ನೇ ಪುತ್ರನನ್ನಾಗಿ ಪಡೆದು, ಆತನಲ್ಲಿಯೇ ತನ್ನ ಆಸೆಯೆಲ್ಲವನ್ನೂ ಇಟ್ಟುಕೊಂಡಿರತಕ್ಕ ಕೌಸಲ್ಯೆಯು ಆ ಒಬ್ಬಮಗನನ್ನೂ ಅಗಲಿಬಿಟ್ಟಮೇಲೆ ಅವಳ ದುಃಖಕ್ಕೆ ಪಾರವುಂಟೆ? ಆ ಕೌಸಲ್ಯೆಯು ಬಹುಕಾಲದವರೆಗೆ ಮಕ್ಕಳಿಲ್ಲದೆ ಕೊನೆಗಾಲಕ್ಕೆ ಆ ಒಬ್ಬಮಗನನ್ನು ಪಡೆದವಳು. ಆಕೆಯು ಮಹಾಪತಿವ್ರತೆಯು. ಅಂತವಳಿಗೆ ನೀನು ಪುತ್ರವಿರಹವೆಂಬ ಈ ಮಹಾವಿಪತ್ತನ್ನುತಂದಿಟ್ಟೆಯಲ್ಲವೆ? ಇದರಿಂದ ನೀನು ಈಲೋಕದಲ್ಲಿಯೇ ಅಲ್ಲದೆ,ಸತ್ತು ಪರಲೋಕಕ್ಕೆ ಹೊದಮೇಲೆಯೂ ದುಃಖವನ್ನನುಭವಿಸದಿರಲಾರೆ! ಇದುನಿಜವು. ಎಲೆಕೈಕೇಯಿ!ನಾನಾದರೋ ಈಗ ಅಣ್ಣನಾದ ರಾಮನನ್ನೂ, ತಂದೆಯಾದ ದಶರಥನನ್ನೂ, ಯಾವಯಾವರೀತಿಯಲ್ಲಿ ಪೂಜಿಸಬೇಕೋ ಆ ರೀತಿಯಲ್ಲಿ ಪೂಜಿಸಿ, ಈಗ ನಿನ್ನಿಂದ ಅಳಿಸಿಹೋದ ಕೀರ್ತಿಯನ್ನು ಸಂಪಾದಿಸಿಕೊಳ್ಳುವೆನು. ಇದರಲ್ಲಿ ಸಂದೇಹವಿಲ್ಲ. ಈಗಲೇ ನಾನು ರಾಮನಿರುವಕಾಡಿಗೆ ಹೋಗಿ ಮಹಾಬಲಾಢ್ಯನಾದ ಆತನನ್ನು ನಾನೇ ಕರೆತಂದು, ಕೌಸಲ್ಯೆಯವಶಕ್ಕೊಪ್ಪಿಸಿ, ತಾಪಸಯೋಗ್ಯವಾದ ಅರಣ್ಯಕ್ಕೆ ನಾನು ಹಿಂತಿರುಗಿ ಹೋಗುವೆನು.

ಆತನಿಗೆ ಪ್ರತಿಯಾಗಿನಾನೇ ಕಾಡಿನಲ್ಲಿರುವೆನು.ಎಲೆ ಪಾಪಬುದ್ಧಿಯುಳ್ಳವಳೆ! ನೀನು ಮಾಡಿದ ಈಮಹಾಪಾಪಕೃತ್ಯವನ್ನು ನಾನು ಎಂದಿಗೂ ತಡೆಯಲಾರೆನು. ರಾಮನ ಅಗಲಿಕೆಗಾಗಿ ಈ ಪ್ರಜಜನರೆಲ್ಲರೂ ಕಣ್ಣೀರುಬಿಟ್ಟು ಅಳುತ್ತಿದ್ದರೆ ಅದನ್ನು ನೋಡಿ ನಾನು ಎಂದಿಗೂ ಸಹಿಸಲಾರೆನು. ಎಲೆದುಷ್ಟೆ!ಈ ಕಾರ್ಯವು ನಿನಗಿಷ್ಟವಿಲ್ಲದಪಕ್ಷದಲ್ಲಿ, ನೀನು ಬೆಂಕಿಯಲ್ಲಿ ಬಿದ್ದಾದರೂ ಪ್ರಾಣವನ್ನು ಬಿಡು!ದೇಶಭ್ರಷ್ಟಳಾಗಿ ದಂಡಕಾರಣ್ಯಕ್ಕಾದರೂ ಹೋಗಿಬಿಡು!ಕೊರಳಿಗೆ ನೇಣನ್ನಾದರೂ ಹಾಕಿಕೊಂಡು ಪ್ರಾಣವನ್ನು ಬಿಡು! ಇದನ್ನು ಬಿಟ್ಟರೆ ನಿನಗೆ ಬೇರೆಗತಿಯಿಲ್ಲವು. ನಾನಾದರೋ ಸತ್ಯಪರಾಕ್ರಮನಾದ ಆ ರಾಮನಿಗೇ ರಾಜ್ಯವನ್ನೊಪ್ಪಿಸಿ, ಈ ಲೋಕಾಪವಾದವನ್ನು ತಪ್ಪಿಸಿಕೊಂಡು, ನಿರ್ದೋಷಿಯೆನಿಸಿ ಕೃತಾರ್ಥನಾಗುವೆನು."ಎಂದು ಹೇಳಿ, ಭರತನು ಕಾಡಿನಲ್ಲಿ ಅಂಕುಶಾದ್ಯಾಯುಧಗಳಿಂದ ಪೀಡಿಸಲ್ಪಟ್ಟು ಕೋಪದಿಂದ ಕೂಗಿಡುವ ಮದ್ದಾನೆಯಂತೆ ಬಹುಕ್ರುದ್ಧನಾಗಿ, ಹಾವಿನಂತೆ ಉದ್ದವಾಗಿ ನಿಟ್ಟುಸಿರನ್ನು ಬಿಡುತ್ತ,ಹಾಗೆಯೇ ಮೂರ್ಛೆಹೋಗಿ ನೆಲದಮೇಲೆ ಬಿದ್ದನು. ಇಷ್ಟರಲ್ಲಿ ರಾಜಕುಮಾರನಾದ ಆಭರತನ ಕಣ್ಣುಗಳೆರಡೂ ಕೆಂಡದಂತೆ ಕೆಂಪಾದುವು. ಬಟ್ಟೆಗಳೆಲ್ಲವೂ ಸಡಿಲಿದವು. ಆತನ ಮೈಮೇಲಿದ್ದ ಸರ್ವಾಭರಣಗಳೂ ಅಲ್ಲಲ್ಲಿ ಚದರಿ ಬಿದ್ದಿರಲು, ಉತ್ಸವಾಂತದಲ್ಲಿ ಕೆಳಗೆಬಿದ್ದ ಇಂದ್ರಧ್ವಜದಂತೆ ನೆಲದ ಮೇಲೆ ಬಿದ್ದಿದ್ದನು. ಇಲ್ಲಿಗೆ ಎಪ್ಪತ್ತನಾಲ್ಕನೆಯ ಸರ್ಗವು.

---

ಭರತ ಶತ್ರುಘ್ನರಿಬ್ಬರೂ ಕೌಸಲ್ಯೆಯಬಳಿಗೆ ಹೋದುದು. ಭರತನು ಕೌಸಲ್ಯೆಯೊಡನೆ ರಾಮನನ್ನು ಕರೆತರುವುದಾಗಿ ಶಪಥಮಾಡಿದುದು.

ವೀರ್ಯವಂತನಾದ ಭರತನು ಬಹಳಹೊತ್ತಿನಮೇಲೆಚೇತರಿಸಿಕೊಂಡು. ಕಣ್ಣೀರುಬಿಡುತ್ತ ಬಹುದೈನ್ಯದಿಂದ ತಾಯಿಯಾದ ಕೈಕೇಯಿಯನ್ನು ನೋಡಿ, ತಾನು ಬಂದ ವೃತ್ತಾಂತವನ್ನು ತಿಳಿದು ತನ್ನನ್ನು ನೋಡುವುದಕ್ಕಾಗಿ ಮೊದಲೇ ಅಲ್ಲಿಗೆ ಬಂದು ನಿಂತಿದ್ದ ಮಂತ್ರಿಗಳನಡುವೆ ಆಕೆಯನ್ನು ನಿಂದಿಸುತಿದ್ದನು.ಕೊನೆಗೆ ಅವರೆಲ್ಲರೂ ಕೇಳುತ್ತಿರುವಹಾಗೆಯೇ "ನಾನು ಎಂದಿಗೂ ರಾಜ್ಯವನ್ನು ಅಪೇಕ್ಷಿಸಿದವನಲ್ಲ! ನಾನು ಇದಕ್ಕಾಗಿ ಈನನ್ನ ತಾ

ಯಿಮೊಡನೆ ತಂತ್ರವನ್ನೂ ಆಲೋಚಿಸಿದವನಲ್ಲ! ನನ್ನ ತಂದೆಯಾದ ದಶರಥ ರಾಜನು ನನಗೆ ಅಭಿಷೇಕವನ್ನು ಮಾಡುವುದಾಗಿ ಸಂಕಲ್ಪಿಸಿದ ಅಂಶವೂ ನನಗೆ ಸ್ವಲ್ಪಮಾತ್ರವೂ ತಿಳಿಯದು. ನಾನು ಎಲ್ಲಿಯೋ ದೂರದೇಶದಲ್ಲಿ ಈ ಶತ್ರುಘ್ನನೊಡನೆ ವಾಸಮಾಡುತಿದ್ದೆನು. ಮಹಾತ್ಮನಾದ ರಾಮನು ವನ ವಾಸಕ್ಕಾಗಿ ಹೊರಟುಹೋದ ವಿಷಯವೂ ನನಗೆ ತಿಳಿಯದು. ಆ ರಾಮ ನೊಡನೆ ಸೀತಾಲಕ್ಷ್ಮರಿಬ್ಬರೂ ಯಾವಕಾರಣಕ್ಕಾಗಿ ಹೋದರೆಂಬ ಅಂಶ ವನ್ನೂ ನಾನು ಕಾಣೆನು." ಎಂದು ಗಟ್ಟಿಯಾಗಿ ಕೂಗಿ ರೋದನಮಾಡ ಲಾರಂಭಿಸಿದನು. ಈ ಶಬ್ದವು ಕೌಸಲ್ಯೆಯ ಅಂತಃಪುರಕ್ಕೆಮುಟ್ಟಿತು. ಇದ ನ್ನು ಕೇಳಿದೊಡನೆಯೇ ಕೌಸಲ್ಯೆಯು ಸಮೀಪದಲ್ಲಿದ್ದ ಸುಮಿತ್ರೆಯನ್ನು ನೋಡಿ, "ಎಲೆಸುಮಿತ್ರೆ ! ಅದೋ ಅಲ್ಲಿಕೇಳಿದೆಯಾ! ಭರತನ ಧ್ವನಿಯಾಗು ತ್ತಿರುವುದು. ಕ್ರೂರೆಯಾದ ಆಕೈಕೇಯಿಯ ಮಗನು ಮಾವನ ಮನೆ ಯಿಂದ ಹಿಂತಿರುಗಿ ಬಂದಿರುವಂತೆ ತೋರುತ್ತಿದೆ. ಆದರೆ ಭರತನು ಬಹಳ [1]ದೂರದೃಷ್ಟಿಯಿಂದ ಆಲೋಚಿಸತಕ್ಕವನು. ಕೈಕೇಯಿಯ ಮಾರ್ಗವು ಆತ ನಿಗೆ ಎಂದಿಗೂ ಸರಿಬೀಳದು. ಆದುದರಿಂದ ಈಗಲೇ ಆತನನ್ನು ನೋಡಬೇಕೆಂ ದು ನನಗೆ ಬಹಳ ಕುತೂಹಲವಿರುವುದು." ಎಂದು ಹೇಳುತ್ತ, ವ್ಯಸನದಿಂದಬ ಣ್ಣಗುಂದಿ ಕಂದಿ ಕೃಶಳಾಗಿದ್ದ ಆಕೆಯು, ಆಗಲೇ ಸುಮಿತ್ರೆಯೊಡಗೂಡಿ ಭರತನಿದ್ದ ಕಡೆಗೆ ಹೊರಟು ಬರುತಿದ್ದಳು. ಇವಳಿಗಾದರೋ ದುಃಖದಿಂದ ದೇಹದಮೇಲೆ ಪ್ರಜ್ಞೆಯಿಲ್ಲದಂತಾಗಿ ಮೈಯ್ಯೆಲ್ಲವೂ ನಡುಗುತಿತ್ತು! ಇಷ್ಟ ರೊಳಗಾಗಿ ಭರತನೂ ಶತ್ರುಘ್ನನೊಡಗೂಡಿ ಕೌಸಲ್ಯೆಯ ಅಂತಃಪುರದ ಕಡೆಗೆ ಹೊರಟು ಬರುತ್ತಿದ್ದನು. ಹೀಗೆ ಭರತಶತ್ರುಘ್ನರಿಬ್ಬರೂ ಕೌ ಸಲ್ಯೆಯ ಅಂತಃಪುರವನ್ನು ಪ್ರವೇಶಿಸುವುದರೊಳಗಾಗಿ, ಇದಿರಾಗಿ ಬರುತಿದ್ದ ಆಕೆಯನ್ನು ಕಂಡರು. ಇವರು ಒಬ್ಬರನ್ನೊಬ್ಬರು ಸಂಧಿಸಿ ನೋಡಿದ ಮೇಲೆ ಅವರೆಲ್ಲರಿಗೂ ಮೊದಲಿದ್ದ ದುಃಖವು ಮರುಕೊಳಿಸಿ ಮಹಾಸಂಕ

1 ಇಲ್ಲಿ "ದೀರ್ಘದರ್ಶಿವತ್" ಎಂದುಮೂಲವು. ಇದರಿಂದ ಭರತನಿಗೆ ರಾಮ ವಿವಾಸನವು ಸಮ್ಮತವಿಲ್ಲವೆಂದು ಕೌಸಲ್ಯೆಯು ಮೊದಲೇ ತಿಳಿದುಕೊಂಡಿದ್ದುದಾಗಿ ಸೂಚಿತವಾಗುವುದು.

ಟವುಂಟಾಯಿತು. ಆಗ ದುಃಖದಿಂದ ಮೈಮರೆತು ಕೆಳಗೆಬಿದ್ದು ಗೋಳಿ ಡುತ್ತಿರುವ ಪೂಜ್ಯೆಯಾದ ಕೌಸಲ್ಯೆಯನ್ನು ಭರತಶತ್ರುಘ್ನರಿಬ್ಬರೂ ನೋಡಿ ತಾವೂ ದುಃಖಾತಿಶಯದಿಂದ ಪ್ರಲಾಪಿಸುತ್ತಾ ಆಕೆಯನ್ನು ಎತ್ತಿ ಸಮಾಧಾನಪಡಿಸಿದರು. ಆಗ ಕೌಸಲ್ಯೆಯು ವ್ಯಸನವನ್ನು ತಡೆಯಲಾರದೆ ಭರತನನ್ನು ನೋಡಿ''ಎಲೈ ಭರತನೆ! ರಾಜ್ಯದಮೇಲಿನ ಲೋಭದಿಂದ ತತ್ತಳಿಸು ತಿದ್ದ ನಿನ್ನ ಕೋರಿಕೆಯು ಕೈಗೂಡಿತೆ? ಇನ್ನು ನಿಷ್ಕಂಟಕವಾದ ರಾಜ್ಯವನ್ನು ಕೈಸೇರಿಸಿಕೊಂಡು ನೀನೇ ಯಥೇಷ್ಟವಾಗಿ ಅನುಭವಿಸಬಹುದು! ನಿನ್ನ ತಾಯಿಯಾದ ಕೈಕೇಯಿಯು ಎಷ್ಟೋತಂತ್ರವನ್ನು ಮಾಡಿ ಇಷ್ಟುಬೇಗನೆನಿನಗೆ ರಾಜ್ಯವನ್ನು ಕೊಡಿಸಿ ಕೊಟ್ಟಿರುವಳು. ಅದುಹೇಗಾದರೂ ಹೋಗಲಿ! ಅದಕ್ಕಾಗಿ ನಾನು ಚಿಂತಿಸುವುದಿಲ್ಲ. ನನ್ನ ಮಗನಿಗೆ ನಾರುಮಡಿಯನ್ನು ಡಿಸಿ ಕಾಡಿಗೆ ಕಳುಹಿಸಿದಳಲ್ಲವೆ ? ಇದರಿಂದ ಆಕೆಗೆ ಲಾಭವೇನು ? ಹಾ ! ಕ್ರೂರದೃಷ್ಟಿಯುಳ್ಳ ಆ ಕೈಕೇಯಿಯು ರಾಮನನ್ನು ಕಾಡಿಗೆ ಕಳುಹಿಸದೆಯೇ ನಿನಗೆ ರಾಜ್ಯವನ್ನು ಕೊಡಿಸಬಾರದಾಗಿತ್ತೆ ? ಇನ್ನು ಆಕೆಯ ಅಧಿಕಾರಕ್ಕೆ ತಡೆಯೇ ಇಲ್ಲವು. ಇನ್ನು ಆಕೆಯು ನನ್ನನ್ನೂ ಊರುಬಿಟ್ಟು ಹೊರಡಿಸದೇ ಬಿಡಳು! ಮಹಾಯಶಸ್ವಿಯಾಗಿ ಬಂಗಾರದಂತೆ ಮೈಬಣ್ಣವುಳ್ಳ ಆ ರಾಮನಿರತಕ್ಕ ಸ್ಥಳಕ್ಕೇ ನನ್ನನ್ನೂ ಕಳುಹಿಸದೆಬಿಡಳು! ಅಥವಾ ಅವಳು ನನ್ನನ್ನು ಕಳುಹಿಸುವುದೇನು ? ನಾನೇ ಸುಮಿತ್ರೆಯೊಡಗೂಡಿ ರಾಮನಿರುವ ಕಡೆಗೆ ಹೋಗಿ ಸುಖವಾಗಿರುವೆನು.ದಶರಥನ [1]ಅಗ್ನಿಹೋತ್ರವನ್ನೂ ಆತನ ದೇಹವನ್ನೂ ತೆಗೆಸಿಕೊಂಡು ಆತನಿರುವ ಸ್ಥಳಕ್ಕೆ ನಾನೇ ಹೋಗುವೆನು ಎಲೈಭರತನೆ! ನೀನಾದರೂ ಪುರುಷಶ್ರೇಷ್ಠನಾದ ನನ್ನ ಮಗನು ತಪಸ್ಸುಮಾಡುತ್ತಿರುವ ಸ್ಥಳಕ್ಕೆ ನನ್ನನ್ನು ಕರೆದುಕೊಂಡು ಹೋಗಿಬಿಡಲಾರೆಯಾ? ನಿನಗಂ

---

1 ಅಗ್ನಿಹೋತ್ರವು ಜ್ಯೇಷ್ಠಭಾರ್ಯೆಗೇ ಅಧೀನವಾಗಿರುವುದರಿಂದಲೂ, ದಶರಥನು ಭರತನಿಂದ ತನಗೆ ಸಂಸ್ಕಾರಗಳು ನಡೆಯಕೂಡದೆಂದು ನಿಷೇಧಿಸಿದ್ದುದರಿಂದಲೂ, ಆ ಅಗ್ನಿಹೋತ್ರವನ್ನು ರಾಮನಿರುವ ಸ್ಥಳಕ್ಕೆ ಸಾಗಿಸಿಕೊಂಡು ಹೋಗುವಂತೆ ಕೌಸಲ್ಯೆಯೇ ಆಜ್ಞಾಪಿಸಿರುವಳು. ಇದರಿಂದ ಕೌಸಲ್ಯೆಯು "ಭರತನಿಗೆ ಕೈಕೇಯಿಯು ನಡೆಸಿದ ಪಾಪಕೃತ್ಯಗಳ ಸಂಬಂಧವಿರುವುದರಿಂದ ಆತನಿಗೆ ಸಂಸ್ಕಾರಾಧಿಕಾರವಿಲ್ಲ"ವೆಂದೂ ಸೂಚಿಸಿದಂತೆ ಗ್ರಹಿಸಬೇಕು.

ತೂ ಈಗ ವಿಶೇಷವಾದ ಧನಧಾನ್ಯಸಮೃದ್ಧಿಯಿಂದ ಕೂಡಿ ಗಜತುರಗರಥಾ ದಿಗಳಿಂದ ಪೂರ್ಣವಾದ ವಿಸ್ತಾರವಾದ ಕೋಸಲರಾಜ್ಯವೆಲ್ಲವೂ ಕೈಸೇರಿರುವುದು. ನಿನಗಾಗಿ ಈರಾಜ್ಯವನ್ನು ಆಕೈಕೇಯಿಯು ಎಷ್ಟೋ ಕಷ್ಟಪಟ್ಟು ಕೊಡಿಸಿರುವಳು. ನಮಗೆ ಈಕೋರಿಕೆಯನ್ನಾದರೂ ಈಡೇರಿಸಿಕೊಡು ?" ಎಂದಳು. ಹೀಗೆ ಕೌಸಲ್ಯೆಯು ಬಹುಕ್ರೂರವಾಕ್ಯಗಳನ್ನಾಡಿ ತನ್ನನ್ನು ದೂರುತ್ತಿರಲು, ನಿರಪರಾಧಿಯಾದ ಭರತನು ಆಮಾತುಗಳನ್ನು ಕೇಳಿ,ವ್ರಣದಲ್ಲಿ ಸೂಜಿಯಿಟ್ಟಂತೆ ಮರ್ಮಭೇದಕವಾದ ಆವಾಕ್ಯಗಳಿಂದ ಬಹಳನೊಂದವನಾಗಿ, ಹಾಗೆಯೇ ಬೆಜ್ಜರಬಿದ್ದು,ಆಕೌಸಲ್ಯೆಯ ಕಾಲುಗಳಮೇಲೆ ಬಿದ್ದನು. ಬಹಳಹೊತ್ತಿನವರೆಗೆ ಮೈಮೇಲೆ ಪ್ರಜ್ಞೆಯಿಲ್ಲದಿದ್ದು, ಆಮೇಲೆ ಚೇತರಿಸಿಕೊಂಡು, ನಾನಾವಿಧವಾಗಿ ಪ್ರಲಾಪಿಸುತಿದ್ದನು.ತನ್ನಮುಂದೆ ನಿಂತು ದುಃಖದಿಂದ ಗೋಳಿಡುತ್ತಿರುವ ಕೌಸಲ್ಯೆಗೆ ಕೈಜೋಡಿಸಿ "ಅಮ್ಮಾ! ನಿರಪರಾಧಿಯಾಗಿ ಇಲ್ಲಿ ನಡೆದ ಯಾವುದೊಂದಂಶವನ್ನೂ ತಿಳಿಯದ ನನ್ನನ್ನು ಏಕೆ ನಿಷ್ಕಾರಣವಾಗಿ ನಿಂದಿಸುವೆ ? ನನಗೆ ನಿನ್ನ ಮಗನಾದ ರಾಮನಲ್ಲಿರುವ ಪ್ರೇಮಾತಿಶಯವನ್ನು ನೀನು ಕಾಣೆಯಾ ? ಆತನಲ್ಲಿ ನಾನು ದೃಢವಾದ ಭಕ್ತಿಯುಳ್ಳವನೆಂಬುದು ನಿನಗೆ ತಿಳಿಯದೆ ? ಎಲೆಮಾತೆ! ಹೆಚ್ಚಾಗಿ ಹೇಳಿದುದರಿಂದೇನು ? ಆಣೆಯಿಟ್ಟುಹೇಳುವೆನು ಕೇಳು * ಯಾವನು ರಾಮನನ್ನು ಕಾಡಿಗೆ ಕಳುಹಿಸುವುದಾಗಿ ಉದ್ದೇಶಿಸಿದನೋ ಆವನಿಗೆ, [1]ಗುರುಮುಖವಾಗಿ ಶಾಸ್ತ್ರಾಭ್ಯಾಸವನ್ನು ಮಾಡಿ ಸಂಪಾದಿಸಿದ ಜ್ಞಾನವೆಲ್ಲವೂ ಯಾ

---

*ಇದುಮೊದಲಾಗಿಭರತನು ತನ್ನಮೇಲೆ ಕೌಸಲ್ಯೆಯುಹೊರಿಸಿದ ಅಪವಾದವನ್ನು ಪರಿಹರಿಸಿಕೊಳ್ಳುವುದಕ್ಕಾಗಿ ಶಪಥವಾಕ್ಯಗಳಿಂದ ಆಣೆಯಿಟ್ಟುಕೊಳ್ಳುವನು. ಈ ಶಪಥವಾಕ್ಯಗಳೆಲ್ಲವೂ ಲೋಕಸಾಮಾನ್ಯವಾಗಿ ಹೇಳಲ್ಪಟ್ಟಿದ್ದರೂ,ಇವುಗಳನ್ನು ಭರತನು ತನಗೆ ಸಂಬಂಧಿಸಿದಂತೆ ಹೇಳಿದುದಾಗಿಯೇ ಗ್ರಹಿಸಬೇಕು. ಈ ವಾಕ್ಯಗಳಿಂದ ವಾಲ್ಮೀಕಿಯು ಲೋಕಕ್ಕೆ ಧರ್ಮವಿಶೇಷಗಳನ್ನು ತಿಳಿಸುವುದಾಗಿಯೂ ಗ್ರಹಿಸಬೇಕು.

I ಇದರಿಂದ ಸತ್ಪುರುಷರಲ್ಲಿ ಅಪರಾಧಪಟ್ಟವನಿಗೆ ಶ್ರಮಪಟ್ಟು ಸಂಪಾದಿಸಿದ ಶಾಸ್ತ್ರಜ್ಞಾನವು ನಶಿಸುವುದೆಂದು ಸಿದ್ಧವಾಗುವುದು.

ವಾಗಲೂ ಕಾರ್ಯ್ಯಕಾರಿಯಾಗದೆ ಹೋಗಲಿ! ಸತ್ಯಸಂಧ ನಾಗಿ, ಸತ್ಪುರುಷರಿಗೆಲ್ಲಾ ಮೇಲಾದ ಆರಾಮನ ವನಪ್ರಯಾಣಕ್ಕೆ ಯಾವನು ಅಪೇಕ್ಷಿಸಿದನೋ, ಅಂತಹ ಮಹಾಪಾಪಿಯು, ಪಾಪಿಗಳಿಗೆ ಸೇವಾವೃತ್ತಿಯನ್ನು ಮಾಡಿದವನಂತೆಯೂ, ಸೂರ್ಯ್ಯನಿಗಿದಿರಾಗಿ ಮಲಮೂತ್ರವಿಸರ್ಜನೆಗಳನ್ನು ಮಾಡಿದವನಂತೆಯೂ, ನಿದ್ರೆಮಾಡುತ್ತಿರುವ ಗೋವನ್ನುಕಾಲಿನಿಂದ ನೂಕಿದವನಂತೆಯೂ ಆಗಲಿ! [2] ಯಾವನು ರಾಮನನ್ನು ಕಾಡಿಗೆ ಕಳುಹಿಸುವುದಕ್ಕೆ ಆಲೋಚನೆಕೊಟ್ಟನೋ ಅವನಿಗೆ, ಕೆಲಸಗಾರರಿಂದ ಅನೇಕಕಷ್ಟಕಾರ್ಯ್ಯಗಳನ್ನು ಮಾಡಿಸಿಕೊಂಡು, ಅವರಿಗೆ ತಕ್ಕ ಪ್ರತಿಫಲವನ್ನು ಕೊಡದೆ ಕಳುಹಿಸಿದ ಮಹಾಪಾಪಿಗಳಿಗುಂಟಾಗತಕ್ಕ ಗತಿಯುಂಟಾಗಲಿ! ಯಾವನು ರಾಮನನ್ನು ಕಾಡಿಗೆ ಕಳುಹಿಸುವುದಕ್ಕೆ ಸಮ್ಮತಿಸಿದನೋ, ಅವನಿಗೆ ದೇಶದ ಪ್ರಜೆಗಳೆಲ್ಲರನ್ನೂ ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳಂತೆ ಬಹುಪ್ರೇಮದಿಂದ ಪೋಷಿಸುತಿದ್ದ ರಾಜನಿಗೆ ದ್ರೋಹವನ್ನು ಬಯಸಿದ ಮಹಾಪಾಪಿಗುಂಟಾಗತಕ್ಕ ಗತಿಯುಂಟಾಗಲಿ! [4] ಯಾವನು ರಾಮನನ್ನು ಕಾಡಿಗೆ ಹೋಗಲು

---

1 ನೀಚಸೇವೆಯನ್ನು ಮಾಡುವುದೂ, ಸೂರ್ಯ್ಯನಿಗಿದಿರಾಗಿ ಕುಳಿತು ಮಲಮೂತ್ರ ವಿಸರ್ಜನೆಯನ್ನು ಮಾಡುವುದೂ, ನಿದ್ರಿಸುತ್ತಿರುವ ಗೋವನ್ನು ಕಾಲಿಂದ ಮುಟ್ಟುವುದೂ ಮಹಾದೋಷವೆಂದು ಸೂಚಿತವಾಗುವುದು. ನಿದ್ರಿಸುತ್ತಿರುವ ಹಸುವನ್ನು ಕಾಲಿಂದ ನೂಕಬಾರದೆಂಬುದರಿಂದ, ತನ್ನನ್ನು ತಿವಿಯುವುದಕ್ಕಾಗಿ ಬರುತ್ತಿರುವ ಗೋವನ್ನು ನಿಗ್ರಹಿಸಿದರೂ ದೋಷವಿಲ್ಲವೆಂದು ಸೂಚಿತವಾಗುವುದು.

2 ಇದರಿಂದ ಕೆಲಸಕ್ಕೆ ತಕ್ಕಕೂಲಿಯನ್ನು ಕೊಡದಿರುವುದು ಮಹಾದೋಷವೆಂದು ಸೂಚಿತವಾಗುವುದು.

3 ಇದರಿಂದ ರಾಜದ್ರೋಹವು ಮಹಾದೋಷವೆಂದು ಸಿದ್ಧವಾಗುವುದು.

4 ಇದರಿಂದ ರಾಜನು ರೈತರಿಂದ ತೆರಿಗೆಯನ್ನು ತೆಗೆಯುವಾಗ, ಅವರವರ ಬೆಳೆಯಲ್ಲಿ ಆರನೆಯಭಾಗವನ್ನುಮಾತ್ರ ತೆಗೆದುಕೊಳ್ಳಬೇಕೇಹೊರತು ಅದಕ್ಕಿಂತ ಹೆಚ್ಚಾಗಿ ತೆಗೆಯಬಾರದೆಂದೂ, ಈ ವಿಧಿಯನ್ನನುಸರಿಸಿ ರಾಜ್ಯಭಾರವನ್ನು ನಡೆಸುವ ದೊರೆಯು ದೋಷಿಯಾಗಲಾರನೆಂದೂ ಸೂಚಿತವು.

ಸಮ್ಮತಿಸಿದನೋ, ಅವನಿಗೆ ರಾಜ್ಯದ ಬೆಳೆಯಲ್ಲಿ ಆರನೆಯಭಾಗವನ್ನು ರಾಜಾದಾಯರೂಪವಾಗಿ ತೆಗೆದುಕೊಂಡೂ ಪ್ರಜೆಗಳನ್ನು ಧರ್ಮದಿಂದ ಪಾಲಿಸದ ರಾಜನಿಗುಂಟಾಗತಕ್ಕ ಮಹಾಪಾತಕವುಂಟಾಗಲಿ! [1] ಯಾವನು ರಾಮನನ್ನು ಕಾಡಿಗೆ ಕಳುಹಿಸಲು ಸಮ್ಮತಿಸಿದನೋ ಅವನಿಗೆ, ಯಾಗದಲ್ಲಿ ವ್ರತೋಪವಾಸನಿಷ್ಠರಾದ ಋತ್ವಿಕ್ಕುಗಳಿಗೆ ಯಾಗದಕ್ಷಿಣೆಯನ್ನು ಕೊಡುವುದಾಗಿ ವಾಗ್ದಾನಮಾಡಿ, ಆಮೇಲೆ ಇಲ್ಲವೆಂದುಹೇಳುವ ಮಹಾಪಾಪಿಗುಂಟಾಗತಕ್ಕ ಗತಿಯುಂಟಾಗಲಿ! [2] ಯಾವನು ರಾಮನನ್ನು ಕಾಡಿಗಟ್ಟುವುದಕ್ಕೆ ಪ್ರಯತ್ನಿಸಿದನೋ, ಅವನು ರಥಗಜತುರಗಾದಿಗಳಿಂದ ತುಂಬಿ, ವೀರಭಟರಿಂದ ಪರಿವೃತವಾದ ಯುದ್ಧರಂಗದಲ್ಲಿ ನಿಂತು ಯುದ್ಧಮಾಡುತ್ತಿರುವಾಗ, ಶತ್ರುಗಳಿಗೆ ಹೆದರಿ ವೀರಧರ್ಮವನ್ನು ತೊರೆದು ರಣರಂಗವನ್ನು ಬಿಟ್ಟು ಪಲಾಯಿತನಾಗುವ ಹೇಡಿಯಂತಾಗಲಿ! [3] ಯಾವನು ರಾಮನ ವನಪ್ರಯಾಣಕ್ಕೆ ಸಮ್ಮತಿಸಿದನೋ ಅವನು, ಬುದ್ಧಿವಂತನಾದ ಆಚಾರ್ಯನಿಂದ ಪರಲೋಕಸಾಧನಾರ್ಥವಾಗಿ ಉಪದೇಶಿಸಲ್ಪಟ್ಟ ವೇದಾಂತಾದಿಶಾಸ್ತ್ರರಹಸ್ಯಗಳೆಲ್ಲವನ್ನೂ ಮರೆತವನಾಗಲಿ! ಯಾವನು ರಾಮನ ವನಪ್ರಯಾಣಕ್ಕೆ ಸಮ್ಮತಿಸಿ

---

1 ಇದರಿಂದ, ಒಬ್ಬರಿಗೆ ಒಂದುವಸ್ತುವನ್ನು ಕೊಡುವುದಾಗಿ ಮೊದಲು ವಾಗ್ದಾನಮಾಡಿಬಿಟ್ಟಮೇಲೆ, ಕೊನೆಗೆ ಇಲ್ಲವೆಂದು ಆಶಾಭಂಗವನ್ನು ಮಾಡುವುದು ದೋಷವೆಂದೂ, ಅದರಲ್ಲಿಯೂ ವ್ರತೋಪವಾಸಶೀಲರಿಗೆ ಮಾತುಕೊಟ್ಟು ತಪ್ಪುವುದರಿಂದೆ ಇನ್ನೂ ಹೆಚ್ಚುದೋಷವೆಂದೂ, ಯಾಗಗಳಲ್ಲಿ ಶ್ರೋತ್ರಿಯರಿಗೆ ಯಾಗದಕ್ಷಿಣೆಯನ್ನು ಕೊಡುವುದಾಗಿ ಒಪ್ಪಿ,ಆಮೇಲೆ ಇಲ್ಲವೆಂದು ಹೇಳುವುದು ಅದಕ್ಕಿಂತಲೂ ಮಹಾದೋಷವೆಂದೂ ಗ್ರಹಿಸಬೇಕು. ಒಂದುವೇಳೆ ತನಗಿಲ್ಲದುದರಿಂದ ತಾನು ಇತರರಿಗೆ ವಾಗ್ದಾನಮಾಡಿದುದನ್ನು ಕೊಡಲಾರದಿದ್ದರೂ ದೋಷಕ್ಕೆ ಭಾಗಿಯಾಗುವುದುಂಟು. ಹೀಗಿರುವಲ್ಲಿ ಇದ್ದೂ ಕೊಡಲಾರೆನೆಂದು ಹೇಳುವವನ ದೋಷಕ್ಕೆ ಮಿತಿಯೇ ಇಲ್ಲವೆಂದು ಭಾವವು.

2 ಇದರಿಂದೆ ಯುದ್ಧದಲ್ಲಿ ಭಯಪಟ್ಟೋಡುವುದು ಮಹಾದೋಷವೆಂದು ಸೂಚಿತವು.

3 ಇದರಿಂದ ತಾನು ಆಚಾರ್ಯಾನುಗ್ರಹದಿಂದ ಬಂದ ರಹಸ್ಯೋಪದೇಶಗಳನ್ನು ಮರೆತುಬಿಡುವುದೂ ಒಂದು ಮಹಾಪಾತಕವೆಂದು ಸ್ಪಷ್ಟವಾಗುವುದು.

ದನೋ ಆಮಹಾಪಾಪಿಯು, [1]ವಿಸ್ತಾರವಾದ ಭುಜದ ಕಟ್ಟುಳ್ಳವನಾಗಿಯೂ,ಸೂರ್ಯಚಂದ್ರರಂತೆ ಮಹಾತೇಜಸ್ವಿಯಾಗಿಯೂ ಇರುವ ಆರಾಮನು ಸಿಂಹಾಸನದಮೇಲೆ ಕುಳಿತು ಅಭಿಷಿಕ್ತನಾಗುವಾಗ ಆತನನ್ನು ನೋಡುವ ಭಾಗ್ಯವಿಲ್ಲದವನಾಗಿರಲಿ ! [2] ರಾಮನ ವನಪ್ರಯಾಣಕ್ಕೆ ಸಮ್ಮತಿಸಿದವನಾವನೋ ಆತನು,ಪಾಯಸ,ಎಳ್ಳುಂಡೆ, ಮೇಕೆಯಮಾಂಸ, ಮುಂತಾದ ಪದಾರ್ಥಗಳನ್ನು, ದೇವತೆಗಳಿಗೂ, ಪಿತೃಗಳಿಗೂ, ಅತಿಥಿಗಳಿಗೂ ನಿವೇದನಮಾಡದೆ ಕುಕ್ಷಿಂಭರಿಯಾಗಿ, ನಿಘೃಣನಾಗಿ ತಾನೇ ತಿಂದವನಾಗಲಿ! ರಾಮನ ವನಪ್ರಯಾಣಕ್ಕೆ ಉದ್ದೇಶಿಸಿದವನು ಗುರುಜನಗಳನ್ನು ಅವಮಾನಪಡಿಸಿದ ಪಾಪಿಯಾಗಲಿ! [3]ಅವನು ಗೋವುಗಳನ್ನು ಕಾಲಿನಿಂದ ನೂಕಿದವನಾಗಲಿ! ತನ್ನಗುರುಜನಗಳನ್ನು ತನ್ನ ಬಾಯಿಯಿಂದಲೇ ಬೈದವನಾಗಲಿ! ರಾಮನ ವನಪ್ರಯಾಣಕ್ಕೆ ಅನುಮತಿಸಿದವನು ನಂಬಿದ ಮಿತ್ರರಿಗೆ ಮೋಸಮಾಡಿದ ಮಿತ್ರದ್ರೋಹಿಯಾಗಲಿ! [4] ರಾಮನ ವನಪ್ರಯಾಣಕ್ಕೆ ಅನುಮತಿಸಿದವನಾವನೋ ಅವನು, ತನ್ನಲ್ಲಿ ನಂಬಿಕೆಯಿಂದ ಸ್ನೇಹಿತನೊಬ್ಬನು ಬಂದು ಹೇಳಿಕೊಂಡ ಸ್ವಾಪವಾದವನ್ನು ಹೊರಕ್ಕೆ ಬಿಟ್ಟ ಮಹಾಪಾಪಿಯಾಗಲಿ!

---

1 ಇವರಿಂದ ರಾಮರಾಜ್ಯದಲ್ಲಿ ಪಾಪಿಗಳಿಗೆ ರಾಮದರ್ಶನವಾಗಲಾರದೆಂದು ಸೂಚಿತವಾಗುವುದು.

2 ದೇವತೆಗಳಿಗೂ,'ಪಿತೃಗಳಿಗೂ, ಅತಿಥಿಗಳಿಗೂ ನಿವೇದಿಸದೆ, ತಾನೇ ಭಕ್ಷಿಸುವುದೂ, ಹಿರಿಯರನ್ನು ಅವಮಾನಪಡಿಸುವುದೂ ಮಹಾದೋಷವೆಂದು ಇದರಿಂದ ಸೂಚಿತವು.

3 ಇದರಿಂದ ಗೋವುಗಳನ್ನು ಕಾಲಿಂದ ಮುಟ್ಟಬಾರದೆಂದೂ, ಇತರರು ತಮ್ಮ ಗುರುಜನಗಳನ್ನು ದೂಷಿಸುತ್ತಿರುವಾಗ ಅದನ್ನು ಕೇಳುತ್ತಿರುವುದೇ ದೋಷವೆಂದೂ, ತಾನೇ ತನ್ನ ಗುರುಹಿರಿಯರನ್ನು ನಿಂದಿಸುವುದು ಇನ್ನೂ ಮಹಾದೋಷವೆಂದೂ, ನಂಬಿದ ಮಿತ್ರರಿಗೆ ದ್ರೋಹವನ್ನೆಣಿಸಬಾರದೆಂದೂ ಸೂಚಿತವು.

4 ಇದರಿಂದ ಯಾರಾದರೂ ಒಬ್ಬರು ಬಂದು, ನಂಬಿಕೆಯಿಂದ ತನ್ನೊಡನೆ ರಹಸ್ಯವಾಗಿ ತಮ್ಮ ದೋಷಗಳನ್ನು ಹೇಳಿಕೊಂಡಿದ್ದರೆ,ಅದನ್ನು ಹೊರಕ್ಕೆ ಬಿಡುವುದೂ ಮಿತ್ರದ್ರೋಹದಂತೆಯೇ ಮಹಾಪಾಪವೆಂದು ಸೂಚಿತವಾಗುವುದು.

[1] ರಾಮನ ವನಪ್ರಯಾಣಕ್ಕೆ ಸಮ್ಮತಿಸಿದವನಾವನೋ ಅವನು, ಪರರಿಗೆ ಯಾವುದೊಂದುಪಕಾರವನ್ನೂ ಮಾಡದೆ, ಇತರರು ತನಗೆ ಮಾಡಿದ ಉಪಕಾರವನ್ನು ಮನಸ್ಸಿನಲ್ಲಿಯೂ ಎಣಿಸದ ಮಹಾಪಾಪಿಯಾಗಿ ಲೋಕದಲ್ಲಿ ಸಮಸ್ತಸಜ್ಜನರಿಂದಲೂ ಹೊರಗಾಗಿಸಲ್ಪಟ್ಟವನಾದರೂ, ನಾಚಿಕೆಯಿಲ್ಲವೆ ತಿರುಗುತ್ತಿರುವ ಭಂಡನಾಗಿರಲಿ ! ಕೊರಲಿಗೆ ನೇಣುಹಾಕಿಕೊಂಡು ದುರ್ಮರಣದಿಂದ ಆತ್ಮಹತ್ಯವನ್ನು ಮಾಡಿಕೊಂಡ ಮಹಾಪಾಪಿಯಾಗಿರಲಿ! ಪಾಪಕಾರ್ಯಗಳನ್ನುಮಾಡಿಯೂ ಅದಕ್ಕೆ ಸಲ್ಪವಾದರೂ ಸಿಗ್ಗುಪಡದೆ, ಪಾಪಕ್ಕೆ ತಕ್ಕ ಪ್ರಾಯಶ್ಚಿತ್ತವನ್ನೂಮಾಡಿಕೊಳ್ಳದೆ,ತಿರುಗುವ ನಾಚಿಕೆಗೇಡಿಯಾಗಿರಲಿ! ಆತನು ಸಮಸ್ತಲೋಕಕ್ಕೂ ದ್ವೇಷಿಯಾಗಿರಲಿ! [2]ರಾಮನ ವನಪ್ರಯಾಣಕ್ಕೆ ಸಮ್ಮತಿಸಿದವನಾವನೋ ಅವನು, ತನ್ನ ಮನೆಯಲ್ಲಿ ಅನೇಕವಾಗಿ ಹೆಂಡಿರುಮಕ್ಕಳೂ, ಭೃತ್ಯವರ್ಗವೂ ತುಂಬಿದ್ದರೂ,ಅವರೆಲ್ಲರನ್ನೂ ವಂಚಿಸಿ ತಾನೊಬ್ಬನೇ ಮೃಷ್ಟಾನ್ನವನ್ನು ಭುಜಿಸತಕ್ಕ ಹೊಟ್ಟೆಹೊರಕನಾಗಿರಲಿ ! [3] ರಾಮನ ವನಪ್ರಯಾಣಕ್ಕೆ ಸಮ್ಮತಿಸಿದವನಾವನೋ ಆ

---

1 ಇದರಿಂದ, "ತನಗೆ ಸಾಧ್ಯವಾದ ಉಪಕಾರವನ್ನು ಎಂದಿಗೂ ಮಾಡದಿರಬಾರದು. ಇತರರು ತನಗೆ ಮಾಡಿದ ಉಪಕಾರವನ್ನು ಮರೆಯಲೂ ಬಾರದು. ನೇಣುಹಾಕಿಕೊಳ್ಳುವುದೇ ಮೊದಲಾದ ದುರ್ಮರಣಗಳಿಂದ ಆತ್ಮಹತ್ಯೆಮಾಡಿಕೊಳ್ಳುವುದು ಮಹಾಪಾತಕವು. ಅಜ್ಞಾನದಿಂದ ಪಾಪವನ್ನುಮಾಡಿದರೂ ಅದಕ್ಕೆ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳದಿರಬಾರದು; ನಾಚಿಕೆಗೇಡಿಯಾಗಿರಬಾರದು; ಅನೇಕಜನಗಳ ದ್ವೇಷಕ್ಕೆ ಗುರಿಯಾಗಬಾರದು;" ಎಂಬ ನೀತಿವಿಶೇಷಗಳೆಲ್ಲವೂ ಸೂಚಿತವಾಗುವುವು.

2 ಇದರಿಂದ, ಬೇರೊಬ್ಬರು ಇದಿರಿಗಿದ್ದು ನೋಡುತ್ತಿರುವಾಗ, ಅವರಿಗಿಡದೆ ಭೋಜ್ಯವಸ್ತುಗಳನ್ನು ತಾನೊಬ್ಬನೇ ಅನುಭವಿಸುವುದು ದೋಷವೆಂದೂ, ಅದರಲ್ಲಿಯೂ ತನ್ನ ಹೆಂಡಿರುಮಕ್ಕಳುಮೊದಲಾದವರು ಇವರಿಗಿದ್ದು ನೋಡುತ್ತಿರುವಾಗ ಹಾಗೆ ಮಾಡುವುದು ಇನ್ನೂ ಮಹಾದೋಷವೆಂದೂ ಸೂಚಿತವಾಗುವುದು.

3 ಈ ಮುಂದಿನವಾಕ್ಯಗಳಿಂದ, ಸಜ್ಜನರಿಗೆ ಕೇಡನ್ನುಬಯಸಿದವನಿಗೆ ಉತ್ತಮಭಾರ್ಯೆಯರು ಲಭಿಸುವುದಿಲ್ಲವೆಂದೂ, ಆತನಿಗೆ ಅಗ್ನಿಹೋತ್ರಾದಿಧರ್ಮಕಾರ್ಯಗಳೂ ನಿಷ್ಫಲವಾಗುವುವೆಂದೂ, ಅವನಿಗೆ ಸತ್ಸಂತಾನವೂಉಂಟಾಗಲಾರದೆಂದೂ, ಆತನು ಉಭಯಲೋಕಭ್ರಷ್ಟನಾಗುವನೆಂದೂ, ಅಲ್ಪಾಯುವಾಗುವನೆಂದೂ, ಯಾವಾಗಲೂ ದುಃಖಭಾಗಿಯಾಗಿರುವನೆಂದೂ, ಸೂಚಿತವಾಗುವುದು.

ತನು,ಅನುರೂಪರಾದ ಭಾರ್ಯೆಯರಿಲ್ಲದೆ,ಅಗ್ನಿಹೋತ್ರಾದಿಧರ್ಮಕಾರ್ಯಗಳನ್ನೂ ಅನುಷ್ಠಿಸದೆ, ಸಂತಾನವೂ ಇಲ್ಲದೆ, ಉಭಯಲೋಕಭ್ರಷ್ಟನಾಗಿ ಸಾಯಲಿ! ರಾಮನ ವನಪ್ರಯಾಣಕ್ಕೆ ಸಮ್ಮತಿಸಿದವನಾವನೋ ಆತನು, ಅಲ್ಪಾಯುಸ್ಸುಳ್ಳವನಾಗಿ, ಬದುಕಿರುವವರೆಗೂ ದುಃಖದಿಂದಲೇ ನರಳಿ ಮಕ್ಕಳಿಲ್ಲದೆ ಸಾಯಲಿ! [1] ರಾಮನ ವನಪ್ರಯಾಣಕ್ಕೆ ಸಮ್ಮತಿಸಿದವನಾವನೋ ಅವನಿಗೆ, ರಾಜನನ್ನಾಗಲಿ, ಸ್ತ್ರೀಯರನ್ನಾಗಲಿ, ಮಕ್ಕಳನ್ನಾಗಲಿ, ಮುದುಕರನ್ನಾಗಲಿ ಕೊಂದ ಮಹಾಪಾತಕವುಂಟಾಗಲಿ! ಆತನು ತನ್ನನ್ನೇ ನಂಬಿ ಬದುಕುತಿದ್ದ ಭೃತ್ಯರನ್ನು ಪೋಷಿಸದೆ ತೊರೆದುಬಿಟ್ಟ ಪಾಪಿಯಾಗಿರಲಿ! [2] ರಾಮನ ವನಪ್ರಯಾಣಕ್ಕೆ ಅನುಮತಿಸಿದವನಾವನೋ ಆತನು, ಅರಗು,ಮದ್ಯಮಾಂಸಗಳು,ಲೋಹಗಳು, ವಿಷ,ಇವೇಮೊದಲಾದ ನಿಷಿದ್ಧವಸ್ತುಗಳನ್ನು ಮಾರಿ, ಕುಟುಂಬಭರಣವನ್ನು ಮಾಡತಕ್ಕವನಾಗಲಿ! [3] ರಾಮನ ವನಪ್ರಯಾಣಕ್ಕೆ ಸಮ್ಮತಿಸಿದವನಾವನೋ ಆತನು, ಭಯಂಕರವಾದ ಯುದ್ಧದಲ್ಲಿ ಹೆದರಿ ಓಡಿಹೋಗುತ್ತಿರುವಾಗ ಬಲಾತ್ಕಾರದಿಂದ ಹಿಡಿದುತಂದು ಕೊಲ್ಲಲ್ಪಟ್ಟವನ ದುರ್ಗತಿಗೆ ಗುರಿಯಾಗಲಿ! [4] ಯಾವನು ರಾಮನ

---

1 ಇದರಿಂದ ರಾಜನನ್ನಾಗಲಿ, ಸ್ತ್ರೀಯರನ್ನಾಗಲಿ, ಬಾಲಕರನ್ನಾಗಲಿ, ಮುದುಕರನ್ನಾಗಲಿ ಕೊಲ್ಲುವುದು ಎಲ್ಲಾ ಕೊಲೆಗಳಿಗಿಂತಲೂ ಕ್ರೂರವಾದ ಮಹಾದೋಷವೆಂದೂ, ತನ್ನಲ್ಲಿ ಜೀವನಕ್ಕೆ ಸೇರಿಕೊಂಡಿರುವ ಭೃತ್ಯರನ್ನು ಪೋಷಿಸದಿರುವುದು ಮಹಾಪಾತಕವೆಂದೂ ಸೂಚಿತವಾಗುವುದು.

2 ಇದರಿಂದ, "ಲಾಕ್ಷಾಲವಣ ಮಾಂಸಾನಿ ವರ್ಜನೀಯಾನಿ ವಿಕ್ರಯೇ" ಇತ್ಯಾದಿ ಸ್ಮೃತಿವಾಕ್ಯಾನುಸಾರವಾಗಿ, ಅರಗು,ಉಪ್ಪು, ಮದ್ಯಮಾಂಸ ಮೊದಲಾದುವುಗಳನ್ನು ವಿಕ್ರಯಿಸಿ ಜೀವನಮಾಡುವುದು ಮಹಾದೋಷವೆಂದು ಸೂಚಿತವಾಗುವುದು,

3 ಇದರಿಂದ ಯುದ್ಧದಲ್ಲಿ ಹೆದರಿ ಹಿಂತಿರುಗಿ ಹೋಗುವುದು ಮಹಾದೋಷವೆಂದೂ, ಹಾಗೆ ಹಿಂತಿರುಗಿ ಓಡುವವನು ಬದುಕಿದರೂ ಕೊಲ್ಲಲ್ಪಟ್ಟರೂ ಮರಣಹೊಂದಿದವನಂತೆಯೇ ಆಗುವನೆಂದೂ ಊಹಿಸಬೇಕು.

4 ಇದರಿಂದ, ಕಪಾಲವನ್ನುಹಿಡಿದು ನಾರುಬಟ್ಟೆಯನ್ನುಟ್ಟು ಭಿಕ್ಷಾಟನಮಾಡಿ ಜೀವಿಸುವುದು ದೋಷವೆಂದು ಸೂಚಿತವಾಗುವುದು. ಇದರಿಂದ ಕಾಪಾಲಿಕಮತವು ಮಹಾನಿಂದ್ಯವೆಂದೂ ಸೂಚಿಸಲ್ಪಟ್ಟಿರುವುದಾಗಿ ಗೋವಿಂದರಾಜೀಯವ್ಯಾಖ್ಯಾನವು.

ವನಪ್ರಯಾಣಕ್ಕೆ ಸಮ್ಮತಿಸಿದನೋ ಆತನು, ದಾರಿದ್ರ್ಯದಶೆಯಿಂದ ಕೈಯಲ್ಲಿ ಕಪಾಲವನ್ನು ಹಿಡಿದು, ನಾರುಬಟ್ಟೆಯನ್ನುಟ್ಟು ಹುಚ್ಚನಂತೆ ಊರೂರು ತಿರುಗಿ ಭಿಕ್ಷಬೇಡಿ ಬದುಕುವವನ ಬಾಳಿಗೀಡಾಗಲಿ! [1] ರಾಮನ ವನಪ್ರಯಾಣಕ್ಕೆ ಅನುಮತಿಸಿದವನಾವನೋ ಅವನು, ಯಾವಾಗಲೂ ಮದ್ಯಪಾಯಿಯಾಗಿ, ಜಾರನಾಗಿ, ಜೂಜುಗಾರನಾಗಿ ಕಾಮಕ್ರೋಧಗಳಿಗೊಳಗಾಗಿ ತಿರುಗುತ್ತಿರುವವನಂತಾಲಿ! ರಾಮನ ವನಪ್ರಯಾಣಕ್ಕೆ ಅನುಮತಿಸಿದವನಾವನೋ ಆತನು, ಯಾವಾಗಲೂ ಧರ್ಮದಲ್ಲಿ ಮನಸ್ಸಿಡದೆ ಅಧರ್ಮವನ್ನೇ ಆಚರಿಸತಕ್ಕವನಾಗಲಿ! [2] ಅಂತವನ ದ್ರವ್ಯವೆಲ್ಲವೂ ಅಪಾತ್ರಕ್ಕೇ ವಿನಿಯೋಗವಾಗಲಿ! [3] ರಾಮನ ವನಪ್ರಯಾಣಕ್ಕೆ ಅನುಮತಿಸಿದವನು ಬಹುಕಾಲದಿಂದ ಕಷ್ಟಪಟ್ಟು ಸಂಪಾದಿಸಿದ ದ್ರವ್ಯಗಳೆಲ್ಲವೂ ಕಳ್ಳರ ಪಾಲಾಗಲಿ! [4] ರಾಮನ ವನಪ್ರಯಾಣಕ್ಕೆ ಅನುಮತಿಸಿದವನಾವನೋ ಅವನು, ಉಭಯಾಸ್ತಮಯಕಾಲಗಳಲ್ಲಿ ನಿದ್ರೆಮಾಡುತ್ತಿರುವವನ ಪಾಪಕ್ಕೆ ಗುರಿಯಾಗಲಿ! [5] ಯಾವನು ರಾಮನ ವನಪ್ರಯಾಣಕ್ಕೆ ಅನುಮತಿಸಿದನೋ ಅವನಿಗೆ, ಇತರರ ಮನೆಗೆ ಬೆಂಕಿಯಿಟ್ಟವನಿಗೂ, ಆಚಾರ್ಯಪತ್ನಿಯನ್ನು ಪರಿಗ್ರಹಿಸಿದವನಿಗೂ, ಮಿತ್ರದ್ರೋಹಿಯಾದವನಿಗೂ ಸಂ

---

1 ಇದರಿಂದ, ಕಾಮಕ್ರೋಧಗಳಿಗೆ ವಶನಾಗಿ, ಸ್ತ್ರೀದ್ಯೂತಮೃಗಯಾದಿ ವ್ಯಸನಗಳಲ್ಲಿ ಬೀಳುವುದು ಮಹಾದೋಷವೆಂದು ಸೂಚಿತವಾಗುವುದು.

2 ಇದರಿಂದ ಅಪಾತ್ರಗಳಿಗೆ ಅಲ್ಪಸ್ವಲ್ಪದಾನಮಾಡಿದರೂ ದೋಷಿಯಾಗುವನೆಂದೂ, ಅಂತವರಿಗೆ ವಿಶೇಷವಾಗಿ ದಾನಮಾಡುವುದರಿಂದ ಮಹಾದೋಷವೆಂದೂ ಸೂಚಿಸಲ್ಪಡುವುದು.

3 ಸತ್ಪುರುಷರಿಗೆ ಕೇಡುಮಾಡಿದವನ ಸ್ವತ್ತೆಲ್ಲವೂ ಕಳ್ಳರಪಾಲಾಗುವುದೆಂದು ಇದರಿಂದ ಸೂಚಿತವಾಗಿದೆ.

4 ಸಂಧ್ಯಾಕಾಲಗಳಲ್ಲಿ ನಿದ್ರಿಸುವುದು ಮಹಾದೋಷವು.

5 ಇತರರ ಮನೆಗೆಬೆಂಕಿಯಿಡುವುದು, ಗುರುದಾರಪರಿಗ್ರಹ, ಮಿತ್ರದ್ರೋಹ ಇವು ಮೂರೂ ಮಹಾಪಾತಕಗಳೆನಿಸುವುವು. ಸತ್ಪುರುಷರಿಗೆ ಕೇಡನ್ನುಂಟುಮಾಡುವುದರಿಂದಲೂ ಅಂತಹ ಪಾತಕವೇ ಸಂಭವಿಸುವುದೆಂದು ಸೂಚಿತವಾಗುವುದು.

ಭವಿಸತಕ್ಕ ಮಹಾಪಾತಕವುಂಟಾಗಲಿ! [1] ರಾಮನ ವನಪ್ರಯಾಣಕ್ಕೆ ಸಮ್ಮತಿಸಿದವನಾವನೋ ಅವನು, ದೇವತೆಗಳಿಗೂ, ಪಿತೃಗಳಿಗೂ, ತಂದೆ ತಾಯಿಗಳಿಗೂ ತಕ್ಕ ಸತ್ಕಾರಗಳನ್ನು ಮಾಡದವನ ಮಹಾಪಾಪಕ್ಕೆ ಗುರಿಯಾಗಲಿ! [2] ಯಾವನು ರಾಮನ ವನಪ್ರಯಾಣಕ್ಕೆ ಅನುಮತಿಸಿದನೋ ಅವನು, ಸಜ್ಜನರ ಗೋಷ್ಠಿಗೂ ಅರ್ಹನಲ್ಲದೆ, ಸಜ್ಜನರ ಕೀರ್ತಿಗೂ ಪಾತ್ರನಲ್ಲದೆ, ಸತ್ಕಾರ್ಯಗಳಿಗೂ ಹೊರಗಾಗಿ ಹೋಗಲಿ! [3] ದೀರ್ಘಬಾಹುವಾಗಿಯೂ, ವಿಶಾಲೋರಸ್ಕನಾಗಿಯೂ ಇರುವ ರಾಮನ ವನಪ್ರಯಾಣಕ್ಕೆ ಅನುಮತಿಸಿದವನಾವನೋ ಅವನು, ಮಾತೃಶುಶ್ರೂಷೆಯನ್ನು ಬಿಟ್ಟುದರಿಂದ ಸಂಭವಿಸಬಹುದಾದ ಅಧರ್ಮಕ್ಕೆ ಪಾತ್ರನಾಗಿರಲಿ! [4] ಯಾವನು ರಾಮನ ವನಪ್ರಯಾಣಕ್ಕೆ ಕಾರಣನೋ ಅವನು, ಬಹುಕುಟುಂಬಿಯಾಗಿ, ದರಿದ್ರನಾಗಿ, ಯಾವಾಗಲೂ ರೋಗಪೀಡಿತನಾಗಿ ತನ್ನ ಜೀವಕಾಲವೆಲ್ಲಾ ಕಷ್ಟಪಡುತ್ತಿರಲಿ! [5] ರಾಮನ ವನಪ್ರಯಾಣಕ್ಕೆ ಅನುಮತಿಸಿದವನಾವನೋ ಅವ

---

1 ಇವುಗಳಿಂದ, ದೇವತೆಗಳಿಗೆ ನಿತ್ಯವೂ ಅಗ್ನಿಹೋತ್ರಾದಿಕಾರ್ಯಗಳಿಂದ ಪೂಜೆ ಮಾಡಬೇಕೆಂದೂ, ಪಿತೃದೇವತೆಗಳಿಗೆ ಗ್ರಹಣಸಮಯಗಳಲ್ಲಿಯೂ, ಅವರವರ ಮರಣ ತಿಥಿಗಳಲ್ಲಿಯೂ ಶ್ರಾದ್ಧಾದಿಗಳನ್ನಿಡಬೇಕೆಂದೂ, ಬದುಕಿರುವ ತಾಯಿತಂದೆಗಳಿಗೆ ಶುಶ್ರೂಷೆಯನ್ನು ಮಾಡಬೇಕೆಂದೂ, ಇವುಗಳನ್ನು ನಡೆಸದಿರುವುದು ಮಹಾಪಾತಕವೆಂದೂ ಸೂಚಿತವಾಗುವುದು.

2 ಇದರಿಂದ "ಸತ್ಪುರುಷಸಹವಾಸವನ್ನು ಬಿಡಬಾರದು; ಸತ್ಪುರುಷ ನಿಂದೆಗೊಳಗಾಗಬಾರದು; ಸತ್ಪುರುಷರು ಹೋದದಾರಿಯನ್ನನುಸರಿಸದಿರಬಾರದು." ಎಂಬ ಮೂರು ನೀತಿಗಳೂ ವ್ಯಕ್ತವಾಗುವುವು.

3 ಇದರಿಂದ ಮಾತೃಶುಶ್ರೂಷೆಯನ್ನು ಮಾಡದಿರುವುದು ಮಹಾದೋಷವೆಂದು ಸೂಚಿತವಾಗುವುದು.

4 ಸತ್ಪುರುಷರಿಗೆ ಕೇಡನ್ನು ಬಯಸಿದವನು ಕೇವಲ ದರಿದ್ರನಾಗುವುದಲ್ಲದೆ, ಅದರಮೇಲೆ ಬಹುಕುಟುಂಬಿಯಾಗಿ, ಭಿಕ್ಷಾಟನಾದಿಗಳಿಗೂ ಅವಕಾಶವಿಲ್ಲದಂತೆ ಸದಾ ರೋಗಪೀಡಿತನಾಗಿ ಕಷ್ಟಪಡಬೇಕಾಗುವುದೆಂದು ಇದರಿಂದ ಸೂಚಿತವು.

5 ಇದರಿಂದ ತಮ್ಮಲ್ಲಿಗೆ ಬಂದು ದೈನ್ಯದಿಂದ ಯಾಚಿಸಿದವರಿಗೆ ತಾತ್ಕಾಲಿಕವಾದ ಆಪ್ಯಾಯನಕ್ಕಾಗಿ ಆಶೆಯನ್ನು ತೋರಿಸಿ, ಕೊನೆಗೆ ಆಶಾಭಂಗವನ್ನುಂಟುಮಾಡುವುದು ಮಹಾದೋಷವೆಂದು ಸೂಚಿತವಾಗಿದೆ.

ನು, ತನ್ನಲ್ಲಿ ಕಾರ್ಯಾರ್ಥಿಗಳಾಗಿ ಬಂದು ತನ್ನನ್ನೇ ಕಣ್ಣೆತ್ತಿನೋಡಿ ನಿರೀಕ್ಷಿಸು ತ್ತ, ದೈನ್ಯದಿಂದ ಆಗಾಗ ತನ್ನನ್ನು ಬೇಡಿ, ತನ್ನಲ್ಲಿಯೇ ಆಶೋತ್ತರವನ್ನು ಇ ಟ್ಟುಕೊಂಡಿರುವವರಿಗೆ, ಬಹುಕಾಲದಮೇಲೆ ಆಶಾಭಂಗವನ್ನುಂಟುಮಾಡುವ ವನ ದುರ್ಗತಿಗೀಡಾಗಲಿ! [1] ರಾಮನ ವನಪ್ರಯಾಣಕ್ಕೆ ಅನುಮತಿಸಿದ ವನಾವನೋ ಅವನು ಯಾವಾಗಲೂ ಕಪಟಿಯಾಗಿ, ಕ್ರೂರನಾಗಿ, ಅಶು ದ್ಧನಾಗಿ, ಅಧರ್ಮಪರಾಯಣನಾಗಿ, ರಾಜಭಯದಿಂದ ತಲೆತಪ್ಪಿಸಿಕೊಂಡು ತಿರುಗುವವನಾಗಿರಲಿ! [2] ಯಾವನು ರಾಮನ ವನಪ್ರಯಾಣಕ್ಕೆ ಉದ್ದೇ ಶಿಸಿದನೋ ಅವನು, ಋತುಸ್ನಾತೆಯಾಗಿ ಋತುಕಾಲನಿಯಮವನ್ನನುಸರಿಸಿ ತನ್ನಲ್ಲಿಗೆ ಬಂದ ಪತಿವ್ರತೆಯಾದ ಪತ್ನಿಯನ್ನು ತಿರಸ್ಕರಿಸಿದ ದುಷ್ಟಾತ್ಮನಂ ತಾಗಲಿ![3] ಯಾವನು ರಾಮನ ವನಪ್ರಯಾಣಕ್ಕೆ ಕಾರಣನೋ ಅವನು, ಧರ್ಮ ದಲ್ಲಿ ದೃಷ್ಟಿಯಿಡದೆ ಕೈಹಿಡಿದ ಹೆಂಡತಿಯನ್ನು ಬಿಟ್ಟು ಪರಸ್ತ್ರೀಯರನ್ನು ಹುಡುಕಿಕೊಂಡು ಹೋಗುವ ಮಹಾಪಾಪಿಯಂತಾಗಲಿ! [4] ಯಾವನು ರಾಮನ ವನಪ್ರಯಾಣಕ್ಕೆ ಉದ್ದೇಶಿಸಿದನೋ ಅವನು, ಸಂತಾನವನ್ನು ಕ ಳೆದುಕೊಂಡ ಬ್ರಾಹ್ಮಣನಿಗುಂಟಾಗತಕ್ಕ ಪಾಪವನ್ನು ಹೊಂದಲಿ! [5] ಯಾ

---

1 ಇದರಿಂದ ರಾಜವಿರುದ್ಧಗಳಾದ ಕಾರ್ಯಗಳನ್ನು ಮಾಡಬಾರದೆಂದೂ, ಸತ್ಪು ರುಷರನ್ನು ಬಾಧಿಸುವುದರಿಂದ, ಅಧಾರ್ಮಿಕತ್ವ, ಕಾಠಿನ್ಯ, ಕಾಪಟ್ಯ, ಅಶುಚಿತ್ವ, ಮುಂ ತಾದ ದುರ್ಗುಣಗಳೆಲ್ಲವೂ ಬರುವುವೆಂದೂ ಸೂಚಿತವು.

2 ಇದರಿಂದ ಪತಿವ್ರತೆಯರಾದ ತಮ್ಮಪತ್ನಿಯರು ಋತುಸ್ನಾನವನ್ನುಮಾಡಿ, ಆ ಸ್ನಾನದಿನದಲ್ಲಿ ಮೋಹಗೊಂಡು ಬಂದಾಗ, ಅವರನ್ನು ತಿರಸ್ಕರಿಸುವುದು ಮಹಾಪಾ ತಕವೆಂದು ಸೂಚಿತವಾಗುವುದು.

3 ಪರಸ್ತ್ರೀ ಸಮಾಗಮವೇ ಪಾಪವು. ಅದರಲ್ಲಿಯೂ ತನ್ನ ಕೈಹಿಡಿದ ಹೆಂಡತಿ ಯಿರುವಾಗಲೂ ಅವಳನ್ನು ಬಿಟ್ಟು ಪರಸ್ತ್ರೀಯರನ್ನಪೇಕ್ಷಿಸುವುದು ಮಹಾದೋಷ ವೆಂದು ಸೂಚಿತವಾಗಿದೆ.

4 ಇದರಿಂದ ತಮ್ಮ ತಮ್ಮ ಭಾರ್ಯೆಯರಲ್ಲಿ ಸಂತಾನವನ್ನು ಪಡೆದಹೊರತು ಪಿತೃಋಣವು ತೀರಲಾರದೆಂದೂ, ಈಕಾರಣದಿಂದ ಪುತ್ರವತಿಯಾದ ಭಾರ್ಯೆಯನ್ನು ತೊ ರೆದುಬಿಡುವುದು ಮಹಾದೋಷವೆಂದೂ ಸೂಚಿತವಾಗುವುದು.

5 ಕುಡಿಯುವನೀರನ್ನು ಕೆಡಿಸುವುದು, ಇತರರಿಗೆ ವಿಷಹಾಕುವುದು, ಇವೆರಡೂ ಮಹಾಪಾತಕಗಳೆಂದು ಇದರಿಂದ ಸೂಚಿತವು.

ವನು ರಾಮನನ್ನು ಕಾಡಿಗೆ ಕಳುಹಿಸುವುದಕ್ಕೆ ಕಾರಣಭೂತನೋ ಅವನು, ಕುಡಿಯುವ ನೀರನ್ನು ಕೆಡಿಸುವನಿಗೂ,ಆಹಾರಪದಾರ್ಥದಲ್ಲಿ ವಿಷವನ್ನು ಕಲಸಿಕೊಟ್ಟವನಿಗೂ ಉಂಟಾಗತಕ್ಕ ಮಹಾಪಾತಕಕ್ಕೆ ಗುರಿಯಾಗಿರಲಿ ! [1]ರಾಮನ ವನಪ್ರಯಾಣಕ್ಕೆ ಯಾವನು ಕಾರಣಭೂತನೋ ಅವನು, ನಷ್ಟೇಂದ್ರಿಯನಾಗಿ,ಬ್ರಾಹ್ಮಣನಿಗೆ ಮಾಡಬೇಕೆಂದಿರುವ ಸತ್ಕಾರವನ್ನು ತಪ್ಪಿಸಿದ ಪಾಪಕ್ಕೀಡಾಗಲಿ! ಮತ್ತು ಅವನು,ಕರುಹಾಕಿದ ಹಸುವನ್ನು ಹತ್ತುದಿನಗಳೊಳಗಾಗಿ ಹಾಲುಕರೆದು ಕುಡಿದವನ ಮಹಾಪಾತಕಕ್ಕೆ ಈಡಾಗಲಿ! [2] ಯಾವನು ರಾಮನ ವನಪ್ರಯಾಣಕ್ಕೆ ಕಾರಣಭೂತನೋ ಅವನು, ತನ್ನ ಮನೆಯಲ್ಲಿ, ಜಲಸಮೃದ್ಧಿಯಿರುವಾಗಲೂ ದಾಹಪಟ್ಟುಬಂದವನಿಗೆ ನೀರನ್ನು ಕೊಡದೆ ವಂಚಿಸಿದವನ ಪಾಪಕ್ಕೆ ಗುರಿಯಾಗಲಿ! [3] ರಾಮನ ವನಪ್ರಯಾಣಕ್ಕೆ ಕಾರಣಭೂತನಾವನೋ ಅವನು, ಇಬ್ಬರ ವಿವಾದದಲ್ಲಿ ಪಕ್ಷಪಾತದಿಂದ ತನಗೆ ತಿಳಿದ ನ್ಯಾಯವನ್ನು ಹೇಳದೆ ಮರೆಸಿಟ್ಟುಕೊಂಡು, ನೋಡುತ್ತಿರುವವನ ಪಾಪಕ್ಕೆ ಗುರಿಯಾಗಲಿ" ಎಂದು ಭರತನು ಪತಿಪುತ್ರಹೀನೆಯಾಗಿ ದುಃಖಿಸುತ್ತಿರುವ ಕೌಸಲ್ಯೆಗೆ ನಂಬಿಕೆಯನ್ನುಂಟು ಮಾಡುವುದಕ್ಕಾಗಿ, ಹೀಗೆ ಆಣೆಯಿಟ್ಟುಕೊಳ್ಳುತ್ತಿರುವಾಗಲೇ ಪ್ರಜ್ಞೆತಪ್ಪಿಬಿದ್ದನು. ಈ ಅವಸ್ಥೆಯಲ್ಲಿರುವ ಭರತನನ್ನು ನೋಡಿ ಕೌಸಲ್ಯೆಯು "ವತ್ಸನೆ! ಈ ನಿನ್ನ ಶಪಥವಾಕ್ಯಗಳನ್ನು ಕೇಳಿ ನನ್ನ ಪ್ರಾಣಗಳು ಉಕ್ಕಿಬರುವಹಾಗೆ ತತ್ತಳಿಸುತ್ತಿರುವುವು. (ರಾಮವಿರಹದಿಂದ ಹೊರಕ್ಕೆ ಹೊರಟುಬರುತ್ತಿರುವ ನನ್ನ ಪ್ರಾಣಗಳನು

---

1 ಇದರಿಂದ ಹಸುಗಳು ಈದ ಹತ್ತುದಿನಗಳವರೆಗೆ ಅವುಗಳ ಹಾಲನ್ನು ಕರೆಯಬಾರದೆಂದೂ, ಆಹಾಲನ್ನು ಕುಡಿಯಲೂ ಬಾರದೆಂದೂ ಸೂಚಿತವಾಗುವುದು.

2 ದಾಹಗೊಂಡವನಿಗೆ ಹೇಗಾದರೂ ಪ್ರಯತ್ನಪಟ್ಟು ನೀರನ್ನು ತಂದಿಡಬೇಕೆಂದೂ, ಅಂತವರನ್ನು ವಂಚಿಸಿದರೆ ಮಹಾದೋಷವೆಂದೂ ಸೂಚಿತವಾಗುವುದು.

3 ಇಲ್ಲಿ ಇಬ್ಬರಿಗೆ ವಿವಾದವುಂಟಾದಾಗ, ಒಬ್ಬನಲ್ಲಿ ಪಕ್ಷಪಾತದಿಂದ ಆತನಿಗೆ ಜಯೋಪಾಯವನ್ನು ಹೇಳುವುದು ಪಾಪವೆಂದು ಗೋವಿಂದರಾಜೀಯ ವ್ಯಾಖ್ಯಾನದ ಅಭಿಪ್ರಾಯವು. ಇಬ್ಬರವಿವಾದದಲ್ಲಿ ಆದರಮರ್ಮವನ್ನು ತಿಳಿದು ಆ ವಿವಾದವನ್ನು ತೀರಿಸತಕ್ಕ ಶಕ್ತಿಯುಳ್ಳವನು, ಪಕ್ಷಪಾತಬುದ್ಧಿಯಿಂದ ಏನೂ ಹೇಳದೆ ಉದಾಸೀನನಾಗಿ ನೋಡುತಿದ್ದರೆ ಅದೂ ಮಹಾದೋಷವೆಂದು ಮಹೇಶ್ವರತೀರ್ಥರ ಅಭಿಪ್ರಾಯವು.

ನಿನ್ನ ಈ ಶಪಥವಾಕ್ಯಗಳು!ತಡೆದಿಟ್ಟ ಸಮಾಧಾನಮಾಡುವಂತಿರುವುವು) ಎಲೈಪುತ್ರನೆ! ಈ ನಿನ್ನ ಮನಸ್ಸು ಜ್ಯೇಷ್ಠಾನುವರ್ತನವೆಂಬ ಧರ್ಮವನ್ನು ಅಗಲದಿರುವುದೇ ನನ್ನ ಭಾಗ್ಯವೆಂದೆಣಿಸುವೆನು. ಲಕ್ಷ್ಮಣನಂತೆಯೇ ನೀನೂ ಸತ್ಯಪ್ರತಿಜ್ಞನಾಗಿ ಅಣ್ಣನನ್ನು ಅನುವರ್ತಿಸತಕ್ಕವನೆಂದೇ ಎಣಿಸುವೆನು. ಈ ಧರ್ಮದಿಂದ ಸತ್ಪುರುಷರು ಹೊಂದತಕ್ಕ ಪುಣ್ಯಲೋಕಗಳೆಲ್ಲವೂ ನಿನಗೆ ಲಭಿಸುವುದರಲ್ಲಿ ಸಂದೇಹವಿಲ್ಲ" ಎಂದು ಹೇಳಿ, ಆಭರತನನ್ನು ಕರೆದು, ತೊಡೆಯಮೇಲೆ ಕುಳ್ಳಿರಿಸಿಕೊಂಡು,ಭ್ರಾತೃವತ್ಸಲನಾದ ಆತನನ್ನು ಪ್ರೇಮದಿಂದಪ್ಪಿಕೊಂಡು ದುಃಖದಿಂದ ರೋದಿಸುತಿದ್ದಳು. ಹಾಗೆಯೇ ಭರತನೂ ಅನೇಕಶಪಥಗಳನ್ನುಮಾಡಿ ಪ್ರಲಾಪಿಸುತ್ತ, ದುಃಖದಲ್ಲಿ ಮುಳುಗಿರಲು,ಆಮಹಾತ್ಮನಿಗೆ ಆಗಾಗ ಪ್ರಜ್ಞೆತಪ್ಪುತಿದ್ದುದರಿಂದಲೂ, ದುಃಖಾತಿಶಯದಿಂದಲೂ ಮನಸ್ಸು ಸ್ವಮಿತಿವಾಗಿಲ್ಲದೆ ಕದಲಿಹೋಯಿತು. ಹೀಗೆ ಆತನು ಬುದ್ಧಿಗೆಟ್ಟು ಹುಚ್ಚನಂತೆ ಪ್ರಲಾಪಿಸುತ್ತಾ,ಆಗಾಗ ಮೂರ್ಛೆಬಿದ್ದೇಳುತ್ತ, ಬಿಸಿಬಿಸಿಯಾಗಿ ನಿಟ್ಟುಸಿರನ್ನು ಬಿಡುತ್ತ, ಬಹುಕಷ್ಟದಿಂದಲೇ ಆರಾತ್ರಿಯನ್ನು ಕಳೆದನು. ಇಲ್ಲಿಗೆ ಎಪತ್ತೈದನೆಯ ಸರ್ಗವು.

---

## ಭರತನು ಥಶರಥನಿಗೆ ಅಪರಸಂಸ್ಕಾರಗಳನ್ನು ನಡೆಸಿದುದು.

ಹೀಗೆ ದುಃಖದಿಂದ ಬೆಂದು ಕೊರಗುತ್ತಿರುವ ಕೈಕೇಯಿಯ ಪುತ್ರನಾದ ಭರತನನ್ನು ನೋಡಿ,ವಾಗ್ಮಿಯಾದ ವಸಿಷ್ಠಮಹರ್ಷಿಯು "ಎಲೈ ಮಹಾಯಶಸ್ವಿಯಾದ ರಾಜಕುಮಾರನೆ! ಇನ್ನು ದುಃಖಿಸಿದುದು ಸಾಕು! ನಿನ್ನ ಶ್ರೇಯಸ್ಸಿಗಾಗಿ ತಂದೆಯಾದ ದಶರಥರಾಜನನ್ನು ಪರಲೋಕಕ್ಕೆ ಕಳುಹಿಸುವ ಪ್ರಯತ್ನವನ್ನು ಮಾಡು!" ಎಂದನು. ಈವಸಿಷ್ಠನ ಮಾತನ್ನು ಕೇಳಿ ಭರತನು ಮನಸ್ಸಿಗೆ ಸಮಾಧಾನವನ್ನು ತಂದುಕೊಂಡು,ಅಲ್ಲಿ ನಡೆಸಬೇಕಾದ ಪ್ರೇತಕಾರ್ಯಗಳನ್ನು ಮಾಡುವುದಕ್ಕೆ ಆಗಲೇ ಉಪಕ್ರಮಿಸಿದನು. ಎಣ್ಣೆಕೊಪ್ಪರಿಗೆಯಲ್ಲಿದ್ದ ದಶರಥನ ದೇಹವನ್ನು ಹೊರಕ್ಕೆ ತೆಗದು ಆ ಎಣ್ಣೆಯನ್ನು ಹೋಗಲಾಡಿಸುವುದಕ್ಕಾಗಿ ಮೊದಲು ನೆಲದಮೇಲೆ ಮಲಗಿಸಿಟ್ಟರು. ಆ ದೇಹವು ಎಣ್ಣೆಯಲ್ಲಿ ಬಹಳಹೊತ್ತಿನವರೆಗೆ ತೊಯ್ದಿದ್ದುದರಿಂದ,ಅದರಬಣ್ಣವೆಲ್ಲ

ವೂ ಅರಿಸಿನದಂತೆ ಹೊಂಬಣ್ಣಕ್ಕೆ ತಿರುಗಿತ್ತು.ಆಗಲೂ ದಶರಥನು ನಿದ್ರೆಮಾಡುತ್ತಿರುವಂತೆಯೇ ಕಾಣುತ್ತಿದ್ದನು. ಆ ದೇಹದ ಎಣ್ಣೆಯೆಲ್ಲವನ್ನೂ ಒರೆಸಿದಮೇಲೆ ಅದನ್ನು ರತ್ನಭೂಷಿತವಾದ ಹಾಸಿಗೆಯಮೇಲೆ ಮಲಗಿಸಿಟ್ಟರು. ಆ ದೇಹವನ್ನು ನೋಡಿ ಭರತನು ಬಹುದುಃಖದಿಂದ ಪುನಃ ಪ್ರಲಾಪಿಸತೊಡಗಿದನು.‘‘ಹಾರಾಜನೆ!ನಾನು ಇಲ್ಲಿಂದ ಬಿಟ್ಟು ಹೋದ ಸ್ವಲ್ಪಕಾಲದೊಳಗಾಗಿ ನಾನು ಬರುವಷ್ಟರಲ್ಲಿ ಏನುಕೆಲಸವನ್ನು ಮಾಡಿಬಿಟ್ಟೆ!’’ಎಂತಹಮಹಾನರ್ಥಗಳನ್ನು ತಂದಿಟ್ಟೆ!ಧರ್ಮಜ್ಞನಾದ ರಾಮನನ್ನೂ, ಬಲಾಢ್ಯನಾದ ಲಕ್ಷ್ಮಣನನ್ನೂ ಊರುಬಿಟ್ಟು ಹೊರಡಿಸಿದುದಲ್ಲದೆ,ದುಃಖಿತರಾದ ಬಂಧುವರ್ಗಗಳೆಲ್ಲವನ್ನೂ ದಿಕ್ಕಿಲ್ಲದಹಾಗೆ ಬಿಟ್ಟು ನೀನೂ ಹೊರಟು ಹೋದೆಯಲ್ಲವೆ?ಈಗ ನೀನೆಲ್ಲಿಗೆ ಹೋಗುವೆ?ಸಮಸ್ತಜನಕ್ಕೂ ಹಿತವನ್ನೇ ಬಯಸತಕ್ಕ ಪುರುಷಸಿಂಹನಾದ ರಾಮನೂ ಬಿಟ್ಟುಹೋದಮೇಲೆ ಈಜನರನ್ನು ಕಾಪಾಡುವರಾರು? ಈಪಟ್ಟಣವನ್ನು ನೀನೂ ಬಿಟ್ಟುಹೋದಮೇಲೆ ಇದರ ಯೋಗಕ್ಷೇಮವನ್ನು ನೋಡತಕ್ಕವರಾರು? ನೀನೂ ಸ್ವರ್ಗಲೋಕವನ್ನು ಸೇರಿ,ರಾಮನೂ ಕಾಡಿಗೆ ಹೋದಮೇಲೆ ಪ್ರಜೆಗಳ ಕ್ಷೇಮಲಾಭವನ್ನು ವಿಚಾರಿಸತಕ್ಕವರಾರು? ನೀನಿಲ್ಲದುದರಿಂದ ಈಭೂಮಿಯು ವಿಧವೆಯಂತೆ ಲಕ್ಷಣಹೀನಳಾಗಿರುವಳು. ಚಂದ್ರನಿಲ್ಲದ ರಾತ್ರಿಯಂತೆ ಈ ಅಯೋಧ್ಯಾನಗರಿಯೂ ಕೇವಲ ಕಾಂತಿಶೂನ್ಯವಾಗಿರುವುದು.” ಹೀಗೆಂದುಹೇಳಿ ಭರತನು ಬಹುದೈನ್ಯದಿಂದ ಪ್ರಲಾಪಿಸುತ್ತಿರಲು, ವಸಿಷ್ಠನು ಪುನಃ ಆಭರತನನ್ನು ನೋಡಿ ‘‘ಎಲೈ ಮಹಾಬಾಹುವಾದ ಭರತನೆ! ಹೀಗೆ ಸುಮ್ಮನೆ ದುಃಖದಿಂದ ಕಾಲವನ್ನು ಕಳೆಯಬೇಡ ! ತಂದೆಗೆ ನಡೆಸಬೇಕಾದ ಪ್ರೇತಕಾರ್ಯಗಳನ್ನು ಕ್ರಮವಾಗಿ ನಡೆಸಿ ಮುಗಿಸು” ಎಂದನು. ಇದನ್ನು ಕೇಳಿ ಭರತನು ವಸಿಷ್ಠನ ಮಾತನ್ನು ಗೌರವಿಸಿ, ಋತ್ವಿಕ್ಕುಗಳನ್ನೂ, ಪುರೋಹಿತರನ್ನೂ, ಆಚಾರ್ಯರನ್ನೂ ತಾನೇ ತ್ವರೆಪಡಿಸುತ್ತಿದ್ದನು. ಅಗ್ನಿಶಾಲೆಯಿಂದ ದಶರಥನ ಗಾರ್ಹಪತ್ಯಾದ್ಯಗ್ನಿಗಳನ್ನು ಋತ್ವಿಕ್ಕುಗಳೂ, ಯಾಜಕರೂ ಸೇರಿ ಹೊರಕ್ಕೆ ಸಾಗಿಸಿತಂದಿಟ್ಟರು. ರಾಜನ ದೇಹವನ್ನು ಪಲ್ಲಕ್ಕಿಯಲ್ಲಿಟ್ಟು ಆತನ ಪರಿಚಾರಕರೆಲ್ಲರೂ ಕಣ್ಣೀರು ಬಿಡುತ್ತ ದುಃಖದಿಂದ ಮೈಮರೆತು ಎತ್ತಿಕೊಂಡು ಬಂದರು. ಈ ಮೃತದೇಹವ

ನ್ನು ತೆಗೆದುಕೊಂಡು ಹೋಗುತಿದ್ದ ದಾರಿಯಲ್ಲಿ, ಪುರವಾಸಿಗಳೆಲ್ಲರೂ ಮುಂದೆ ಸುವರ್ಣವನ್ನೂ, ನಾಣ್ಯಗಳನ್ನೂ, ನಾನಾವಿಧವಾದ ವಸ್ತ್ರಗಳನ್ನೂ ಎರಚುತ್ತಾ ಹೋದರು. ಅಗಿಲುಚಂದನ, ಗುಗ್ಗುಳ, ಸರಳ, ಪದ್ಮಕ, ಮುಂತಾದ ಗಂಧದ ಪುಡಿಗಳಿಂದ ದಾರಿಯಲ್ಲಿ ಕೆಲವರು ಧೂಪಗಳನ್ನಿಡುತ್ತ ಹೋಗುತಿದ್ದರು. ಅಮೇಲೆ ಋತ್ವಿಕ್ಕುಗಳು ದಶರಥನ ದೇಹವನ್ನು ಚಿತೆಯಮೇಲೆ ಏರಿಸಿಟ್ಟರು. ಪುರೋಹಿತರು ಭರತನಕೈಯ್ಯಿಂದ ಚಿತೆಗೆ ಬೆಂಕಿಯನ್ನಿಡಿಸಿ, ಅಪರ ಮಂತ್ರಗಳನ್ನು ಜಪಿಸುತಿದ್ದರು. ಸಾಮಗಾನವನ್ನು ಮಾಡತಕ್ಕ ಋತ್ವಿಕ್ಕುಗಳು ಶಾಸ್ತ್ರೋಕ್ತವಾಗಿ ಸಾಮಗಾನಮಾಡುತಿದ್ದರು. ದಶರಥನ ಪತ್ನಿಯರೆಲ್ಲರೂ ತಮ್ಮ ತಮ್ಮ ಸ್ಥಿತಿಗೆ ತಕ್ಕಂತೆ ಪಲ್ಲಕ್ಕಿಗಳನ್ನೂ ಇತರವಾಹನಗಳನ್ನೂ ಏರಿ, ವೃದ್ಧರಾದ ಪರಿಚಾರಕರಿಂದ ಪರಿವೃತರಾಗಿ ಪಟ್ಟಣದಿಂದ ಹೊರಟು ಬರುತಿದ್ದರು. ದಹನಸಂಸ್ಕಾರವು ನಡೆದಮೇಲೆ, ಋತ್ವಿಕ್ಕುಗಳೂ, ರಾಜಸ್ತ್ರೀಯರೂ ಆದಶರಥನದೇಹವನ್ನು ಪ್ರದಕ್ಷಿಣವಾಗಿಯೂ,ಅಪ್ರದಕ್ಷಿಣವಾಗಿಯೂಸುತ್ತಿಬಂದರು.ಕೌಸಲ್ಯೆಯೇ ಮೊದಲಾದ ಸ್ತ್ರೀಯರೆಲ್ಲರೂ ವ್ಯಸನದಿಂದ ಬೆಂದು ಉಚ್ಚಸ್ವರದಿಂದ ಅಳುತಿದ್ದರು. ಹೀಗೆ ಗಟ್ಟಿಯಾಗಿ ಗೋಳಿಡುತ್ತಿರುವ ಸಾವಿರಾರು ಮಂದಿ ಸ್ತ್ರೀಯರ ಪ್ರಲಾಪಧ್ವನಿಯು, ಕ್ರೌಂಚಪಕ್ಷಿಗಳ ಕೂಗಿನಂತೆ ಬಹುದೀನವಾಗಿ ಕೇಳಿಸುತಿತ್ತು. ಆಸ್ತ್ರೀಯರೆಲ್ಲರೂ ವ್ಯಸನದಿಂದ ಮೈಮರೆತು ಬಾರಿಬಾರಿಗೂ ಪ್ರಲಾಪಿಸುತ್ತ,ತಮ್ಮ ತಮ್ಮ ವಾಹನಗಳನ್ನೇರಿ ಸರಯೂನದಿಯ ತೀರದಲ್ಲಿ ಬಂದಿಳಿದರು. ಅಲ್ಲಿ ಆ ರಾಜಸ್ತ್ರೀಯರೂ, ಮಂತ್ರಿಪುರೋಹಿತಾದಿಗಳೂ ಭರತನೊಡನೆ ಸೇರಿ ಜಲತರ್ಪಣವನ್ನು ಮಾಡಿ, ದುಃಖದಿಂದ ಕಣ್ಣೀರುಬಿಡುತ್ತ ಹಿಂತಿರುಗಿ ಬಂದು ಪುರಪ್ರವೇಶವನ್ನು ಮಾಡಿದರು. ಆ ದುಃಖದಿಂದಲೇ ನೆಲದಮೇಲೆ, ಬಹುಕಷ್ಟದಿಂದ [1]ಹತ್ತು ದಿವಸಗಳ ಆಶೌಚವನ್ನು ಕಳೆದರು. ಇಲ್ಲಿಗೆ ಎಪ್ಪತ್ತಾರನೆಯ ಸರ್ಗವು.

---

1 ''ಷೋಡಶಾಹೇನ ಭೂಪಾಲಾಃ" ಎಂಬಂತೆ, ಕ್ಷತ್ರಿಯರಿಗೆ ಹದಿನಾರುದಿನಗಳವರೆಗೆ ಆಶೌಚವುಂಟು. ಇಲ್ಲಿ ಹತ್ತು ದಿನಗಳು ಮಾತ್ರವೇ ಕಾಣಿಸಲ್ಪಟ್ಟಿರುವುವಲ್ಲವೆ? ಇದಕ್ಕೆ ಸಮಾಧಾನವೇನೆಂದರೆ:—''ಕ್ಷತ್ರಿಯಸ್ತು ದಶಾಹೇನ ಸ್ವಕರ್ಮನಿರತಶ್ಶುಚಿಃ"

ಭರತನು ಹನ್ನೆರಡನೆಯ ದಿನದ ಶ್ರಾದ್ಧವನ್ನು ನಡೆಸಿದುದು. ಭರತಶತ್ರುಘ್ನರಿಬ್ಬರೂ ತಂದೆಯನ್ನು ನೆನಿಸಿಕೊಂಡು ಎಡೆಬಿಡದೆ ದುಃಖಿಸುತ್ತಿರಲು, ವಸಿಷ್ಠಾದಿಗಳು ಅವರನ್ನು ಸಮಾಧಾನಪಡಿಸಿದುದು.

ಹತ್ತು ದಿನಗಳು ಕಳೆದಮೇಲೆ ಭರತನು ಪುಣ್ಯಾಹವಾಚನಾದಿಗಳನ್ನು ಮಾಡಿಸಿ, ಆಶೌಚವನ್ನು ನಿವೃತ್ತಿಮಾಡಿಕೊಂಡು, ಹನ್ನೊಂಡನೆಯ ದಿವಸದಲ್ಲಿ ನಡೆಸಬೇಕಾದ ಕಾರ್ಯಗಳನ್ನೂ ಮುಗಿಸಿದನು. ತಂದೆಗೆ ಪರಲೋಕಕ್ರಿಯೆಗಳನ್ನು ಮಾಡುವಾಗ ಅನೇಕಬ್ರಾಹ್ಮಣರಿಗೆ, ರತ್ನರಾಶಿಗಳನ್ನೂ, ಧನರಾಶಿಯನ್ನೂ, ಅನ್ನವಸ್ತ್ರಾದಿಗಳನ್ನೂ, ಇನ್ನೂ ಬೇರೆಬೇರೆ ಉತ್ತಮವಸ್ತುಗಳನ್ನೂ, ಬಿಳೀ ಮೇಕೆಗಳನ್ನೂ, ಬೆಳ್ಳಿಯ ಗಟ್ಟಿಗಳನ್ನೂ, ಗೋವುಗಳನ್ನೂ ದಾನಮಾಡಿದನು. ಕೆಲವರಿಗೆ ದಾಸದಾಸೀಜನರನ್ನೂ, ವಾಹನಗಳನ್ನೂ ಕೊಟ್ಟನು. ಕೆಲವರಿಗೆ ಗೃಹದಾನವನ್ನು ಮಾಡಿದನು. ಹೀಗೆ ಆ ಭರತನು ಅವರವರಿಗೆ ಮನಸ್ತೃಪ್ತಿಯಾಗುವಂತೆ ದಾನಮಾಡಿ, [1]ಹದಿಮೂರನೆಯ ದಿನದ ಪ್ರಾತಃಕಾಲದಲ್ಲಿ, ಅಸ್ಥಿಸಂಚಯನಾರ್ಥವಾಗಿ ದಹನಸ್ಥಲಕ್ಕೆ ಬಂದು, ಅಲ್ಲಿ ಪುನಃ ತಂದೆಯನ್ನು ಸ್ಮರಿಸಿಕೊಂಡು ಉಚ್ಚಸ್ವರದಿಂದ ಅಳುವುದಕ್ಕಾರಂಭಿಸಿದನು. ಆಗ ಆತನು ತಂದೆಯನ್ನು ದಹನಮಾಡಿದ ಚಿತೆಯ ಬಳಿಯಲ್ಲಿ ನಿಂತು

---

ಸ್ವಕರ್ಮಗಳನ್ನು ಸರಿಯಾಗಿ ನಡೆಸುತ್ತಿರುವ ಕ್ಷತ್ರಿಯನು ಹತ್ತು ದಿನಗಳಲ್ಲಿಯೇ ಶುದ್ಧನಾಗುವನು." ಎಂಬ ವಿಶೇಷಶಾಸ್ತ್ರದಿಂದ ಇಲ್ಲಿ ಹತ್ತುದಿನಗಳೇ ಹೇಳಲ್ಪಟ್ಟಿರುವುದಾಗಿ ಗ್ರಹಿಸಬೇಕು ಮತ್ತು ಇಲ್ಲಿ ಪ್ರೇತದೊಡನೆ ಅಗ್ನಿಯನ್ನು ಸಾಗಿಸುವುದು, ಪ್ರೇತವನ್ನು ಚಿತೆಯಲ್ಲಿ ಏರಿಸುವುದು, ಮಂತ್ರಪೂರ್ವಕವಾಗಿ ಅಗ್ನಿಯನ್ನಿಡುವುದು, ಪ್ರದಕ್ಷಿಣಮಾಡುವುದು, ಉದಕದಾನವನ್ನು ಮಾಡುವುದು, ಹತ್ತು ದಿನಗಳವರೆಗೆ ಆಶೌಚದಲ್ಲಿದ್ದು ನೆಲದಲ್ಲಿ ಮಲಗುವುದು. ಇವುಮಾತ್ರವೇ ದೇಶಭೇದದಿಂದಲೂ, ಕಾಲಭೇದದಿಂದಲೂ ಸೂತ್ರಭೇದದಿಂದಲೂ ಸಾಮಾನ್ಯವಾಗಿ ಎಲ್ಲರೂ ನಡೆಸಬೇಕಾದ ಔರ್ಧ್ವದೈಹಿಕವಿಶೇಷಗಳಾಗಿ ಹೇಳಲ್ಪಟ್ಟಿರುವುವು. ಅಥವಾ ಈ ಪ್ರಧಾನಕೃತ್ಯಗಳನ್ನು ಹೇಳಿದುದರಿಂದ ಇತರಕಾರ್ಯಗಳನ್ನೂ ಹಾಗೆಯೇ ಗ್ರಹಿಸಿಕೊಳ್ಳಬೇಕೆಂದು ತಿಳಿಯಬೇಕು.

1 ಸೂತ್ರಾಂತರಪ್ರಕಾರವಾಗಿ ಹದಿಮೂರನೆಯದಿನದಲ್ಲಿಯೂ ಅಸ್ಥಿಸಂಚಯನವುಂಟು. "ದ್ವಿತೀಯೇಹ್ನಿಯುಗ್ಮದಿವಸೇಷ್ವರ್ಧಮಾರ್ಷಾ ಮಾಸಾನ್ಯತರ್ತೌ ಸಂವತ್ಸರಂ ವಾ ಸಂಚಯನಂ" ಎಂದು ಬೋಧಾಯನಸೂತ್ರವಿದೆ.

“ಹಾ!ಜನಕನೆ! ನೀನು ಪರಲೋಕಪ್ರಯಾಣಮಾಡುವುದಕ್ಕೆ ಮೊದಲು ನನ್ನನ್ನು ಯಾರಕೈಗೆ ಒಪ್ಪಿಸಿಹೋಗಬೇಕಾಗಿತ್ತೋ, ಅಂತಹ ನನ್ನ ಅಣ್ಣನಾದ ರಾಮನೂ ಕಾಡುಪಾಲಾಗಿ ಹೋದನು. ಹೀಗೆ ನನ್ನನ್ನು ದಿಕ್ಕಿಲ್ಲದ ಹಾಗೆಮಾಡಿ ನೀನೂ ಬಿಟ್ಟುಹೋಗಬಹುದೆ?ಹಾರಾಜನೆ!ಅನಾಥೆಯಾದ ಕೌಸಲ್ಯೆಗೆ ಮುಖ್ಯಗತಿಯಾಗಿದ್ದ ರಾಮನನ್ನು ಕಾಡಿಗೆ ಕಳುಹಿಸಿಬಿಟ್ಟೆಯಲ್ಲಾ! ದಿಕ್ಕಿಲ್ಲದ ಆಕೌಸಲ್ಯೆಗೆ ಇನ್ನಾರುಗತಿ ? ನೀನೂ ಅವಳನ್ನು ಬಿಟ್ಟು ಹೋದೆಯಲ್ಲವೆ ? ” ಎಂದು ಗೋಳಿಡುತಿದ್ದನು. ಮತ್ತು ಆತನು ಚಿತೆಯಮೇಲೆ ಭಸ್ಮರೂಪವಾಗಿ ಬಿದ್ದಿದ್ದ ತಂದೆಯ ದೇಹದ ಆಕಾರವನ್ನು ನೋಡಿದಾಗ, ಅದು ಬೂದಿಮುಚ್ಚಿ, ಕಪ್ಪಾಗಿ ಇದ್ದಲಾಗಿತ್ತು. ಅಸ್ಥಿಪಂಜರಗಳೆಲ್ಲವೂ ಬೆಂದು ಹಾಗೆಯೇ ಬೂದಿಯಲ್ಲಿ ಹುದುಗಿಕೊಂಡಿದ್ದುದನ್ನು ನೋಡಿದನು. ಆಗ ಆತನ ಸಂಕಟವು ಮಿತಿಮೀರಿ ಉಕ್ಕಿಬಂದಿತು. ಮತ್ತಷ್ಟು ಗಟ್ಟಿಯಾಗಿ ಪ್ರಲಾಪಿಸತೊಡಗಿದನು. ಹೀಗೆ ಭರತನು ಆ ಚಿತೆಯನ್ನು ನೋಡಿನೋಡಿ ಸಂಕಟದಿಂದ ಅಳುತ್ತಿರುವಾಗಲೇ ಆತನಿಗೆ ದೇಹದಲ್ಲಿ ಪ್ರಜ್ಞೆಯು ತಪ್ಪಿತು. ಹಗ್ಗದಿಂದೆಳೆದು ಕಟ್ಟಲ್ಪಟ್ಟ ಇಂದ್ರಧ್ವಜವು, ಹಗ್ಗವು ಸಡಿಲಿದಾಗ ತಟ್ಟನೆ ಬಗ್ಗಿ ಬೀಳುವಹಾಗೆ ನೆಲದಮೇಲೆ ಬಿದ್ದುಬಿಟ್ಟನು. ಇದನ್ನು ನೋಡಿ ಅಲ್ಲಿದ್ದ ಬಂಧುಗಳೆಲ್ಲರೂ ಬೆಚ್ಚರಬಿದ್ದು ಅವನ ಸಮೀಪಕ್ಕೆ ಬಂದರು. ಪುಣ್ಯಕ್ಷಯದಿಂದ ಸ್ವರ್ಗಭ್ರಷ್ಟನಾದ ಯಯಾತಿಯನ್ನು ಆತನ ದೌಹಿತ್ರರಾದ ಋಷಿಗಳು ಎತ್ತಿಹಿಡಿದಂತೆ, ಅವರೆಲ್ಲರೂ ಭರತನನ್ನು ಎತ್ತಿಹಿಡಿದು ಸಿಲ್ಲಿಸುತ್ತಿದ್ದರು. ಶತ್ರುಘ್ನನು ಅದುವರೆಗೆ ಧೈರ್ಯವನ್ನುತಂದುಕೊಂಡಿದ್ದರೂ, ಈಗ ಭರತನ ಅವಸ್ಥೆಯನ್ನು ನೋಡಿದೊಡನೆಯೇ ಆತನಿಗಿದ್ದ ಧೈರ್ಯವು ತಗ್ಗಿತು. ಆತನ ಮನಸ್ಸು ಕದಲಿತು. ತಾನೂ ದಶರಥನನ್ನು ಸ್ಮರಿಸಿಕೊಂಡು ಪ್ರಲಾಪಿಸುತಿದ್ದು ಕೊನೆಗೆ ಮೂರ್ಛೆಬಿದ್ದನು. ಆತನೂ ಸ್ವಲ್ಪಹೊತ್ತಿಗೆ ಚೇತರಿಸಿ ಕೊಂಡು,ತಂದೆಯ ರೂಪವನ್ನೂ,ಆತನ ಗುಣಗಳನ್ನೂ ಬಾರಿಬಾರಿಗೂ ನೆನೆಸಿಕೊಂಡು,ದುಃಖದಿಂದ ಬುದ್ಧಿಗೆಟ್ಟು, ಹುಚ್ಚನಂತೆ “ಅಹಾ ! ಮಂಥರೆಯೆಂಬವಳಿಂದ ಹುಟ್ಟಿ, ಕೈಕೇಯಿಯೆಂಬ ಮೊಸಳೆಗೆ ವಾಸಸ್ಥಾನವಾಗಿ, ವರದಾನವೆಂಬ ಜಲಸಮೃದ್ಧಿಯಿಂದ ಕೂಡಿದ ಅಪಾರವಾದ ಈ ದುಃಖಸಮುದ್ರದಲ್ಲಿ ನಾವೆಲ್ಲರೂ ಒಟ್ಟಿಗೆ ಮುಳುಗಿಹೋಗಬೇಕಾಗಿ ಬಂ

ದಿರುವುದಲ್ಲಾ! ಎಲೆ ತಾತನೆ! ನಿನ್ನ ಪರಮಪ್ರೀತಿಗೆ ಪಾತ್ರನಾದ ಈಭರತನು, ಇಲ್ಲಿ ತಡೆಯಲಾರದ ಸಂಕಟದಿಂದ ಕೂಗಿಡುತ್ತಿದ್ದರೂ ಆತನನ್ನು ಬಿಟ್ಟು ನೀನೆಲ್ಲಿಗೆ ಹೋಗುತ್ತಿರುವೆ? ನೀನು ಯಾವಾಗಲೂ ಲಾಲಿಸುತ್ತಿದ್ದ ಬಾಲನಾದ ಆತನಲ್ಲಿ ಹೀಗೆ ನೀನು ಉದಾಸೀನನಾಗಬಹುದೆ? ಅಯ್ಯೋ! ಭೋಜನಪದಾರ್ಥಗಳಲ್ಲಿಯಾಗಲಿ, ಪಾನದ್ರವ್ಯಗಳಲ್ಲಿಯಾಗಲಿ, ವಸ್ತ್ರಾಭರಣಾದಿಗಳಲ್ಲಿಯಾದಲಿ,ನಮನಮಗೆ ಇಷ್ಟವಾದುದನ್ನು ನಾವು ತೆಗೆದುಕೊಳ್ಳುವುದಕ್ಕೆ ನೀನು ಎಷ್ಟೋ ನಿರ್ಬಂಧಪಡಿಸಿಕೊಡುತಿದ್ದೆಯಲ್ಲವೆ? ಇನ್ನು ಮೇಲೆ ನಮ್ಮನ್ನು ಇಷ್ಟುವಾತ್ಸಲ್ಯದಿಂದ ಪೋಷಿಸುವವರಾರು? [1]ಧರ್ಮಜ್ಞನಾಗಿಯೂ, ಮಹಾತ್ಮನಾಗಿಯೂ ಇರುವ ನಿನ್ನಂತಹ ರಾಜನನ್ನಗಲಿಯೂ, ಈ ಭೂಮಿಯು ಸೀಳಿಹೋಗದಿರುವುದಲ್ಲಾ! ಇದನ್ನು ನೋಡಿದರೆ ಪ್ರಳಯಕಾಲದಲ್ಲಿಯೂ ಇದಕ್ಕೆ ನಾಶವಿಲ್ಲವೆಂದೇ ಎಣಿಸಬೇಕಾಗಿದೆ! ತಂದೆಯಾದ ನೀನೂ ಸ್ವರ್ಗಸ್ಥನಾಗಿ, ಅಣ್ಣನಾದ ರಾಮನೂ ಕಾಡುಪಾಲಾಗಿ ಹೊರಟುಹೋದಮೇಲೆ ಯಾರ ಬಲದಿಂದ ನಾನು ಬದುಕಿರಲಿ? ಈಗ ಅಗ್ನಿಯಲ್ಲಿ ಬಿದ್ದು ಪ್ರಾಣವನ್ನು ಕಳೆದುಕೊಳ್ಳಬೇಕಾದುದೊಂದಲ್ಲದೆ ನನಗೆ ಬೇರೆ ಗತಿಯಿಲ್ಲ! ಇಕ್ಷ್ವಾಕುವಂಶದವರಿಂದ ಪಾಲಿತವಾದ ಈ ಅಯೋಧ್ಯಾಪಟ್ಟಣವು ಹೀಗೆ ಹಾಳುಬಿದ್ದಿರುವಾಗ ಅಣ್ಣನನ್ನೂ ತೊರೆದು,ತಂದೆಯನ್ನೂಕಳೆದುಕೊಂಡು, ನಾನೆಷ್ಟುಮಾತ್ರಕ್ಕೂ ಪ್ರವೇಶಿಸಲಾರೆನು! ನಾನೂ ತಪೋವನಕ್ಕೇ ಹೋಗುವೆನು" ಎಂದು ಅಳುತಿದ್ದನು. ಭರತಶತ್ರುಘ್ನರಿಬ್ಬರೂ ಪ್ರಲಾಪಿಸುತ್ತಿರುವುದನ್ನು ನೋಡಿ, ಆತನೊಡನೆ ಹಿಂಬಾಲಿಸಿಬಂದಿದ್ದವರೆಲ್ಲರೂ ದುಃಖದಿಂದ ಅಳುತ್ತಿದ್ದರು. ಹೀಗೆ ಆ ಅಣ್ಣತಮ್ಮಂದಿರಿಬ್ಬರೂ ಅನೇಕವಿಧದಲ್ಲಿ ಬಹಳಪ್ರಲಾಪಿಸಿ,ಕೊಂಬನ್ನು ಮುರಿದುಕೊಂಡ ಎತ್ತಿನಂತೆ ಸಂಕಟಪಟ್ಟು, ನೆಲದಮೇಲೆ ಬಿದ್ದು ಅಳುತ್ತಿದ್ದರು. ಆಗ ಉತ್ತಮಸ್ವಭಾವವುಳ್ಳವನಾಗಿಯೂ, ಸರ್ವಜ್ಞನಾಗಿಯೂ, ದಶರಥನ ಕುಲಪುರೋಹಿತನಾಗಿಯೂ ಇರುವ ವಸಿಷ್ಠನು, ಭರತನನ್ನು ಕೈಹಿಡಿದೆತ್ತಿ ಕುಳ್ಳಿರಿಸಿ "ಎಲೈಪ್ರ

---

1 ಧರ್ಮಜ್ಞನಾಗಿಯೂ, ಮಹಾತ್ಮನಾಗಿಯೂ ಇರುವ ನಿನ್ನಂತಹ ರಾಜನನ್ನು ಅಗಲಿದಾಗ ಈ ಭೂಮಿಯು ಭೇದಿಸಿಹೋಗಬೇಕಾದುದೇ ನ್ಯಾಯವು. ಹೀಗಿದ್ದರೂ ಇ ಸ್ವಾಭಾವಿಕಸ್ಥಿತಿಯಲ್ಲಿರುವುದಾಶ್ಚರ್ಯವೆಂದು ಇಲ್ಲಿ ಅರ್ಥಾಂತರವು.

ಭುವೆ! ನಿನ್ನ ತಂದೆಯು ಗತಿಸಿ ಇದು [1]ಹದಿಮೂರನೆಯದಿನಲ್ಲವೆ? ಈಗ ನಡೆಸ ಬೇಕಾದ ಅಸ್ಥಿಸಂಚಯನವನ್ನು ಮಾಡುವುದಕ್ಕೆ ಏಕೆ ಸಾವಕಾಶಮಾ ಡುತ್ತಿರುವೆ? ಲೋಕದಲ್ಲಿ ಹಸಿವು ಬಾಯಾರಿಕೆಗಳು, ಶೋಕಮೋಹಗಳು, ಜರಾಮರಣಗಳು, ಎಂಬೀ ಮೂರುವಿಧವಾದ ದ್ವಂದ್ವಗಳೂ ಜಂತುಗಳಲ್ಲಿ ಸಾಮಾನ್ಯವಾಗಿ ಸಂಭವಿಸದೇ ಬಿಡವು. ಹೀಗೆ ಯಾರಿಂದಲೂ ತಪ್ಪಿಸುವುದ ಕ್ಕಾಗದ ಈ ವಿಷಯಗಳಿಗಾಗಿ ನೀನು ದುಃಖಿಸುತ್ತಿರುವುದುಚಿತವಲ್ಲ! ಏಳು!" ಎಂದನು. ತತ್ವಜ್ಞನಾದ ಸುಮಂತ್ರನೂ ಹಾಗೆಯೇ ಶತ್ರುಘ್ನನ ಬಳಿಗೆ ಬಂದು, ಆತನನ್ನೆತ್ತಿ ಕುಳ್ಳಿರಿಸಿ, ಅನೇಕಸಮಾಧಾನವಾಕ್ಯಗಳನ್ನು ಹೇಳಿ, ಪ್ರಾಣಿಗಳಿಗೆ ಜನನಮರಣಗಳೆರಡೂ ಸ್ವಾಭಾವಿಕವಾದುದರಿಂದ, ಅದನ್ನು ತಪ್ಪಿಸುವುದು ಯಾರಿಂದಲೂ ಸಾಧ್ಯವಲ್ಲವೆಂಬ ತತ್ವವನ್ನುಪದೇಶಿಸಿದನು. ಯಶಸ್ವಿಗಳಾದ! ಆ ರಾಜಕುಮಾರರಿಬ್ಬರೂ ಮನಸ್ಸಮಾಧಾನವನ್ನು ಮಾಡಿ ಕೊಂಡು ಮೇಲಕ್ಕೆದ್ದು, ಮಳೆಬಿಸಿಲುಗಳಿಂದ ಕಳೆಗೆಟ್ಟಿರುವ ಎರಡು ಇಂದ್ರ ಧ್ವಜಗಳಂತೆ ಕಾಣುತ್ತ, ಕೆಂಪಾದ ಕಣ್ಣುಗಳನ್ನೊರಸಿಕೊಂಡು ಕುಗ್ಗಿದ ಸ್ವರವುಳ್ಳವರಾಗಿದ್ದರು. ಅಲ್ಲಿದ್ದ ಮಂತ್ರಿಗಳೂ ಮುಂದಿನ ಅಸ್ಥಿಸಂಚ ಯನಾದಿಕಾರ್ಯಗಳಿಗೆ ಭರತ ಶತ್ರುಘ್ನರನ್ನು ತ್ವರೆಪಡಿಸುತಿದ್ದರು. ಇಲ್ಲಿಗೆ ಎಪ್ಪತ್ತೇಳನೆಯಸರ್ಗವು.

---

{ಶತ್ರುಘ್ನನು ಮಂಥರೆಯನ್ನು ಶಿಕ್ಷಿಸುವಾಗ ಕೈಕೇ ಯಿಯು ಆಕೆಯನ್ನು ಬಿಡಿಸಿದುದು.}

ಅಪರಕ್ರಿಯೆಗಳೆಲ್ಲವೂ ನಡೆದು ಎಲ್ಲರೂ ಮನೆಗೆ ಬಂದಮೇಲೆ, ಆ ಕ್ಷಣವೇ ರಾಮನಿರುವ ಸ್ಥಳಕ್ಕೆ ಹೊರಡಬೇಕೆಂದು ಪ್ರಯಾಣ ಸನ್ನದ್ಧ ನಾಗಿದ್ದ ಭರತನನ್ನು ನೋಡಿ ಶತ್ರುಘ್ನನು "ಅಣ್ಣಾ! ದುಃಖವು ಸಂಭವಿಸಿದಾ ಗ ಅವರವರ ದುಃಖವನ್ನು ನೀಗಿಸಿ ಸಮಸ್ತಪ್ರಾಣಿಗಳಿಗೂ ದಿಕ್ಕಾಗಿರಬಲ್ಲ ರಾ

---

I. ಹತ್ತುದಿವಸಗಳ ಮಧ್ಯದಲ್ಲಿ ಶಾಸ್ತ್ರವಿಹಿತವಾದ ಪ್ರಧಾನಾಸ್ಥಿಸಂಚಯನವ ನ್ನು ಮಾಡಿ, ಹದಿಮೂರನೆಯದಿನದಲ್ಲಿ ತದ್ದೇಶಾಚಾರದಿಂದ ಬಂದಸ್ಥಳಶೋಧನವುಮಾ ತ್ರ ಮಾಡಲ್ಪಟ್ಟುದರಿಂದ, ತ್ರಯೋದಶಾಹದಲ್ಲಿ ಅಸ್ಥಿಸಂಚಯನವನ್ನು ಮಾಡಬೇ ಕೆಂಬುದು ಸ್ಮೃತಿವಿರುದ್ಧವಲ್ಲವೆಂದೂ ಗ್ರಹಿಸಬಹುದು.

ಮನು, ತನಗೆ ದುಃಖವುಂಟಾದಾಗ ತನ್ನನ್ನು ತಾನು ರಕ್ಷಿಸಕೊಳ್ಳಲಾರನೇ ? ಅಂತಹ ರಾಮನು ಮಹಾಬಲಾಢ್ಯನಾಗಿದ್ದರೂ ಕೊನೆಗೆ ಒಬ್ಬ ಅಬಲೆ ಯಿಂದ ಕಾಡಿಗೆ ಓಡಿಸಲ್ಪಟ್ಟನಲ್ಲವೆ? ಇದಕ್ಕಿಂತಲೂ ಆಶ್ಚರ್ಯವೇನಿರುವುದು? ಒಂದುವೇಳೆ ರಾಮನು ತಂದೆಯಾಜ್ಞೆಗೆ ಕಟ್ಟುಬಿದ್ದು ಕಾಡಿಗೆ ಹೊರಟಿದ್ದ ರೂ ಇರಲಿ! ಬಲವಂತನಾಗಿಯೂ, ಪರಾಕ್ರಮವಂತನಾಗಿಯೂ ಪ್ರಸಿದ್ಧಿ ಹೊಂದಿದ ಲಕ್ಷ್ಮಣನೆಂಬವನೊಬ್ಬನು ಇಲ್ಲಿಯೇ ಇದ್ದನಲ್ಲವೆ? ಅತನಾದರೂ ಹೀಗೆ ಅಕಾರ್ಯದಲ್ಲಿ ಪ್ರವರ್ತಿಸಿದ ತಂದೆಯನ್ನು ನಿಗ್ರಹಿಸಿ ರಾಮನ ವನಪ್ರ ಯಾಣವನ್ನು ತಪ್ಪಿಸಬಾರದಾಗಿತ್ತೇ? ಹೆಂಡತಿಯ ಮಾತಿಗೆ ಮರುಳಾಗಿ ಉ ನ್ಮಾರ್ಗಕ್ಕೆ ಪ್ರವರ್ತಿಸಿದ ರಾಜನನ್ನು ಇಷ್ಟು ಅನರ್ಥಗಳುಂಟಾಗುವುದಕ್ಕೆ ಮೊದಲೇ ನಿಗ್ರಹಿಸಬೇಕಾಗಿತ್ತು!ಅವರೊಬ್ಬರೂ ನ್ಯಾಯಾನ್ಯಾಯಗಳನ್ನು ವಿಚಾರಿಸಸಿಲ್ಲವೆಂದೇ ಎಣಿಸಬೇಕಾಗಿವೆ" ಎಂದನು. ಶತ್ರುಘ್ನನು ಈ ಮಾ ತುಗಳನ್ನಾಡುತ್ತಿರುವಷ್ಟರಲ್ಲಿ, ಮಂಥರೆಯೆಂಬ ಆ ಗೂನಿಯು, ತಾನು ಸಂಕ ಲ್ಪಿಸಿದ್ದ ಭರತಾಭಿಷೇಕಕಾರ್ಯವನ್ನೇ ಇದಿರುನೋಡುತ್ತಿದ್ದು, ಈಭರತಶತ್ರು ಘ್ನರಿಬ್ಬರೂ ಹಿಂತಿರುಗಿ ಬಂದ ವೃತ್ತಾಂತವನ್ನು ಕೇಳಿ, ಸಂತೋಷದಿಂದ ತನ್ನಮೈಯ್ಯನ್ನು ಸರ್ವಾಭರಣಗಳಿಂದ ಅಲಂಕರಿಸಿಕೊಂಡು, ಆಕಸ್ಮಿಕವಾಗಿ ಈಭರತಶತ್ರುಘ್ನರಿದ್ದ ಮನೆಯ ಪೂರ್ವದಿಕ್ಕಿನ ಬಾಗಿಲಿಗೆ ಬಂದಳು. ಅಗ ಆ ಕೆಯ ಅಲಂಕಾರವನ್ನು ಹೇಳತಕ್ಕುದೇನು? ಘುಮಘುಮಿಸುತ್ತಿರುವ ಗಂಧ ವನ್ನು ಮೈಗೆ ಲೇಪಿಸಿಕೊಂಡು, ಕೈಕೇಯಿಯು ಆಗಾಗ ತನಗೆ ಉಡುಗೊರೆ ಯಾಗಿಕೊಟ್ಟ ರಾಜಯೋಗ್ಯವಾದ ವಸ್ತ್ರಗಳನ್ನುಟ್ಟು, ನವರತ್ನಖಚಿತವಾದ ಆಭರಣಗಳನ್ನು ತೊಟ್ಟು, ಬಹಳ ಬೆಡಗಿನಿಂದ ಬರುತಿದ್ದಳು. ವಿಚಿತ್ರ ವರ್ಣವುಳ್ಳ ನಡುವಿನ ಪಟ್ಟಿಯನ್ನೂ, ಇನ್ನೂ ವಿಧವಿಧವಾದ ಭೂಷ ಣಗಳನ್ನೂ ಧರಿಸಿಕೊಂಡಿದ್ದಳು. ಎಷ್ಟಾಭರಣಗಳನ್ನು ತೊಟ್ಟರೇನು?ಎಷ್ಟು ಅಮೂಲ್ಯವಾದ ವಸ್ತ್ರಗಳನ್ನುಟ್ಟರೇನು ? ಸ್ವಾಭಾವಿಕಸೌಂದರ್ಯವಿಲ್ಲದವ ರಿಗೆ ವಸ್ತ್ರಾಭರಣಗಳಿಂದ ಸೌಂದರ್ಯವನ್ನು ಹುಟ್ಟಿಸುವುದಕ್ಕಾದೀತೇ ? ಇ ಷ್ಟು ಆಭರಣಗಳನ್ನು ತೊಟ್ಟಿದ್ದರೂ, ಆಕೆಯು ಹಗ್ಗದಿಂದ ಬಿಗಿದು ಕಟ್ಟ ಲ್ಪಟ್ಟ ಕೋತಿಯಂತೆ ಕಾಣುತಿದ್ದಳು.ಪಾಪಬುದ್ಧಿಯುಳ್ಳ ಆಕೆಯನ್ನು ಕಂ

ಡೊಡನೆಯೇ ಅಲ್ಲಿ ಕಾವಲಿದ್ದ ದ್ವಾರಪಾಲಕರು ವೇಗದಿಂದ ಬಂದು, ನಿರ್ಘೃಣಳಾಗ ಆಕೆಯನ್ನು ಸೆಳೆದುಕೊಂಡು ಹೋಗಿ ಶತ್ರುಘ್ನನ ಮುಂದೆ ನಿಲ್ಲಿಸಿ "ಎಲೈ ರಾಜಕುಮಾರನೆ! ಇಷ್ಟು ಮಹಾನರ್ಥಗಳಿಗೂ ಇವಳೇ ಮೂಲವು. ಇವಳಿಂದಲೇ ರಾಮನು ಕಾಡುಪಾಲಾಗಿ ಹೋಗಬೇಕಾಯಿತು. ನಿನ್ನ ತಂದೆಯ ಸಾವಿಗೂ ಇವಳೇ ಕಾರಣವು. ಪರಮಘಾತುಕಿಯಾದ ಈ ಪಾಪಿನಿಯನ್ನು ಈಗ ನೀನು ನಿನ್ನ ಮನಸ್ಸಿಗೆ ಬಂದಂತೆ ಶಿಕ್ಷಿಸ ಬಹುದು!"ಎಂದರು. ಇದನ್ನು ಕೇಳಿ ಶತ್ರುಘ್ನನು ಬಹುದುಃಖಿತನಾಗಿ ಆ ಅಂತಃಪುರದಲ್ಲಿದ್ದವರೆಲ್ಲರನ್ನೂ ಕುರಿತು."ಯಾವಳಿಂದ ನನ್ನ ಒಡಹುಟ್ಟಿದವರಾದ ರಾಮಲಕ್ಷ್ಮಣರಿಗೂ, ತಂದೆಯಾದ ದಶರಥನಿಗೂ ಇಷ್ಟು ತೀವ್ರದುಃಖವುಂಟಾಯಿತೋ ಆಕೆಯು ತನ್ನ ಕ್ರೂರಕಾರ್ಯಕ್ಕೆ ತಕ್ಕ ಫಲವನ್ನು ಈಗಲೇ ಅನುಭವಿಸುವಳು! ನೀವೆಲ್ಲರೂ ನೋಡಿರಿ" ಎಂದು ಹೇಳಿ, ಸಖಿಯರನಡುವೆ ನಿಂತಿದ್ದ ಆಗೂನಿಯ ತಲೆಯಕೂದಲನ್ನು ಬಲಾತ್ಕಾರದಿಂದ ಹಿಡಿದು ಎಳೆಯುತ್ತಿದ್ದನು. ಆವರಣವೆಲ್ಲವೂ ಕಿತ್ತುಹೋಗುವಂತೆ ಆ ಮಂಥರೆಯು ಬಹುದೀನಧ್ವನಿಯಿಂದ ಗಟ್ಟಿಯಾಗಿ ಕೂಗಿಡುತ್ತಿದ್ದಳು ಆ ಮೇಲೆ ಮಂಥರೆಯ ಸಖಿಯರೆಲ್ಲರೂ ಭಯದಿಂದಲೂ, ವ್ಯಸನದಿಂದಲೂ ಕೂಡಿದವರಾಗಿ, ಶತ್ರುಘ್ನನಿಗೆ ಮಿತಿಮೀರಿ ಹೋಗಿರುವ ಕೋಪಾವೇಶವನ್ನು ನೋಡಿ ಹೆದರಿ ದಿಕ್ಕುದಿಕ್ಕಾಗಿ ಓಡಿಹೋದರು. ಆಗ ಇನ್ನುಕೆಲವು ಸಖಿಯರು, ಒಂದು ಕಡೆಯಲ್ಲಿ ಸೇರಿ,ಒಬ್ಬರಿಗೊಬ್ಬರು ಮುಖವನ್ನು ನೋಡುತ್ತಾ "ಈತನ ಸಂಕಲ್ಪವನ್ನು ನೋಡಿದರೆ ನಮ್ಮೆಲ್ಲರನ್ನೂ ನಿರ್ಮೂಲಮಾಡಿ ಬಿಡುವನೆಂದೇ ತೋರುವುದು! ಈಗ ನಮ್ಮಪ್ರಾಣವನ್ನುಳಿಸಿಕೊಳ್ಳಬೇಕಾದರೆ ನಾವೆಲ್ಲರೂ ಒಂದಾಗಿ ಸೇರಿ ಕೌಸಲ್ಯೆಯ ಕಾಲಿಗೆಬಿದ್ದು ಮರೆಹುಗುವುದೇ ಮೇಲು! ಆಕೆಯು ಬಹಳ ದಯಾಳುವು. ಮತ್ತು ಉದಾರಸ್ವಭಾವವುಳ್ಳವಳು. ಧರ್ಮಾಧರ್ಮಗಳನ್ನು ಚೆನ್ನಾಗಿ ತಿಳಿದವಳು. ಆದುದರಿಂದ ಯಶಸ್ವಿನಿಯಾದ ಆಕೆಯೇ ನಮಗೆ ಈಗ ಪ್ರಾಣರಕ್ಷಣೆಯನ್ನು ಮಾಡಬೇಕೇಹೊರತು ಬೇರೆ ಉಪಾಯವಿಲ್ಲವು.'' ಎಂದು ತಮ್ಮೊಳಗೆ ತಾವು ಆಲೋಚಿಸಿಕೊಂಡರು. ಇಷ್ಟರಲ್ಲಿ ಇತ್ತಲಾಗಿ ಶತ್ರುಘ್ನನು ಕೋಪದಿಂದ ಕೆಂಪಾದ ಕಣ್ಣುಳ್ಳವನಾಗಿ,ಆ ಗೂನಿಯನ್ನು ಹಿಡಿದೆಳೆಯುತ್ತಲೇ ಇದ್ದನು. ಆಕೆಯು "ಹೋ" ಎಂದು ಅರಚು



752. ಶತ್ರುಘ್ನನು ಮಂಥರೆಯನ್ನು ಶಿಕ್ಷಿಸಿದುದು. ಕೈಕೇಯಿಯು ಮಂಥರೆಯನ್ನು ಸಮಾಧಾನಪಡಿಸಿದುದು.

ತಿದ್ದಳು. ಅವಳ ತುರುಬನ್ನು ಹಿಡಿದು ಶತ್ರುಘ್ನನು ದರದರನೆ ನೆಲದಮೇಲೆ ಎಳೆದುಕೊಂಡು ಹೋಗುತ್ತಿದ್ದಾಗ,ಆ ಮಂಥರೆಯ ದೇಹದಲ್ಲಿದ್ದ ಒಡವೆಗಳೆಲ್ಲವೂ ಪುಡಿಪುಡಿಯಾಗಿ ಅಲ್ಲಲ್ಲಿ ಉದ್ದಕ್ಕೆ ಉದಿರಿಬಿದ್ದಿದ್ದುವು. ಈ ಆಭರಣದಪುಡಿಗಳಿಂದ ಆಮನೆಯ ಅಂಗಳವೆಲ್ಲವೂ, ನಕ್ಷತ್ರದ ಸಮೂಹಗಳಿಂದ ಕೂಡಿದ ಶರತ್ಕಾಲದ ಆಕಾಶದಂತೆ ಕಾಣಿಸುತಿತ್ತು. ಇಷ್ಟರಲ್ಲಿ ಆಕೆಯನ್ನು ಬಿಡಿಸಿಕೊಳ್ಳುವುದಕ್ಕಾಗಿ ಕೈಕೇಯಿಯು ಓಡಿಬರಲು, ಶತ್ರುಘ್ನನು ಆಕೆಯನ್ನು ಹುಂಕಾರದಿಂದ ಗಜರಿಸಿ, ಕ್ರೂರವಾಕ್ಯಗಳನ್ನಾಡುತ್ತ ಬಲಾತ್ಕಾರದಿಂದೆಳೆದುಕೊಂಡೇ ಹೋಗುತಿದ್ದನು. ಕೈಕೇಯಿಯು ಶತ್ರುಘ್ನನ ಕ್ರೂರವಾಕ್ಯಗಳಿಗೆ ಬಹಳವಾಗಿ ನೊಂದು, ಆತನು ತನ್ನನ್ನೂ ಏನುಮಾಡಿಬಿಡುವನೋ ಎಂಬ ಭಯದಿಂದ ತತ್ತಳಿಸುತ್ತ, ಭರತನ ಸಮೀಪಕ್ಕೆ ಬಂದು, ಆತನಲ್ಲಿ ಮರೆಹೊಕ್ಕಳು. ಆಗ ಭರತನು ಕೈಕೇಯಿಯ ದುರವಸ್ಥೆಯನ್ನೂ, ಶತ್ರುಘ್ನನ ಕೋಪಾವೇಶವನ್ನೂ ನೋಡಿ ಮರುಕಗೊಂಡು, ಆತನನ್ನು ಕುರಿತು “ವತ್ಸ ಶತ್ರುಘ್ನನೆ!ಸಮಸ್ತಭೂತಗಳಲ್ಲಿಯೂ ಸ್ತ್ರೀಯರನ್ನುಮಾತ್ರ ಕೊಲ್ಲಬಾರದು. ಅವರು ಯಾವ ತಪ್ಪನ್ನು ಮಾಡಿದರೂ ಮನ್ನಿಸಬೇಕು. ಇದೇ ಲೋಕಧರ್ಮವು.ಹೀಗಿಲ್ಲದಿದ್ದಪಕ್ಷದಲ್ಲಿ ನಾನು ಆಗಲೇ ಈ ಕೈಕೇಯಿಯನ್ನು ಕೊಂದು ಬಿಡುತಿದ್ದೆನು. ಈಕೆಯು ಪರಮದುಷ್ಟೆಯಾಗಿದ್ದರೂ, ಇವಳನ್ನು ಕೊಂದರೆ ಧಾರ್ಮಿಕನಾದ ರಾಮನು ನನ್ನನ್ನು ಮಾತೃಘಾತುಕನೆಂದು ನಿಂದಿಸುತಿದ್ದನು. ಆತನ ನಿಂದೆಗೆ ಒಳಗಾಗಬಾರದೆಂಬುದಕ್ಕಾಗಿಯೇ ಈ ಪಾಪಿನಿಯನ್ನು ನಾನು ಸುಮ್ಮನೆ ಬಿಟ್ಟುಬಿಟ್ಟೆನು. ಈ ಗೂನಿಯನ್ನು ಕೊಲ್ಲುವುದರಿಂದ ಮಾತೃಹತ್ಯಾದೋಷವಿಲ್ಲದಿದ್ದರೂ, ಈ ವಿಷಯವು ರಾಮನಿಗೆ ತಿಳಿದರೆ ಆತನು ಸ್ತ್ರೀಹತ್ಯೆಯನ್ನುಮಾಡಿದ ನಮ್ಮಿಬ್ಬರಿಗೂ ಮುಖಕೊಟ್ಟುಮಾತನ್ನೇ ಆಡಲಾರನು. ಇದು ನಿಜವು.” ಎಂದನು. ಈ ಮಾತನ್ನು ಕೇಳಿ ಶತ್ರುಘ್ನನು ಕೋಪವನ್ನು ತನ್ನಲ್ಲಿಯೇ ಅಡಗಿಸಿಕೊಂಡು ಆ ಮಂಥರೆಯನ್ನು ಬಿಟ್ಟುಬಿಟ್ಟನು. ಶತ್ರುಘ್ನನು ಕೈಬಿಟ್ಟೊಡನೆಯೇ ಮಂಥರೆಯು ಕೈಕೇಯಿಯ ಕಾಲಿಗೆಬಿದ್ದು, ದುಃಖದಿಂದ ನಿಟ್ಟುಸಿರನ್ನು ಬಿಡುತ್ತಾ ದೀನಸ್ವರದಿಂದ ಅಳುತಿದ್ದಳು.ಹೀಗೆ ಶತ್ರುಘ್ನನು ಹಿಡಿದೆಳೆದುದರಿಂದ ಮಂಥರೆಯು ಪ್ರಜ್ಞೆತಪ್ಪಿದವಳಂತೆ ಬಂದು ತನ್ನ ಕಾಲಮೇಲೆಬಿದ್ದು ಕ್ರೌಂಚಪಕ್ಷಿಯಂತೆ

ನಾಲ್ಕುಕಡೆಗಳನ್ನೂ ನೋಡಿ ದೈನ್ಯದಿಂದ ಕೂಗುತ್ತಿರಲು, ಕೈಕೇಯಿಯು ಮೃದುವಾಕ್ಯಗಳಿಂದ ಆಕೆಯನ್ನು ಅನೇಕವಿಧದಲ್ಲಿ ಸಮಾಧಾನಪಡಿಸಿದಳು. ಇಲ್ಲಿಗೆ ಎಪ್ಪತ್ತೆಂಟನೆಯಸರ್ಗವು.

---

ಭರತನು ರಾಜ್ಯವನ್ನು ಅಂಗೀಕರಿಸದೆ, ರಾಮನನ್ನೇ ಹಿಂತಿರುಗಿಸಿ ಕರೆತರುವುದಕ್ಕಾಗಿ ಕಾಡಿಗೆ ಹೊರಡಬೇಕೆಂದು ನಿಶ್ಚಯಿಸಿ, ಮಾರ್ಗವನ್ನು ಕ್ರಮಪಡಿಸುವಂತೆ ನಿಯಮಿಸಿದುದು.

ಆಮೇಲೆ ಹದಿನಾಲ್ಕನೆಯದಿನದ ಪ್ರಾತಃಕಾಲದಲ್ಲಿ, ರಾಜ್ಯಾಭಿಷೇಕವನ್ನು ನಿರ್ವಹಿಸತಕ್ಕ ಅಧಿಕಾರಿಗಳೆಲ್ಲರೂ ಸೇರಿಬಂದು ಭರತನನ್ನು ನೋಡಿ, "ನಮಗೆ ಪರಮಗುರುವಿನಂತಿದ್ದ ದಶರಥರಾಜನು, ತನ್ನ ಹಿರಿಯಮಗನಾದ ರಾಮನನ್ನೂ, ಬಲಾಢ್ಯನಾದ ಲಕ್ಷ್ಮಣನನ್ನೂ ಕಾಡಿಗೆ ಕಳುಹಿಸಿ! ತಾನೂ ಸ್ವರ್ಗಸ್ಥನಾದನು. ಎಲೈ ರಾಜಕುಮಾರನೆ! ಇನ್ನುಮೇಲೆ ಯಶಸ್ವಿಯಾದ ನೀನೇ ನಮಗೆ ರಾಜನಾಗಿದ್ದು ನಮ್ಮನ್ನು ಕಾಪಾಡಬೇಕು. ರಾಜ್ಯವನ್ನು ಇದುವರೆಗೆ ಅನಾಯಕವಾಗಿ ಬಿಟ್ಟಿದ್ದುದೇ ತಪ್ಪು! ಹೀಗಿದ್ದರೂ ದೈವಿಕವಾಗಿ ಇಲ್ಲಿನ ಪ್ರಜೆಗಳೊಬ್ಬರೂ ಪರಸ್ಪರ ದ್ರೋಹಚಿಂತೆಯಿಲ್ಲದೆ, ಯಾವ ಅಪರಾಧಗಳನ್ನೂ ನಡೆಸದೆ ಇದ್ದರು. ಅಭಿಷೇಕಸಾಮಗ್ರಿಗಳೆಲ್ಲವೂ ಯಥಾವತ್ತಾಗಿ ಸಿದ್ಧಪಡಿಸಲ್ಪಟ್ಟಿರುವುವು. ಮಂತ್ರಿಮೊದಲಾದವರೂ ಇತರಪ್ರಜೆಗಳೂ ನಿನ್ನನ್ನೇ ಇದಿರುನೋಡುತ್ತಿರುವರು. ಎಲೈ ಪುರುಷಶ್ರೇಷ್ಠನೆ! ನಿನ್ನ ಕುಲಕ್ರಮಾಗತವಾಗಿ ಬಂದಿರುವ ಈಸ್ಥಿರರಾಜ್ಯವನ್ನು ಪರಿಗ್ರಹಿಸಿ, ಅಭಿಷೇಕವನ್ನು ನಡೆಸಿಕೊಂಡು, ನಮ್ಮೆಲ್ಲರನ್ನೂ ಪಾಲಿಸು" ಎಂದರು. ನೀತಿಜ್ಞನಾದ ಭರತನು ಅಲ್ಲಿ ಸಿದ್ಧವಾಗಿದ್ದ ಅಭಿಷೇಕಸಾಮಗ್ರಿಗಳೆಲ್ಲವನ್ನೂ ಪ್ರದಕ್ಷಿಣಮಾಡಿ, ಅಭಿಷೇಕಕಾರ್ಯದಲ್ಲಿ ನಿಯಮಿಸಲ್ಪಟ್ಟ ಆ ಅಧಿಕಾರಿಗಳನ್ನು ನೋಡಿ, "ಎಲೈಪೂಜ್ಯರೆ! ನಮ್ಮ ವಂಶದಲ್ಲಿ ಜ್ಯೇಷ್ಠಪುತ್ರನೇ ರಾಜ್ಯಾಭಿಷೇಕವನ್ನು ವಹಿಸುವುದು ಕುಲಕ್ರಮಾಗತವಾಗಿ ಬಂದ ಧರ್ಮವಲ್ಲವೆ? ಹೀಗಿರುವಾಗಲೂ ಇದೆಲ್ಲವನ್ನೂ ತಿಳಿದ ನೀವು ನನ್ನೊಡನೆ ಈಮಾತುಗಳನ್ನಾಡಬಹುದೆ? ನಮಗೆ ಹಿರಿಯನಾದ ರಾಮನೇ ನಿಮ್ಮನ್ನು ಪಾಲಿಸುವುದಕ್ಕೆ

ತಕ್ಕರಾಜನು. ನಾನೇ ಆತನಿಗೆ ಪ್ರತಿಯಾಗಿ ಹದಿನಾಲ್ಕು ವರ್ಷಗಳವರೆಗೆ ಕಾಡಿನಲ್ಲಿದ್ದುಬರುವೆನು. ನಾನೇ ಹೋಗಿ ಆತನನ್ನು ಹಿಂತಿರುಗಿಸಿ ಕರೆತಂದು ರಾಜ್ಯದಲ್ಲಿರಿಸುವೆನು. ನಮ್ಮ ಸಮಸ್ತಸೈನ್ಯಗಳನ್ನೂ ಸಂಗಡಕರೆದುಕೊಂಡು ಹೋಗುವೆನು. ನಮ್ಮ ಚತುರಂಗಸೈನ್ಯವನ್ನೂ ಕರೆತರಿಸಿರಿ! ಈಗ ನೀವು ಅಭಿಷೇಕಾರ್ಥವಾಗಿ ಸಿದ್ಧಪಡಿಸಿರುವ ಸಮಸ್ತವಸ್ತುಗಳನ್ನೂ ನನ್ನ ಸಂಗಡ ಅಲ್ಲಿಗೇ ಸಾಗಿಸಿಕೊಂಡು ಹೋಗುವೆನು. ಸಂಸ್ಕರಿಸಲ್ಪಟ್ಟ ಆ ಸಾಮಗ್ರಿಗಳೆಲ್ಲ ವನ್ನೂ ತರಿಸಿರಿ! ಪೂಜ್ಯನಾದ ರಾಮನಿಗೆ ಅವನಿರತಕ್ಕ ವನದಲ್ಲಿಯೇ ಈ ರಾ ಜ್ಯದ ಪಟ್ಟಾಭಿಷೇಕವನ್ನುಮಾಡಿ, ಯಾಗಶಾಲೆಯಿಂದ ತ್ರೇತಾಗ್ನಿಯನ್ನು ತರುವಂತೆ ಅಭಿಷಿಕ್ತನಾದ ಆತನನ್ನೇ ಇಲ್ಲಿಗೆ ಕರೆತರುವೆನು. ಹೆಸರುಮಾ ತ್ರಕ್ಕೆ ನನಗೆ ತಾಯಿಯೆನಿಸಿಕೊಂಡಿರುವ ದುಷ್ಟೆಯಾದ ಈ ಕೈಕೇಯಿಯ ಕೋರಿಕೆಯನ್ನು ನಾನೆಂದಿಗೂ ಈಡೇರಿಸಲಾರೆನು. ಇವಳ ಕೋರಿಕೆಗೆ ವಿರು ದ್ಧವಾಗಿಯೇ ನಡೆಸಬೇಕೆಂಬುದು ನನ್ನ ಸಂಕಲ್ಪವು. ಅದಕ್ಕಾಗಿಯೇ ನಾನು ಕಾಡಿನಲ್ಲಿದ್ದು ಬಿಡುವೆನು. ರಾಮನೇ ರಾಜನಾಗಿರಲಿ! ಹಳ್ಳತಿಟ್ಟುಗಳನ್ನು ಸಮಮಾಡಿ, ದಾರಿಯನ್ನು ಕ್ರಮಪಡಿಸುವಂತೆ ಶಿಲ್ಪಿಗಳಿಗೆ ಆಜ್ಞಾಪಿಸಿರಿ! ಮತ್ತು ದಾರಿಯಲ್ಲಿ ದುರ್ಗಮವಾದ ಸ್ಥಳಗಳನ್ನು ಪರಿಶೋಧಿಸಿ ತಿಳಿದು, ಅವುಗಳನ್ನು ಸುರಕ್ಷಿತವಾಗಿ ದಾಟಿಸತಕ್ಕ ಕಾವಲುಗಾರರನ್ನು ಅಲ್ಲಲ್ಲಿ ನಿಯ ಮಿಸಿಡಿರಿ!"ಎಂದನು. ಹೀಗೆ ರಾಮನಿಗಾಗಿಯೇ ಮರುಕಗೊಂಡು ಆತನನ್ನು ಗೌ ರವಿಸಿ ಮಾತಾಡುತಿದ್ದ ಭರತನನ್ನು ನೋಡಿ ಅಲ್ಲಿದ್ದಜನರೆಲ್ಲರೂ "ಎಲೈ ರಾಜ ಪುತ್ರನೆ! ಸ್ವಪ್ರಯೋಜನವನ್ನು ಬಿಟ್ಟು ಹಿರಿಯಣ್ಣನಲ್ಲಿ ಇಷ್ಟು ಗೌರವ ಬುದ್ಧಿಯನ್ನು ತೋರಿಸುತ್ತಿರುವ ಮಹಾತ್ಮನಾದ ನಿನ್ನನ್ನು ಪದ್ಮಾಲಯೆ ಯಾದ ಲಕ್ಷ್ಮಿಯು ಎಡೆಬಿಡದೆ ಅನುವರ್ತಿಸುತ್ತಿರಬೇಕೆಂಬುದೇ ನಮ್ಮ ಶ್ರೇ ಯಃಪ್ರಾರ್ಥನೆಯು!"ಎಂದರು. ತನ್ನ ಕೈಗೆ ಸಿಕ್ಕಿದ ರಾಜ್ಯವನ್ನು ತನ್ನ ಅಣ್ಣ ನಿಗೇಕೊಡಿಸಬೇಕೆಂದು ದೃಢಸಂಕಲ್ಪವನ್ನು ಮಾಡಿರುವ ಆಭರತನ ಲೋ ಕೋತ್ತರವಾದ ಮಾತುಗಳನ್ನು ಕೇಳಿ, ಅಲ್ಲಿದ್ದ ಸಮಸ್ತಜನರೂ ಸಂತೋಷ ದಿಂದ ಆನಂದಬಾಷ್ಪವನ್ನು ಬಿಡುತಿದ್ದರು. ಆಗ ಅಲ್ಲಿದ್ದ ಅಧಿಕಾರಿಗಳೆಲ್ಲರೂ ಮಂತ್ರಿಗಳೊಡಗೂಡಿ, ಭರತನ ಮಾತಿಗೆ ಸಮಾಧಾನಗೊಂಡವರಾಗಿ, ಆತನ ನ್ನುಕುರಿತು "ಎಲೈ ರಾಜಪುತ್ರನೆ! ನಿನ್ನ ಆಜ್ಞೆಯಂತೆಯೇ ಮಾರ್ಗವನ್ನು ಕ್ರ

ಮಪಡಿಸುವುದಕ್ಕಾಗಿ ರಾಜಭಕ್ತಿಯುಳ್ಳ ರಕ್ಷಕರನ್ನೂ, ಶಿಲ್ಪಿಗಳನ್ನೂ ಸಿದ್ಧಪಡಿಸಿರುವೆವು." ಎಂದರು. ಇಲ್ಲಿಗೆ ಎಪ್ಪತ್ತೊಂಬತ್ತನೆಯಸರ್ಗವು.

---

{ ಅಯೋಧ್ಯೆಯಿಂದ ಗಂಗಾನದಿಯವರೆಗೂ ಮಾರ್ಗವನ್ನು ಕ್ರಮಪಡಿಸಿದುದು. }

ಆಮೇಲೆ ಅಲ್ಲಲ್ಲಿ ಭೂಪ್ರದೇಶಗಳ ಸ್ಥಿತಿಯನ್ನು ತಿಳಿದವರೂ, ಸೂತ್ರಕಾರ್ಯಗಳನ್ನು ತಿಳಿದು ಅಲ್ಲಲ್ಲಿ ಆಳವಾದ ವಾಪೀಕೂಪಾದಿಗಳಿಂದ ನೀರುಸೇದುವುದಕ್ಕೆ ತಕ್ಕ ಸಾಧನಗಳನ್ನು ಸಿದ್ಧಪಡಿಸುವವರೂ, ನೇಗೆಯವರೂ, ತಮ್ಮತಮ್ಮ ಕಾರ್ಯಗಳನ್ನು ಅಕ್ಕರೆಯಿಂದ ನಡೆಸಿ ನಿರ್ವಹಿಸತಕ್ಕ ಶೂರರಾದ ರಕ್ಷಕರೂ, ನೆಲದಮಣ್ಣನ್ನು ತೋಡತಕ್ಕ ಕೆಲಸಗಾರರೂ, ಯಂತ್ರಗಳನ್ನು ನಿರ್ಮಿಸತಕ್ಕವರೂ, ಕೂಲಿಯವರೂ, ಬಡಗಿಗಳೂ, ಬಲೆಗಾರರೂ, ನದೀತರಣಾದಿಗಳಿಗೆ ಬೇಕಾದ ಯಂತ್ರಗಳನ್ನು ನಿರ್ಮಿಸತಕ್ಕವರೂ, ಮರಗೆಲಸದವರೂ, ಮಾರ್ಗಗಳನ್ನು ಕ್ರಮಪಡಿಸುವುದರಲ್ಲಿ ಚಾತುರ್ಯವುಳ್ಳವರೂ, ಮರಗಳನ್ನು ಕಡಿಯತಕ್ಕವರೂ, ಬಾವಿಗಳನ್ನು ತೋಡತಕ್ಕವರೂ, ಸುಣ್ಣವನ್ನು ಬಳಿಯುವವರೂ, ಮೇದರೂ, ಮಾರ್ಗವನ್ನು ಪರೀಕ್ಷಿಸಿನೋಡತಕ್ಕವರೂ, ಇನ್ನೂ ಆಯಾಕಾರ್ಯಗಳಲ್ಲಿ ವಿಶೇಷಾನುಭವವುಳ್ಳ ಕೆಲಸಗಾರರೂ ಮುಂದಾಗಿ ಹೊರಟು ದಾರಿಯನ್ನು ಸರಿಮಾಡತೊಡಗಿದರು. ಹೀಗೆ ಅಪಾರವಾದ ಜನಸಮೂಹವು ಅತ್ಯುತ್ಸಾಹದಿಂದ ಕೆಲಸಮಾಡುತ್ತ, ದಾರಿಯಲ್ಲಿ ಉದ್ದಕ್ಕೂ ಸಂಭ್ರಮದಿಂದ ಓಡಾಡುತ್ತಿರಲು, ಪರ್ವಕಾಲದಲ್ಲಿ ಪ್ರವಾಹವೇಗದಿಂದ ಉಕ್ಕುತ್ತಿರುವ ಮಹಾಸಮುದ್ರದಂತೆ ತೋರುತಿತ್ತು. ಹೀಗೆ ಮಾರ್ಗಗಳನ್ನು ಸರಿಮಾಡುವುದರಲ್ಲಿ ನಿಪುಣರಾದ ಕೆಲಸಗಾರರೆಲ್ಲರೂ ತಕ್ಕ ಸಾಧನಗಳನ್ನು ಹಿಡಿದು, ತಮ್ಮತಮ್ಮ ಭಾಗಕ್ಕೆ ನಿರ್ಣಯಿಸಲ್ಪಟ್ಟ ಭೂಪ್ರದೇಶಗಳನ್ನು ಸರಿಮಾಡುತ್ತ ಮುಂದೆಮುಂದೆ ಹೋಗುತಿದ್ದರು. ಅವರು ಅಲ್ಲಲ್ಲಿ ದಾರಿಗೆ ಅಡ್ಡಲಾಗಿದ್ದ ಕೊಂಬೆಗಳನ್ನೂ, ಬಳ್ಳಿಗಳನ್ನೂ, ಪೊದೆಗಳನ್ನೂ, ಮರಗಳನ್ನೂ, ಕಲ್ಲುಗಳನ್ನೂ, ಕಡಿದೊತ್ತರಿಸುತ್ತ, ಮಾರ್ಗವನ್ನು ಸರಿಮಾಡುತಿದ್ದರು. ಕೆಲವರು ವೃಕ್ಷವಿಲ್ಲದ ಕಡೆಗಳಲ್ಲಿ ನೆಳಲಿಗಾಗಿ ಸಾಲುಮರಗಳನ್ನು ನಡುತಿದ್ದರು. ಮತ್ತೆ ಕೆಲವರು ಕೊಡಲಿಗಳಿಂದಲೂ, ಕಲ್ಲುಳಿಗಳಿಂ

ದಲೂ, ಕುಡುಗೋಲುಗಳಿಂದಲೂ ದಾರಿಗಡ್ಡವಾಗಿದ್ದ ಮುಳ್ಳು ಮೊದಲಾ ದುವುಗಳನ್ನು ತೆಗೆದುಹಾಕುತ್ತಿದ್ದರು. ಇನ್ನು ಕೆಲವರು ಅಲ್ಲಲ್ಲಿ ದಾರಿಗಡ್ಡ ಲಾಗಿ ಬೆಳೆದು ಬಲವಾಗಿ ನಾಟಿಕೊಂಡಿರುವ ಹುಲ್ಲು ಕಡ್ಡಿಮೊದಲಾದುವು ಗಳಿಗೆ ಬೆಂಕಿಯಿಟ್ಟು ಅವುಗಳನ್ನು ಸುಡುತಿದ್ದರು. ಕೆಲವರು ದುರ್ಗಮವಾದ ಸ್ಥಳಗಳನ್ನು ಬಹುಪ್ರಯತ್ನಪಟ್ಟು ಸರಿಮಾಡುತಿದ್ದರು. ಮತ್ತೆ ಕೆಲವರು ಅಲ್ಲಲ್ಲಿ ಆಳವಾದ ಬಾವಿಗಳನ್ನೂ, ವಿಸ್ತಾರವಾದ ಹಳ್ಳಗಳನ್ನೂ ಮಣ್ಣಿನಿಂದ ಮುಚ್ಚುತಿದ್ದರು. ಹಾಗೆಯೇ ಕೆಲವರು ತಗ್ಗುನೆಲವನ್ನು ಸಮಮಾಡುತಿ ದ್ದರು. ಅಲ್ಲಲ್ಲಿ ನದಿಗಳನ್ನು ದಾಟುವುದಕ್ಕಾಗಿ ಸೇತುವೆ ಮೊದಲಾದ ಕಟ್ಟಡ ಗಳನ್ನು ಕಟ್ಟಬೇಕಾದ ಸ್ಥಳಗಳಲ್ಲಿ ಅವುಗಳನ್ನು ಕಟ್ಟುತ್ತ, ಒಡೆಯಬೇ ಕಾದ ದಿಣ್ಣೆಗಳನ್ನೊಡೆಯುತ್ತ, ಸೀಳಬೇಕಾದ ಕಡೆಯಲ್ಲಿ ಸೀಳುತ್ತ, ಆಯಾ ಪ್ರದೇಶಗಳನ್ನು ಸರಿಮಾಡುತ್ತಿದ್ದರು. ಅಲ್ಲಲ್ಲಿ ಸೇನೆಗಳಿಗೆ ತಕ್ಕಂತೆ ಜಲ ಸಮೃದ್ಧಿಯನ್ನುಂಟು ಮಾಡುವುದಕ್ಕಾಗಿ, ದಾರಿಯಲ್ಲಿ ಹರಿಯುತಿದ್ದ ಸಣ್ಣ ಸಣ್ಣ ಪ್ರವಾಹಗಳಿಗೆ ಅಣೆಕಟ್ಟನ್ನು ಕಟ್ಟಿ, ನೀರನ್ನು ತಡೆದು, ನಿಮಿಷಮಾತ್ರ ದಲ್ಲಿ ದೊಡ್ಡ ಸಮುದ್ರದಂತೆ ಮಾಡಿಟ್ಟರು. ನೀರಿಲ್ಲದ ಕಡೆಗಳಲ್ಲಿ ಅತ್ಯುತ್ತ ಮವಾದ ನೀರು ಸಿಕ್ಕುವಂತೆ ಬಾವಿಗಳನ್ನು ತೋಡಿ, ಅವುಗಳಿಗೆ ಸುಲಭವಾಗಿ ಇಳಿದು ಹೋಗುವಂತೆ ಸೋಪಾನಗಳನ್ನೂ ಮಾಡಿಟ್ಟರು. ಬಹುಶೀಘ್ರ ದಲ್ಲಿಯೇ ದಾರಿಯು ಕ್ರಮಪಡಿಸಲ್ಪಟ್ಟಿತು. ಭರತನ ಸೈನ್ಯವು ನಡೆದುಬರ ತಕ್ಕದಾರಿಯಲ್ಲಿ ಉದ್ದಕ್ಕೂ ನೆಲದಮೇಲೆ ಸುಣ್ಣದ ತಿಳಿಯನ್ನು ಚೆಲ್ಲಿದ್ದರು. ಪುಷ್ಪಫಲಭರಿತವಾದ ಸಾಲುಮರಗಳನ್ನೇ ಉದ್ದಕ್ಕೂ ನಟ್ಟಿದ್ದರು. ಆ ಮರ ಗಳ ಮೇಲೆ ಮಕರಂದಪಾನದಿಂದ ಮದಿಸಿದ ಪಕ್ಷಿಗಳೆಲ್ಲವೂ ಕಿವಿಗಿಂಪಾಗಿ ಕೂಗುತಿದ್ದುವು. ದಾರಿಯಉದ್ದಕ್ಕೂ ಪತಾಕೆಗಳನ್ನು ನಾಟಿದ್ದರು. ಉದ್ದ ಕ್ಕೂ ಸುಗಂಧಶೀತಲವಾದ ನೀರನ್ನು ಚೆಲ್ಲಿ ಪುಷ್ಪಗಳನ್ನು ಉದಿರಿಸಿದ್ದರು. ಆಮಾರ್ಗವು ದೇವಲೋಕದ ದಾರಿಯಂತೆಯೇ ಅತಿಮನೋಹರವಾಗಿ ಪ್ರ ಕಾಶಿಸುತಿತ್ತು. ಹೀಗೆ ದಾರಿಯು ಕ್ರಮಪಟ್ಟಮೇಲೆ, ಅಲ್ಲಲ್ಲಿ ವಿಶ್ರಾಂತಿಗಾಗಿ, ಶಿಬಿರಗಳನ್ನು ನಿರ್ಮಿಸುವುದರಲ್ಲಿ ಸಮರ್ಥರಾದ ಕೆಲಸಗಾರರೆಲ್ಲರೂ ಒಂದಾಗಿ ಕಲೆತು, ರಮಣೀಯವಾದ ಸ್ಥಳಗಳನ್ನು ನೋಡಿ, ರುಚಿರುಚಿಯಾದ ಫಲಗಳ ಸಮೃದ್ಧಿಯುಳ್ಳ ಅನುಕೂಲವಾದ ಪ್ರದೇಶಗಳಲ್ಲಿ, ಮಹಾತ್ಮನಾದ ಭರ

ತನ ಮನೋಭಿಪ್ರಾಯವನ್ನನುಸರಿಸಿ ಬಿಡಾರಗಳನ್ನು ಮಾಡಿಟ್ಟರು. ಅವು ಗಳಿಗೆ ಮೇಲುಕಟ್ಟು ಮೊದಲಾದ ವಿಚಿತ್ರಾಲಂಕಾರಗಳನ್ನೂ ಮಾಡಿಟ್ಟರು. ವಾಸ್ತುಶಾಸ್ತ್ರವನ್ನು ಚೆನ್ನಾಗಿ ಬಲ್ಲ ಶಿಲ್ಪಿಗಳು, ಭರತನ ವಾಸಾರ್ಥವಾಗಿ ಪ್ರಶಸ್ತವಾದ ಶುಭದಿನಮುಹೂರ್ತಗಳನ್ನು ನೋಡಿ, ನಿವೇಶನಗಳನ್ನು ಕಟ್ಟಿದರು. ಅದರ ನೆಲಕ್ಕೆಲ್ಲಾ ಸಣ್ಣಮರಳನ್ನು ಹರಡಿ, ಅದರ ಸುತ್ತಲೂ ಕಾಲುವೆಯನ್ನಗೆದು, ಅದರೊಳಗಡೆಯಲ್ಲಿಯೇ ವಿನೋದಸಂಚಾರಾರ್ಥ ವಾದ ಬೀದಿಗಳನ್ನೂ ಮಾಡಿಟ್ಟರು. ಅದರ ಸನ್ನಿವೇಶವು ಇಂದ್ರಕೀಲಪ ರ್ವತದಂತೆ ಅತಿಮನೋಹರವಾಗಿ ಕಾಣುತಿತ್ತು. ಅದರಲ್ಲಿಯೇ ಅಲ್ಲಲ್ಲಿ ಪ್ರಾ ಸಾದಗಳೂ, ಉಪ್ಪರಿಗೆಗಳೂ, ಗೋಪುರಗಳೂ, ಪ್ರಾಕಾರಗಳೂ ಕಂಗೊ ಳಿಸುತಿದ್ದುವು. ನಾಲ್ಕುಕಡೆಗಳೂ ಧ್ವಜಪತಾಕೆಗಳಿಂದ ಅಲಂಕರಿಸಲ್ಪಟ್ಟಿ ದ್ದುವು. ಅಲ್ಲಲ್ಲಿ ರಾಜಮಾರ್ಗಗಳನ್ನು ಮಾಡಿದ್ದರು. ಅದರ ಮೇಲುಮನೆಗ ಳೆಲ್ಲವೂ, ಆಕಾಶವನ್ನು ವ್ಯಾಪಿಸಿದಂತೆ ಅತ್ಯುನ್ನತಗಳಾಗಿ ಕಾಣುತ್ತ, ಇಂ ದ್ರಪುರದಂತೆಯೇ ಭ್ರಾಂತಿಯನ್ನುಂಟುಮಾಡುತಿದ್ದುವು. ನಾನಾವಿಧವೃಕ್ಷ ಸಮೂಹಗಳಿಂದಲೂ, ನಿರ್ಮಲವಾದ ನೀರಿನ ಸಮೃದ್ಧಿಯಿಂದಲೂ, ಅಂದ ವಾದ ಮೀನುಗಳಿಂದಲೂ ಕೂಡಿದ ಗಂಗಾನದಿಯವರೆಗೂ ಹೀಗೆ ಅಲ್ಲಲ್ಲಿ ಸಾಲಾಗಿ ಶಿಬಿರಗಳು ನಿರ್ಮಿಸಲ್ಪಟ್ಟಿದ್ದುವು. ರಾತ್ರಿಯಲ್ಲಿ ಚಂದ್ರನಿಂದ ಲೂ, ನಕ್ಷತ್ರಸಮೂಹದಿಂದಲೂ ಕೂಡಿ ಪ್ರಕಾಶಿಸುವ ನಿರ್ಮಲವಾದ ಗಗನಪ್ರದೇಶದಂತೆ, ಸಮರ್ಥರಾದ ಶಿಲ್ಪಿಗಳಿಂದ ನಿರ್ಮಿಸಲ್ಪಟ್ಟ ಆಮಾ ರ್ಗವು ಅತಿಮನೋಹರವಾಗಿ ತೋರುತಿತ್ತು. ಇಲ್ಲಿಗೆ ಎಂಬತ್ತನೆಯ ಸರ್ಗವು.

---

{ ಭರತನ ಶೋಕವು. ವಸಿಷ್ಠನು ಸುಮಂತ್ರನನ್ನು ಕ ಳುಹಿಸಿ ಭರತಶತ್ರುಘ್ನರನ್ನು ರಾಜಸಭೆಗೆ ಕರೆಸಿದುದು }

ಹೀಗೆ ಇತ್ತಲಾಗಿ ರಾಮನನ್ನು ಕರೆತರಬೇಕೆಂಬ ಮಹೋತ್ಸಾ ಹವೂ, ಅತ್ತಲಾಗಿ ವಸಿಷ್ಠನು ಭರತಾಭಿಷೇಕಕ್ಕಾಗಿ ನಡೆಸಿದ ನಾಂದೀಕಾ ರ್ಯವೂ ಆರಂಭಿಸಿರಲು, ಆದಿನದ ಅಪರರಾತ್ರಿಯಲ್ಲಿ ವಂದಿಮಾಗಧರೆಲ್ಲರೂ

ಬಂದು, ಮಂಗಳಸ್ತುತಿಗಳಿಂದ ಭರತನನ್ನು ಸ್ತೋತ್ರಮಾಡಲಾರಂಭಿಸಿದರು. ಯಾಮಸೂಚಕವಾದ ದುಂದುಭಿವಾದ್ಯಗಳು ಸುವರ್ಣಮಯವಾದ ದಂಡದಿಂದ ನುಡಿಸಲ್ಪಡುತಿದ್ದುವು. ಅಲ್ಲಲ್ಲಿ ಶಂಖಗಳನ್ನು ಊದುತಿದ್ದರು. ಕಹಳೆ ಮೊದಲಾದ ನಾನಾವಿಧವಾದ್ಯಗಳನ್ನೂ ನುಡಿಸುತಿದ್ದರು. ಈ ವಾದ್ಯಧ್ವನಿಗಳು ಆಕಾಶವನ್ನು ತುಂಬುವಹಾಗೆ ಸುತ್ತಲೂ ವ್ಯಾಪಿಸಿದುವು. ಈಮಹೋತ್ಸಾಹವು ಭರತನಿಗೆ ಪೂರ್ವಸ್ಮರಣೆಯನ್ನು ತಂದು, ಆತನ ದುಃಖವನ್ನು ಪುನಃ ಮರುಕೊಳಿಸುವಹಾಗೆ ಮಾಡಿತು. ಆಗಲೇ ಭರತನು ಆ ಸ್ತುತಿಪಾಠಕರನ್ನು ತಡೆದು, ವಾದ್ಯಗಳೆಲ್ಲವನ್ನೂ ನಿಲ್ಲಿಸುವಂತಾಜ್ಞಾಪಿಸಿ,"ನನ್ನನ್ನೇಕೆ ರಾಜನಂತೆ ಸ್ತೋತ್ರಮಾಡುವಿರಿ? ನಾನು ರಾಜನಲ್ಲ! ನಿಲ್ಲಿಸಿರಿ!" ಎಂದುಹೇಳಿ, ಆಮೇಲೆ ಶತ್ರುಘ್ನನನ್ನು ನೋಡಿ, "ವತ್ಸ ಶತ್ರುಘ್ನನೆ! ಕೈಕೇಯಿಯು ಈ ಪ್ರಪಂಚಕ್ಕೇ ಕೇಡುಂಟಾಗುವಂತೆ ಎಂತಹ ಮಹಾಪಕಾರವನ್ನುಂಟುಮಾಡಿಬಿಟ್ಟಳು! . ನೋಡಿದೆಯಾ ? ಅವಳಿಂದಲ್ಲವೇ ನಮ್ಮರಾಜನೂ ನಮ್ಮನ್ನು ಇಷ್ಟುದು.ಖಕ್ಕೆ ಭಾಗಿಗಳನ್ನಾಗಿಮಾಡಿ,ತಾನೂ ಹೊರಟುಹೋದನು? ಮಹಾತ್ಮನಾದ ನಮ್ಮರಾಜನನ್ನು ಆಶ್ರಯಿಸಿಕೊಂಡಿದ್ದ ಈ ನಮ್ಮ ಇಕ್ಷ್ವಾಕುವಂಶದ ರಾಜಲಕ್ಷ್ಮಿಯೂ ಈಗ ತಕ್ಕ ಆಶ್ರಯವಿಲ್ಲದುದಕ್ಕಾಗಿ ನಾವಿಕನಿಲ್ಲದ ದೋಣಿಯಂತೆ ಆಲೆದಾಡಬೇಕಾಯಿತು. ನಮ್ಮೆಲ್ಲರಿಗೂ ಮುಖ್ಯನಾದ ರಾಮನೂ ಕಾಡಿಗೆ ಕಳುಹಿಸಲ್ಪಟ್ಟನು. ಈ ಅನರ್ಥಗಳೆಲ್ಲಕ್ಕೂ ಧರ್ಮಹೀನೆಯಾದ ಕೈಕೇಯಿಯೇ ಮೂಲವು." ಎಂದನು. ಹೀಗೆಂದು ಗೋಳಿಡುತ್ತ ಪ್ರಜ್ಞೆತಪ್ಪಿದ ಭರತನನ್ನು ನೋಡಿ,ಅಲ್ಲಿದ್ದ ರಾಜಸ್ತ್ರೀಯರೆಲ್ಲರೂ ದುಃಖದಿಂದ ದೀನವಾಗಿ ಪ್ರಲಾಪಿಸತೊಡಗಿದರು. ಭರತನು ಇತ್ತಲಾಗಿ ಹೀಗೆ ಪ್ರಲಾಪಿಸುತ್ತಿರಲು, ರಾಜಧರ್ಮಗಳೆಲ್ಲವನ್ನೂ ಚೆನ್ನಾಗಿ ಬಲ್ಲ ವಸಿಷ್ಠನು,ಅತ್ತಲಾಗಿ ರಾಜಸಭೆಗೆಹೋದನು.ಮಹಾಯಶಸ್ವಿಯಾದ ಆತನು ಸುವರ್ಣಮಯವಾಗಿಯೂ,ಅತಿಮನೋಹರವಾಗಿಯೂ, ರತ್ನಾಲಂಕೃತವಾಗಿಯೂ,ಸುಧರ್ಮಾಸಭೆಯಂತೆ ಅತಿಮನೋಹರವಾಗಿಯೂ ಇದ್ದಆಸಭೆಯನ್ನು ಶಿಷ್ಯಗಣದಿಂದ ಕೂಡಿ ಪ್ರವೇಶಿಸಿ,ಅಲ್ಲಿ ಮೃದುವಾದಮೇಲುಹೊದ್ದಿಕೆಯಿಂದಕೂಡಿದ ಒಂದು ಸುವರ್ಣಪೀಠದಲ್ಲಿ ಕುಳಿತನು.ಆಮೇಲೆ ಸಮಸ್ತವೇದಗಳನ್ನೂ ತಿಳಿದ ಆಮಹಾತ್ಮನು,ಅಲ್ಲಿದ್ದ ದೂತರನ್ನು ಕಂಡು,ಅ

ಯೋಧ್ಯೆಯಲ್ಲಿರತಕ್ಕ ಬ್ರಾಹ್ಮಣೋತ್ತಮರನ್ನೂ, ಕ್ಷತ್ರಿಯರನ್ನೂ, ವೈಶ್ಯರನ್ನೂ, ಮಂತ್ರಿಗಳನ್ನೂ, ಆಯಾಪಂಗಡಗಳಲ್ಲಿ ಪ್ರಮುಖರಾದವರನ್ನೂ ಕೂಡಲೇ ಕರೆತರುವಂತೆ ಆಜ್ಞಾಪಿಸಿದನು. ಹಾಗೆಯೇ ರಾಜಪುತ್ರರಾದ ಭರತಶತ್ರುಘ್ನರನ್ನೂ, ಯುಧಾಜಿತ್ತನ್ನೂ, ಸುಮಂತ್ರನನ್ನೂ, ಇನ್ನೂ ರಾಜ್ಯಕ್ಕೆ ಹಿತೈಷಿಗಳಾದವರು ಯಾರುಯಾರುಂಟೋ ಅವರೆಲ್ಲರನ್ನೂ ಆಸಭೆಗೆ ಕರೆತರುವಂತೆ ನಿಯಮಿಸಿದನು. ಹೀಗೆ ವಸಿಷ್ಠನು ಆಗಿನ ಕಾರ್ಯಾತುರವನ್ನು ತಿಳಿಸಿ ದೂತರನ್ನು ತ್ವರೆಪಡಿಸಿದೊಡನೆಯೇ,! ಪುರವಾಸಿಗಳನೇಕರು ತಮ್ಮ ತಮ್ಮ ಸ್ಥಿತಿಗೆ ತಕ್ಕಂತೆ ಆನೆಗಳನ್ನೂ, ಕುದುರೆಗಳನ್ನೂ, ರಥಗಳನ್ನೂ ಏರಿ, ರಾಜಸಭೆಗೆಹೊರಟು ಬರುತ್ತಿದ್ದರು. ಆಗ ಅಯೋಧ್ಯೆಯಲ್ಲಿ ದೊಡ್ಡ ಕೋಲಾಹಲವುಂಟಾಯಿತು. ಅವರೆಲ್ಲರೂ ಬಂದು ಸೇರಿದಮೇಲೆ ಭರತನೂ ರಾಜಸಭೆಯನ್ನು ಪ್ರವೇಶಿಸಿದನು. ಸಭಾಪ್ರವೇಶವನ್ನು ಮಾಡುತಿದ್ದ ಭರತನನ್ನು ನೋಡಿ ಪ್ರಜೆಗಳೆಲ್ಲರೂ ಅತ್ಯುತ್ಸಾಹಗೊಂಡವರಾಗಿ, ಮೊದಲು ದಶರಥನನ್ನು ಗೌರವಿಸುತಿದ್ದಂತೆಯೇ ಆತನನ್ನೂ ಗೌರವಿಸುತ್ತ, ದೇವತೆಗಳು ಇಂದ್ರನನ್ನು ಆದರಿಸುವಂತೆ ಆತನನ್ನೂ ಆದರಿಸಿ ಬರಮಾಡಿಕೊಂಡರು. ದೊಡ್ಡಮತ್ಸ್ಯಗಳಿಂದಲೂ, ಮಹಾಗಜದಿಂದಲೂ ಕೂಡಿ, ನಿಶ್ಚಲವಾದ ನೀರಿನಿಂದ ತುಂಬಿ, ರತ್ನಗಳಿಂದಲೂ ಶಂಖಗಳಿಂದಲೂ, ಮಕರಗಳಿಂದಲೂ ಪ್ರಕಾಶಿಸುವ ದೊಡ್ಡಮಡುವಿನಂತೆ, ದಶರಥಪುತ್ರರಾದ ಭರತಶತ್ರುಘ್ನರಿಂದಲೂ, ವಸಿಷ್ಠನಿಂದಲೂ, ಸುಮಂತ್ರಾದಿಗಳಿಂದಲೂ ಕೂಡಿದ ಆ ಮಹಾಸಭೆಯು, ಮೊದಲು ದಶರಥರಾಜನಿದ್ದಾಗ ಹೇಗೆ ಪ್ರಕಾಶಿಸುತಿತ್ತೋ, ಹಾಗೆಯೇ ನೇತ್ರಾನಂದಕರವಾಗಿತ್ತು. ಇಲ್ಲಿಗೆ ಎಂಬತ್ತೊಂದನೆಯ ಸರ್ಗವು.

---

{ಭರತನು ರಾಜ್ಯವನ್ನೊಲ್ಲದೆ ಪೌರರೊಡಗೂಡಿ ರಾಮನಿರುವ ಕಾಡಿಗೆ ಪ್ರಯಾಣಮಾಡಿದುದು.}

ಆಗ ಧೀಮಂತನಾದ ಭರತನು ಅನೇಕಸಜ್ಜನಸಮೂಹದಿಂದ ತುಂಬಿ ಸ್ತಬ್ಧವಾಗಿದ್ದ ಆ ಸಭಾಸ್ಥಾನವನ್ನು, ಪೂರ್ಣಚಂದ್ರನು ಗಗನಪ್ರದೇಶವನ್ನು

ಹೇಗೋ ಹಾಗೆ ಪ್ರವೇಶಿಸಿ, ಸುತ್ತಲೂ ಕಣ್ಣಿಟ್ಟು ನೋಡಿದನು. ಅಲ್ಲಿ ಅನೇಕಮಹನೀಯರು ತಮತಮಗೆ ಉಚಿತವಾದ ಆಸನಗಳಲ್ಲಿ ಕುಳಿತಿದ್ದರು. ಅವರವರ ಅಮೂಲ್ಯವಾದ ವಸ್ತ್ರಾಭರಣಗಳ ಕಾಂತಿಯಿಂದಲೂ,ಚಂದನಾದ್ಯನುಲೇಪನಗಳ ಹೊಳಪಿನಿಂದಲೂ, ಆಸಭಾಸ್ಥಾನವೆಲ್ಲವೂ ಅತ್ಯಂತಕಾಂತಿವಿಶಿಷ್ಟವಾಗಿ ಪ್ರಕಾಶಿಸುತಿತ್ತು. ಅನೇಕ ವಿದ್ವಜ್ಜನರಿಂದ ದಟ್ಟವಾಗಿ ತುಂಬಿ ಅತಿಮನೋಹರವಾದ ಆಸಭಾಸ್ಥಾನವು,ಶರತ್ಕಾಲದಲ್ಲಿ ಪೂರ್ಣಚಂದ್ರನಿಂದ ಕೂಡಿ ಕಂಗೊಳಿಸುತ್ತಿರುವ ರಾತ್ರಿಯಂತೆ ಬೆಳಗುತಿತ್ತು.ಆಗ ಅಲ್ಲಿ ಅಗ್ರಾಸನಾಸೀನನಾಗಿದ್ದ ಕುಲಪುರೋಹಿತನಾದ ವಸಿಷ್ಠನು, ಸಭೆಯಲ್ಲಿ ನೆರೆದಿದ್ದ ಸಮಸ್ತಪ್ರಜೆಗಳೂಕೇಳುವಂತೆ, ಭರತನನ್ನು ನೋಡಿ,ಬಹಳ ಅನುನಯಪೂರ್ವಕವಾಗಿ''ವತ್ಸಭರತನೆ !ಇದುವರೆಗೂ ಧರ್ಮದಲ್ಲಿಯೇ ನಿರತನಾಗಿ ರಾಜ್ಯವನ್ನು ನಡೆಸುತಿದ್ದ ನಿನ್ನ ತಂದೆಯಾದ ದಶರಥನು,ಧನಧಾನ್ಯಸಮೃದ್ಧಿಯಿಂದ ತುಂಬಿದ ಈಭೂಭಾಗವನ್ನು ನಿನ್ನ ವಶಕ್ಕೊಪ್ಪಿಸಿ, ತಾನು ಸ್ವರ್ಗಲೋಕವನ್ನು ಸೇರಿದನು. ಹಾಗೆಯೇ ಸತ್ಯಸಂಕಲ್ಪನಾದ ರಾಮನೂಕೂಡ ಸತ್ಪುತ್ರರಿಗೆ ಯೋಗ್ಯವಾದ ಧರ್ಮವನ್ನೇ ಅವಲಂಬಿಸಿ, ಆಕಾಶದಲ್ಲಿ ಉದಿಸುತ್ತಿರುವ ಚಂದ್ರನು ಚಂದ್ರಿಕೆಯನ್ನು ಬಿಡದಿರುವಂತೆ, ತಂದೆಯ ಆಜ್ಞೆಯನ್ನು ನಿರಾಕರಿಸದೆ ಕಾಡಿಗೆ ಹೊರಟುಹೋದನು. ನಿನ್ನ ತಂದೆಯಾದ ದಶರಥನೂ, ನಿನ್ನ ಹಿರಿಯಣ್ಣನಾದ ರಾಮನೂ, ತಾವಾಗಿಯೇ ಇಷ್ಟಪಟ್ಟು ನಿಷ್ಕಂಟಕವಾದ ಈರಾಜ್ಯವನ್ನು ನಿನಗೇ ಒಪ್ಪಿಸಿಬಿಟ್ಟಿರುವರು. ಆದುದರಿಂದ ನಿನ್ನ ಮಂತ್ರಿಗಳೊಡಗೂಡಿ ಸಂತೋಷದಿಂದ ಈ ರಾಜ್ಯವನ್ನು ನೀನೇ ಅನುಭವಿಸು!ಶೀಘ್ರದಲ್ಲಿಯೇ ಪಟ್ಟಾಭಿಷೇಕವನ್ನು ನಡೆಸಿಕೊಳ್ಳುವನಾಗು ! ಪೂರ್ವಪಶ್ಚಿಮದಕ್ಷಿಣೋತ್ತರದೇಶಾಧಿಪತಿಗಳೂ, ಅಪರಾಂತದೇಶದ ಅಧಿಪತಿಗಳಾದ ಯವನರೂ, ಸಮುದ್ರಮಧ್ಯದಲ್ಲಿರುವ ಅನೇಕದ್ವೀಪಾಧಿಪತಿಗಳೂ, ನಿನಗೆ ಕೋಟಿಕೋಟಿಸಂಖ್ಯೆಯಿಂದ ರತ್ನಗಳನ್ನು ತಂದುಕಾಣಿಕೆಗಳನ್ನು ಕೊಡಲಿ!" ಎಂದನು. ಇದನ್ನು ಕೇಳಿದೊಡನೆಯೇ [1]ಭರತನಿಗೆ ಮನಸ್ಸಿನಲ್ಲಿ ಮಹಾವ್ಯಸನ

1. ಇಲ್ಲಿ ''ತಚ್ಛ್ರುತ್ವಾಭರತೋವಾಕ್ಯಂ ಶೋಕೇನಾಭಿಪರಿಪ್ಲುತ: । ಜಗಾಮ ಮನಸಾರಾಮಂ ಧರ್ಮಜ್ಞೋಧರ್ಮಕಾಂಕ್ಷಯಾ" ಎಂದು ಮೂಲವು (ತತ್‌ವಾಕ್ಯಂ) ಧರ್ಮ್ಯ.

ವುಂಟಾಯಿತು. ಕುಲಧರ್ಮವನ್ನು ಚೆನ್ನಾಗಿ ಬಲ್ಲ ಆತನು ಧರ್ಮಬುದ್ಧಿಯನ್ನು ಬಿಡದವನಾದುದರಿಂದ,ಆತನ ಮನಸ್ಸು ರಾಮನಮೇಲೆಯೇ ನೆಲೆಸಿತು.ಆತನ ಕಣ್ಣುಗಳಲ್ಲಿ ನೀರು ತುಳುಕುತಿತ್ತು. [1] ಕಲಹಂಸದಂತೆ ಇಂಪಾದ ಸ್ವರವುಳ್ಳ

---

ಧರ್ಮಗಳನ್ನು ಚೆನ್ನಾಗಿ ಬಲ್ಲ ವಸಿಷ್ಠನು ಹೇಳಿದ ಆಮಾತನ್ನು (ಶ್ರುತ್ವಾ) ಕೇಳಿ, (ಧರ್ಮಜ್ಞ:)ಧರ್ಮವನ್ನು ಬಲ್ಲವನಾದ ಎಂದರೆ ಜ್ಯೇಷ್ಠಾನುವರ್ತನವೆಂಬ ಧರ್ಮವನ್ನು ಚೆನ್ನಾಗಿ ಬಲ್ಲವನಾದ ಭರತನು, (ಶೋಕೇನ ಅಭಿಪರಿಪ್ಲುತ:) ಶೋಕದಲ್ಲಿ ಮುಳುಗಿಸಲ್ಪಟ್ಟವನಾಗಿ; ಮೊದಲು ದಶರಥನ ಮರಣವಾರ್ತೆಯಿಂದಲೇ ದು:ಖದಲ್ಲಿ ಮುಳುಗಿದ್ದ ಭರತನು, ಈಗ ತನಗೆ ಗುರುವಾಗಿಯೂ, ಸರ್ವಜ್ಞನಾಗಿಯೂ, ಶ್ರೇಯ: ಕಾಂಕ್ಷಿಯಾಗಿಯೂ, ಇರುವ ಆವಸಿಷ್ಠನೂಕೂಡ ಧರ್ಮವೆಂಬ ವ್ಯಾಜವನ್ನಿಟ್ಟುಕೊಂಡು ಅಧರ್ಮವನ್ನು ಬೋಧಿಸಿದನೆಂಬ ಮಹಾದು:ಖದಲ್ಲಿ (ಅಭಿಪರಿಪ್ಲುತ:) ಇನ್ನೂ ವಿಶೇಷವಾಗಿ ಮುಳುಗಿ ಹೋದನೆಂದು ಭಾವವು. (ಧರ್ಮಕಾಂಕ್ಷಯಾ) ಅಧರ್ಮಹೇತುವಾದ ತನ್ನರಾಜ್ಯಾಭಿಷೇಕವೆಂಬ ವಿಪರೀತವಾರ್ತೆಯನ್ನು ಕೇಳಿದ ಪಾಪಕ್ಕೆ ಪ್ರಾಯಶ್ಚಿತ್ತಮಾಡಿಕೊಳ್ಳಬೇಕೆಂಬ ಬುದ್ಧಿಯಿಂದ (ಮನಸಾರಾಮಂಜಗಾಮ) ಮನಸ್ಸಿನಿಂದಲೇ ರಾಮನನ್ನು ಸ್ಮರಿಸಿದನು. ಎಂದರೆ, ''ಆಚಾರ್ಯನಾದ ವಸಿಷ್ಠನು ಹೇಳಿದ ಈ ದುರ್ವಾರ್ತೆಯನ್ನು ಕೇಳಿದ ಪಾಪವನ್ನು ನೀನೇಕ್ಷಮಿಸಬೇಕು"ಎಂಬ ಬುದ್ಧಿಯಿಂದ ರಾಮನಲ್ಲಿ ಶರಣಾಗತಿಯನ್ನು ಮಾಡಿದನೆಂದುಭಾವವು. ಮತ್ತು (ಧರ್ಮಕಾಂಕ್ಷಯಾ) ರಾಜ್ಯಪರಿಪಾಲನರೂಪವಾದ ಸಾಮಾನ್ಯಧರ್ಮಕ್ಕಿಂತಲೂ ಮೇಲೆನಿಸಿಕೊಂಡ ರಾಮಕೈಂಕರ್ಯರೂಪವೆಂಬ ಧರ್ಮವನ್ನು ಹಿಡಿಯಬೇಕೆಂದುದ್ದೇಶಿಸಿ ಹೀಗೆ ಹೇಳಿದನೆಂದೂ ಭಾವವು.

1 ಇಲ್ಲಿ ''ಸಬಾಷ್ಪಕಲಯಾ ವಾಚಾ ಕಲಹಂಸಸ್ವರೋಯುವಾ । ವಿಲಲಾಪ ಸಭಾಮಧ್ಯೇ ಜಗರ್ಹೇಚ ಪುರೋಹಿತಂ ॥ " ಎಂದುಮೂಲವು. (ಬಾಷ್ಪಕಲಯಾ) ಕಣ್ಣೀರು ತಡೆದುಕೊಳ್ಳುವುದರಿಂದ ಅವ್ಯಕ್ತವಾದ (ವಾಚಾ) ಮಾತಿನಿಂದ, ಕಣ್ಣೀರು ಉಕ್ಕಿಬಂದು ಗಂಟಲನ್ನು ತಡೆಯುತಿದ್ದರೂ ಅದನ್ನುಕೂಡ ಲಕ್ಷ್ಯಮಾಡದೆ, (ಕಲಹಂಸಸ್ವರ:) ಹಂಸದಂತೆ ಮಧುರಗಂಭೀರಸ್ವರವುಳ್ಳವನಾಗಿ, (ಯುವಾ) ಯೌವನವಂತನಾಗಿರುವುದರಿಂದಲೇ ಆ ಅವಸ್ಥೆಯಲ್ಲಿಯೂ ವ್ಯಕ್ತವಾಗಿ ಮಾತಾಡಬಲ್ಲವನಾದನೆಂದು ಭಾವವು. (ವಿಲಲಾಪ) ಪ್ರಲಾಪಿಸಿದನು. (ಪುರೋಹಿತಂಜಗರ್ಹೇ) ಪುರೋಹಿತನನ್ನೂ ನಿಂದಿಸಿದನು.''ನಮ್ಮವಂಶಕ್ಕೆ ಬರಬಹುದಾದ ಶ್ರೇಯಸ್ಸನ್ನು ಬಹಳಚೆನ್ನಾಗಿ ಊಹಿಸಿಹೇಳಿದೆ ! " ಎಂದು ಮರ್ಮೋದ್ಘಾಟಕವಾಗಿ ನಿಂದಿಸಿದನೆಂದು ಭಾವವು. (ಸಭಾಮಧ್ಯೇ) ಇಂತಹ ದೊಡ್ಡಸಭೆಯಲ್ಲಿ ಮಹನೀಯರಾದ ನೀವೆಲ್ಲರೂ ಸೇರಿ,ನನಗೊಬ್ಬನಿಗೆ ಇದುವರೆ

ಆತನು ಗದ್ಗದಸ್ವರದಿಂದ ಕೂಡಿದವನಾಗಿ, ಆಸಭಾಮಧ್ಯದಲ್ಲಿ ಗಟ್ಟಿಯಾಗಿ ಗೋಳಿಡುತ್ತ,ವಸಿಷ್ಠನನ್ನು ನೋಡಿ ಕೋಪಗೊಂಡು,ತಾನು ಭೋಗಾರ್ಹವಾದ ಮಧ್ಯಯೌವ್ವನದಲ್ಲಿದ್ದರೂ ರಾಜಭೋಗಗಳಲ್ಲಿ ಆಸೆಯನ್ನು ತೊರೆದು, ಆಪುರೋಹಿತನನ್ನು ನಿಂದಿಸತೊಡಗಿ, ಆತನನ್ನು ಕುರಿತು "ಎಲೈಬ್ರಾಹ್ಮಣೋತ್ತಮನೆ![1] ಬ್ರಹ್ಮಚರ್ಯದಲ್ಲಿದ್ದು ಗುರುಕುಲವಾಸವನ್ನು ಮಾಡಿ,ವೇದಾಧ್ಯಯನಗಳನ್ನು ನಡೆಸಿ,ಆಮೇಲೆ ಸ್ನಾತಕರ್ಮವನ್ನು ಹೊಂದಿ,ವೇದಾರ್ಥಗಳನ್ನು ತಿಳಿದು ಆಧರ್ಮವನ್ನೇ ಅನುಸರಿಸಿ ನಡೆಯುತ್ತಿರುವ ರಾಮನ ರಾಜ್ಯವನ್ನು ಶಾಸ್ತ್ರಮರ್ಯಾದೆಗೆ ವಶನಾಗಿರುವ ನನ್ನಂತವನು ಅಪಹರಿಸುವುದೆಂದರೆ ನ್ಯಾಯವೆ? [2]ದಶರಥನ ಹೊಟ್ಟೆಯಲ್ಲಿ ಹುಟ್ಟಿಯೂ ಇತರರಿಗೆ ಸೇರಬೇಕಾದ ರಾಜ್ಯವನ್ನು

---

ಗಿದ್ದ ರಾಮಶೇಷತ್ವವನ್ನೂ, ಪಾರತಂತ್ರ್ಯವನ್ನೂ ನೀಗಿಸುವುದಕ್ಕೆ ಪ್ರಯತ್ನಿಸಬಹುದೆ?" ಎಂದು ಪ್ರಲಾಪಿಸುತಿದ್ದುದಾಗಿ ಭಾವವು. ಮತ್ತು "ಸಭಾಮಧ್ಯದಲ್ಲಿ" ಎಂದರೆ, "ನಿಯಮಾತಿಕ್ರಮಂ ರಹಸಿ ಬೋಧಯೇತ್"ನ್ಯಾಯಾತಿಕ್ರಮವನ್ನು ರಹಸ್ಯದಲ್ಲಿ ಬೋಧಿಸಬೇಕೆಂಬ ಶಾಸ್ತ್ರವನ್ನು ನೀವೆಲ್ಲರೂ ಚೆನ್ನಾಗಿ ತಿಳಿದವರಾಗಿದ್ದರೂ, ಈಮಹಾಸಭೆಯ ಮಧ್ಯದಲ್ಲಿಯೇ ನಿಯಮೋಲ್ಲಂಘನರೂಪವಾದ ಈ ಅತಿಕ್ರೂರಧರ್ಮವನ್ನು ನನಗೆ ಹೇಳಬಹುದೆ? " ಎಂಬ ದುಃಖಪಾರವಶ್ಯದಿಂದ ಈಬಗೆಯ ಧರ್ಮೋಪದೇಶವನ್ನು ಸಭಾಮಧ್ಯದಲ್ಲಿ ಹೇಳಿದುದಕ್ಕಾಗಿ ಅವರನ್ನು ನಿಂದಿಸಿದನೆಂದೂ ಭಾವವು.

1 ಇದರಿಂದ ಬ್ರಹ್ಮಚರ್ಯಾದಿಲಕ್ಷಣಲಕ್ಷಿತನಾದವನ ಧನವನ್ನಪಹರಿಸುವುದು ಮಹಾಪಾತಕವೆಂದು ಸೂಚಿಸಿರುವುದಾಗಿ ಗ್ರಹಿಸಬೇಕು.

2 ಇಲ್ಲಿ "ಕಥಂ ದಶರಥಾಜ್ಜಾತೋ ಭವೇದ್ರಾಜ್ಯಾಪಹಾರಕ: । ರಾಜ್ಯಂಚಾಹಂಚರಾಮಸ್ಯಧರ್ಮಂವಕ್ತು ಮಿಹಾರ್ಹಸಿ ॥ " ಎಂದು ಮೂಲವು. ಇಲ್ಲಿನ ವಿಶೇಷಾರ್ಥಗಳೇನೆಂದರೆ. (ದಶರಥಾಜ್ಜಾತಃ) ದಶರಥನಿಂದ ಹುಟ್ಟಿದವನು, (ಕಥಂ) ಹೇಗೆತಾನೇ (ರಾಜ್ಯಾಪಹಾರಕೋಭವೇತ್) ರಾಜ್ಯವನ್ನು ಅಪಹರಿಸತಕ್ಕವನಾಗುವನು ? ಎಂದರೆ, ರಾಮನನ್ನಗಲಿದಕ್ಷಣವೇ ಪ್ರಾಣವನ್ನು ಬಿಟ್ಟವನಾದ ದಶರಥನ ಹೊಟ್ಟೆಯಲ್ಲಿ ಹುಟ್ಟಿದ ನಾನು, ಆರಾಮನು ಬಿಟ್ಟುಹೋದ ರಾಜ್ಯಕ್ಕೆ ಆಸೆಪಟ್ಟು ಬರಬಹುದೆ ? " ಎಂದುಭಾವವು. ರಾಮನನ್ನು ಬಿಟ್ಟಿರುವಾಗ ದಶರಥನಂತೆ ನಾನೂ ಪ್ರಾಣತ್ಯಾಗವನ್ನು ಮಾಡಿಕೊಳ್ಳುವುದು ಚಿತವೇಹೊರತು ಬೇರೆಯಲ್ಲ, ಅಥವಾ ಪ್ರಾಣತ್ಯಾಗವನ್ನು ಮಾಡಿ ಕೊಳ್ಳದಿದ್ದರೂ, ಅಂತಹದಶರಥನ ಹೊಟ್ಟೆಯಲ್ಲಿ ಹುಟ್ಟಿದನಾನು ಈ ರಾಜ್ಯಕ್ಕೂ ಆಸೆಪಡ

ಅಪಹರಿಸಬಹುದೆ? ಈರಾಜ್ಯವು ರಾಮನಿಗೇ ಸೇರಬೇಕಾದುದು. ನಾನೂ ರಾಮನಿಗೇ ಅಧೀನನಾದವನು. ಧರ್ಮಗಳೆಲ್ಲವನ್ನೂ ನೀನು ಚೆನ್ನಾಗಿ ಬಲ್ಲವನಾ

ಬಹುದೆ? ಎಂದಿಗೂ ನಾನು ಅದಕ್ಕಾಸೆ ಪಡಲಾರೆ"ನೆಂದು ಹೇಳಿದುದಾಗಿ ಗ್ರಹಿಸಬೇಕು. ಇದಲ್ಲದೆ ತನ್ನ ಸ್ವರೂಪವನ್ನು ಆಲೋಚಿಸಿದರೂ ತಾನು ರಾಜ್ಯಾರ್ಹನಲ್ಲವೆಂದು ತಿಳಿಸುವನು. ಹೇಗೆಂದರೆ:—(ರಾಜ್ಯಂಚಾಹಂಚರಾಮಸ್ಯ) ರಾಜ್ಯವೂ, ನಾನೂ ರಾಮನ ವಸ್ತುಗಳಾಗಿಯೇ ಇರುವೆವು. ಎಂದರೆ ರಾಮನಿಗೆ ಶೇಷಭೂತರು. ಹೀಗೆ ಎರಡೂ ಮತ್ತೊಂದಕ್ಕೆ ಶೇಷಭೂತಗಳಾಗಿರುವುದರಿಂದ, ಪಾರತಂತ್ರ್ಯವೆಂಬುದು ಎರಡಕ್ಕೂ ಸಮಾನವು. ಹೀಗಿರುವಾಗ ಒಂದು ಶೇಷವಸ್ತುವು ಮತ್ತೊಂದು ಶೇಷವಸ್ತುವಿನಮೇಲೆ ಹೇಗೆ ಅಧಿಕಾರವನ್ನು ನಡೆಸಬಲ್ಲುದು? ಒಂದುವೇಳೆ ಹಾಗೂ ಸಂಭವವಿದ್ದರೆ, ನನ್ನಂತೆಯೇ ಇತರಶೇಷವಸ್ತುವಾದ ರಾಜ್ಯವೇ ನನ್ನನ್ನು ಅಧೀನವಾಗಿ ಮಾಡಿಕೊಳ್ಳಬಾರದೆ? ಆದುದರಿಂದ, ನನಗಾಗಲಿ, ರಾಜ್ಯಕ್ಕಾಗಲಿ ಒಂದನ್ನೊಂದು ಆಳತಕ್ಕಶಕ್ತಿಯಿಲ್ಲವು. ಇವೆರಡೂ ಸ್ವಾಮಿಯಾದ ರಾಮನಿಗೆ ಶೇಷಭೂತಗಳಾಗಿರಬೇಕಾದುದೇ ಸ್ವರೂಪಾನುರೂಪವೆಂದು ಭಾವವು. (ಧರ್ಮಂವಕ್ತು ಮಿಹಾರ್ಹಸಿ) ನೀನು ಈವಿಷಯದಲ್ಲಿ ಧರ್ಮವನ್ನು ಆಲೋಚಿಸಿ ಹೇಳಬೇಕಲ್ಲವೆ? ಲೋಕದಲ್ಲಿ ಹೆತ್ತತಂದೆಯನ್ನು ನಿಗ್ರಹಿಸಿ ರಾಜ್ಯವನ್ನು ವಶಮಾಡಿಕೊಳ್ಳುವವರೂ ಇರಬಹುದು. ಹಾಗೆ ನನ್ನನ್ನು ಎಣಿಸಕೂಡದು (ಇಹ) ಈ ನನ್ನವಿಷಯದಲ್ಲಿಮಾತ್ರ, (ಧರ್ಮಂ) ನನ್ನ ಸ್ವಭಾವಕ್ಕೆ ತಕ್ಕ ಧರ್ಮವನ್ನು ಎಂದರೆ, "ರಕ್ಷಕವು ಯಾವುದು? ರಕ್ಷಿಸಲ್ಪಡುವುದಕ್ಕೆ ಯೋಗ್ಯವಾದ ವಸ್ತುವಾವುದು?" ಎಂಬುದನ್ನು ಚೆನ್ನಾಗಿ ಆಲೋಚಿಸಿ,ಅದಕ್ಕೆತಕ್ಕ ಧರ್ಮವನ್ನೇ ಉಪದೇಶಿಸಬೇಕೇ ಹೊರತು, ಶೇಷವಸ್ತುವೇ ಮತ್ತೊಂದು ಶೇಷವಸ್ತುವನ್ನು ಪಾಲಿಸಬಹುದೆಂಬ ಧರ್ಮವಿರುದ್ಧವಾದ ಮಾತನ್ನು ಹೇಳಬಹುದೆ?" ಎಂದುಭಾವವು. ಆದರೆ, ಆಭರಣಗಳು, ಪೆಟ್ಟಿಗೆ ಇವೆರಡೂ ಶೇಷವಸ್ತುಗಳಾಗಿರುವಾಗ ಆಭರಣಗಳನ್ನು ಪೆಟ್ಟಿಗೆಯು ಕಾಪಾಡಿಡುವುದಲ್ಲವೆ? ಅದರಂತೆಯೇ ಈಗ ನೀನು ಶೇಷವಸ್ತುವಾಗಿದ್ದರೂ ರಕ್ಷಕನಾಗಿರಬಹುದಲ್ಲವೆ?" ಎಂದು ನೀನು ಕೇಳಬಹುದು. ಆಭರಣಯೋಗ್ಯವಾದ ಪೆಟ್ಟಿಗೆಗೆ ಸ್ವಾಮಿಯಾದವನು ಬೀಗ ಮೊದಲಾದುವುಗಳನ್ನು ಹಾಕಿ, ಅದನ್ನು ರತ್ನಾದಿಗಳಿಗೆ ರಕ್ಷಕವನ್ನಾಗಿ ಮಾಡಿಡುವುದರಿಂದಲೇ ಅದಕ್ಕೆ ರಕ್ಷಕತ್ವವೇ ಹೊರತು,ತನಗೆ ತಾನೇ ಅದು ರಕ್ಷಕವಾಗಿರಲಾರದು. ಅದರಂತೆಯೇ ನಮ್ಮ ಸ್ವಾಮಿಯಾದ ರಾಮನು ರಾಜ್ಯಕ್ಕೆ ನನ್ನನ್ನು ರಕ್ಷಕಕನನ್ನಾಗಿ ನಿಯೋಗಿಸಲಿಲ್ಲವಾದುದರಿಂದ, ನಾನಾಗಿಯೇ ಆ ಸ್ವಾತಂತ್ರ್ಯವನ್ನು ವಹಿಸಲಾರೆನು. ಮತ್ತು ಸ್ವಾಮಿಯಾದವನು ತಾನುಮಾತ್ರವೇ ಧರಿಸತಕ್ಕ ರತ್ನಾಭರ

ಗಿದ್ದರೂ, ಆ ಧರ್ಮವನ್ನು ನಮಗೆ ಉಪದೇಶಿಸದೆ, ಅಧರ್ಮವನ್ನು ಹೇಳುವೆಯಲ್ಲವೆ? ರಾಮನಾದರೋ ನಮ್ಮೆಲ್ಲರಿಗೂ ವಯಸ್ಸಿನಲ್ಲಿಯೂ ಹಿರಿಯನು. ಗುಣಗಳಲ್ಲಿಯೂ ಆತನೇ ಮೇಲಾದವನು. ಆತನನ್ನು ಧರ್ಮಸ್ವರೂಪವೆಂದೇ ಹೇಳಬಹುದು ! ದಿಲೀಪನಹುಷಾದಿಗಳಿಗೆ ಸಮಾನವಾದ ಗುಣವುಳ್ಳ ಆರಾಮನೇ ರಾಜ್ಯಾಧಿಕಾರಕ್ಕರ್ಹನು. ದಶರಥನಂತೆ ಆತನೇ ಈರಾಜ್ಯಕ್ಕೆ ಅಧಿಪತಿಯಾಗಿರಬೇಕೇಹೊರತು ಬೇರೆಯಲ್ಲ! ಹೀನಜನರಿಗೆ :ಯೋಗ್ಯವಾಗಿರುವ ಈಪಾಪಕಾರ್ಯಕ್ಕೆ ನಾನು ಪ್ರರ್ತಿಸಿದುಪೇ ಆದರೆ, ಈ ಇಕ್ಷ್ವಾಕುವಂಶವನ್ನೇ ನಾನು ಕೆಡಿಸಿದವನಾಗುವೆನಲ್ಲವೆ? ತಾಯಿಯಾದ ಕೈಕೇಯಿಯೇ ಈ ಪಾಪಕಾರ್ಯವನ್ನು ನಡೆಸಿದವಳಾಗಿದ್ದರೂ ನಾನು ಅದಕ್ಕೆ ಅನುಮತಿಸುವೆನೆಂದು ನೀನೆಂದಿಗೂ ತಿಳಿಯಬೇಡ!ರಾಮನು ಈಗ ನನ್ನಿದಿರಿಗಿಲ್ಲದೆ ಕಾಡಿನಲ್ಲಿದ್ದರೂ,ನನ್ನ ಮನಸ್ಸು ಆತನನ್ನು ಬಿಟ್ಟು ಅಗಲಲಾರದು.ಇಲ್ಲಿಂದಲೇ ನಾನು

---

ಣಾದಿಗಳನ್ನು ಅವಶ್ಯವಿಲ್ಲದಿದ್ದಾಗ ಪೆಟ್ಟಿಗೆಯಲ್ಲಿರಿಸಿರುವನಲ್ಲವೆ! ಹೀಗೆ ರಾಮನೂ ತಾನೇ ಭರಿಸಲು ಯೋಗ್ಯವಾದ ಈ ರಾಜ್ಯವನ್ನು ತನಗೆ ಅವಶ್ಯವಿಲ್ಲದಿದ್ದಾಗ ಮತ್ತೊಬ್ಬರ ಅಧೀನದಲ್ಲಿರಿಸಿರಬಹುದು. ಈಗೆ ನಾವು ಸಾಧ್ಯವಾದಮಟ್ಟಿಗೂ ಅವನನ್ನು ಪ್ರಸನ್ನನನ್ನಾಗಿ ಮಾಡಿ ಕರೆತರುತರುವುದಕ್ಕೆ ಪ್ರಯಾಸಪಟ್ಟರೂ, ಆತನಿಗೆ ಈ ರಾಜ್ಯವು ಈಗ ಅವಶ್ಯವಿಲ್ಲದಿದ್ದ ಪಕ್ಷದಲ್ಲಿ, ಮತ್ತು ಆತನೇ ನನ್ನವಶಕ್ಕೆ ಈರಾಜ್ಯವನ್ನು ಒಪ್ಪಿಸಿದ ಪಕ್ಷದಲ್ಲಿ, ಆಗಲೂ ನಾನು ಪೆಟ್ಟಿಗೆಯಂತೆ ಅವನಿಗೆ ಪರತಂತ್ರನಾಗಿಯೇ ಇದ್ದು ಆತನ ಶಕ್ತಿಯಿಂದಲೇ ಅವನು ಬರುವವರೆಗೂ ಅದನ್ನು ರಕ್ಷಿಸುತ್ತಿರುವೆನು. ಆದುದರಿಂದ ಆತನನ್ನು ಹಿಂತಿರುಗಿಸಿ ಕರೆತರಬೇಕಾದುದೇ ಈಗ ಅವಶ್ಯಕಾರ್ಯವು. ಎಲ್ಲಕ್ಕಿಂತಲೂ ಮೊದಲು ನಾನು ರಾಮನಬಳಿಗೆ ಹೋದೊಡನೆ, ವರಪ್ರದಾನನಿರ್ಬಂಧದಿಂದ ರಾಜ್ಯವು ನನ್ನ ಕೈಗೆ ಸೇರಿಹೋಗಿರುವುದೆಂಬ ಭಾವವನ್ನು ಆತನಿಗೆ ಪರಿಹರಿಸಬೇಕೆಂದಿರುವೆನು. ಮತ್ತು (ಧರ್ಮಂವಕ್ತುಮಿಹಾರ್ಹಸಿ)ಎಂದರೆ, "ರಾಮನೂ ರಾಜ್ಯವನ್ನು ಬಿಟ್ಟುಹೋಗಿ, ದಶರಥನೂ ಮೃತಿಹೊಂದಿದಮೇಲೆ, ರಾಜ್ಯವು ಅನಾಯಕವಾಗಿರುವುದರಿಂದ ಇದ್ದವರಿಗೇ ಅಭಿಷೇಕವನ್ನುಮಾಡಿಬಿಡಬೇಕೆಂಬ ಈಧರ್ಮವನ್ನುಮಾತ್ರ ಆಲೋಚಿಸಿದೆಯೇಹೊರತು, ಹಾಗೆ ನಾನು ರಾಜ್ಯವನ್ನುವಹಿಸಿಬಿಟ್ಟರೆ, ಆತನಿಗೆ ಶೇಷಭೂತನಾದ ನನ್ನ ಸ್ವರೂಪಕ್ಕೇ ಹಾನಿಬರುವುದೆಂಬ ಸೂಕ್ಷ್ಮಧರ್ಮವನ್ನು ವಿಚಾರಿಸದೆ ಹೋದೆಯಲ್ಲವೆ? ಇನ್ನು ಮೇಲೆ ಹಾಗೆ ಹೇಳದೆ, ನನಗೆ ಉಪದೇಶಿಸಬೇಕಾದ ಮುಖ್ಯಧರ್ಮವನ್ನು ಎಂದರೆ ರಾಮಕೈಂಕರ್ಯರೂಪಧರ್ಮವನ್ನೇ ಹೇಳಬೇಕೆಂದು ಮುಖ್ಯಭಾವವು.

ಆತನಿಗೆ ಬಾರಿಬಾರಿಗೂ ಕೈಮುಗಿದು ನಮಸ್ಕರಿಸುತ್ತಿರುವೆನು. ನಾನು ಆ ರಾಮನನ್ನೇ ಹಿಂಬಾಲಿಸಿ ಹೋಗುವೆನು. ಈ ರಾಜ್ಯಕ್ಕೆ ಆತನಲ್ಲದೆ ಬೇರೊಬ್ಬರೂ ಪ್ರಭುಗಳಾಗಲಾರರು. ಈ ಪ್ರಪಂಚದಲ್ಲಿರುವ ಮನುಷ್ಯಸಾಮಾನ್ಯಕ್ಕೆಲ್ಲಾ ಮೇಲೆನಿಸಿಕೊಂಡಿರುವ ಆ ರಾಮನು, ಈ ರಾಜ್ಯಕ್ಕೆ ಮಾತ್ರವೇ ಅಲ್ಲ. ಈ ಮೂರುಲೋಕಗಳನ್ನೂ ಆಳುವುದಕ್ಕೂ ಆತನೇ ಅರ್ಹನು." ಎಂದನು. ಹೀಗೆ ಭರತನು ಧರ್ಮಯುಕ್ತವಾಗಿ ಹೇಳಿದ ಆ ಮಾತನ್ನು ಕೇಳಿ, ಅಲ್ಲಿದ್ದ ಸಭಿಕರೆಲ್ಲರೂ ರಾಮನ ಗುಣದಲ್ಲಿಯೇ ನಟ್ಟ ಮನಸ್ಸುಳ್ಳವರಾಗಿ, ಆನಂದಬಾಷ್ಪವನ್ನು ಸುರಿಸುತಿದ್ದರು. ಆಮೇಲೆ ಭರತನು ಪುನಃ ಆಸಭೆಯನ್ನು ಸಂಬೋಧಿಸಿ, "ಎಲೈಪೂಜ್ಯರೆ!ನನ್ನ ಧೃಢಸಂಕಲ್ಪವನ್ನು ಹೇಳುವೆನು ಕೇಳಿರಿ! ನಾನು ಇಲ್ಲಿಂದ ಹೋಗಿ ರಾಮನನ್ನು ಕರೆತರುವುದೇಸೋಸಿಜವು! ಹಾಗೆ ಆ ಕಾರ್ಯವು ನನ್ನಿಂದ ಹೇಗೂ ಅಸಾಧ್ಯವಾದ ಪಕ್ಷದಲ್ಲಿ,ಆರ್ಯನಾದ ಲಕ್ಷ್ಮಣನಂತೆಯೇ ನಾನೂ ಕಾಡಿನಲ್ಲಿಯೇ ನಿಂತು, ಪೂಜ್ಯನಾದ ರಾಮನ ಪಾದಶುಶ್ರೂಷೆಯಲ್ಲಿಯೇ ನಿರತನಾಗಿದ್ದುಬಿಡುವೆನು. ನನ್ನ ಕೈಯಿಂದ ಸಾಧ್ಯವಾದಮಟ್ಟಿಗೆ ಆತನನ್ನು ಹಿಂತಿರುಗಿಸುವುದಕ್ಕೇ ಪ್ರಯತ್ನವನ್ನು ಮಾಡುವೆನು. ನೀವೆಲ್ಲರೂ ನನ್ನೊಡನೆಯೇ ಹೊರಟುಬರಬೇಕು. ಸಾಧುಗಳಾಗಿಯೂ, ಗುಣಶಾಲಿಗಳಾಗಿಯೂ, ಇರುವ ಸಾಮಾಜಿಕರಾದ ನಿಮ್ಮೆಲ್ಲರ ಮುಂದೆಯೇ ನಾನು ಆ ರಾಮನನ್ನು ಹಿಂತಿರುಗಿಸುವುದಕ್ಕೆ ಆದಷ್ಟು ಉಪಾಯಗಳನ್ನು ಮಾಡಿನೋಡುವೆನು. ಇದಕ್ಕೆಮೊದಲೇ ನಾನು ದಾರಿಯನ್ನು ಸರಿಮಾಡುವುದಕ್ಕೂ, ಕಾವಲಿರುವುದಕ್ಕೂ ಕೆಲವು ಬಿಟ್ಟಿಯಾಳುಗಳನ್ನೂ, ಕೂಲಿಯವರನ್ನೂ ಕಳುಹಿಸಿರುವೆನು. ಅಲ್ಲಿಗೆ ಪ್ರಯಾಣಮಾಡಬೇಕೆಂಬುದೇ ನನ್ನ ಸಂಕಲ್ಪವು." ಎಂದನು. ಅಣ್ಣನಲ್ಲಿ ಪರಮಭಕ್ತಿಯುಳ್ಳ ಧರ್ಮಾತ್ಮನಾದ ಭರತನು, ಸಭೆಗಿದಿರಾಗಿ ಈ ಮಾತನ್ನು ಹೇಳಿ, ಆಮೇಲೆ ಸಮೀಪದಲ್ಲಿದ್ದ ಮಂತ್ರಜ್ಞನಾದ ಸುಮಂತ್ರನನ್ನು ನೋಡಿ, "ಎಲೈ ಸುಮಂತ್ರನೆ! ನೀನು ಈಗಲೇ ಎದ್ದು ಹೋಗಿ ನನ್ನ ಆಜ್ಞೆಯಿಂದ ನಮ್ಮ ಸಮಸ್ತಸೈನ್ಯಕ್ಕೂ ಪ್ರಯಾಣಸನ್ನದ್ಧವಾಗಿರುವಂತೆ ನಿಯಮಿಸು." ಎಂದನು. ಈ ಮಾತನ್ನು ಕೇಳಿ ಸುಮಂತ್ರನು ಪರಮಸಂತೋಷಯುಕ್ತನಾಗಿ, ಆ ಭರತನ ಆಜ್ಞೆಯಂತೆ ಸಮಸ್ತಸೈನ್ಯಕ್ಕೂ ಪ್ರಯಾಣಸನ್ನ

ದ್ಧವಾಗಿರಬೇಕೆಂದು ನಿಯಮಿಸಿದನು. ಭರತನು ರಾಮನನ್ನು ಹಿಂತಿರುಗಿಸಿ ಕರೆತರುವುದಕ್ಕಾಗಿ ಹೋಗುವನೆಂಬ ಸುದ್ದಿಯನ್ನು ಕೇಳಿ, ಸಮಸ್ತ ಪ್ರಜೆಗಳೂ ಸಂತೋಷಭರಿತರಾಗಿದ್ದರು. ಸೇನಾಧಿಪತಿಗಳೂ ಸಂತೋಷದಿಂದ ಉಕ್ಕುತಿದ್ದರು. ಆಯಾಸೈನಿಕರ ಹೆಂಡಿರೂಕೂಡ ಈ ಸುದ್ದಿಯನ್ನು ಕೇಳಿ ಅತ್ಯುತ್ಸಾಹಗೊಂಡು, ತಮ್ಮತಮ್ಮ ಪತಿಗಳನ್ನು ಅಲ್ಲಿನಪ್ರಯಾಣಕ್ಕೆ ತ್ವರೆಪಡಿಸುತ್ತ ಮನೆಮನೆಗಳಲ್ಲಿಯೂ ನಿರ್ಬಂಧಿಸುತಿದ್ದರು.ಸೇನಾಧ್ಯಕ್ಷರೆಲ್ಲರೂ ಕುದುರೆಗಳನ್ನೂ, ಎತ್ತಿನ ಬಂಡಿಗಳನ್ನೂ, ವೇಗವತ್ತಾದ ಕುದುರೆಯಬಂಡಿಗಳನ್ನೂ, ಕಾಲಾಳುಗಳನ್ನೂ ಸೇರಿಸಿ, ಸೈನ್ಯವನ್ನು ಸಿದ್ಧಪಡಿಸಿಟ್ಟರು.ಪ್ರಯಾಣಸನ್ನದ್ಧವಾದ ಸೈನ್ಯವನ್ನು ನೋಡಿ ಭರತನು,ವಸಿಷ್ಠನು ಕೇಳುತ್ತಿರುವಾಗಲೇ ತನ್ನಮನೋನಿಶ್ಚಯಕ್ಕೆ ಆತನು ಅನುಮತಿಸಬೇಕೆಂಬಭಾವದಿಂದ,ಸಮೀಪದಲ್ಲಿದ್ದ ಸುಮಂತ್ರನನ್ನು ನೋಡಿ ಬೇಗರಥವನ್ನು ತರುವಂತೆ ಆಜ್ಞಾಪಿಸಿದನು.ಭರತನ ಆಜ್ಞೆಯಂತೆ ಸುಮಂತ್ರನು ಉತ್ತಮವಾದ ಕುದುರೆಗಳಿಂದ ಕೂಡಿದ ರಥವನ್ನು ನಡೆಸಿಕೊಂಡು ಬಂದನು. ಆಗ ರಘುಕುಲಲಲಾಮನಾಗಿಯೂ, ಕುಂದದ ಧೈರ್ಯವುಳ್ಳವನಾಗಿಯೂ, ಪರಾಕ್ರಮಶಾಲಿಯಾಗಿಯೂ ಇರುವ ಭರತನು, ಯುಕ್ತಿಯುಕ್ತವಾದ ಮಾತುಗಳಿಂದ ಪ್ರಜೆಗಳೆಲ್ಲರಿಗೂ ಸಮಾಧಾನವನ್ನು ಹೇಳಿ, ಕಾಡಿನಲ್ಲಿರುವ ಯಶಸ್ವಿಯಾದ ರಾಮನನ್ನು ಮನ್ನಿಸಿ ಕರೆತರಬೇಕೆಂಬ ದೃಢಸಂಕಲ್ಪವನ್ನಿಟ್ಟುಕೊಂಡು, ಸುಮಂತ್ರನನ್ನು ನೋಡಿ, “ಎಲೈ ಸೂತನೆ! ನೀನು ಪುನಃ ಹೋಗಿ ನಮ್ಮ ಬಲಾಧ್ಯಕ್ಷರನ್ನು ತ್ವರೆಪಡಿಸು! ಸೈನ್ಯವೆಲ್ಲವೂ ಸಿದ್ಧವಾಗಿರಬೇಕೆಂದು ತಿಳಿಸು! ನಾನು ರಾಮನನ್ನು ಕಾಡಿನಿಂದ ಕರೆತರಬೇಕೆಂದು ಸಂಕಲ್ಪಸಿರುವುದು ಈ ಲೋಕಹಿತಾರ್ಥವಾಗಿಯೇಹೊರತು ನನ್ನೊಬ್ಬನಿಗಾಗಿಯೇ ಅಲ್ಲವು"ಎಂದನು. ಇದನ್ನು ಕೇಳಿ ಸುಮಂತ್ರನು ತನ್ನಕೋರಿಕೆಗಳೆಲ್ಲವೂ ಆಗಲೇ ಕೈಗೂಡಿದಂತೆ ಸಂತುಷ್ಟನಾಗಿ ಹೊರಟು, ಪ್ರಜೆಗಳಲ್ಲಿ ಪ್ರಮುಖರಾದವರನ್ನೂ,ಬಲಾಧ್ಯಕ್ಷರನ್ನೂ,ಮಿತ್ರರನ್ನೂ ಪ್ರತ್ಯೇಕಪ್ರತ್ಯೇಕವಾಗಿ ಬಂದು ನೋಡಿ,ಭರತನ ಆಜ್ಞೆಯನ್ನು ತಿಳಿಸಿದನು. ಆಗ ಆ ಅಯೋಧ್ಯಾಪಟ್ಟಣದ ಮನೆಮನೆಗಳಲ್ಲಿಯೂ, ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರರೆಂಬ ನಾಲ್ಕು ವರ್ಣದವರೂ ಅತ್ಯುತ್ಸಾಹಗೊಂಡು, ತಮ್ಮತಮ್ಮ ಸ್ಥಿತಿಗೆ ತಕ್ಕಂತೆ ಒಂ

ಟಿಗಳನ್ನೂ, ಹೇಸರಗತ್ತೆಗಳನ್ನೂ, ಬಂಡಿಗಳನ್ನೂ, ಆನೆಗಳನ್ನೂ. ಉತ್ತಮವಾದ ಜಾತ್ಯಶ್ವಗಳನ್ನೂ ಏರಿ ಹೊರಟರು. ಇಲ್ಲಿಗೆ ಎಂಬತ್ತೆರಡನೆಯ ಸರ್ಗವು.

---

ಭರತನು ಸೈನ್ಯದೊಡನೆ ಪ್ರಯಾಣಮಾಡಿ ಗಂಗಾತೀರವನ್ನು ಸೇರಿದುದು.

ಆಮೇಲೆ ಭರತನು ಬೆಳಗಾಗುವಷ್ಟರಲ್ಲಿಯೇ ಎದ್ದು, ಉತ್ತಮವಾದ ರಥವನ್ನೇರಿ,ರಾಮದರ್ಶನ ಕುತೂಹಲದಿಂದ ಬಹುಶೀಘ್ರದಲ್ಲಿ ಪ್ರಯಾಣಮಾಡುತಿದ್ದನು. ಮಂತ್ರಿಗಳೂ, ಪುರೋಹಿತರೂ ಸೂರ್ಯರಥದಂತೆ ಉತ್ತಮಾಶ್ವಗಳಿಂದ ಹೂಡಿದ ರಥವನ್ನೇರಿ ಭರತನಿಗೆ ಮುಂದಾಗಿಯೇ ಹೋಗುತಿದ್ದರು.ಭರತನ ಆಜ್ಞಾನುಸಾರವಾಗಿ ಅಯೋಧ್ಯೆಯಲ್ಲಿದ್ದ ಆನೆಗಳಲ್ಲಿ ಒಂಬತ್ತುಸಾವಿರ ಆನೆಗಳು ಆತನನ್ನು ಹಿಂಬಾಲಿಸಿಬರುತ್ತಿದ್ದುವು. ಮತ್ತು ಯಶಸ್ವಿಯಾದ ಆ ರಾಜಪುತ್ರನಹಿಂದೆ ಅರುವತ್ತುಸಾವಿರ ರಥಗಳೂ, ಇನ್ನೂ ನಾನಾವಿಧಶಸ್ತ್ರಾಸ್ತ್ರಗಳನ್ನು ಹಿಡಿದಿರತಕ್ಕ ಧನುರ್ಧಾರಿಗಳಾದ ಯೋಧರೂ ಹೊರಟುಬರುತಿದ್ದರು. ಸತ್ಯಸಂಧನಾಗಿಯೂ, ಜಿತೇಂದ್ರಿಯನಾಗಿಯೂ ಇದ್ದ ಆ ಭರತನು ಹೋಗುತ್ತಿದ್ದಾಗ ಒಂದುಲಕ್ಷಸಂಖ್ಯೆಯುಳ್ಳ ಕುದುರೆಯ ಸೈನ್ಯಗಳೂ ಆತನನ್ನು ಹಿಂಬಾಲಿಸಿಹೊರಟುವು. ಹಾಗೆಯೇ ಕೈಕೇಯೀ ಸುಮಿತ್ರೆಯರೂ ಭರತನನ್ನು ಹಿಂಬಾಲಿಸಿದರು. ಯಶಸ್ವಿನಿಯಾದ ಕೌಸಲ್ಯೆಯೂ ಹೊರಟಳು. ಇವರೆಲ್ಲರೂ ಬೇರೆಬೇರೆ ವಾಹನಗಳನ್ನೇರಿ, ರಾಮನು ಹಿಂತಿರುಗಿ ಬರುವನೆಂಬ ಪರಮಸಂತೋಷದಿಂದ ಕೂಡಿದವರಾಗಿ ಹೋಗುತಿದ್ದರು. ಇವರಲ್ಲಿ ಕೈಕೇಯಿಯು ತಾನು ತಂದಿಟ್ಟ ಅನರ್ಥಗಳಿಗೆ ನಾಚಿಕೆಗೊಂಡು ಪಶ್ಚಾತ್ತಾಪಪಡುತ್ತ,ತಾನೇಮುಂದಾಗಿಹೊರಟಳು.ಹಾಗೆಯೇ ಪ್ರಜೆಗಳೆಲ್ಲರೂ ಲಕ್ಷ್ಮಣಸಹಿತನಾದ ರಾಮನನ್ನು ನೋಡುವ ವಿಷಯದಲ್ಲಿ ಪರಮಕುತೂಹಲವುಳ್ಳವರಾಗಿ,ಅವರ ವಿಷಯವಾದಮಾತುಗಳನ್ನೇ ಆಡುತ್ತ ಉಲ್ಲಾಸದಿಂದ ಹೋಗುತ್ತಿದ್ದರು. ಅವರು ಅಲ್ಲಲ್ಲಿ ಗುಂಪುಗುಂಪಾಗಿ ಸೇರಿಕೊಂಡು, ಪ್ರತ್ಯೇಕಪ್ರತ್ಯೇಕವಾಗಿ ಒಬ್ಬರಿಗೊಬ್ಬರು,

[1]"ನೀಲಮೇಘಶ್ಯಾಮನಾಗಿ,ಮಹಾಬಾಹು... ...ರಪ್ರಯತ್ನವುಳ್ಳವನಾಗಿ,ಸತ್ಯಪರಿಪಾಲನೆ,ಆಶ್ರಿತರಕ್ಷಣೆ ಮೊದಲಾದ ವ್ರತಗಳನ್ನು ದೃಢವಾಗಿ ಹಿಡಿದಿರತಕ್ಕ ರಾಮನನ್ನು ನಾವು ಇನ್ನೆಷ್ಟುಹೊತ್ತಿಗೆ ನೋಡುವೆವೋ? ಸಮಸ್ತ

---

1 ಇಲ್ಲಿ "ಮೇಘಶ್ಯಾಮಂ ಮಹಾಬಾಹುಂ ಸ್ಥಿರಸತ್ವಂ ದೃಢವ್ರತಂ।ಕದಾದ್ರಕ್ಷ್ಯಾಮಹೇರಾಮಂ ಜಗತಶ್ಶೋಕನಾಶನಂ-"ಎಂದು ಮೂಲವು. ಇದಕ್ಕೆ ರಾಮನಲ್ಲಿ ಸಾಮಾನ್ಯವಾದ ಉತ್ತಮಪುರುಷಗುಣಗಳಲ್ಲದೆ ಪರಮಪುರುಷನಾದ ಶ್ರೀ ವೈಕುಂಠನಾಥನ ಅಪ್ರಾಕೃತಗುಣ ವಿಶೇಷಗಳನ್ನೂ ಸೂಚಿಸುವ ವಿಶೇಷಾರ್ಥಗಳುಂಟು. (ಮೇಘಶ್ಯಾಮಂ)ನೀಲಮೇಘದಂತೆ ಕಪ್ಪಾದ ಮೈಬಣ್ಣವುಳ್ಳವನೆಂದು ಸಾಮಾನ್ಯಾರ್ಥವು. ಮೇಘದಂತೆ ದೂರಸ್ಥನಾಗಿದ್ದರೂ, ತನ್ನ ಸೌಂದರ್ಯಾನುಭವ ವನು ಕೊಟ್ಟುಸಂತೋಷಪಡಿಸತಕ್ಕವನೆಂದೂ, ಬಿಸಿಲಿನಿಂದ ಬಳಲಿದವರಿಗೆ ಮೇಘವು ಹೇಗೋಹಾಗೆ ನೋಡಿದಮಾತ್ರದಿಂದಲೇ ಸರ್ವಸಂತಾಪವನ್ನೂ ಅಪಹರಿಸತಕ್ಕವನೆಂದೂ ಭಾವವು. (ಮಹಾಬಾಹುಂ) ಉದ್ದವಾಗಿಯೂ ದಪ್ಪನಾಗಿಯೂ ಇರುವ ತೋಳುಗಳುಳ್ಳವನೆಂದು ಸಾಮಾನ್ಯಾರ್ಥವು. ಭುಜಗಳು ದಾನಸಾಧನಗಳಾಗಿರುವುದರಿಂದ ಪೂರ್ವೋಕ್ತವಾದ ತನ್ನ ಸೌಂದರ್ಯದ ಅನುಭವವನ್ನು ದಾನಮಾಡುವುದರಲ್ಲಿ ಮಹೌದಾರ್ಯವುಳ್ಳವನೆಂದೂ, ಮತ್ತು ತನ್ನ ಸೌಂದರ್ಯಾನುಭವಕ್ಕೆ ವಿರೋಧಿಗಳಾದವರನ್ನು ಖಂಡಿಸತಕ್ಕವನೆಂದೂ ಭಾವವು. ಆದುದರಿಂದಲೇ"ರಾಮಮಿಂದೀವರಶ್ಯಾಮಂಸರ್ವಶತ್ರುನಿಬರ್ಹಣಂ"ಎಂದು'ಕನ್ನೆಯ್ದಿಲೆಯಂತೆ ಕಪ್ಪುಕಾಂತಿಯುಳ್ಳವನಾಗಿಯೂ, ಸಮಸ್ತ ಶತ್ರುಗಳನ್ನೂ ಅಡಗಿಸತಕ್ಕವನಾಗಿಯೂ ಇರುವ ರಾಮನನ್ನು" ಎಂದು ಕಾಂತಿಪ್ರಯುಕ್ತವಾದ ಸೌಂದರ್ಯವೂ ಪರಾಕ್ರಮವೂ ಆಗಾಗ ವರ್ಣಿಸಲ್ಪಡುವುವು. (ಸ್ಥಿರಸತ್ತ್ವಂ) ಸ್ಥಿರವಾದ ಬಲವುಳ್ಳವನೆಂದು ಸಾಮಾನ್ಯಾರ್ಥವು. "ದ್ರವ್ಯಾಸುವ್ಯವಸಾಯೇಷುಸತ್ತ್ವಂ" ಎಂಬುವಾಗಿ ಸತ್ತ್ವವೆಂದರೆ ವ್ಯವಸಾಯವು. ಅಥವಾ ಪ್ರತಿಜ್ಞೆಯು. ಇದರಿಂದ ಸ್ಥಿರಸಂಕಲ್ಪವುಳ್ಳವನೆಂದರ್ಥವು. ತನ್ನ ಆಶ್ರಿತರೇ ತನಗೆ ಪ್ರತಿಕೂಲರಾದರೂ ಮನಸ್ಸು ಕಲಗದಷ್ಟು ಸ್ಥಿರಚಿತ್ತವುಳ್ಳವನೆಂದುಭಾವವು. (ದೃಢವ್ರತಂ) ಆ ಶ್ರಿತರಕ್ಷಣವೆಂಬ ದೃಢವಾದ ವ್ರತವನ್ನು ಹಿಡಿದಿರತಕ್ಕವನು. ಇಂತಹ (ರಾಮಂ | 'ಸರ್ವಲೋಕಾಹ್ಲಾದಕನಾದ ಮಹಾಪುರುಷನನ್ನು (ಕದಾದ್ರಕ್ಷ್ಯಾಮ:) ಯಾವಾಗ ನೋಡುವೆವೊ? (ಜಗತಶ್ಶೋಕನಾಶನಂ) ಆರಾಮನು ಸಮಸ್ತಲೋಕಗಳಿಗೂ ದು:ಖವನ್ನು ನೀಗಿಸತಕ್ಕವನಾಗಿರುವಾಗಲೂ ನಾವು ಹೀಗೆ ದುಃಖಿಸಬೇಕಾಗಿ ಬಂದಿರುವುದು ಆಶ್ಚರ್ಯವೆಂದೂ ಭಾವವು.

ಲೋಕಕ್ಕೂ ದುಃಖನಿವಾರಕನಾದ ಆತನನ್ನು ನಾವು ಹಿಂದಾವರ್ತಿ[1]ದೃಷ್ಟಿ ಯಿಟ್ಟು ನೋಡಿದರೆ ಸಾಕು! ಸೂರ್ಯನು ಉದಿಸಿದಾಗ ಅಂಧಕಾರವುಹೇಗೋ ಹಾಗೆ ನಮ್ಮ ಸಮಸ್ತದುಃಖವೂ ಆಕ್ಷಣದಲ್ಲಿಯೇ ನೀಗಿಹೋಗುವುದು." ಹೀಗೆಂದು ಅಲ್ಲಿಹೋಗುತಿದ್ದ ಪುರವಾಸಿಗಳೆಲ್ಲರೂ ಮಹೋತ್ಸಾಹದಿಂದ ರಾಮನ ಶುಭಗುಣಗಳನ್ನೇ ನಾನಾವಿಧವಾಗಿ ವರ್ಣಿಸುತ್ತ, ಒಬ್ಬರಿಗೊಬ್ಬರು ಅಪ್ಪಿಕೊಳ್ಳುತ್ತ ಉಲ್ಲಾಸದಿಂದ ದಾರಿನಡೆಯುತಿದ್ದರು. ಹಾಗೆಯೇ ರಾಮನಲ್ಲಿ ಪ್ರೀತಿಯುಳ್ಳ ಪಟ್ಟಣದ ಅನೇಕವರ್ತಕರೂ ಇತರ ಪ್ರಜೆಗಳೊಡನೆ ಕಲೆತು,ಪರಮಸಂತೋಷದಿಂದ ಭರತನನ್ನು ಹಿಂಬಾಲಿಸುತಿದ್ದರು. ರತ್ನವೇವೊದಲಾದ ಮಣಿಗಳನ್ನು ಸಾಣೆಹಿಡಿಯತಕ್ಕವರೂ, ಕಾರ್ಯನಿಪುಣರಾದ ಕುಂಬಾರರೂ, ನೇಗೆಯವರೂ, ಶಸ್ತ್ರಜೀವಿಗಳೂ, ನವಿಲುಗರಿಯಲ್ಲಿ ಚಿತ್ರಕೆಲಸಗಳನ್ನು ಮಾಡತಕ್ಕವರೂ, ಗರಗಸದವರೂ, ನಯಗೆಲಸಗಾರರೂ, ರತ್ನಾದಿಗಳಿಗೆ ವೆಜ್ಜವನ್ನು ಹಾಕತಕ್ಕವರೂ, ದಂತದ ಕೆಲಸದವರೂ, ಗಾರೆಕೆಲಸದವರೂ, ಗಂಧವನ್ನು ತೇಯತಕ್ಕವರೂ, ಅಕ್ಕಸಾಲೆಗರೂ, ಕಂಬಳಿಗಳನ್ನು ತೊಳೆಯತಕ್ಕವರೂ, ಎಣ್ಣೆಯನ್ನು ತೇಯತಕ್ಕವರೂ ಮೈಹಿಡಿಯತಕ್ಕವರೂ, ಧೂಪದ್ರವ್ಯಗಳನ್ನು ಮಾಡತಕ್ಕವರೂ, ಮದ್ಯವನ್ನಿಳಿಸತಕ್ಕವರೂ, ಅಗಸರೂ, ಚಿಪ್ಪಿಗರೂ, ಗ್ರಾಮಗಳಲ್ಲಿ ಪ್ರಮುಖರಾದವರೂ, ನಟವಿಟಗಾಯಕಾದಿಗಳೂ, ವಾರಸ್ತ್ರೀಯರೂ, ಬಲೆಗಾರರೂ ಆ ಭರತನನ್ನು ಹಿಂಬಾಲಿಸಿಹೊರಟರು. ಇದಲ್ಲದೆ, ಯೋಗನಿಷ್ಠರಾಗಿಯೂ, ವೇದವಿತ್ತುಗಳಾಗಿಯೂ, ಸದಾಚಾರಪರರಾಗಿಯೂ ಇರುವ ಸಾವಿರಾ

---

1 ಇಲ್ಲಿ "ದೃಷ್ಟ ಏವಹಿನಶ್ಶೋಕಮಪನೇಷ್ಯತಿರಾಘವಃ" ಎಂದುಮೂಲವು. ಆತನು ನಮ್ಮ ಕಣ್ಣಿಗೆ ಗೋಚರಿಸಿದರೆಸಾಕು, ಆತನು ನಮ್ಮನ್ನುನೋಡಿ ಕಿರುನಗೆಯಿಂದ ನಗಬೇಕಾದ ಅವಶ್ಯಕವೂ ಇಲ್ಲ. ಆತನು ನಮ್ಮೊಡನೆ ಮೃದುವಾದ ಮಾತುಗಳನ್ನಾಡಿ ಮನಸ್ಸಂತೋಷಪಡಿಸಬೇಕಾದ ಅವಶ್ಯಕತೆಯೂ ಇಲ್ಲ. ನಾವು ನಮ್ಮ ದುಃಖವನ್ನು ನೀಗಿಸಿಕೊಳ್ಳುವುದಕ್ಕಾಗಿ ಬೇರೆ ಯಾವುದೊಂದು ಪ್ರಯತ್ನವನ್ನೂಮಾಡಬೇಕಾದುದಿಲ್ಲ. ಆತನನ್ನು ದೂರದಿಂದ ಕಂಡಮಾತ್ರಕ್ಕೆ ಆಗಲೇ ನಮ್ಮದುಃಖವೆಲ್ಲವೂ ನೀಗುವುವೆಂದುಭಾವವು.

ರುಮಂದಿ ಬ್ರಾಹ್ಮಣೋತ್ತಮರು ಎತ್ತಿನಬಂಡಿಗಳಮೇಲೆ ಕುಳಿತು ಭರತನ ಹಿಂದೆ ಹೊರಟರು. ಹೀಗೆ ರಾಮದರ್ಶನಾರ್ಥವಾಗಿ ಹೊರಟವರೆಲ್ಲರೂ ತಮ್ಮತಮ್ಮ ಸ್ಥಿತಿಗೆ ತಕ್ಕಂತೆ ಚೆನ್ನಾಗಿಅಲಂಕರಿಸಿಕೊಂಡು,ಉತ್ತಮವಾದ ಮಡಿಬಟ್ಟೆಗಳನ್ನುಟ್ಟು, ಕೆಂಪುಗಂಧವನ್ನು ಪೂಸಿ, ನಾನಾವಿಧವಾದ ವಾಹನಗಳನ್ನೇರಿ ಮೆಲ್ಲಗೆ ಭರತನ ಹಿಂದೆ ಬರುತಿದ್ದರು. ಪರಮಸಂತೋಷದಿಂದುಬ್ಬಿದ ಚತುರಂಗಸೈನ್ಯವೂ, ಭ್ರಾತೃವತ್ಸಲನಾದ ಭರತನು ರಾಮನನ್ನು ಕರೆತರುವುದಕ್ಕಾಗಿ ಹೋಗುವನೆಂಬ ಹರ್ಷದಿಂದ ಆತನ ಮಾರ್ಗವನ್ನೇ ಹಿಡಿದು ನಡೆಯುತಿತ್ತು.ಇವರೆಲ್ಲರೂ ರಥಗಳನ್ನೂ ಕುದುರೆಗಳನ್ನೂ, ಆನೆಗಳನ್ನೂ, ಪಲ್ಲಕ್ಕಿಮೊದಲಾದ ಇತರವಾಹನಗಳನ್ನೂ ಏರಿ, ಬಹುದೂರದವರೆಗೆ ಪ್ರಯಾಣಮಾಡಿ ಗಂಗಾನದಿಯನ್ನು ಸಮೀಪಿಸಿದರು. ಅಲ್ಲಿ ರಾಮನಿಗೆ ಪರಮಮಿತ್ರನಾದ ಗುಹನೆಂಬ ವ್ಯಾಧಾಧಿಪತಿಯು, ಬಂಧುಜನರೊಡಗೂಡಿ ಎಚ್ಚರಿಕೆಯಿಂದ ಪಾಲಿಸುತಿಪ್ಪ ಶೃಂಗಿಬೇರಪುರದ ಕಡೆಗೆ ಬಂದು, ಅದರ ಸಮೀಪದಲ್ಲಿಯೇ ಗಂಗಾತೀರದಲ್ಲಿಳಿದರು. ಅನೇಕ ಚಕ್ರವಾಕ ಪಕ್ಷಿಗಳಿಗಾಶ್ರಯವಾದ ಆ ತೀರಪ್ರದೇಶದಲ್ಲಿಯೇ ಭರತನ ಸಮಸ್ತಸೈನ್ಯವೂ ಬೀಡನ್ನಿಳಿಸಿತು. ಆಗ ಭರತನು ತನ್ನನ್ನು ಹಿಂಬಾಲಿಸಿಬಂದಿರುವ ಅಪಾರವಾದ ಸೈನ್ಯವನ್ನೂ, ಪುಣ್ಯತೀರ್ಥವುಳ್ಳ ಆ ಗಂಗಾನದಿಯನ್ನೂ ನೋಡಿ, ಸಮೀಪದಲ್ಲಿದ್ದ ಸಮಸ್ತಮಂತ್ರಿಗಳನ್ನೂ ಕುರಿತು, "ಎಲೈ ಮಂತ್ರಿಶ್ರೇಷ್ಠರೆ! ನಮ್ಮ ಸಮಸ್ತಸೈನಿಕರಿಗೂ, ಅವರವರ ಇಷ್ಟಾನುಸಾರವಾಗಿ ಅನುಕೂಲವಾದ ಸ್ಥಳವನ್ನು ನೋಡಿಕೊಂಡು ಇಲ್ಲಿಯೇ ಇಳಿಯುವಂತೆ ಆಜ್ಞಾಪಿಸಿರಿ! ಈದಿವಸದಮಟ್ಟಿಗೆ ಇಲ್ಲಿಯೇ ವಿಶ್ರಮಿಸಿಕೊಂಡಿದ್ದು ನಾಳೆ ಈನದಿಯನ್ನು ದಾಟುವೆವು. ನಾನೂ ಅಷ್ಟರಲ್ಲಿ ಸ್ವರ್ಗಸ್ಥನಾದ ನನ್ನ ತಂದೆಗೆ ಊರ್ಧ್ವದೇಹಶುದ್ಧಿಗಾಗಿ ಈ ಪುಣ್ಯನದಿಯಲ್ಲಿಳಿದು ಜಲತರ್ಪಣವನ್ನು ಬಿಟ್ಟುಬರುವೆನು." ಎಂದನು ಈಮಾತನ್ನು ಕೇಳಿ ಮಂತ್ರಿಗಳೆಲ್ಲರೂ ಹಾಗೆಯೇ ಆಗಲೆಂದೊಪ್ಪಿದವರಾಗಿ, ಸಮಸ್ತಸೈನ್ಯಕ್ಕೂ ಅವರವರ ಮನಸ್ಸಿಗೊಪ್ಪಿದ ಸ್ಥಳಗಳನ್ನೇರ್ಪಡಿಸಿ ಬಹಳಎಚ್ಚರಿಕೆಯಿಂದ ಬೇರೆಬೇರೆಯಾಗಿ ಇಳಿಸಿದರು. ಭರತನು ತನ್ನ ಸಮಸ್ತಸೈನಕ್ಕೂ ಪಟಗೃಹಗಳೇ ಮೊದಲಾದ ಎಲ್ಲಾ ಸೌಕರ್ಯಗಳನ್ನೂ ಕಲ್ಪಿಸಿಕೊಟ್ಟು, ಗಂಗಾನದಿಯ

ತೀರಪ್ರದೇಶದಲ್ಲಿಳಿಸಿದಮೇಲೆ, ಮಹಾತ್ಮನಾದ ಆ ರಾಮನನ್ನು ಹಿಂತಿರುಗಿಸಿ ಕರೆತರುವುದಕ್ಕೆ ತಕ್ಕ ಉಪಾಯವಾವುದೆಂಬುದನ್ನೇ ತಾನು, ಮನಸ್ಸಿನಲ್ಲಿ ಚಿಂತಿಸುತ್ತ ಅಲ್ಲಿಯೇ ಇರುತಿದ್ದನು. ಇಲ್ಲಿಗೆ ಎಂಬತ್ತು ಮೂರನೆಯ ಸರ್ಗವು.

---

## ಭರತನಿಗೆ ಗುಹನು ಆತಿಥ್ಯಗಳನ್ನು ಮಾಡಿದುದು.

ಆಗ ಗಂಗಾನದಿಯ ತೀರದಲ್ಲಿ ಬಂದಿಳಿದಿದ್ದ ಅಪಾರವಾದ ಸೈನ್ಯವನ್ನು ನೋಡಿದೊಡನೆಯೇ ಶೃಂಗಿಬೇರಪುರಾಧಿಪತಿಯಾದ ಗುಹನು ಬೆಚ್ಚರಬಿದ್ದು, ತನ್ನ ಜ್ಞಾತಿಗಳನ್ನು ನೋಡಿ, “ಅದೋ! ಅಲ್ಲಿ ನೋಡಿದಿರಾ? ಮಹಾಸಾಗರದಂತೆ ಅಪಾರವಾದ ಒಂದು ದೊಡ್ಡಸೈನ್ಯವು ಗಂಗಾತೀರದಲ್ಲಿ ಬಂದಿಳಿದಿರುವುದು! ಇಪಕ್ಕೆ ಪಾರವೆಲ್ಲಿರುವುದೆಂದು ಮನಸ್ಸಿನಲ್ಲಿ ಎಣಿಸುವುದಕ್ಕೂ ಸಾಧ್ಯವಿಲ್ಲದಂತಿದೆ ! ಒಂದುವೇಳೆ ಭರತನು ತನ್ನ ತಾಯಿಯಂತೆಯೇ ತಾನೂ ದುರ್ಬುದ್ಧಿಯಿಂದ ರಾಮನನ್ನಿದಿರಿಸುವುದಕ್ಕಾಗಿ ತಾನೇ ಸೇನೆಯನ್ನು ಕಟ್ಟಿಕೊಂಡು ಬಂದಿರಬಹುದೆ? ಇದ್ದರೂ ಇರಬಹುದೆಂದೇ ಎಣಿಸಬೇಕಾಗಿದೆ. ಇದರಲ್ಲಿ ಸಂದೇಹವಿಲ್ಲ! ಅದೋ ಅಲ್ಲಿ ರಥದಮೇಲೆ ದೊಡ್ಡ ಆಕಾರವುಳ್ಳ ಕೋವಿದಾರಧ್ವಜವು ಕಾಣುತ್ತಿರುವುದಲ್ಲವೆ?ಇನ್ನು ಸಂದೇಹವೇನು? ಭರತನೇ ಸೇನಾಸಮೇತನಾಗಿ ಬಂದಿರುವನು. ನಮ್ಮ ಕಡೆಯವರೆಲ್ಲರನ್ನೂ ಈತನು ನಿರ್ಮೂಲವಾಗಿ ಕೊಂದುಹಾಕಿದರೂ ಹಾಕಬಹುದು. ಇವನು ದುಷ್ಟೆಯಾದ ಆ ಕೈಕೇಯಿಯ ಮಗನಲ್ಲವೆ? ಅವಳಿಗೆ ತಕ್ಕ ದುರ್ಬುದ್ಧಿಯೇ ಇವನಿಗೂ ಇರುವುದರಲ್ಲಿ ಸಂದೇಹವೇನಿದೆ? ದಶರಥನಂತೂ ಕೈಕೇಯಿಯ ಮಾತಿಗೆ ಕಿವಿಗೊಟ್ಟು ರಾಮನನ್ನು ಕಾಡುಗಟ್ಟಿಬಿಟ್ಟನು. ಈಗ ರಾಜ್ಯವೆಲ್ಲವೂ ಈ ಭರತನಕೈಗೆ ಸಿಕ್ಕಿಹೋಗಿರುವುದು. ಕೈಗೆಸಿಕ್ಕಿದ ರಾಜ್ಯವನ್ನು ಸಂಪೂರ್ಣವಾಗಿ ದಕ್ಕಿಸಿಕೊಳ್ಳಬೇಕೆಂಬ ದುರಾಶೆಯಿಂದ, ಈತನು ರಾಮನನ್ನು ಕೊಲ್ಲುವುದಕ್ಕಾಗಿಯೇ ಸೇನೆಯೊಡನೆ ಬಂದಿರುವನು. ರಾಮನು ಬಂದಮೇಲೆ ತನಗೆ ಈರಾಜ್ಯವು ದಕ್ಕದೆಂದು ತಾನೇ ತಿಳಿದುಕೊಂಡಿರುವನು. ಈಗ ರಾಮನು ತಕ್ಕ ಸಹಾಯಸಂಪತ್ತಿಯಿಲ್ಲದೆ ದುರ್ಬಲನಾಗಿರುವನೆಂದೂ

ತಿಳಿದು,ದಾಯಾದನಾದ ಆತನನ್ನು ನಿಗ್ರಹಿಸುವುದಕ್ಕೆ ಇದೇಸಮಯವೆಂದು, ಸೇನೆಯನ್ನು ಕಟ್ಟಿಕೊಂಡು ಬಂದಿರುವನು. ನನಗಾದರೋ ಆರಾಮನೇ ಪ್ರಭುವು. ನನಗೆ ಆತನೇ ಪರಮಮಿತ್ರನು. ಸಾಧ್ಯವಾದಮಟ್ಟಿಗೆ ಆತನಿಗೆ ಸಹಾಯಕರಾಗಿರಬೇಕಾದುದೇ ನಮ್ಮ ಕರ್ತವ್ಯವು. ಆದುದರಿಂದ ನೀವೆಲ್ಲರೂ ನಿಮ್ಮನಿಮ್ಮ ಆಯುಧಾದಿಗಳನ್ನು ಹಿಡಿದು ಸಿದ್ಧರಾಗಿ ಗಂಗಾತೀರಕ್ಕೆ ಹೊರಡಿರಿ!ನಮ್ಮಕಡೆಯ ಬೇಡರೆಲ್ಲರೂ ಸೇನೆಯೊಡನೆ ಆನದೀತೀರದಲ್ಲಿ ನಿಂತು,ನದೀತರಣಮಾರ್ಗದಲ್ಲಿ ಯಾವನೊಬ್ಬನನ್ನೂ ಬಿಡದೆ ಕಾವಲಿರಲಿ!ಅವರವರು ಆಹಾರಾರ್ಥವಾಗಿ ಗಡ್ಡೆಗೆಣಸುಗಳನ್ನೂ, ಮಾಂಸಗಳನ್ನೂ,ಹಣ್ಣುಗಳನ್ನೂ, ಸಿದ್ಧಪಡಿಸಿಕೊಂಡೇ ಅಲ್ಲಿಗೆ ಹೋಗಲಿ! ಒಂದೊಂದು ದೋಣಿಯಲ್ಲಿ ನೂರುನೂರು ಮಂದಿ ಬೇಡರೊಡನೆ ಐನೂರು ದೋಣಿಗಳು ಸಿದ್ಧವಾಗಿ ಹೋಗಲಿ ! ನಮ್ಮ ಬೇಡರಲ್ಲಿಯೂ ಬಳ್ಳೇಪ್ರಾಯಸಮರ್ಥರಾಗಿ, ಬಲಾಢ್ಯರಾಗಿರುವವರನ್ನೇ ಆರಿಸಿಕಳುಹಿಸಿರಿ. ಅವರೆಲ್ಲರೂ ಆಗಂಗಾನದಿಯಲ್ಲಿ ಯಾರೊಬ್ಬರೂ ದಾಟಿಹೋಗದಂತೆ ತಡೆಯುತ್ತಿರಲಿ" ಎಂದನು. ಆಮೇಲೆ ಪುನಃ ಆಗುಹನು ತನ್ನ ಮನಸ್ಸಿನಲ್ಲಿಯೇ ತಾನು, ಭರತನ ಸುಗುಣಗಳನ್ನು ಸ್ಮರಿಸಿಕೊಂಡು,ಇದಿರಿಗಿದ್ದ ಮಂತ್ರಿಗಳನ್ನು ನೋಡಿ"ಎಲೈ ಅಮಾತ್ಯರೆ!ಒಂದುವೇಳೆ ಭರತನು ರಾಮನಲ್ಲಿ ಸ್ನೇಹಭಾವದಿಂದಲೇ ಬಂದಿದ್ದರೂ ಇರಬಹುದು. ಹಾಗೆ ಆತನಲ್ಲಿ ರಾಮನವಿಷಯವಾಗಿ ದುರಭಿಪ್ರಾಯವೊಂದೂ ಇಲ್ಲವೆಂದು ನಿಶ್ಚಯವಾಗಿ ನಿಮಗೆ ತಿಳಿದಪಕ್ಷದಲ್ಲಿ, ಆತನ ಸೈನ್ಯವೆಲ್ಲವೂ ಕ್ಷೇಮದಿಂದಲೇ ಗಂಗೆಯನ್ನು ದಾಟಿಹೋಗಲಿ! ಹಾಗಿಲ್ಲದೆ ಆತನು ರಾಮನಿಗೆ ವಿರೋಧಿಯಾಗಿಯೇ ಬಂದಿದ್ದಪಕ್ಷದಲ್ಲಿ ಆತನಸೈನ್ಯವನ್ನು ಕಂಡಕಂಡಕಡೆಯಲ್ಲಿ ಧ್ವಂಸಮಾಡಿಬಿಡಿರಿ ! " ಎಂದು ಹೇಳಿ, ತಾನು ಲೋಕಮರ್ಯಾದೆಯನ್ನನುಸರಿಸಿ, ರಾಜನಾದ ಭರತನಿಗೆ ಕಾಣಿಕೆಯಾಗಿ ಪಟ್ಟೆಮಡಿ ಮೊದಲಾದವಸ್ತ್ರಾಭರಣಗಳನ್ನೂ ಮೀನುಗಳನ್ನೂ, ಮೃಗಮಾಂಸಗಳನ್ನೂ, ಜೇನನ್ನೂ ತೆಗೆದುಕೊಂಡು ಇದಿರಿಗೊಂಡು ಬಂದನು. ಹೀಗೆ ಸಪರಿವಾರನಾಗಿ ಬರುತಿದ್ದ ಗುಹನನ್ನು,ಭರತನ ಸಮೀಪದಲ್ಲಿದ್ದ ಸುಮಂತ್ರನು ದೂರದಿಂದಲೇನೋಡಿ, ಭರತನನ್ನು ಕುರಿತು ವಿನಯದಿಂದ "ಎಲೈ ರಾಜಪುತ್ರನೆ! ಅದೋನೋಡು! ಬೇಡರಿಗೆಲ್ಲಾ ಪ್ರಭುವಾದ ಗುಹನೆಂಬವನು ಸಾವಿರಾರುಮಂದಿ ಬಂಧುಗಳೊಡ

ಗೂಡಿ ಬರುತ್ತಿರುವನು. ಈತನಿಗೆ ದಂಡಕಾರಣ್ಯದ ಸಮಸ್ತಪ್ರದೇಶಗಳಲ್ಲಿ ಯೂ ಬಹಳದಿವಸಗಳ ಬಳಿಕೆಯುಂಟು. ನಿಮ್ಮಣ್ಣನಿಗೆ ಈತನು ಬಹಳ ಪ್ರಿಯ ಮಿತ್ರನು. ಇದರಮೇಲೆ ವಯೋವೃದ್ಧನಾಗಿಯೂ ಇರುವನು. ಆತನಿಗೆ ನೀನು ದರ್ಶನವನ್ನು ಕೊಟ್ಟು ಉಚಿತರೀತಿಯಿಂದ ಮನ್ನಿಸಬೇಕು. ಆತನು ಈಪ್ರದೇಶದ ಬೇಡರಿಗೆಲ್ಲಾ ದೊರೆಯೆನಿಸಿಕೊಂಡಿರುವನು. ರಾಮ ಲಕ್ಷ್ಮಣರ ವೃತ್ತಾಂತವನ್ನು ಇವನು ಆಗಾಗ ತಿಳಿದುಕೊಳ್ಳುತ್ತಿರುವನು. ಈಗಲೂ ಅವರೆಲ್ಲಿರುವರೆಂದು ಈತನಿಗೆ ನಿಶ್ಚಯವಾಗಿ ತಿಳಿದಿರಬಹುದು" ಎಂದನು. ಸುಮಂತ್ರನು ಹೇಳಿದ ಈ ಶುಭವಾಕ್ಯವನ್ನು ಕೇಳಿ ಭರತನು ಆತನನ್ನು ಕುರಿತು "ಎಲೆಸೂತನೆ! ಅದಕ್ಕೆತಡೆಯೇನು? ಆಗುಹನು ಈಕ್ಷಣವೇ ನನ್ನನ್ನು ಬಂದುನೋಡಬಹುದು" ಎಂದನು. ಅಷ್ಟರಲ್ಲಿ ಗುಹನು ಸಮೀಪಸ್ಥನಾಗಿ, ತನ್ನ ದರ್ಶನಕ್ಕೆ ಭರತನು ಅನುಮತಿಕೊಟ್ಟುದನ್ನು ಕೇಳಿ ಸಂತೋಷಯುಕ್ತನಾಗಿ, ತನ್ನ ಸಮಸ್ತ ಬಂಧುಗಳೊಡನೆ ಭರತನ ಬಳಿಗೆ ಬಂದು ವಿನಯದಿಂದ ಮುಂದೆನಿಂತು, "ಎಲೈರಾಜಪುತ್ರನೆ! ಈ ನಮ್ಮದೇಶವೆಲ್ಲವೂ ನಿನ್ನ ಅಯೋಧ್ಯೆಗೆ ಮನೆಯ ಹಿಂದಿನ ತೋಟದಂತೆಯೇ ಹೊರತು ಬೇರೆಯಲ್ಲ! ನೀನು ಇದನ್ನು ಬೇರೆಯವರದೆಂದೆಣಿಸಬೇಡ! ಇದರಲ್ಲಿ ನಿನಗೆ ಸರ್ವಸ್ವಾತಂತ್ರ್ಯವುಂಟು. ನೀನು ಇಲ್ಲಿಗೆ ಹೊರಟುಬರುವ ವಿಷಯವು ನಮಗೆ ಮೊದಲೇ ತಿಳಿಯದೆ ನಾವು ಮೋಸಹೋದೆವು. ಇದು ನಮಗೆ ಮೊದಲೇ ತಿಳಿದಿದ್ದರೆ ಇನ್ನೂ ಎಷ್ಟೋ ಅನುಕೂಲ್ಯಗಳನ್ನು ಕಲ್ಪಿಸಿಕೊಟ್ಟು ನಮ್ಮ ರಾಜಭಕ್ತಿಯನ್ನು ತೋರ್ಪಡಿಸುತಿದ್ದೆವು. ಇದೋ! ಈಗಲೂ ನಮ್ಮಸಮಸ್ತಸ್ವತ್ತನ್ನೂ ನಿನಗೇ ಒಪ್ಪಿಸಿರುವೆವು. ನಿನಗೆ ದಾಸಭೂತರಾದ ನಮ್ಮಮನೆಯಲ್ಲಿ ಸ್ವೇಚ್ಛೆಯಾಗಿ ಇದ್ದುಹೋಗಬಹುದು. ನಮ್ಮ ಕಡೆಯಬೇಡರು ಬೇಕಾದಷ್ಟು ಕಂದಮೂಲಗಳನ್ನೂ, ಫಲಗಳನ್ನೂ ಸಂಗ್ರಹಿಸಿಟ್ಟಿರುವರು. ಹಸಿಯ ಮಾಂಸವಾಗಲಿ, ಒಣಗಿದ ಮಾಂಸವಾಗಲಿ, ಯಾವುದು ಬೇಕಾದರೂ ಸಿದ್ಧವಾಗಿರುವುದು. ಕಾಡಿನಲ್ಲಿ ಸಿಕ್ಕುವ ಸಮಸ್ತಧಾನ್ಯಗಳೂ ಮನೆಯಲ್ಲಿ ತುಂಬಿರುವವು. ಈ ನಿನ್ನ ಸಮಸ್ತಸೈನ್ಯವೂ ಈ ರಾತ್ರಿಯಲ್ಲಿ ಇಲ್ಲಿಯೇ ಇದ್ದು, ನಮ್ಮ ಆತಿಥ್ಯವನ್ನು ಸ್ವೀಕರಿಸಿ ಹೋಗಬೇಕೆಂಬುದೇ ನನ್ನ ಪ್ರಾರ್ಥನೆಯು. ಹಾಗೆಯೇ

ನೀನೂ ನಮ್ಮ ಸತ್ಕಾರಗಳನ್ನು ಸ್ವೀಕರಿಸಿ, ಸೇನಾಸಮೇತನಾಗಿ ನಾಳೆ ಮುಂದಕ್ಕೆ ಪ್ರಯಾಣಮಾಡಬಹುದು" ಎಂದನು, ಇಲ್ಲಿಗೆ ಎಂಬತ್ತುನಾಲ್ಕನೆಯ ಸರ್ಗವು.

---

ಗುಹನು ಭರತನನ್ನು ಸಮಾಧಾನಪಡಿಸಿದುದು.

ನಿಷಾದಾಧಿಪತಿಯಾದ ಗುಹನು ಈ ಮಾತನ್ನು ಹೇಳಿದೊಡನೆ, ಪ್ರಾಜ್ಞನಾದ ಭರತನು ಯುಕ್ತಿಯುಕ್ತವಾದ ಮಾತುಗಳಿಂದ ಆತನನ್ನು ಮನ್ನಿಸಿ, ತನಗೆ ಗುರುವಾದ ರಾಮನಿಗೆ ಪ್ರಿಯಮಿತ್ರನೆಂಬ ಗೌರವಬುದ್ಧಿಯಿಟ್ಟು, ಮರ್ಯಾದೆಯಿಂದ ಸಂಬೋಧಿಸುತ್ತ "ಎಲೆ ಭದ್ರನೆ ! ಇದೇನು ? ನೀನು ಏಕಾಕಿಯಾಗಿದ್ದುಕೊಂಡು ಅಪಾರವಾದ ಈ ನನ್ನ ಸೈನ್ಯಕ್ಕೆ ಆತಿಥ್ಯವನ್ನು ಮಾಡುವೆನೆಂದು ಕುತೂಹಲಗೊಂಡಿರುವೆಯಲ್ಲಾ! ಈ ನಿನ್ನ ಕೋರಿಕೆಯನ್ನು ನೋಡಿದಾಗಲೇ ನನಗೆ ನಿನ್ನ ಸಮಸ್ತ ಸತ್ಕಾರಗಳೂ ಸೇರಿದಷ್ಟು ಸಂತೋಷವುಂಟಾಯಿತು" ಎಂದನು. ಮಹಾತೇಜಸ್ವಿಯಾದ ಭರತನು ಮರ್ಯಾದೆಯೊಡನೆ ಬಹುಗಂಭೀರವಾದ ಈ ಮಾತನ್ನು ಹೇಳಿದಮೇಲೆ, ಪುನಃ ಆ ಗುಹನನ್ನು ಕುರಿತು "ಎಲೈಗುಹನೆ! ಅದೆಲ್ಲವೂ ಹಾಗಿರಲಿ! ಈಗ ಭರದ್ವಾಜಾಶ್ರಮಕ್ಕೆ ಹೋಗಬೇಕಾದರೆ ಅನುಕೂಲವಾದ ದಾರಿಯಾವುದು? ಯಾವಕಡೆಯಿಂದ ಹೋಗಬೇಕು? ಈ ಪ್ರದೇಶಗಳೆಲ್ಲವೂ ಬಹಳದುರ್ಗಮಗಳಾಗಿರುವುವು. ಗಂಗಾತೀರಕ್ಕೆ ಸೇರಿದ ಈ ಜೌಗುಪ್ರದೇಶಗಳಲ್ಲಿ ನಡೆಯುವುದು ಇನ್ನೂ ಕಷ್ಟವಾಗಿರುವುದು. ಒಂದೊಂದು ಕಡೆಯಲ್ಲಿ ದಾಟಿಹೋಗುವುದೇ ಸಾಧ್ಯವಾಗುವುದಿಲ್ಲ" ಎಂದನು. ಇದನ್ನು ಕೇಳಿ, ಕಾಡುಗಳೆಲ್ಲವನ್ನೂ ತಿರುಗಿ ಬಹಳಪರಿಶ್ರಮವುಳ್ಳವನಾದ ಆ ಗುಹನು, ಭರತನನ್ನು ನೋಡಿ ವಿನಯದಿಂದ ಕೈಮುಗಿದು "ಎಲೈ ಮಹಾಯಶಸ್ವಿಯಾದ ರಾಜಕುಮಾರನೆ ! ನಿನಗೆ ಅದರ ಚಿಂತೆಯೇಕೆ? ನಾನೇ ನಿನ್ನ ಸಂಗಡ ಬರುವೆನು. ಇದಲ್ಲದೆ ಧನುರ್ಧಾರಿಗಳಾದ ನಮ್ಮ ಕಡೆಯ ಬೇಡರೆಲ್ಲರೂ ಬಹಳ ಎಚ್ಚರಿಕೆಯಿಂದ ನಿನ್ನನ್ನು ಹಿಂಬಾಲಿಸಿ ಬರುವರು. ಈ ಮಾರ್ಗವನ್ನು ಕುರಿತು ನೀನು ಸ್ವಲ್ಪವೂ ಅಂಜಬೇಕಾದುದಿಲ್ಲ. ಆದರೆ ಮೊದಲು ನನಗೆ ಒಂದು ಸಂದೇಹವಿರುವುದು. ಈಗ ನೀನು ರಾಮನ ಬಳಿಗೆ ವಿರೋಧಬುದ್ಧಿ

ಯಿಂದ ಹೋಗುವವನಲ್ಲವಷ್ಟೆ? ಏಕೆಂದರೆ, ಆ ರಾಮನು ಪರಮಧರ್ಮಾತ್ಮ ನು. ಯಾರೊಬ್ಬರಿಗೂ ಕೇಡನ್ನೆಣಿಸತಕ್ಕವನಲ್ಲ! ನಿನ್ನೊಡನಿರುವ ಈ ಅಪಾರ ವಾದ ಸೈನ್ಯವನ್ನು ನೋಡಿ ನನ್ನ ಮನಸ್ಸಿನಲ್ಲಿ ಸ್ವಲ್ಪ ಶಂಕೆಯುಂಟಾಗಿರುವು ದು. ನಾನು ಹೀಗೆ ಕೇಳಿದೆನೆಂದು ನೀನು ಕೋಪಿಸಕೂಡದು" ಎಂದನು. ಇದ ನ್ನು ಕೇಳಿ [1]ಆಕಾಶದಂತೆ ನಿರ್ಮಲಸ್ವಭಾವವುಳ್ಳ ಭರತನು, ಆ ಗುಹನನ್ನು ನೋಡಿ, ಸ್ವಲ್ಪವಾದರೂ ಕೋಪವನ್ನು ತೋರಿಸದೆ, ಮೃದುವಾದ ಮಾತಿ ನಿಂದ "ಎಲೈ ಗುಹನೆ! ನಾ... ...ಗೆ ಕೇಡನ್ನು ಬಯಸುವೆನೆಂಬ ಸಂ ದೇಹವಾದರೂ ಹುಟ್ಟುವಂತಾಯಿತೆ? ಛೀ! ಇಂತಹ ದುಷ್ಕಾಲವು ಇನ್ನೆಂದಿಗೂ ಉಂಟಾಗದಂತಿರಲಿ! ರಾಮನಿಗೆ ನಾನು ಕೇಡನ್ನು ಬಯ ಸುವೆನೆಂಬ ಶಂಕೆಯೂ ಜನರಿಗೆ ನನ್ನಲ್ಲಿ ಉಂಟಾಗದಿರಲಿ! ಜ್ಯೇಷ್ಠಭ್ರಾ ತೃವಾದ ಆತನು ನನಗೆ ತಂದೆಯಂತಲ್ಲವೆ? ಕಾಡಿನಲ್ಲಿ ಕಷ್ಟಪಡುತ್ತಿರುವ ಆತನನ್ನು ಮರ್ಯಾದೆಯಿಂದ ಹಿಂತಿರುಗಿಸಿ ಕರೆತರಬೇಕೆಂಬುದಕ್ಕಾಗಿಯೇ ನಾನು ಹೊರಟಿರುವೆನೇಹೊರತು ಬೇರೆಯಲ್ಲ. ನೀನು ನನ್ನ ವಿಷಯದಲ್ಲಿ ಬೇರೆ ಶಂಕಿಸಬೇಡ! ಬೇಕಾದರೆ ಆಣೆಯಿಟ್ಟು ಹೇಳುವೆನು. ಇದನ್ನು ಸ ತ್ಯವೆಂದು ತಿಳಿ" ಎಂದನು. ಇದನ್ನು ಕೇಳಿ ಗುಹನು ಪರಮಸಂತೋಷಯು ಕ್ತನಾಗಿ ಪುನಃ ಆ ಭರತನನ್ನು ಕುರಿತು "ಎಲೈ ಭರತನೆ! ನೀನೇ ಧನ್ಯನು! ಈ ಪ್ರಪಂಚದೊಳಗಾಗಿ ನಿನಗೆ ಸಮಾನರಾದವರಿಲ್ಲ! ಅನಾಯಾಸವಾಗಿ ಕೈಗೆ ಸಿಕ್ಕಿದ ರಾಜ್ಯದಲ್ಲಿಯೂ ಆಸೆಯಿಡದೆ, ಅಣ್ಣನಲ್ಲಿ ಭಕ್ತಿಯಿಂದ ಆತನನ್ನ ನುಸರಿಸಿ ಹೋಗುತ್ತಿರುವೆಯಲ್ಲಾ! ನಿನ್ನ ಸತ್ಕೀರ್ತಿಯು ಸಮಸ್ತ ಲೋಕ ಗಳನ್ನೂ ವ್ಯಾಪಿಸಿ ಶಾಶ್ವತವಾಗಿರುವುದರಲ್ಲಿ ಸಂದೇಹವಿಲ್ಲ. ಕಷ್ಟದ ಲ್ಲಿ ಸಿಕ್ಕಿಬಿದ್ದಿರುವ ರಾಮನನ್ನು ಹಿಂತಿರುಗಿಸಿ ಕರೆತರುವುದಕ್ಕಾಗಿ ಹೊರಟೆ

---

1 ಆಕಾಶದಂತೆ ನಿರ್ಮಲವೆಂಬುದರಿಂದ ಆಕಾಶಕ್ಕೆ ಕೊಳೆಯು ಹೇಗೆ ಅಂಟಲಾರ ದೋ, ಹಾಗೆಯೇ ಈತನಿಗೂ ದೋಷಸಂಬಂಧವೇ ಇಲ್ಲವೆಂದೂ, ಒಂದುವೇಳೆ ಇತರ ರು ಅದೇ ಆಕಾಶಕ್ಕೆ ಮಸಿಮೊದಲಾದುವನ್ನು ಬಳಿಯುವುದಕ್ಕೆ ಪ್ರಯತ್ನಿಸಿದರೂ, ಅದು ಅವರವರ ಕೈಗೇ ಅಂಟಿಕೊಳ್ಳುವುದಲ್ಲದೆ ಅದಕ್ಕೆ ಹೇಗೆ ಸಂಬಂಧಿಸಲಾರದೋ ಹಾಗೆ ಯೇ, ಭರತನ ಮೇಲೆ ಇಲ್ಲದ ದೋಷವನ್ನು ಹೊರಿಸಲೆಳಸುವವರು ತಾವೇ ದೋಷಭಾ ಗಿಗಳಾಗುವರೆಂದೂ ಭಾವವು.

ರುವ ನಿನ್ನಂತಹ ಧರ್ಮಾತ್ಮನು ಬೇರೆಯಾವನುಂಟು!" ಎಂದನು. ಹೀಗೆ ಗುಹನು ಭರತನೊಡನೆ ಮಾತಾಡುತ್ತಿರುವಾಗಲೇ ಸೂರ್ಯಪ್ರಭೆಯು ಕ್ರಮ ಕ್ರಮವಾಗಿ ಕುಂದುತ್ತ ರಾತ್ರಿಯು ಸಮೀಪಿಸಿತು. ಆಮೇಲೆ ಭರತನು ಸೇನೆಗಳನ್ನು ಅಲ್ಲಲ್ಲಿರಿಸಿ, ಗುಹನಸತ್ಕಾರಗಳೆಲ್ಲವನ್ನೂ ಪ್ರೀತಿಯಿಂದಾದರಿಸುತ್ತ, ಸಂತುಷ್ಟನಾಗಿದ್ದು, ಕೊನೆಗೆ ಶತ್ರುಘ್ನಸಹಿತನಾಗಿ ಶಯನಗೃಹಕ್ಕೆ ಹೋಗಿ ಮಲಗಿದನು. ಭರತನಾದರೋ ಆಗರ್ಭಶ್ರೀಮಂತನು. ಎಂದಿಗೂ ದುಃಖವನ್ನೇ ಕಂಡವನಲ್ಲ. ಮಹಾಧೈರ್ಯವುಳ್ಳವನು. ಧರ್ಮದಲ್ಲಿಯೇ ದೃಷ್ಟಿಯುಳ್ಳವನು. ಇಂತವನಿಗೂ ಕೂಡ ಈಗ ಮಹಾವ್ಯಸನವು ಪ್ರಾಪ್ತವಾಯಿತು. ರಾಮನ ವಿಷಯವಾದ ಚಿಂತೆಯೇ ಆತನನ್ನು ಹಗಲುರಾತ್ರಿಯೂ ಬಾಧಿಸುತಿತ್ತು. ಪಿತೃಶೋಕಾದಿಗಳಿಂದ ಮೊದಲೇ ಕಂದಿದ ಮೈಯುಳ್ಳ ಆ ಭರತನಿಗೆ ರಾಮವಿಷಯವಾದ ಚಿಂತಾಗ್ನಿಯು ಹೃದಯದಲ್ಲಿ ವ್ಯಾಪಿಸಿ,ಸಮೀಪದಲ್ಲಿ ಹಬ್ಬಿ ಬರುತ್ತಿರುವ ಕಾಡುಗಿಚ್ಚಿನ ಕಾವಿನಿಂದ ಮೊದಲೇ ಕಂದಿ ಹೋಗಿರುವ ಗಿಡದಲ್ಲಿ ಒಳಗೊಳಗೆ ಕೋಟರಾಗ್ನಿಯು ಉದ್ಭವಿಸಿ ಗೂಢವಾಗಿ ದಹಿಸುವಂತೆ ಸಂಕಟದಿಂದ ತತ್ತಳಿಸುತಿದ್ದನು. ಸೂರ್ಯಕಿರಣದಿಂದ ಕಾದುಹೋದ ಹಿಮವತ್ಪರ್ವತದಲ್ಲಿ ಹಿಮದನೀರು ಅವಿಚ್ಛಿನ್ನವಾಗಿ ಹೊರಡುವಂತೆ, ದುಃಖಾಗ್ನಿಯಿಂದ ಬೆಂದ ಭರತನದೇಹದಲ್ಲಿ ಬೆವರಿನನೀರು ಪ್ರವಾಹರೂಪವಾಗಿ ಹರಿಯುತಿತ್ತು. ಆ ರಾಜಪುತ್ರನಿಗೆ ದುಃಖವೆಂಬ ದೊಡ್ಡಬೆಟ್ಟವೊಂದು ಮೇಲೆ ಕಳಿದು ಬಿದ್ದಂತಾಯಿತು. [1] ರಾಮವಿಷಯವಾದ

---

I. ಮನಸ್ಸಿನ ಚಿಂತೆಯಿಂದುಂಟಾದ ಧ್ಯಾನಪರಂಪರೆಗಳು ಎಡೆಬಿಡದೆ ತುಂಬಿದ್ದುದರಿಂದ, ಅವುಗಳನ್ನು ಬಂಡೆಗಳಿಗೂ, ನಿಟ್ಟುಸಿರೆಂಬುದು ದೇಹದ ಒಳಭಾಗದಿಂದ ಕಿತ್ತು ಬರುವುದರಿಂದ ಅವುಗಳನ್ನು ಗಣಿಗಳಲ್ಲಿ ಹುದುಗಿರುವ ಗೈರಿಕಾದಿಧಾತುಗಳಿಗೂ, ದೈನ್ಯವೆಂಬುದು ಶಾಖೋಪಶಾಖೆಗಳಾಗಿ ಕವಲೊಡೆದು ಹೋಗುತ್ತಿರುವುದರಿಂದ ಅದನ್ನು ವೃಕ್ಷಸಮೂಹಕ್ಕೂ, ದುಃಖವೂ ಆಯಾಸವೂ ಮೇಲೆಮೇಲೆ ಉಬ್ಬಿಹೋಗುತ್ತಿದ್ದುದರಿಂದ ಅವುಗಳನ್ನು ಉನ್ನತವಾಗಿ ಬೆಳೆದ ಶಿಖರಗಳಿಗೂ, ಮೋಹವೆಂಬುದು ಪ್ರಾಣಭಯವನ್ನುಂಟುಮಾಡುತಿದ್ದುದರಿಂದ ಅದನ್ನು ಪರ್ವತನ ಮೇಲಿದ ಕ್ರೂರಮೃಗಗಳಿಗೂ, ಮನಸ್ಸಂತಾಪವು ದಟ್ಟವಾಗಿ ತುಂಬಿದ್ದುದರಿಂದ ಅದನ್ನು ಬಿದಿರುಮೆಳೆಗೂ ಹೋಲಿಸಿ, ಇವೆಲ್ಲವುಗಳಿಂದಲೂ ಕೂಡಿ ದುರ್ಭರವಾಗಿರುವ ಆತನ ವ್ಯಸನಭಾರವನ್ನು ಪರ್ವತಕ್ಕೆ ಹೋಲಿಸಿರುವುದಾಗಿಯೂ ತಿಳಿಯಬೇಕು.

ಧ್ಯಾನವೆಂಬುದೇ ಅದರ ಗುಹೆಗಳಲ್ಲಿದ್ದ ಕಲ್ಲುಗಳಂತಿದ್ದುವು. ಆತನ ನಿಟ್ಟು ಸಿರುಗಳೇ ಧಾತುಗಳಂತಾದುವು. ಇಂದ್ರಿಯಗಳೆಲ್ಲವೂ ಸ್ತಬ್ಧವಾದ ವೃಕ್ಷ ಸಮೂಹಗಳಂತಿದ್ದುವು. ಮೇಲೆ ಹೆಚ್ಚುತ್ತಿರುವ ದುಃಖವೂ ಆಯಾಸವೂ, ಮನೋವ್ಯಥೆಯೂ ಉಬ್ಬಿದ ಶಿಖರಗಳಂತಿದ್ದುವು.ಮೋಹವೆಂಬುದೇ ಅಸಂ ಖ್ಯಾತವಾದ ಕಾಡುಮೃಗಗಳಂತಿದ್ದುವು. ಆತನ ಮನಸ್ಸಿನ ಬೇಗೆಯೇ ಬೇರೆಬೇರೆ ಓಷಧಿಗಳಂತೆಯೂ, ಬಿದಿರುಮೆಳೆಗಳಂತೆಯೂ ಆದುವು. ಹೀಗೆ ಶೋಕವೆಂಬಪರ್ವತವೇ ಮೇಲೆಬಿದ್ದಂತೆ ಭರತನು ಬಹುದುಃಖಿತನಾಗಿ,ಆಗಾ ಗ ನಿಟ್ಟುಸಿರನ್ನು ಬಿಡುತ್ತ, ಆಗಾಗ ಪ್ರಜ್ಞೆತಪ್ಪುತ್ತ,ಮಹಾವಿಪತ್ತಿಗೆ ಸಿಕ್ಕಿದ ವನಂತೆ ನರಳುತ್ತ, ಮನೋವ್ಯಾಧಿಯಿಂದ ಪೀಡಿಸಲ್ಪಟ್ಟವನಾಗಿ, ಮಂದೆ ಯನ್ನು ತಪ್ಪಿ ಬಂದ ಎತ್ತಿನಂತೆ ತತ್ತಳಿಸುತಿದ್ದನು. ಆತನಿಗೆ ಯಾವಾಗಲೂ ಮನಸ್ಸಿನಲ್ಲಿ ಶಾಂತಿಯೆಂಬುದೇ ಉಂಟಾಗಲಿಲ್ಲ. ಮಹಾತ್ಮನಾದ ಭರತನು ಹೀಗೆ ಏಕಾಗ್ರಚಿತ್ತನಾಗಿ ಚಿಂತಿಸುತ್ತಿರುವಾಗ, ಗುಹನೂ ಈತನ ಬಳಿಗೆ ಬಂದು ಸೇರಿದನು. ಅವನು ಚಿಂತಿಸುತ್ತಿರುವ ಭರತನನ್ನು ನೋಡಿ ತಾನೂ ರಾಮನ ವಿಷಯವಾದ ದುಃಖವನ್ನು ತೋರಿಸುತ್ತ, ಆತನಿಗೆ ಸಮಾಧಾನ ವಾಕ್ಯಗಳನ್ನು ಹೇಳುತಿದ್ದನು. ಇಲ್ಲಿಗೆ ಎಂಬತ್ತೈದನೆಯಸರ್ಗವು.

---

{ ಗುಹನು ಭರತನೊಡನೆ ರಾಮನವಿಷಯವಾದ ಅನೇಕ ಕಥೆಗಳನ್ನಾಡುತಿದ್ದುದು.

ಆಮೇಲೆ[1] ವನಸಂಚಾರಗಳಲ್ಲಿ ವಿಶೇಷಪರಿಶ್ರಮವುಳ್ಳ ಗುಹನು,ಮಹಾ ತ್ಮನಾದ ಭರತನನ್ನು ಕುರಿತು, ಲಕ್ಷ್ಮಣನಿಗೆ ಅಣ್ಣನಾದ ರಾಮನಲ್ಲಿರುವ

---

1 ಇಲ್ಲಿ "ಆಚಚಕ್ಷೇಥಸದ್ಭಾವಂ ಲಕ್ಷ್ಮಣಸ್ಯ ಮಹಾತ್ಮನಃ । ಭರತಾಯಾಪ್ರ ಮೇಯಾಯ ಗುಹೋಗಹನಗೋಚರಃ" ಎಂದು ಮೂಲವು- ಮಹಾತ್ಮನಾದ ಲಕ್ಷ್ಮ ಣನ ಸದ್ಭಾವವನ್ನು ಎಂದರೆ "ಬಾಲ್ಯಾತ್ಪ್ರಭೃತಿಸುಸ್ನಿಗ್ಧಃ" ಎಂಬಂತೆ ಬಾಲ್ಯ ಮೊದಲುಗೊಂಡು ತನ್ನ ಅಣ್ಣನಾದ ರಾಮನಲ್ಲಿ ಬಹುಪ್ರೀತಿಯನ್ನಿಟ್ಟು ನಡೆಯುತಿ ದ್ದ ಜ್ಯೇಷ್ಠಾನುವರ್ತನವೆಂಬ ಆತನ ಸುಸ್ವಭಾವವನ್ನು ಕೇವಲ ಕಾಡುಮನುಷ್ಯನೆನಿಸಿ ಕೊಂಡ ಗುಹನೆಂಬಬೇಡನು, ಎಣೆಯಿಲ್ಲದ ಮಹಿಮೆಯುಳ್ಳ ಭರತನಿಗೆ ಹೇಳಿ ತಿಳಿಸಿದ ನು" ಎಂದರ್ಥವು. ಇದರಿಂದ ಭಗವದ್ವಿಷಯವಾದ ಉಪದೇಶವನ್ನು ಮಾಡುವುದಕ್ಕೆ

ಭಕ್ತಿವಿಶೇಷವನ್ನು ತಿಳಿಸಲಾರಂಭಿಸಿದನು. “ಎಲೈ ಭರತನೆ! ಅಣ್ಣನಾದ ರಾಮನಲ್ಲಿ ಲಕ್ಷ್ಮಣನಿಗಿರುವ ವಿಧೇಯತೆಯನ್ನು ನಾನೇನೆಂದು ಹೇಳಲಿ!ಅವರು ಇಲ್ಲಿದ್ದಾಗ ಒಂದಾನೊಂದುರಾತ್ರಿಯಲ್ಲಿ ರಾಮನು ಮಲಗಿರಲು, ಆತನ ಅಂಗರಕ್ಷಣೆಗಾಗಿ ಲಕ್ಷ್ಮಣನು ತಾನೇ ಧನುರ್ಬಾಣಗಳನ್ನು ಹಿಡಿದು ರಾತ್ರಿಯೆಲ್ಲವೂ ಎವೆಮುಚ್ಚದೆ ಎಚ್ಚರಿಕೆಯಿಂದ ಕಾದಿದ್ದನು. ಹೀಗೆ ಕಷ್ಟಪಡುತಿದ್ದ ಆಲಕ್ಷ್ಮಣನನ್ನು ನೋಡಿ ನಾನು “ಎಲೈ ರಘುನಂದನನೆ!ಇದೋ ಇಲ್ಲಿ ನಿನಗಾಗಿಯೂ ಹಾಸಿಗೆಯು ಸಿದ್ಧವಾಗಿರುವುದಲ್ಲವೆ? ಸುಖವಾಗಿ ಮಲಗು ! ಈವಿಧವಾದ ಕಷ್ಟಗಳಿಗೆ ರಾಜಪುತ್ರನಾದ ನೀನು ಅರ್ಹನಲ್ಲ. ವನಜೀವಿಗಳಾದ ನಾವು ಎಷ್ಟುಕಷ್ಟವನ್ನಾದರೂ ಸಹಿಸಬಲ್ಲೆವು. ಆದುದರಿಂದ ನಾವೆಲ್ಲರೂ ಎಚ್ಚರಗೊಂಡು ಕಾವಲಿರುವೆವು. ನನಗೆ ಈ ಭೂಲೋಕದಲ್ಲಿ ರಾಮನಿಗಿಂತಲೂ ಪ್ರಿಯವಾದ ವಸ್ತುವು ಬೇರೊಂದೂ ಇಲ್ಲವು. ಅವನಿಗಾಗಿ ನೀನು ಎಚ್ಚರಗೊಂಡಿರಬೇಕಾದುದಿಲ್ಲ. ಈವಿಷಯದಲ್ಲಿ ನೀನು ಸ್ವಲ್ಪವೂ ವಿಚಾರಪಡಬೇಕಾದುದಿಲ್ಲ. ನಾನು ಅಸತ್ಯವನ್ನು ಹೇಳುವೆನೆಂದು ನೀನೆಂದಿಗೂ ಎಣಿಸಬೇಡ! ಈರಾಮನ ಅನುಗ್ರಹದಿಂದಲೇ ನಾನು ಈಲೋಕದಲ್ಲಿ ಸತ್ಕೀರ್ತಿಯನ್ನಾಗಲಿ,ಧರ್ಮವನ್ನಾಗಲಿ,ಧನವನ್ನಾಗಲಿ ಪಡೆಯಬೇಕೇಹೊರತು ನನಗೆ ಬೇರೆ ಆಶ್ರಯವಿಲ್ಲ. ಅಂತಹ ಮಹಾತ್ಮನಾದ ರಾಮನನ್ನು ಕಾಯುವುದಕ್ಕೆ ಇಲ್ಲಿ ನಾನೊಬ್ಬನುಮಾತ್ರವಲ್ಲದೆ, ಸೀತಾಸಮೇತನಾಗಿ ಮಲಗಿರುವ ಈತನ ಅಂಗರಕ್ಷಣೆಗಾಗಿ ಇಲ್ಲಿ ನನ್ನ ಜ್ಞಾತಿಗಳೆಲ್ಲರೂ ಕಾವಲಿರುವರು. ನಾನೂ ಧನುರ್ಧಾರಿಯಾಗಿ ಎಚ್ಚರಿಕೆಯಿಂದಿರುವೆನು. ಈ ವನದಲ್ಲಿ ನನಗೆ ತಿಳಿಯದುದೊಂದೂ ಇಲ್ಲವು. ನಾನು ಈ ಪ್ರಾಂತ್ಯಗಳನ್ನೆಲ್ಲಾ ಪ್ರತಿದಿನವೂ ಸುತ್ತಿ ಬರತಕ್ಕವನು. ಇಲ್ಲಿಗೆ ಶತ್ರುಗಳು ತಮ್ಮ ಚತುರಂಗಸೈನ್ಯಗಳೊಡನೆ ಬಂದು ಇದಿರಿಸಿದರೂ, ನಾವು ನಿಮಿಷಮಾತ್ರದಲ್ಲಿ ಉಪಾಯದಿಂದ ಅವರನ್ನು ಓಡಿಸಬಿಡಬಲ್ಲೆವು. ನೀನು ಸುಖವಾಗಿ ಮಲಗಿರು"ಎಂದು ಆತನನ್ನು

---

ಚಿಕ್ಕವರು ದೊಡ್ಡವರೆಂಬ ಭೇದವಾಗಲಿ, ನೀಚೋತ್ತಮರೆಂಬ ಭೇದವಾಗಲಿ ಇಲ್ಲವು. ಹೇಳುವವರೆಲ್ಲರೂ ಗುರುಗಳು, ಆದರಿಂದ ಕೇಳುವವರೆಲ್ಲರೂ ಉಪದೇಶಕರೆಂದು ಸೂಚಿತವಾಗಿದೆ.

ನಾನು ನಿರ್ಬಂಧಿಸಿದೆನು. ಎಷ್ಟು ಹೇಳಿದರೇನು ? ಮಹಾತ್ಮನಾದ ಆ ಲಕ್ಷ್ಮಣನು ಸ್ವಧರ್ಮದಲ್ಲಿಯೇ ಧೃಷ್ಟಿಯುಳ್ಳವನಾದುದರಿಂದ,ನಾನು ಹೇಳುವವರೆಗೂ ಕೇಳುತಿದ್ದು, ಆಮೇಲೆ ಬಹುಮೃದುವಾಕ್ಯದಿಂದ ನಮ್ಮೆಲ್ಲರನ್ನೂ ಕುರಿತು "ದಶರಥಮಹಾರಾಜನ ಹೊಟ್ಟೆಯಲ್ಲಿ ಹುಟ್ಟಿದ ಈ ರಾಮನು,ರಾಜಪುತ್ರಿಯಾದ ಸೀತೆಯೊಡನೆ ಬರೀನೆಲದ ಮೇಲೆ ಮಲಗಿರುವುದನ್ನು ನೋಡಿದರೆ, ನನಗೆ ಪ್ರಾಣವನ್ನು ಇಟ್ಟುಕೊಂಡಿರುವುದೇ ಕಷ್ಟವಾಗಿರುವುದಲ್ಲವೆ? ಹೀಗಿರುವಾಗ ನನಗೆ ಹೇಗೆತಾನೇ ನಿದ್ರೆಯು ಬಂದೀತು ? ಇತರಸುಖಗಳಲ್ಲಿ ಹೇಗೆ ತಾನೇ ನನಗೆ ಆಸೆಯುಂಟಾಗುವುದು. ಎಲೈ ಗುಹನೆ!ದೇವದಾನವರೆಲ್ಲರೂ ಒಂದಾಗಿ ಬಂದು ಏಕಕಾಲದಲ್ಲಿ ಇದಿರಿಸಿದರೂ, ಯಾರಮುಂದೆ ಕ್ಷಣಮಾತ್ರವೂ ನಿಲ್ಲಲಾರರೋ ಅಂತಹ ಲೋಕೈಕವೀರನಾದ ಈರಾಮನು,ಈಗ ತನ್ನ ಪ್ರಿಯಪತ್ನಿಯೊಡನೆ ಬರೀನೆಲದಮೇಲೆ ಮಲಗಬೇಕಾಗಿಬಂದುದನ್ನು ನೋಡಿದೆಯಾ ? ದಶರಥನು ಎಷ್ಟೋ ತಪಸ್ಸುಗಳನ್ನು ಮಾಡಿ, ಅನೇಕವ್ರತಗಳನ್ನು ನಡೆಸಿ, ಅಸಂಖ್ಯಾತವಾದ ಯಾಗಗಳನ್ನು ಮುಗಿಸಿ ಈ ಪುತ್ರರತ್ನವನ್ನು ಪಡೆದನು. ತನಗೆ ಸಮಾನವಾದ ಸದ್ಗುಣವುಳ್ಳ ಈ ಒಬ್ಬಪುತ್ರನನ್ನೂ ಕಾಡಿಗೆ ತೊರೆದುಬಿಡಬೇಕಾಯಿತು. ಈ ಪುತ್ರನನ್ನಗಲಿದಮೇಲೆ ತಂದೆಯಾದ ದಶರಥನು ಇನ್ನು ಬಹುಕಾಲದವರೆಗೆ ಬದುಕಿಯೇ ಇರಲಾರನು.ಶೀಘ್ರದಲ್ಲಿಯೇ.ಭೂಮಿಗೆ ವೈಧವ್ಯವುಂಟಾಗುವುದು.ಇದುನಿಶ್ಚಯವು. ಇಷ್ಟುಹೊತ್ತಿಗೆ ಅಂತಃಪುರಸ್ತ್ರೀಯರೆಲ್ಲರೂ ಅತ್ತು ಸಾಕಾಗಿ ಬಳಲಿ ಸುಮ್ಮನಾಗಿಬಿಟ್ಟಿರುವರು. ಅರಮನೆಯಲ್ಲಿ ಮೊದಲು ದೊಡ್ಡಗದ್ದಲವುಂಟಾಗಿದ್ದರೂ, ಇಷ್ಟರೊಳಗೆ ಆ ಕೋಲಾಹಲವೆಲ್ಲವೂ ಶಾಂತವಾಗಿ ನಿಶ್ಶಬ್ದವಾಗಿರಬಹುದು. ದಶರಥನಾಗಲಿ, ಕೌಸಲ್ಯೆಯಾಗಲಿ,ನನ್ನ ತಾಯಿ ಸುಮಿತ್ರೆಯಾಗಲಿ ಇನ್ನು ಬಹುಕಾಲದವರೆಗೆ ಬದುಕಿರಲಾರರು. ಒಂದುವೇಳೆ ಕಷ್ಟದಿಂದ ಜೀವಿಸಿದ್ದರೂ ಈ ಒಂದುರಾತ್ರಿಯನ್ನು ಕಳೆಯಬಹುದೇಹೊರತು ಅದಕ್ಕೆಮೇಲೆ ಬದುಕಿರಲಾರರು. ಒಂದುವೇಳೆ ನನ್ನ ತಾಯಿಯಾದ ಸುಮಿತ್ರೆಗೆ ಶತ್ರುಘ್ನನೆಂಬ ಬೇರೊಬ್ಬ ಮಗನಿರುವುದರಿಂದ,ಆತನನ್ನು ನೋಡಿಕೊಂಡು ಅವಳು ಮಾತ್ರ ಬದುಕಿರಬಹುದಾದರೂ, ವೀರಮಾತೆಯಾದ ಕೌಸಲ್ಯೆಯು ಮಾತ್ರ ಎಂದಿಗೂ ಪ್ರಾಣವನ್ನು ನಿಲ್ಲಿಸಿಕೊಂಡಿರಲಾರಳು. ಅಂತೂ ಕಾರ್ಯವು

ಮಿಂಚಿಹೋಯಿತು. ಎಲ್ಲವೂ ಕೆಟ್ಟುಹೋಯಿತು! ಈಗ ಮಾಡತಕ್ಕದೇನು ? ನನ್ನ ತಂದೆಯಾದ ದಶರಥನ ದೌರ್ಭಾಗ್ಯವನ್ನು ಏನೆಂದುಹೇಳಲಿ! ಇಂತಹ ಸತ್ಪುತ್ರನಾದ ರಾಮನಿಗೆ ರಾಜ್ಯಾಭಿಷೇಕವನ್ನು ಮಾಡಿ ತನ್ನ ಕೋರಿಕೆಯನ್ನು ಈಡೇರಿಸಿಕೊಳ್ಳದೆಯೇ ಸಾಯಬೇಕಾಗಿಬಂತಲ್ಲವೆ ? ಇನ್ನು ನಮ್ಮ ದೌರ್ಭಾಗ್ಯವನ್ನು ಹೇಳಬೇಕಾಪುದೇನು ? ಆ ತಂದೆಯ ಮರಣಕಾಲದಲ್ಲಿ ಆತನ ಅಪರಸಂಸ್ಕಾರಗಳನ್ನು ಮಾಡತಕ್ಕ ಭಾಗ್ಯವೂ ನಮಗಿಲ್ಲದೇಹೋಯಿತು. ಭರತಶತ್ರುಘ್ನರಿಗೆ ಆ ಭಾಗ್ಯವಾದರೂ ಲಭಿಸಿತು. ಅವರಿಬ್ಬರೇ ಧನ್ಯರು!ತಂದೆಯು ಮರಣವನ್ನು ಹೊಂದಿದಾಗ ಆತನ ಪ್ರೇತಕಾರ್ಯಗಳನ್ನು ನಡೆಸುವುದಕ್ಕಿಂತಲೂ ಮಕ್ಕಳಿಗೆ ಬೇರೆಭಾಗ್ಯವೇನುಂಟು?ಆಹಾ!ಈಗಲೂಆ ಅಯೋಧ್ಯೆಯ ಅಂದವನ್ನು ನೆನೆಸಿಕೊಂಡರಮನಸ್ಸಿಗೆ ಎಷ್ಟೋ ವ್ಯಸನವುಂಟಾಗುವುದು.ಅಂದವಾದ ಚತುಷ್ಪಥಗಳೂ,ಬೇರೆಬೇರೆಯಾಗಿ ವಿಭಾಗಿಸಲ್ಪಟ್ಟ ರಾಜಮಾರ್ಗಗಳೂ, ಧನವಂತರ ಉಪ್ಪರಿಗೆಮನೆಗಳೂ, ವಿಚಿತ್ರವಿಚಿತ್ರಗಳಾದ ದೇವಾಲಯಗಳೂ, ರಾಜರ ಅರಮನೆಗಳೂ ನೋಡುವುದಕ್ಕೆ ಎಷ್ಟೋ ರಮ್ಯವಾಗಿರುವುವು. ಮನೆಗಳೆಲ್ಲವೂ ನವರತ್ನಖಚಿತವಾಗಿಯೇ ಕಂಗೊಳಿಸುತ್ತಿರುವುವು. ಎಲ್ಲಿ ನೋಡಿದರೂ ಆನೆಗಳು ! ಎಲ್ಲಿ ನೋಡಿದರೂ ಕುದುರೆಗಳು! ಎಲ್ಲಿ ನೋಡಿದರೂ ಪದಾತಿಗಳು! ಎಲ್ಲಿ ನೋಡಿದರೂ ರಥಗಳು ! ಹೀಗೆ ಚತುರಂಗಸೈನ್ಯವೂ ದಟ್ಟವಾಗಿ ತುಂಬಿರುವುವು. ಅಲ್ಲಿ ಅನವರತವೂ ಎಡೆಬಿಡದೆ ಮಂಗಳವಾದ್ಯಗಳು ಪ್ರತಿಧ್ವನಿಯನ್ನು ಕೊಡುತ್ತಿರುವುವು. ಅದು ಮಂಗಳಕಾರ್ಯಗಳಿಗೆ ನಿತ್ಯಾಶ್ರಯವಾಗಿರುವುದು. ಅಲ್ಲಿನ ಜನರೆಲ್ಲರೂ ತುಷ್ಟರಾಗಿಯೂ, ಪುಷ್ಟರಾಗಿಯೂ ಇರುವರು. ಉದ್ಯಾನಗಳೂ, ತೋಟಗಳೂ ಹೇರಳವಾಗಿ ತುಂಬಿರುವುವು. ಸಮಾಜಗಳೂ, ಉತ್ಸವಗಳೂ ಯಾವಾಗಲೂ ಎಡೆಬಿಡದೆ ನಡೆಯುತ್ತಿರುವುವು. ಹೀಗೆ ಲೋಕಮೋಹಕವಾದ ನನ್ನತಂದೆಯ ರಾಜಧಾನಿಯಲ್ಲಿ ಸಂಚರಿಸುವವರೇ ಧನ್ಯರಲ್ಲವೆ?ಅವರೇ ಪರಮಸುಖಿಗಳು. ನಮಗಂತೂ ಆ ಭಾಗ್ಯವೂ ಇಲ್ಲದೇಹೋಯಿತು. ಇನ್ನು ಹೇಳುವುದರಿಂದೇನು? ಅಯ್ಯೋ ! ಈ ಹದಿನಾಲ್ಕುವರ್ಷಗಳ ವನವಾಸದ ಅವಧಿಯನ್ನು ತೀರಿಸಿಕೊಂಡು ಕ್ಷೇಮದಿಂದ ರಾಮನೊಡಗೂಡಿ ಈ ಅಯೋಧ್ಯಾನಗರವನ್ನು ಪ್ರವೇಶಿಸುವೆನೆ?" ಎಂದು ಆ ಲಕ್ಷ್ಮಣನು ಬಹಳವಾಗಿ.

ಕೊರಗಿ ಪ್ರಲಾಪಿಸುತಿದ್ದನು. ಎಲೈಭರತನೆ! ಈ ಪ್ರಲಾಪಗಳಲ್ಲಿಯೇ ಆ ರಾತ್ರಿಯು ಕಳೆದು ಹೋಯಿತು. ಚೆನ್ನಾಗಿ ಬೆಳಗಾದಮೇಲೆ ರಾಮಲಕ್ಷ್ಮಣರಿಬ್ಬರೂ ಈ ಗಂಗಾತೀರದಲ್ಲಿಯೇ ಜಟೆಯನ್ನು ಧರಿಸಿಕೊಂಡರು. ಆಮೇಲೆ ನಾನು ಅವರನ್ನು ಸುಖವಾಗಿ ಈ ನದಿಯನ್ನು ದಾಟಿಸಿದೆನು. ಆನೆಯ ಸಲಗಗಳಂತೆ ಬಲಾಢ್ಯರಾದ ಅವರಿಬ್ಬರೂ ಜಟೆಯನ್ನು ಧರಿಸಿ, ನಾರು ಮಡಿಯನ್ನುಟ್ಟು ಕತ್ತಿ, ಬಿಲ್ಲು, ಬಾಣಗಳನ್ನು ಹಿಡಿದು, ಈ ಕಾಡನ್ನು ಸುತ್ತಿ ನೋಡುತ್ತ ಸೀತೆಯೊಡನೆ ಮುಂದಕ್ಕೆ ಪ್ರಯಾಣಮಾಡಿದರು. ಇದೀಗ ಇಲ್ಲಿ ನಡೆದ ವೃತ್ತಾಂತವು" ಎಂದನು. ಇಲ್ಲಿಗೆ ಎಂಬತ್ತಾರನೆಯಸರ್ಗವು.

---

ರಾಮನು ಜಲಾಹಾರವನ್ನು ಮಾತ್ರಮಾಡಿ ಸೀತೆಯೊಡನೆ ಮರದ ಕೆಳಗೆ ಮಲಗಿದ್ದ ವಿಷಯವನ್ನೂ ಗುಹನು ಭರತನಿಗೆ ತಿಳಿಸಿದುದು.

ರಾಮಲಕ್ಷ್ಮಣರು ಜಡೆಯನ್ನು ಧರಿಸಿ ಕಾಡಿಗೆ ಹೋದರೆಂಬ ಅಪ್ರಿಯವಾಕ್ಯವನ್ನುಕೇಳಿದೊಡನೆಯೇ ಭರತನು ವ್ಯಸನದಿಂದ ಪರವಶನಾಗಿ ಚಿಂತಿಸುತ್ತ "ಆಹಾ! ಹೀಗೆ ಜಡೆಯನ್ನು ಧರಿಸಿ ತಾಪಸವೇಷದಿಂದ ಹೊರಟುಹೋದ ರಾಮನು ಇನ್ನು ಮೇಲೆ ಹಿಂತಿರುಗುವನೆ?" ಎಂದು ಶಂಕಿಸಿ ಹಾಗೆಯೇ ಮೈಮರೆತವನಂತೆ ಮೂರ್ಛೆಗೊಂಡನು. ಆ ಭರತನಾದರೋ ಬಹಳಸುಕುಮಾರವಾದ ಮೈಯುಳ್ಳವನು. ಮಹಾಬಲಾಢ್ಯನು. ಸಿಂಹದಂತೆ ಎದೆಯಕಟ್ಟುಳ್ಳವನು. ಉದ್ದವಾದ ತೋಳುಗಳುಳ್ಳವನು. ಬಿಳೀಕಮಲದಂತೆ ವಿಸ್ತಾರವಾದ ಕಣ್ಣುಳ್ಳವನು. ಇನ್ನೂ ಎಳಪ್ರಾಯದವನು. ನೋಡುವವರಿಗೆಲ್ಲಾ ಆನಂದಕರವಾದ ರೂಪಸಂಪತ್ತಿಯುಳ್ಳವನು. ಇಂತಹ ಸರ್ವಲಕ್ಷಣಸಂಪನ್ನನಾದ ಆ ರಾಜಕುಮಾರನೂ, ಮೇಲಮೇಲೆ ಕಿವಿಗೆ ಬೀಳುತ್ತಿರುವ ಅಪ್ರಿಯವಾಕ್ಯಗಳಿಂದ ಕಂದಿ ಕೃಶನಾಗಿ, ಸ್ವಲ್ಪಹೊತ್ತಿನವರೆಗೆ ಮೈಮೇಲೆ ಪ್ರಜ್ಞೆಯಿಲ್ಲದೆ ಬುದ್ಧಿಭ್ರಮವುಳ್ಳವನಾಗಿ, ಕೊನೆಗೆ ಕಶೆಯಿಂದ ಹೊಡೆಯಲ್ಪಟ್ಟಮದ್ದಾನೆಯಂತೆ ಆ ದುಃಖವನ್ನು ಸಹಿಸಲಾರದೆ ಮೂರ್ಛಿತನಾಗಿ ಕೆಳಗೆಬಿದ್ದನು. ಭರತನ ಈ ಅವಸ್ಥೆಯನ್ನು ನೋಡಿ ಶತ್ರುಘ್ನನು ಸಮೀಪಕ್ಕೆ ಬಂದು, ಆತನ ದೇಹವನ್ನಪ್ಪಿಕೊಂಡು ಗೋಳಿಡುತ್ತ

ಕೊನೆಗೆ ತಾನೂ ಮೂರ್ಛೆಬಿದ್ದನು. ಇದನ್ನು ನೋಡಿ ಅಲ್ಲಿದ್ದಮಾತೆಯ ರೆಲ್ಲರೂ ಬೆಜ್ಜರಬಿದ್ದು ಓಡಿಬಂದರು. ರಾಮನ ವನಪ್ರಯಾಣದಿಂದೀಚೆಗೆ, ಮೇಲೆಮೇಲೆ ಒದಗಿಬರುತ್ತಿರುವ ಅನರ್ಥಪರಂಪರೆಗಳಿಂದ ಯಾರಿಗೂ ಸರಿ ಯಾಗಿ !ನಿದ್ರಾಹಾರಗಳಿಲ್ಲದೆ, ಅವರೆಲ್ಲರೂ ಕೃಶವಾದ ದೇಹವುಳ್ಳ ವರಾಗಿ ದುಃಖದಿಂದ ಕಂದಿದ್ದುದಲ್ಲದೆ, ಪತಿವಿರಹದಿಂದುಂಟಾದ ವ್ಯಸನವು ಅವರ ಮೈಯನ್ನು ಕೇವಲನಿಸ್ಸಾರವಾಗಿ ಮಾಡಿತ್ತು. ಈ ರಾಜಸ್ತ್ರೀಯರೆಲ್ಲ ರೂ ಆರ್ತ್ಯಾತುರದಿಂದ ಬಂದು ಮೂರ್ಛಿತನಾಗಿಬಿದ್ದಿದ್ದಭರತನಸುತ್ತಲೂ ಕುಳಿತು ಪ್ರಲಾಪಿಸುತಿದ್ದರು. ಅವರಲ್ಲಿ ಕೌಸಲ್ಯೆಯುಮಾತ್ರ ವ್ಯಸನವನ್ನು ತಡೆಯಲಾರದೆ ಭರತನ ಸಮೀಪಕ್ಕೆಬಂದು, ಆತನ ದೇಹವನ್ನುಮುಟ್ಟಿಸವ ರಿ, ಕರುವನ್ನು ಕಂಡಹಸುವಿನಂತೆ ಪ್ರೇಮಪರವಶಳಾಗಿ, ಆತನನ್ನುಕುರಿತು, ‘‘ವತ್ಸ ಭರತನೆ! ಈಗ ಯಾವ ಮಹಾವ್ಯಾಧಿಯು ನಿನಗೆ ಈಬಾಧೆಯನ್ನುಂ ಟುಮಾಡಿರುವುದು? ಅಯ್ಯೋ! ಈಗ ರಾಜವಂಶಕ್ಕೆಸೇರಿದ ನಮ್ಮೆಲ್ಲರ ಪ್ರಾ ಣವೂ ನಿನ್ನೊಬ್ಬನಕೈಯಲ್ಲಿಯೇ ಅಡಗಿರುವುದಲ್ಲವೆ? ರಾಮನು ತಮ್ಮನಾದ ಲಕ್ಷ್ಮಣನೊಡನೆ ಕಾಡಿಗೆ ಹೊರಟುಹೋಗಿದ್ದರೂ, ನಿನ್ನನ್ನು ನೋಡುತ್ತಿ ರುವುದರಿಂದ ನಾನು ಸ್ವಲ್ಪಮಟ್ಟಿಗಾದರೂ ಮನಸ್ಸಮಾಧಾನವನ್ನು ಹೊಂದಿ ಬದುಕುತ್ತಿರುವೆನು. ಅತ್ತಲಾಗಿ ನನ್ನ ಹೊಟ್ಟೆಯಲ್ಲಿ ಹುಟ್ಟಿದ ಮಗನೂ ಕಾಡುಪಾಲಾಗಿ ಹೊರಟು ಹೋದುದಲ್ಲದೆ, ಕೈಹಿಡಿದ ಗಂಡನೂ ಮೃತನಾದನು. ಇನ್ನು ನಮ್ಮೆಲ್ಲರಿಗೂ ನೀನೊಬ್ಬನೇ ದಿಕ್ಕಾಗಿರು ವೆಯಲ್ಲವೆ? ಎಲೈ ಪುತ್ರನೆ! ಲಕ್ಷ್ಮಣನ ವಿಷಯವಾಗಿಯಾಗಲಿ, ನನಗೆ ಒಬ್ಬ ನೇ ಮಗನಾಗಿ ಈಗ ಪತ್ನಿಯೊಡನೆ ಕಾಡುಪಾಲಾಗಿ ಹೊರಟು ಹೋಗಿರು ವ ರಾಮನ ವಿಷಯವಾಗಿಯಾಗಲಿ, ನಿನಗೆ ಅಪ್ರಿಯವಾಕ್ಯವೇನಾದರೂ ಕಿವಿಗೆ ಬಿದ್ದಿರುವುದೆ? ನೀನು ಆಕಸ್ಮಿಕವಾಗಿ ಈ ಅವಸ್ಥೆಯನ್ನು ಹೊಂದುವು ದಕ್ಕೆ ಕಾರಣವೇನು?” ಎಂದಳು. ಯಶಸ್ವಿಯಾದ ಭರತನು ಸ್ವಲ್ಪಹೊ ತ್ತಿನ ಮೇಲೆ ಚೇತರಿಸಿಕೊಂಡು ವ್ಯಸನದಿಂದಲೇ ಗೋಳಿಡುತ್ತ ಕೌಸಲ್ಯೆ ಯನ್ನು ನೋಡಿ ‘‘ಅಮ್ಮಾ! ಅದೇನೂ ಇಲ್ಲವು. ನೀನು ಅಂಜಬೇಡ.” ಎಂ ದು ಸಮಾಧಾನಪಡಿಸಿ, ಅತ್ತಲಾಗಿ ಗುಹನಕಡೆಗೆ ತಿರುಗಿ ‘ಎಲೈ ಗುಹನೆ! ನನ್ನ ಅಣ್ಣನಾದ ರಾಮನು ಆರಾತ್ರಿಯಲ್ಲಿ ಎಲ್ಲಿದ್ದನು? ಸೀತೆಯಲ್ಲಿದ್ದಳು?

ಲಕ್ಷ್ಮಣನಿದ್ದುದೆಲ್ಲಿ? ಅವರೆಲ್ಲರೂ ಯಾವ ಆಹಾರವನ್ನು ತೆಗೆದುಕೊಂಡರು? ಎಲ್ಲಿಮಲಗಿದರು? ಇವೆಲ್ಲವನ್ನೂ ನನಗೆ ವಿಸ್ತಾರವಾಗಿ ತಿಳಿಸುವೆಯಾ?." ಎಂದುಕೇಳಿದನು. ಆಗ ನಿಷಾದಾಧಿಪತಿಯಾದ ಗುಹನು, ರಾಮನ ವೃತ್ತಾಂತವನ್ನು ಕೀರ್ತಿಸಿಹೇಳತಕ್ಕ ಮಹಾಭಾಗ್ಯವಾದರೂ ತನಗೆ ಲಭಿಸಿತೆಂದು ಪರಮಸಂತೋಷಯುಕ್ತವಾಗಿ, ತನಗೆ ಪ್ರಿಯಾತಿಥಿಯಾಗಿ ಬಂದ ರಾಮನಿಗೆ ತಾನು ಹೇಗೆ ಸತ್ಕಾರಗಳನ್ನು ನಡೆಸಿದನೋ, ಅದೆಲ್ಲವನ್ನೂ ವಿವರವಾಗಿ ಹೇಳಲಾರಂಭಿಸಿದನು. ‹‹ಎಲೈ ರಾಜಕುಮಾರನೆ! ರಾಮನು ಇಲ್ಲಿಗೆ ಬಂದೊಡನೆಯೇ ನಾನು, ಆತನ ಭೋಜನಾರ್ಥವಾಗಿ ನಾನಾವಿಧಗಳಾದ ಭಕ್ಷ್ಯಗಳನ್ನೂ, ಅನ್ನವನ್ನೂ, ಫಲಮೂಲಾದಿಗಳನ್ನೂ, ಪಾನೀಯಾದ್ಯನೇಕಪದಾರ್ಥಗಳನ್ನೂ ತಂದೊದಗಿಸಿಟ್ಟೆನು. ಆದರೆ ಸತ್ಯಪರಾಕ್ರಮನಾದ ಆ ರಾಮನು ಅದೊಂದನ್ನೂ ಅಂಗೀಕರಿಸದೆ ಹಿಂತಿರುಗಿಸಿಬಿಟ್ಟನು. ನಾನು ತರಿಸಿಟ್ಟಭೋಜ್ಯವಸ್ತುಗಳೆಲ್ಲವನ್ನೂ ನೋಡಿ ಆ ರಾಮನು ತನ್ನ ಕ್ಷತ್ರಿಯ ಧರ್ಮವನ್ನು ಸ್ಮರಿಸಿದವನಾಗಿ ನನ್ನನ್ನು ನೋಡಿ ‹‹ಮಿತ್ರನೆ! ಕ್ಷತ್ರಿಯರಾದ ನಾವು ಇತರರಿಗೆ ದಾನಮಾಡುವುದಕ್ಕೆ ಮಾತ್ರವೇ ಅರ್ಹರೇಹೊರತು, ಇತರರಿಂದ ಪ್ರತಿಗ್ರಹಿಸುವುದು ನಮಗೆ ಧರ್ಮವಲ್ಲ. '' ಎಂದು [1]ಸಮಾಧಾನಪಡಿಸಿಬಿಟ್ಟನು. ಆಮೇಲೆ ಯಶಸ್ವಿಯಾದ ಆತನು ಲಕ್ಷ್ಮಣನು ತಂದಿಟ್ಟ ಗಂಗಾತೀರ್ಥವನ್ನೇ ಕುಡಿದು, ಆ ಜಲಾಹಾರದಿಂದಲೇ ತೃಪ್ತನಾಗಿ ಸೀತೆಯೊಡನೆ ಉಪವಾಸವಿದ್ದುಬಿಟ್ಟನು. ಆಮೇಲೆ ರಾಮನು ಕುಡಿದು ಮಿಕ್ಕ ಸ್ವಲ್ಪ

---

1 ಇಲ್ಲಿ ಗುಹನು ತಂದಿಟ್ಟ ಫಲಮೂಲಾದಿಗಳನ್ನು ನೋಡಿ, ಆ ಗುಹನಭಕ್ತಿಯಿಂದಲೇ ಅವೆಲ್ಲವೂ ಪವಿತ್ರವಾಗಿದ್ದರೂ, ಶಬರೀ ವಿದುರಾದಿಗಳಂತೆ ಆತನೂ ಪರಮಭಾಗವತನೆನಿಸಿಕೊಂಡಿದ್ದರೂ, ಅವು ತನಗೆ ಸ್ವೀಕಾರಾರ್ಹವಾಗಿದ್ದರೂ, ರಾಮನು ಅವುಗಳನ್ನು ಅಂಗೀಕರಿಸದೆ ಹೋದುದೇಕೆಂದರೆ; ತನಗೆ ಪ್ರಿಯರಾದ ತಂದೆ, ತಾಯಿ, ಮೊದಲಾದವರೆಲ್ಲರನ್ನೂ ಅಗಲಿಬಂದ ದುಃಖದಿಂದ ಮನಸ್ಸಿಗೆ ನೆಮ್ಮದಿಯಿಲ್ಲದೆ ಹೋಗಿದ್ದುದರಿಂದಲೂ, ಪುಣ್ಯನದೀತೀರದಲ್ಲಿ ಉಪವಾಸವಿರಬೇಕೆಂಬ ಉದ್ದೇಶವು ಮೊದಲೇ ಆತನಿಗೆ ಹುಟ್ಟಿದ್ದುದರಿಂದಲೂ, ಆಗ ಗುಹನು ಕೊಟ್ಟುದನ್ನು ಪ್ರತಿಗ್ರಹಿಸಲಿಲ್ಲವು. ಈ ವಿಷಯವು ಗುಹನಿಗೂ ತಿಳಿದಿದ್ದುದರಿಂದ ಆತನೂ ಪುನಃ ರಾಮನನ್ನು ನಿರ್ಬಂಧಿಸಲಿಲ್ಲವೆಂದೂ ಗ್ರಹಿಸಬೇಕು.



785. ಭರತನು ಸೀತಾರಾಮರಿಬ್ಬರೂ ಮರದಕೆಳಗೆ ಮಲಗಿದ್ದರೆಂಬುದನ್ನು ಗುಹನ ಮೂಲಕವಾಗಿ ಕೇಳಿ ಅಲ್ಲಿಯೇ ಮೂರ್ಛೆಬಿದ್ದದು.

ನೀರನ್ನೇ ಲಕ್ಷ್ಮಣನೂ ಕುಡಿದು ಅದರಿಂದಲೇ ಇದ್ದುಬಿಟ್ಟನು.[1] ಆ ಮೂವರೂ ವಾಙ್ನಿಯಮದಿಂದ ಏಕಾಗ್ರಚಿತ್ತರಾಗಿ [2] ಸಂಧ್ಯೋಪಾಸನೆಯನ್ನು ಮಾಡಿದ ಮೇಲೆ, ಲಕ್ಷ್ಮಣನು ತಾನಾಗಿಯೇ ಶೀಘ್ರವಾಗಿ ಹೋಗಿ ದರ್ಭೆಗಳನ್ನು ಸಂಗ್ರಹಿಸಿತಂದು ದರ್ಭಾಸ್ತರಣವನ್ನು ಕಲ್ಪಿಸಿಟ್ಟನು. ಸೀತಾರಾಮರಿಬ್ಬರೂ ಆಹಾಸಿಗೆಯ ಮೇಲೆ ಮಲಗಿದ್ದರು. ಬಹುದೂರದವರೆಗೆ ದಾರಿನಡೆದುದರಿಂದ ಸೀತಾರಾಮರಿಬ್ಬರೂ ಬಹಳವಾಗಿ ಬಳಲಿರುವುದನ್ನು ನೋಡಿ,ಲಕ್ಷ್ಮಣನು ತನ್ನ ಕೈಗಳಿಂದಲೇ ರಾಮನ ಪಾದಗಳನ್ನು ತೊಳೆದು, ಸೀತೆಗೂ ಪಾದಪ್ರಕ್ಷಾಳನಾರ್ಥವಾಗಿ ನೀರನ್ನು ತಂದಿಟ್ಟು, ತಾನುಮಾತ್ರ ದೂರವಾಗಿ ಬೇರೊಂದುಕಡೆಗೆ ಹೋಗಿ ಕಾವಲಾಗಿದ್ದನು. ಇದೋ! ಈ ಇಂಗಳದಮರದಡಿಯಲ್ಲಿಯೇ ಅವರು ಮಲಗಿದ್ದುದು! ಇದೋ! ಇಲ್ಲಿ ದರ್ಭಾಸ್ತರಣವೂ ಹಾಗೆಯೇ ಇರುವುದು ನೋಡು! ಇದರಮೇಲೆಯೇ ಸೀತಾರಾಮರಿಬ್ಬರೂ ಆ ರಾತ್ರಿಯಲ್ಲಿ ಮಲಗಿದ್ದರು. ಆ ರಾತ್ರಿಯಲ್ಲಿ ಲಕ್ಷ್ಮಣನಾದರೋ, ನಾಣೊತ್ತುಗಳನ್ನೂ, ಕೈಚೀಲಗಳನ್ನೂ ಧರಿಸಿ, ಬಾಣಗಳಿಂದತುಂಬಿದ ಎರಡು ಬತ್ತಳಿಕೆಗಳನ್ನು ಬೆನ್ನಿಗೆ ಕಟ್ಟಿಕೊಂಡು, ನಾಣೇರಿಸಲ್ಪ

---

1 ಇಲ್ಲಿ "ಮೂವರೂ" ಎಂದುದರಿಂದ ಸಂಧ್ಯಾಕಾಲದಲ್ಲಿ ಸೀತೆಗೂ ಧ್ಯಾನಜಪಾದಿನಿಯಮಗಳು ಕೆಲವಿದ್ದುವೆಂದು ತಿಳಿಯಬೇಕು.

2 ಹಿಂದೆ "ತತಶ್ಚೀರೋತ್ತರಾಸಂಗ ಸ್ಸಂಧ್ಯಾಮನ್ವಾಸ್ಯಪಶ್ಚಿಮಾಂ। ಜಲಮೇವಾದದೇ ಭೋಜ್ಯಂ ಲಕ್ಷ್ಮಣೇನಾಹೃತಂಸ್ವಯಂ॥" ಎಂಬುದಾಗಿ, ಮೊದಲು ಸಂಧ್ಯೋಪಾಸನೆಯನ್ನುಮಾಡಿ ಆಮೇಲೆ ಜಲಪಾನವನ್ನು ಮಾಡಿದುದಾಗಿ ಕಾಣಿಸಲ್ಪಟ್ಟಿರುವುದು. ಈಗಲಾದರೋ ಜಲಪಾನವನ್ನು ಮಾಡಿದಮೇಲೆ ಸಂಧ್ಯೋಪಾಸನೆಯನ್ನು ಮಾಡಿದುದಾಗಿ ಕಾಣಿಸಲ್ಪಟ್ಟಿದೆ. ಹೀಗೆ ಪರಸ್ಪರ ವಿರೋಧವಿರುವುದಕ್ಕೆ ಕಾರಣವೇನೆಂದು ಶಂಕೆಯುಂಟಾಗಬಹುದು. ಈವಿಷಯದಲ್ಲಿ ಮೊದಲು ಹೇಳಿದುದೇ ಕ್ರಮವು. ಇಲ್ಲಿ ಗುಹನು ತರಿಸಿಟ್ಟ ಆಹಾರವನ್ನು ರಾಮನು ಸ್ವೀಕರಿಸಲಿಲ್ಲವೆಂದು ಹೇಳಿದಾಗ, ಮತ್ತಾವುದನ್ನು ಭುಜಿಸಿದನೆಂದು ಶಂಕೆಯುಂಟಾಗಬಹುದೆಂದೆಣಿಸಿ, ಪ್ರಸಂಗಸಂಗತಿಯಿಂದ ಆ ವಿಷಯವನ್ನು ಇಲ್ಲಿಯೇ ತಿಳಿಸಲಾರಂಭಿಸಿ ಜಲಪಾನವನ್ನು ಹೇಳಿ, ಆಮೇಲೆ ಸಂಧ್ಯೋಪಾಸನೆಯನ್ನು ಹೇಳಿದುದಾಗಿ ಗ್ರಹಿಸಬೇಕು. ಕಾರ್ಯಕ್ರಮವೇನೋ ಮೊದಲು ಹೇಳಿದಂತೆಯೇ ನಡೆದುದರಿಂದ ಇಲ್ಲಿ ವಿರೋಧಶಂಕೆಗೆವಕಾಶವಿಲ್ಲವೆಂದು ತಿಳಿಯಬೇಕು.

ಟ್ಟ, ಮಹಾಧನುಸ್ಸನ್ನು ಹಿಡಿದು, ರಾತ್ರಿಯೆಲ್ಲವೂ ರೆಪ್ಪೆಮುಚ್ಚದೆ, ರಾಮನ ಶಯನಸ್ಥಳದ ಸುತ್ತಲೂ ಕಾವಲಾಗಿ ತಿರುಗುತಿದ್ದನು. ಆಗ ನಾನಾದರೋ ಉತ್ತಮವಾದ ಧನುರ್ಬಾಣಗಳನ್ನು ಹಿಡಿದು, [1] ಆ ಲಕ್ಷ್ಮಣನು ಹೋಗುತಿದ್ದದಾರಿಯನ್ನೇ ಅನುಸರಿಸಿ ಅವನಿಗೆ ಬೆಂಗಾವಲಾಗಿ ತಿರುಗುತಿದ್ದೆನು. ಹಾಗೆಯೇ ನನ್ನ ಕಡೆಯವರೆಲ್ಲರೂ ಬಹಳ ಎಚ್ಚರಿಕೆಯುಳ್ಳವರಾಗಿ, ಧನುರ್ಬಾಣಗಳನ್ನು ಹಿಡಿದು ಇಂದ್ರಸಮಾನನಾದ ಆರಾಮನ ಸುತ್ತಲೂ ಕಾವಲಿದ್ದು ಸುತ್ತುತಿದ್ದರು" ಎಂದನು. ಇಲ್ಲಿಗೆ ಎಂಬತ್ತೇಳನೆಯಸರ್ಗವು.

---

ಇಂಗಳದಮರದ ಕೆಳಗೆ ಸೀತೆಯ ಆಭರಣದಿಂದುದಿರಿದ ರತ್ನಗಳನ್ನೂ, ಆಕೆಯ ಪಟ್ಟೆವಸ್ತ್ರದಿಂದ ಉದಿರಿದ ನೂಲುಗಳನ್ನೂ ನೋಡಿ ಭರತನು ದುಃಖಿಸಿದುದು.

ಗುಹನು ಹೇಳಿದ ಮಾತುಗಳೆಲ್ಲವನ್ನೂ ಭರತನು ಕೇಳಿ, ಮಂತ್ರಿಗಳೊಡನೆ ಆ ಇಂಗಳದಮರದ ಕೆಳಕ್ಕೆ ಬಂದು, ರಾಮನು ಮಲಗಿದ್ದ ಹಾಸಿಗೆಯನ್ನು ನೋಡಿ ತನ್ನ ಮಾತೆಯರೆಲ್ಲರನ್ನೂ ಕುರಿತು, "ಎಲೈ ಜನನಿಯರೆ! ಮಹಾತ್ಮನಾದ ರಾಮನು ಆ ರಾತ್ರಿಯಲ್ಲಿ ಇಲ್ಲಿಯೇ ಮಲಗಿದ್ದನಂತೆ! ಇದೋ! ಈ ಹಾಸಿಗೆಯೆಲ್ಲವೂ ಕದಲಿರುವುದನ್ನು ನೋಡಿರಿ! ಮಹಾಭಾಗ್ಯಕ್ಕೆ ಡೆಯಾದ! ಇಕ್ಷ್ವಾಕುವಂಶದಲ್ಲಿ ಹುಟ್ಟಿ, ಭಾಗ್ಯಶಾಲಿಯಾಗಿ ಧೀಮಂತನೆನಿಸಿಕೊಂಡು ರಾಜಾಧಿರಾಜನಾದ್ದ ದಶರಥನ ಪುತ್ರನೆನಿಸಿಯೂ, ರಾಮನು ಹೀಗೆ ಬರೀನೆಲದಮೇಲೆ ಮಲಗಬೇಕಾಗಿ ಬಂತಲ್ಲವೆ? ಈ ದುರವಸ್ಥೆಯು ಎಂದಿಗೂ ಆತನಿಗೆ ಉಚಿತವಲ್ಲ. ಮೃದುವಾದ ಜಿಂಕೆಯ ಚರ್ಮವನ್ನು ಮೇಲೆ ಹೊದ್ದಿಸಿ,ಸರ್ವೋತ್ತಮವಾದ ದುಪ್ಪಟಿಗಳಿಂದ ಕೂಡಿ,ಶೀತೋಷ್ಣಾದಿಕಾಲಗಳಿಗೆ ತಕ್ಕಂತೆ ವಿಧವಿಧವಾಗಿರುವ ಸುಖಶಯ್ಯೆಯಲ್ಲಿ ಯಾ

---

1. ಲಕ್ಷ್ಮಣನು ರಾಮನಲ್ಲಿ ವಿಶೇಷಭಕ್ತಿಯುಳ್ಳವನೆಂದು ಗುಹನು ಚೆನ್ನಾಗಿ ತಿಳಿದುಕೊಂಡಿದ್ದರೂ, "ಅತಿಸ್ನೇಹ: ಪಾಪಶಂಕೀ" ಎಂಬಂತೆ 'ಲಕ್ಷ್ಮಣನೂ ದಾಯಾದದ್ವೇಷದಿಂದ ರಾಮನನ್ನು ಏನುಮಾಡಿಬಿಡುವನೋ?" ಎಂದುಶಂಕಿಸಿ ಶಸ್ತ್ರಧಾರಿಯಾಗಿ ತಾನು ಆತನಹಿಂದೆ ತಿರುಗುತಿದ್ದು ದಾಗಿಯೂ ಭಾವವು.

ವಾಗಲೂ ಮಲಗುತಿದ್ದ ಪುರುಷಶ್ರೇಷ್ಠನಾದ ಆರಾಮನು,ಹೀಗೆ ಬರೀನೆಲದ ಮೇಲೆ ಮಲಗಬೇಕೆಂದರೆ ಹೇಗೆತಾನೇ ಸಾಧ್ಯವು? ವಿಮಾನಗಳಿಗೆ ಸಮಾನ ವಾದ,ಉಪ್ಪರಿಗೆಗಳಮೇಲೆಯೂ, ಕೂಟಾಗಾರಗಳಲ್ಲಿಯೂ, ಚಿನ್ನದಿಂದಲೂ ಬೆಳ್ಳಿಯಿಂದಲೂ ಚಿತ್ರಕೆಲಸಮಾಡಲ್ಪಟ್ಟು ಉತ್ತಮವಾದ ರತ್ನಗಂಬಳಿಗ ಳಿಂದ ಹೊದ್ದಿಸಲ್ಪಟ್ಟ ನೆಲಗಟ್ಟುಗಳಲ್ಲಿಯೂ, ಪುಷ್ಪೋಪಹಾರಗಳಿಂದ ವಿ ಚಿತ್ರವಾಗಿಯೂ, ಅಗರುಚಂದನಗಳಿಂದ ಸುವಾಸಿತವಾಗಿಯೂ, ಬಿಳೀ ಮೇಘದಂತೆ ಹೊಳೆಯುತ್ತಿರುವ ಸೌಧಗಳಲ್ಲಿಯೂ, ಕಿವಿಗಿಂಪಾಗಿ ಕೂಗು ತ್ತಿರುವ ಗಿಳಿಗಳ ಗಾನಗಳಿಂದ ಮನೋಹರವಾದ ಪ್ರಾಸಾದಗಳಲ್ಲಿಯೂ, ಸುಗಂಧಶೀತಲವಾದ ವಾಯುಸಂಚಾರವುಳ್ಳ ಮೇಲುಮನೆಗಳಲ್ಲಿಯೂ, ಚಿನ್ನದ ಗೋಡೆಗಳಿಂದ ಮೇರುಪರ್ವತಕ್ಕೆ ಸಮಾನವಾಗಿ ನೇತ್ರಾನಂದಕರ ವಾದ ಮಹೋನ್ನತಗೃಹಗಳಲ್ಲಿಯೂ ಸುಖವಾಗಿ ಮಲಗುತಿದ್ದ ಆ ರಾಮ ನು, ಈ ಕಾಡಿನಲ್ಲಿ ನೆಲದಮೇಲೆ ಹೇಗೆ ಮಲಗಿದ್ದನೋ? ಮತ್ತು ಆತನನ್ನು ನಿದ್ರೆಯಿಂದ ಎಚ್ಚರಗೊಳಿಸುವುದಕ್ಕಾಗಿ ಒಂದು ಕಡೆಯಲ್ಲಿ, ಗಾನಗಳೂ, ಮತ್ತೊಂದುಕಡೆಯಲ್ಲಿ ವಾದ್ಯಧ್ವನಿಗಳೂ, ಬೇರೊಂದುಕಡೆಯಲ್ಲಿ ಅಂತಃ ಪುರಸ್ತ್ರೀಯರ ಕಾಲಂದುಗೆ ಮೊದಲಾದ ಆಭರಣಗಳ ಧ್ವನಿಗಳೂ, ಅಲ್ಲಲ್ಲಿ ಮೃದಂಗಧ್ವನಿಗಳೂ, ಪರಂಪರೆಯಾಗಿ ಹೊರಡುತಿದ್ದುವಲ್ಲವೆ?ಹೀಗೆ ಮಂ ಗಳವಾದ್ಯಗಳಿಂದ ಯಾವಾಗಲೂ ಎಚ್ಚರಗೊಳಿಸಲ್ಪಡುತಿದ್ದ ರಾಮನನ್ನು ಇಲ್ಲಿ ಎಚ್ಚರಿಸುವವರಾರು? ಆತನು ನಿದ್ರೆತಿಳಿದೆದ್ದಮೇಲೆಯೂಕೂಡ ಸೂ ತಮಾಗಧರೇ ಮೊದಲಾದ ಹೊಗಳುಭಟರು ಕಾಲೋಚಿತವಾದ ಪದ್ಯಗ ಳನ್ನು ಹೇಳಿ ಸ್ತೋತ್ರಮಾಡಿ ವಂದಿಸುತಿದ್ದರಲ್ಲವೆ? ಆತನು ಈ ಕಾಡಿನಲ್ಲಿ ಏಕಾಕಿಯಾಗಿದ್ದು ಹೇಗೆತಾನೇಮನಸ್ಸಿನಲ್ಲಿ ಕಳವಳಿಸದಿದ್ದನು? ಹಾ! ಕಷ್ಟ ವೆ! ರಾಮನು ಹೀಗೆ ಹುಲ್ಲಿನಮೇಲೆ ಮಲಗಿದ್ದನೆಂದು ಹೇಳಿದರೆ ನನಗೆ ಇದ ರಲ್ಲಿ ಸ್ವಲ್ಪವೂ ನಂಬಿಕೆಯಿಲ್ಲ! ಇದು ನಿಜವೆಂದೇ ನನಗೆ ತೋರಲಿಲ್ಲ! ಇದೇ ನು! ನನ್ನ ಮನಸ್ಸಿಗೆ ಭ್ರಮವೇನಾದರೂ ಉಂಟಾಗಿರಬಹುದೆ? ರಾಮನು ಈ ನೆಲದಮೇಲೆ ಮಲಗಿದ್ದನೆಂದು ನಾನೇನಾದರೂ ಸ್ವಪ್ನವನ್ನು ಕಂಡೆನೆ! ಹಾಗಿದ್ದರೂ ಇರಬಹುದು!ಇದು ಸ್ವಪ್ನವಲ್ಲದೆ ಬೇರೆಯಲ್ಲವೆಂದೇ ತೋರು

ವುದು! ಹಾಗಿಲ್ಲದಿದ್ದರೆ ಲೋಕದಲ್ಲಿ ನಡೆಯಲಾರದ ಈ ವಿಪರೀತಕಾರ್ಯಗ ಳೆಲ್ಲವೂ ನಡೆದಿರುವುವೆಂದು ಹೇಗೆತಾನೇ ನಂಬಬಹುದು? ದೈವಗತಿಗಿಂತಲೂ ಕಾಲಗತಿಯೇ ಬಲವತ್ತರವೆಂದು ನನಗೆ ತೋರಿರುವುದು. ಹಾಗಿಲ್ಲದಿದ್ದರೆ ದಶರಥಪುತ್ರನಾದ ಆ ರಾಮನೂ ಹೀಗೆ ನೆಲದಮೇಲೆ ಮಲಗಬೇಕಾಗಿರುರು ತಿತ್ತೆ? ವಿದೇಹರಾಜನಿಗೆ ಮಗಳಾಗಿ, ದಶರಥನಿಗೆ ಸೊಸೆಯಾಗಿ, ರಾಮನಿಗೆ ಕೈಹಿಡಿದ ಹೆಂಡತಿಯಾಗಿ, ಲೋಕೋತ್ತರಸೌಂದರ್ಯವುಳ್ಳವಳೆನಿಸಿಕೊಂಡ ಆ ಸೀತೆಯು ಹೀಗೆ ನೆಲದಮೇಲೆ ಮಲಗುವುದೆಂದರೇನು! ಹಾ! ಇದೇ ನನ್ನ ಅಣ್ಣನು ಮಲಗಿದ್ದ ಹಾಸಿಗೆಯು! ಇದೆಲ್ಲವೂ ಕದಲಿರುವುದಲ್ಲವೆ? ಈ ಕಠಿನ ವಾದ ನೆಲದಲ್ಲಿ ಆತನು ಕಷ್ಟದಿಂದ ಮಲಗಿ ತನ್ನ ಮೈಯ್ಯನ್ನು ಹೊರಳಿಸಿ ದುದರಿಂದ ಈ ಹುಲ್ಲೆಲ್ಲವೂ ಕಂದಿರುವುದು! ಸೀತೆಯು ತಾನು ಧರಿಸಿ ದ್ದ ಆಭರಣಗಳೊಡನೆಯೇ ಈ ಹಾಸಿಗೆಯಲ್ಲಿ ಮಲಗಿದ್ದಂತೆ ತೋರುತ್ತಿದೆ! ಇದೋ! ಅಲ್ಲಲ್ಲಿ ಚಿನ್ನದ ಪುಡಿಗಳು ಉದಿರಿರುವುವು. ಇದೋ! ಇಲ್ಲಿ ಸೀತೆಯು ತನ್ನ ಮೇಲುಹೊದ್ದಿಕೆಯನ್ನು ತೆಗೆದಿಟ್ಟಿದ್ದಳೆಂದು ತೋರುವುದು. ಪಟ್ಟೆ ಯ ನೂಲುಗಳೆಲ್ಲವೂ ಅಲ್ಲಲ್ಲಿ ತಗುಲಿಕೊಂಡಿರುವುವು. ಆ ಸೀತೆಯು ಎಲ್ಲಿ ಮಲಗಿದ್ದರೇನು? ಆಕೆಯು ಬಹುಸುಕುಮಾರಾಂಗಿಯಾಗಿ ಎಳಪ್ರಾಯದ ವಳಾಗಿದ್ದರೂ, ಈ ಕಠಿನವಾದ ನೆಲದಮೇಲೆ ಮಲಗಿದಾಗಲೂ ದುಃಖವ ನ್ನು ಕಾಣದಿರುವಳಲ್ಲ! ಇದರಿಂದ ಪತಿವ್ರತಾಸ್ತ್ರೀಯರಿಗೆ ಪತಿಸಾನ್ನಿಧ್ಯ ವೆಂಬುದು ಎಷ್ಟೇಕಷ್ಟದಲ್ಲಿಯೂ ಸುಖಕರವಾಗಿಯೇ ತೋರುವುದೆಂದೆಣಿ ಸುವೆನು! ಅಯ್ಯೋ! ರಾಮನು ಸೀತೆಯೊಡನೆ ಕೂಡಿ ದಿಕ್ಕಿಲ್ಲದವನಂತೆ ಹೀಗೆ ಕಠಿನವಾದ ನೆಲದಮೇಲೆ ಮಲಗಿ, ನನಗಾಗಿ ಈ ಕಷ್ಟವನ್ನನುಭವಿಸ ಬೇಕಾಯಿತಲ್ಲಾ! ನನಗಿಂತಲೂ ಪರಮಘಾತುಕನಾದವನು ಲೋಕದಲ್ಲಿ ಬೇರೊಬ್ಬನೂ ಇಲ್ಲವು! ಚಕ್ರವರ್ತಿಕುಲದಲ್ಲಿ ಹುಟ್ಟಿ, ಸಮಸ್ತಲೋಕಕ್ಕೂ ಪ್ರಿಯನಾಗಿ, ಸಮಸ್ತಜನಗಳಿಗೂ ಹಿತವನ್ನೇ ಕೋರುತ್ತಿರುವ ಆ ರಾಮನಿ ಗೂ ಈ ಅವಸ್ಥೆಯುಂಟಾಯಿತೆ! ಕನ್ನೈದಿಲೆಯಂತೆ ಶ್ಯಾಮವರ್ಣನಾಗಿ, ಕ ಮಲದಂತೆ ಕೆಂಪಾದ ಕಣ್ಣುಳ್ಳವನಾಗಿ, ಪ್ರಿಯದರ್ಶನನಾಗಿರುವ ಆ ರಾ ಮನು, ಜನ್ಮದಲ್ಲಿಯಾಗಲಿ, ಗುಣಗಳಲ್ಲಿಯಾಗಲಿ, ಶರೀರಲಕ್ಷಣಗಳಲ್ಲಿಯಾಗ

ಲಿ, ಯಾವಭಾಗದಲ್ಲಿ ನೋಡಿದರೂ ರಾಜ್ಯಾರ್ಹನಾಗಿ ಸುಖವನ್ನನುಭವಿಸುವುದಕ್ಕರ್ಹನೇ ಹೊರತು, ಎಷ್ಟು ಮಾತ್ರವಾದರೂ ಇಂತಹ ದುಃಖಗಳನ್ನನುಭವಿಸುವುದಕ್ಕೆ ತಕ್ಕವನಲ್ಲ. ಆತನು ಈಗ ಸುಖಾರ್ಹವಾದ ಮತ್ತು ಎಣೆಯಿಲ್ಲದ ಅಂತಹ ರಾಜ್ಯವನ್ನು ಬಿಟ್ಟು! ನೆಲದಮೇಲೆ ಹೇಗೆ ಮಲಗಬಲ್ಲನು! ಮಹಾಭಾಗನಾದ ಲಕ್ಷ್ಮಣನು ಕಷ್ಟಕಾಲವಲ್ಲಿಯೂ ಬಿಡದೆ ಅಣ್ಣನಾದ ರಾಮನನ್ನು ಅನುವರ್ತಿಸಿರುವನಲ್ಲವೆ? ಆತನೇ ಧನ್ಯನು! ಕಾಡಿನಲ್ಲಿಯೂ ತನ್ನ ಪತಿಸೇವೆಯನ್ನು ಬಿಡದೆ ಆತನನ್ನು ಅನುಸರಿಸಿ ಹೋದ ಸೀತೆಯೇ ಕೃತಾರ್ಥಳು. ಇನ್ನು ನಮ್ಮ ಬಾಳೇಕೆ? ಆ ಮಹಾತ್ಮನನ್ನು ಬಿಟ್ಟು ನಾವೆಲ್ಲರೂ ಹೊರಗಾಗಿರುವುದರಿಂದ, ಆತನು ನಮ್ಮ ಮಾತನ್ನೇ ಆದರಿಸುವನೋ ಇಲ್ಲವೋ ಎಂದು ಸಂದೇಹಿಸಬೇಕಾಗಿದೆ. ಅಂತಹ ಪ್ರಧಾನಪುರುಷನಿಲ್ಲದ ಮೇಲೆ ಈ ನಮ್ಮ ರಾಜ್ಯವೆಲ್ಲವೂ ಕೇವಲಶೂನ್ಯಪ್ರದೇಶದಂತೆಯೇ ನನಗೆ ತೋರಿರುವುದು. ದಶರಥನೂ ಮೃತನಾಗಿ, ರಾಮನೂ ಕಾಡಿಗೆ ಹೋಗಿರುವುದರಿಂದ ಈ ರಾಜ್ಯವು ಅನಾಯಕವಾಗಿದ್ದರೂ ಮತ್ತೊಬ್ಬರು ಇದಕ್ಕೆ ಆಸೆಪಟ್ಟು ಬರಲಾರರೆಂದೇ ಎಣಿಸುವೆನು. ಆ ರಾಮನು ಕಾಡಿನಲ್ಲಿದ್ದರೂ, ಆತನ ಬಾಹುವೀರ್ಯದಿಂದಲೇ ಈ ರಾಜ್ಯವು ಸುರಕ್ಷಿತವಾಗಿರಬೇಕೇಹೊರತು ಬೇರೆಯಲ್ಲ. ಈಗ ನಮ್ಮ ಅಯೋಧ್ಯೆಯಾದರೋ, ಮೊದಲಿನಂತೆ ಸಮುದ್ಧರಾದ ಹೊರಗಾವಲಿನವರೂ ಇಲ್ಲದೆ, ಒಳಗಾವಲೂ ಇಲ್ಲದೆ, ತೆರೆದಬಾಗಿಲಾಗಿರುವುದು. ಅದರಲ್ಲಿ ಆನೆಕುದುರೆಗಳನ್ನು ಆಯಾಸ್ಥಾನಗಳಲ್ಲಿ ಕಟ್ಟಿಡುವವರೂ ಇಲ್ಲವು. ಅಲ್ಲಿನ ಸೈನ್ಯಗಳಿಗೂ ಸ್ವಲ್ಪವಾದರೂ ಹರ್ಷವಿಲ್ಲ. ತಕ್ಕಪಾಲಕರೂ ಇಲ್ಲದೆ ಅನಾಯಕವಾಗಿ ಕೇವಲದುರ್ದಶೆಯಿಂದಿರುವುದು. ಅಲ್ಲಿ ನಗರರಕ್ಷಣೆಗೆ ಬೇಕಾದ ಸಾಧನಗಳೂ ತಪ್ಪಿಹೋಗಿರುವುವು. ಅದಕ್ಕೆ ಸುತ್ತುಗಾವಲೂ ಇಲ್ಲದಿರುವುದು. ಈ ಸ್ಥಿತಿಯಲ್ಲಿದ್ದರೂ ರಾಮಭಯದಿಂದ ಶತ್ರುರಾಜರು ಅದಕ್ಕೆ ಆಸೆಪಡದಿರುವರು. ವಿಷಮಿಶ್ರವಾದ ಭಕ್ಷ್ಯಣಗಳನ್ನು ಕಂಡರೆ ಹೇಗೋಹಾಗೆ ಹೆದರಿ ಹಿಂಜರಿಯುವರು. ಅದು ಹೇಗಾದರೂ ಹೋಗಲಿ! ಇದುಮೊದಲುಗೊಂಡು ನಾನೂ ರಾಮನ ಮಾರ್ಗವನ್ನೇ ಅವಲಂಬಿಸುವೆನು. ಬರೀನೆಲದಮೇಲೆಯೋ ಅಥವಾ ಹುಲ್ಲಿನ ಮೇಲೆಯೋ ಮಲಗು

ವೆನು. ಗೆಡ್ಡೆಗಳನ್ನೂ ಹಣ್ಣುಗಳನ್ನೂ ತಿಂದು ಕಾಲವನ್ನು ಕಳೆಯುವೆನು. ಜಡೆಯನ್ನು ಕಟ್ಟಿ ನಾರುಮಡಿಯನ್ನುಡುವೆನು. ಇದುವರೆಗೆ ಕಳೆದು ಹೋದುದು ಹೋಗಲಿ! ಇನ್ನು ಮುಂದೆ ರಾಮನು ಕಾಡಿನಲ್ಲಿರಬೇಕಾದ ಕಾಲವನ್ನು, ಆತನಿಗೆ ಪ್ರತಿಯಾಗಿ ನಾನೇ ಕಾಡಿನಲ್ಲಿ ಸುಖವಾಗಿದ್ದು ಕಳೆಯುವೆನು. ಹೀಗೆ ಮಾಡುವುದರಿಂದ ರಾಮನ ಪ್ರತಿಜ್ಞೆಗೂ ಭಂಗವುಂಟಾಗುವುದಿಲ್ಲ. ನಾನು ಕಾಡಿನಲ್ಲಿರುವಾಗ ನನ್ನ ಸಹಾಯಕ್ಕಾಗಿ ಶತ್ರುಘ್ನನು ನನ್ನ ಸಂಗಡಬರುವನು ಲಕ್ಷ್ಮಣನೊಡನೆ ರಾಮನೇ ಅಯೋಧ್ಯೆಯನ್ನು ಪಾಲಿಸುತ್ತಿರಲಿ! ಅಯೋಧ್ಯೆಯಲ್ಲಿ ಬ್ರಾಹ್ಮಣರೆಲ್ಲರೂ ರಾಮನಿಗೆ ಅಭಿಷೇಕವನ್ನು ನಡೆಸಬೇಕೆಂದು ಎಷ್ಟೋ ಕುತೂಹಲವುಳ್ಳವರಾಗಿರುವರು. ಅವರೆಲ್ಲರೂ ಅಭಿಷೇಕವನ್ನು ನಡೆಸಲಿ! ದೇವತೆಗಳು ನನ್ನಲ್ಲಿ ಪ್ರಸನ್ನರಾಗಿ ಈ ನನ್ನ ಕೋರಿಕೆಯನ್ನು ಸಲಿಸಿಕೊಡುವರೆ? ಆ ಭಾಗ್ಯವು ನನಗೆ ಲಭಿಸುವುದೆ! ಅದರ ಚಿಂತೆಯು ಹಾಗಿರಲಿ! ನಾನಾದರೋ ಈಗ ರಾಮನಬಳಿಗೆ ಹೋಗಿ, ಆತನಿಗೆ ಸಾಷ್ಟಾಂಗಪ್ರಣಾಮವನ್ನು ಮಾಡಿ, ಆತನನ್ನು ಅನೇಕವಿಧದಲ್ಲಿ ಪ್ರಾರ್ಥಿಸಿ ಪ್ರಸನ್ನನಾಗುವಂತೆ ಮಾಡುವೆನು. ಹಾಗಿದ್ದರೂ ಆತನು ನನ್ನಲ್ಲಿ ಅನುಗ್ರಹವನ್ನು ತೋರಿಸದಿದ್ದರೆ, ಆತನು ಕಾಡಿನಲ್ಲಿರುವವರೆಗೂ ನಾನೂ ಆತನನ್ನೇ ಅನುವರ್ತಿಸುತ್ತ ಕಾಡಿನಲ್ಲಿಯೇ ಇದ್ದುಬಿಡುವೆನು. ಆತನಿಗೆ ನಾನು ಒಡಹುಟ್ಟಿದ ತಮ್ಮನುಮಾತ್ರವೇ ಅಲ್ಲ! ದಾಸಭೂತನಾಗಿಯೂ ಇರುವೆನು. ಹೀಗಿರುವ ನನ್ನನ್ನು ಆತನು ಎಂದಿಗೂ ಉಪೇಕ್ಷಿಸಲಾರನು" ಎಂದನು. ಇಲ್ಲಿಗೆ ಎಂಬತ್ತೆಂಟನೆಯ ಸರ್ಗವು.

---

ಭರತನು ಗಂಗೆಯನ್ನು ದಾಟಿ ಭರದ್ವಾಜಾಶ್ರಮಕ್ಕೆ ಹೋದುದು.

ರಘುವಂಶಶ್ರೇಷ್ಠನಾದ ಭರತನು, ರಾತ್ರಿಯೆಲ್ಲವೂ ಆ ಗಂಗಾತೀರದಲ್ಲಿಯೇ ಇದ್ದು, ಬೆಳಗಾದಮೇಲೆ ಎದ್ದು ಶತ್ರುಘ್ನನನ್ನು ನೋಡಿ "ವತ್ಸ ಶತ್ರುಘ್ನನೆ! ಏಳು! ಇನ್ನೂ ಮಲಗಿರುವೆಯಾ? ನಾವು ಹೊರಡಬೇಡವೆ? ಈಗಲೇ ಎದ್ದುಹೋಗಿ ನಿಷಾದಾಧಿಪತಿಯಾದ ಗುಹನನ್ನು ಕರೆದುಕೊಂಡುಬಾ! ನಿನಗೆ ಶುಭವಾಗಲಿ. ಈ ಗಂಗಾನದಿಯನ್ನು ದಾಟುವುದಕ್ಕೆ ಅವನು ಸಹಾ

ಯಮಾಡುವನು" ಎಂದನು. ಹೀಗೆ ಭರತನು ತ್ವರೆಪಡಿಸುತ್ತಿರಲು ಅದನ್ನು ಕೇಳಿ ಶತ್ರುಘ್ನನು "ಅಣ್ಣಾ! ನಾನೂ [1] ಆರ್ಯನಾದ ಆ ರಾಮನನ್ನೇ ನೆನೆಸಿಕೊಂಡು ಎಚ್ಚರವಾಗಿಯೇ ಇರುವೆನು. ನಾನು ನಿದ್ರೆಮಾಡು ತ್ತಿರುವೆನೆಂದೆಣಿಸಬೇಡ!" ಎಂದನು. ಪುರುಷಶ್ರೇಷ್ಠರಾದ ಅಣ್ಣತಮ್ಮಂ ದಿರಿಬ್ಬರೂ ಪರಸ್ಪರಸಲ್ಲಾಪಮಾಡುತ್ತಿರುವಷ್ಟರಲ್ಲಿಯೇ ಗುಹನು ಭರತ ನನ್ನು ನೋಡುವುದಕ್ಕೆ ತಕ್ಕಸಮಯವನ್ನು ತಿಳಿದು ತಾನಾಗಿಯೇ ಒಳಗೆ ಹೋಗಿ ಆತನಿಗೆ ಕೈಮುಗಿದು "ಎಲೈ ಕಕುತ್ಸ್ಥವಂಶಶಿಖಾಮಣಿಯೆ! ರಾತ್ರಿಯಲ್ಲಿ ನಿನಗೆ ಈ ನದೀತೀರದಲ್ಲಿ ಸುಖನಿದ್ರೆಯುಂಟಾಯಿತೆ? ನಿನಗೂ ನಿನ್ನಸೈನ್ಯಗಳಿಗೂ ಯಾವುದೊಂದುಪದ್ರವವೂ ಉಂಟಾಗಲಿಲ್ಲವಷ್ಟೆ" ಎಂ ದನು. ಅದಕ್ಕಾ ಭರತನು "ಎಲೈಗುಹನೆ! ನಮಗೆ ರಾತ್ರಿಯಲ್ಲಿ ಸುಖವಾಗಿ ಯೇ ನಿದ್ರೆಯು ಬಂದಿತು. ನಿನ್ನ ಸತ್ಕಾರಗಳೆಲ್ಲವೂ ಲೋಪವಿಲ್ಲದೆ ನಮಗೆ ಸೇರಿದುವು. ಈಗ ನಿನ್ನಿಂದ ನಡೆಯಬೇಕಾದ ಮತ್ತೊಂದುಪಕಾರವುಂಟು. ನಿನ್ನ ಕಡೆಯಬಲೆಗಾರರನ್ನು ಕಳುಹಿಸಿ ನಮ್ಮನ್ನು ದೋಣಿಯಿಂದ ಈ ಗಂ ಗಾನದಿಯನ್ನು ದಾಟಿಸಿಬಿಡು" ಎಂದನು. ಆಗ ಗುಹನು ಭರತನು ಹೇಳಿದ ಮಾತನ್ನು ಕೇಳಿ, ತಾನೇ ಅತ್ಯಾತುರದಿಂದ ತನ್ನ ಪಟ್ಟಣಕ್ಕೆ ಹಿಂತಿರುಗಿಹೋ ಗಿ, ತನ್ನ ಬಂಧುಗಳನ್ನು ನೋಡಿ "ಎಲೈ ಪ್ರಿಯರೇ! ಏಳಿರಿ! ಏಳಿರಿ! ನಿಮಗೆ ಶುಭವಾಗಲಿ! ದೋಣಿಗಳನ್ನು ನಡೆಸಿಕೊಂಡು ಬನ್ನಿರಿ!ಭರತಾದಿಗಳನ್ನು ಗಂ ಗಾನದಿಯ ಆಚೆಯದಡಕ್ಕೆ ಬಿಟ್ಟು ಬರಬೇಕು" ಎಂದನು. ಇದನ್ನು ಕೇಳಿ ಅವರೆಲ್ಲರೂ ರಾಜಾಜ್ಞೆಯನ್ನು ಅತ್ಯಾದರದಿಂದ ಗೌರವಿಸುತ್ತ, ಬೇಗನೆ ಹೊರಟು, ತಮ್ಮ ಪಟ್ಟಣದ ನಾಲ್ಕುಕಡೆಗಳಲ್ಲಿಯೂ ಇದ್ದ ದೋಣಿಗಳೆಲ್ಲವ ನ್ನೂ ಸೇರಿಸಿ ಐನೂರುದೋಣಿಗಳನ್ನು ತರಿಸಿಟ್ಟರು. ಸ್ವಸ್ತಿಕವೆಂಬ ರಾಜಾರ್ಹವಾದ ಬೇರೆ ಕೆಲವುದೋಣಿಗಳನ್ನೂ ತರಿಸಿಟ್ಟರು. ಇವುಗಳಿಗೆ ನಾಲ್ಕುಮೂಲೆಗಳಲ್ಲಿಯೂ ಉತ್ತಮವಾದ ಘಂಟೆಗಳು ಕಟ್ಟಲ್ಪಟ್ಟಿದ್ದುವು.

---

1 ಇದರಿಂದ ಚರಮಪರ್ವನಿಷ್ಠನಾದವನಿಗೆ ಪ್ರಥಮಪರ್ವದಲ್ಲಿ ಅಭಿನಿವೇಶವು, ತನ್ನ ಶೇಷಿ (ಸ್ವಾಮಿ)ಗೆ ತೃಪ್ತಿಯನ್ನುಂಟುಮಾಡುವುದಕ್ಕಾಗಿಯೇ ಹೊರತು ಬೇರೆಯಲ್ಲ ವೆಂದು ಗ್ರಹಿಸಬೇಕು.

ಇವುಗಳ ಸುತ್ತಲೂ ವಿಚಿತ್ರವಾದ ಧ್ವಜಗಳೂ ಕಟ್ಟಲ್ಪಟ್ಟಿದ್ದುವು. ಅಲ್ಲಲ್ಲಿ ಸುವರ್ಣದ ಚಿತ್ರಕೆಲಸಗಳನ್ನು ಮಾಡಿದ್ದರು. ವಾಯುಸಂಚಾರಕ್ಕೆ ಅನುಕೂಲಿಸುವಂತೆಯೂ, ಬಿರುಗಾಳಿಯನ್ನು ತಡೆದಿಡುವುದಕ್ಕೆ ತಕ್ಕಂತೆಯೂ, ಅಲ್ಲಲ್ಲಿ ಗವಾಕ್ಷಗಳು ಮಾಡಲ್ಪಟ್ಟಿದ್ದುವು. ಮತ್ತು ಕಬ್ಬಿಣದ ಕೀಲುಗಳಿಂದ ಬಲವಾಗಿ ನಾಟಲ್ಪಟ್ಟಿದ್ದುವು. ಹೀಗೆ ಸ್ವಸ್ತಿಕಗಳೆಂದು ಕರೆಯಲ್ಪಡುವ ರಾಜಯೋಗ್ಯವಾದ ನಾವೆಗಳಲ್ಲಿ ಉತ್ತಮವಾದುದೊಂದನ್ನು ಆರಿಸಿ, ಗುಹನು ತಾನಾಗಿಯೇ ಹೋಗಿ ಭರತನ ಪ್ರಯಾಣಕ್ಕಾಗಿ ತರಿಸಿಟ್ಟನು. ಅದರ ಕೆಳಭಾಗಕ್ಕೆ ಬಿಳೀಕಂಬಳಿಯನ್ನು ಹಾಸಿದ್ದನು. ಘಂಟಾಧ್ವನಿಯಿಂದ ಕೂಡಿ ಅತಿಮನೋಹರವಾಗಿದ್ದ ಆನಾವೆಯನ್ನು ಭರತ ಶತ್ರುಘ್ನರಿಬ್ಬರೂ ಮೊದಲು ಏರಿದರು. ಆಮೇಲೆ ಕ್ರಮವಾಗಿ ವಸಿಷ್ಠನೂ, ಆಮೇಲೆ ಗುರುಜನಗಳೂ, ಆಮೇಲೆ ಇತರಬ್ರಾಹ್ಮಣರೂ ದೋಣಿಗಳನ್ನೇರಿದರು. ಆಮೇಲೆ ರಾಜಭಾರ್ಯೆಯರಾದ ಕೌಸಲ್ಯೆ, ಸುಮಿತ್ರೆ ಮೊದಲಾದವರೆಲ್ಲರೂ ಒಬ್ಬೊಬ್ಬರಾಗಿ ಅದೇ ದೋಣಿಯನ್ನೇರಿ ಕುಳಿತರು. ಆಮೇಲೆ ಬಂಡಿಗಳೂ, ಸಾಮಾನುಗಳೂ ಏರಿಸಲ್ಪಟ್ಟುವು. ಈ ಪ್ರಯಾಣಸಂಭ್ರಮದಲ್ಲಿ ಸೈನಿಕರೆಲ್ಲರೂ ತಾವು ಇಳಿದಿದ್ದ [1]ಬಿಡಾರಗಳಿಗೆ ಬೆಂಕಿಯಿಟ್ಟು ಆತುರದಿಂದ ಓಡಿಬರುವಾಗಲೂ, ನಾನುತಾನೆಂಬು ಸ್ಪರ್ಧೆಯಿಂದ ನೀರಿನಲ್ಲಿಳಿದು ದೋಣಿಯನ್ನೇರುವಾಗಲೂ, ನನ್ನದು ತನ್ನದೆಂದು ತಮ್ಮತಮ್ಮ ಪದಾರ್ಥಗಳನ್ನು ಸಂಗ್ರಹಿಸಿ ಕಟ್ಟಿಡುವಾಗಲೂ, ಅವರಲ್ಲಿ ಉಂಟಾದ ಕೋಲಾಹಲವು ಗಗನಸ್ಥಳವೆಲ್ಲವನ್ನೂ ವ್ಯಾಪಿಸಿತು. ಚಾಪೆಕಟ್ಟಲ್ಪಟ್ಟ ಆ ನಾವೆಗಳೆಲ್ಲವೂ ಸಮರ್ಥರಾದ ಬೆಸ್ತರಿಂದ ನಡೆಸಲ್ಪಡುತ್ತ ಅಷ್ಟುಜನಸಮೂಹವನ್ನೂ ಸಾಗಿಸಿಕೊಂಡು ಬಹುಬೇಗನೆ ಮುಂದುವರಿಯುತಿದ್ದುವು. ಹೀಗೆ ಸಾಗಿಬರುತಿದ್ದ ನಾವೆಗಳಲ್ಲಿ ಕೇವಲ ಸ್ತ್ರೀಸಮೂಹದಿಂದಲೇ ತುಂಬಿದ ನಾವೆಗಳು ಕೆಲವು; ಸೈನ್ಯಾಶ್ವಗಳಿಂದಲೇ ತುಂಬಿದುವು ಕೆಲವು; ರಥಗಳಿಂದಲೂ, ರಥದ

1 ರಾಜಭಟರು ತಾವು ಮೊದಲಿದ್ದಸ್ಥಳವನ್ನು ಬಿಟ್ಟು ಬೇರೊಂದುಕಡೆಗೆ ಹೋಗುವಾಗ, ತಮ್ಮ ಬಿಡಾರದಲ್ಲಿ ಬೆಂಕಿಯಿಟ್ಟುಹೋಗುವುದುಂಟು. ಜಯಲಕ್ಷ್ಮೀ ಸಮಾಗಮಾರ್ಥವಾಗಿ ಹೀಗೆಮಾಡುವ ವಾಡಿಕೆಯು.

ಕುದುರೆಗಳಿಂದಲೂ, ಎತ್ತುಗಳಿಂದಲೂ ತುಂಬಿದ ನಾವೆಗಳು ಕೆಲವು; ಧನ ರಾಶಿಯಿಂದ ತುಂಬಿದುವು ಕೆಲವು; ಹೀಗೆ ಬೇರೆಬೇರೆಯಾಗಿ ಸಾಲಾಗಿ ಹೊರಟು ಆಚೆಯ ದಡವನ್ನು ನಿಮಿಷಮಾತ್ರದಲ್ಲಿ ಮುಟ್ಟಿದುವು. ಅಲ್ಲಿ ಹೊರೆಗಳನ್ನಿಳಿಸಿ, ಏರಿದ್ದ ಜನರೆಲ್ಲರೂ ಇಳಿದಮೇಲೆ, ಅದನ್ನು ನಡೆಸುತಿದ್ದ ನಾವಿಕರೆಲ್ಲರೂ ತಮ್ಮತಮ್ಮ ದೋಣಿಗಳನ್ನು ನಡುನೀರಿಗೆ ತಂದು, ತಮ್ಮತಮ್ಮ ಚಾತುರ್ಯಕ್ಕೆ ತಕ್ಕಂತೆ ಅವುಗಳನ್ನು ವಿಚಿತ್ರಗತಿಯಿಂದ ನಡೆಸುತ್ತ ಸ್ವಲ್ಪ ಹೊತ್ತಿನವರೆಗೆ ವಿನೋದಿಸುತಿದ್ದರು. [1]ಮೇಲುಮನೆಗಳಂತಿರುವ ಅಂಬಾರಿಗಳಿಂದ ಶೋಭಿಸುತಿದ್ದ ಆನೆಗಳೆಲ್ಲವೂ ಮಾವಟಿಗರಿಂದ ಪ್ರೇರಿಸಲ್ಪಟ್ಟು, ತಾವಾಗಿಯೇ ಆ ಗಂಗಾನದಿಯನ್ನು ದಾಟಿಬರುತ್ತ, ಸಂಚರಿಸುತ್ತಿರುವ ಬೆಟ್ಟಗಳಂತೆ ಕಾಣುತಿದ್ದುವು. ಕೆಲವರು ನಾವೆಗಳನ್ನೂ, ಕೆಲವರು ಸಣ್ಣತೆಪ್ಪಗಳನ್ನೂ, ಕೆಲವರು ದೋಣಿಗಳನ್ನೂ ಏರಿ, ಆ ನದಿಯನ್ನು ದಾಟಿ ಹೋದರು. ವಿಶೇಷವಾದ ಬಾಹುಬಲವುಳ್ಳ ಮತ್ತೆ ಕೆಲವರು ತೋಳುಗಳಿಂದಲೇ ಈಜಿ ಹೋದರು. ಕೆಲವರು ಕೊಡಗಳನ್ನಪ್ಪಿಕೊಂಡು ಅದರ ಸಹಾಯದಿಂದ ದಾಟಿದರು. ಗಂಗಾಸ್ನಾನದಿಂದ ಪರಿಶುದ್ಧವಾದ ಆ ಸಮಸ್ತಸೈನ್ಯವೂ ಪ್ರಾಯಕವಾಗಿ ನಾವಿಕರಿಂದಲೇ ಸಾಗಿಸಲ್ಪಟ್ಟಿತು. ಗಂಗೆಯನ್ನು ದಾಟಿದ ಮೇಲೆ[2] ಮೈತ್ರಮುಹೂರ್ತಕ್ಕೆ ಸರಿಯಾಗಿ ಎಲ್ಲರೂ ಪ್ರಯಾಗವನವನ್ನು

---

1 "ಸವೈಜಯನ್ತಾಸ್ತುಗಜಾಃ" ಎಂದು ಮೂಲವು. ರಾಜರು ಆನೆಯಮೇಲೆ ಮನೆಗಳಂತಿರುವ ಅಂಬಾರಿಗಳನ್ನು ಏರಿಸಿ, ಅದರಮೇಲೇರಿ ಹೊರಡುವುದುಂಟು. ಆದುದರಿಂದಲೇ "ಸವೈಜಯಂತ" ವೆಂದರೆ ಗೃಹಗಳೊಡನೆ ಕೂಡಿದ ಆನೆಗಳೆಂದು ಅರ್ಥವು ಬರೆಯಲ್ಪಟ್ಟಿರುವುದು. ಇದಕ್ಕನುಸಾರವಾಗಿ "ಸಧ್ವಜಾಇವಪರ್ವತಾಃ" ಎಂಬ ದೃಷ್ಟಾಂತವಾಕ್ಯದಲ್ಲಿಯೂ "ಸಧ್ವಜಾಃ" ಎಂಬುದಕ್ಕೆ "ಧ್ವಜಗತಾ"ಎಂಬ ವ್ಯುತ್ಪತ್ತಿಯಿಂದ ಗತಿವಿಶಿಷ್ಟವಾದ ಜಂಗಮಪರ್ವತಗಳೆಂದೂ ಅರ್ಥಮಾಡಲ್ಪಟ್ಟಿದೆ. ಅಥವಾ ಇಲ್ಲಿ ಧ್ವಜವಿಶಿಷ್ಟವಾದ ಆನೆಗಳು ಧ್ವಜವೇರಿಸಲ್ಪಟ್ಟ ಬೆಟ್ಟಗಳಂತೆ ಕಾಣುತ್ತ ನದಿಯನ್ನು ದಾಟಿದುವೆಂದೂ ಅರ್ಥವನ್ನು ಹೇಳಬಹುದು.

2 ಹಗಲಿನ ಹದಿನೈದುಭಾಗಗಳಲ್ಲಿ ಮೂರನೆಯಭಾಗವಾದ ಎರಡುಗಳಿಗೆಗಳಿಗೆ ಮೈತ್ರಮುಹೂರ್ತವೆಂದು ಹೆಸರು ಮುಹೂರ್ತವೆಂದರೆ ಎರಡುಗಳಿಗೆಯ ಕಾಲವು. "ರೌದ್ರಸ್ಸಾರ್ಪಸ್ತಥಾ ಮೈತ್ರಃ ಪೈತ್ರೋ ವಾಸವ ಏವಚ । ಅಪ್ಯೋವೈಶ್ವಸ್ತಥಾ

ಸೇರಿದರು. ಅಲ್ಲಿ ಮಹಾತ್ಮನಾದ ಭರತನು ತನ್ನ ಸಮಸ್ತ ಸೈನ್ಯವನ್ನೂ ಸಮಾಧಾನಗೊಳಿಸಿ, ಅವರವರಿಗೆ ಅನುಕೂಲವಾದ ಸ್ಥಳಗಳನ್ನು ಕಲ್ಪಿಸಿ ಕೊಟ್ಟು, ಋಷಿಶ್ರೇಷ್ಠನಾದ ಭರದ್ವಾಜನನ್ನು ದರ್ಶನಮಾಡುವುದಕ್ಕಾಗಿ, ಋತ್ವಿಕ್ಪುರೋಹಿತರೊಡಗೂಡಿ ಆ ಆಶ್ರಮದಕಡೆಗೆ ಹೊರಟನು. ಸಮಸ್ತ ವೇದಗಳನ್ನೂ ಬಲ್ಲವನಾಗಿಯೂ, ಉತ್ತಮ ಸ್ವಭಾವವುಳ್ಳವನಾಗಿಯೂ, ಬೃಹಸ್ಪತಿಪುತ್ರನಾದುದರಿಂದ ದೇವತೆಗಳಿಗೆ : ಪುರೋಹಿತನಾಗಿಯೂ, ಬ್ರಾಹ್ಮಣೋತ್ತಮನಾಗಿಯೂ ಇದ್ದ ಆ ಭರದ್ವಾಜಮಹರ್ಷಿಯ ಆಶ್ರಮ ದಸಮೀಪಕ್ಕೆ ಬಂದು, ಅಲ್ಲಿ ಅತಿಮನೋಹರವಾದ ವೃಕ್ಷಸಮೂಹಗಳಿಂ ದಲೂ, ಅನೇಕ ಪರ್ಣಶಾಲೆಗಳಿಂದಲೂ ಕೂಡಿದ ಒಂದು ಮಹಾವನವ ನ್ನು ಕಂಡನು. ಇಲ್ಲಿ ಎಂಬತ್ತೊಂಬತ್ತನೆಯಸರ್ಗವು.

---

{ಭರತನು ಭರದ್ವಾಜಮಹರ್ಷಿಯನ್ನು ದರ್ಶನಮಾಡಿ ದುದು. ಪರಸ್ಪರಕುಶಲಪ್ರಶ್ನೆಗಳು.}

ಪುರುಷಶ್ರೇಷ್ಠನಾಗಿಯೂ, ಧರ್ಮಜ್ಞನಾಗಿಯೂ ಇರುವ ಆ ಭರ ತನು, ಇನ್ನೂ ಒಂದು ಹರಿದಾರಿಯ ದೂರವಿರುವಾಗಲೇ ಭರದ್ವಾಜಾಶ್ರ ಮವನ್ನು ಕಂಡು, ಅಲ್ಲಿಯೇ ತನ್ನ ಸೈನ್ಯವನ್ನು ನಿಲ್ಲಿಸಿಬಿಟ್ಟು, ಮಂತ್ರಿಗಳನ್ನು ಮಾತ್ರ ತನ್ನೊಡನೆ ಕರೆದುಕೊಂಡು, ಶಸ್ತ್ರಗಳೇ ಮೊದಲಾದ ತನ್ನ ಕ್ಷತ್ರಿಯ ವೇಷಗಳೆಲ್ಲವನ್ನೂ ತೆಗೆದುಹಾಕಿ, ಎರಡು [1] ಪಟ್ಟೆಮಡಿಗಳನ್ನು ಮಾತ್ರವೇ ಧರಿಸಿ, ಪುರೋಹಿತನಾದ ವಸಿಷ್ಠನನ್ನು ಮುಂದಿಟ್ಟುಕೊಂಡು ಋಷಿಯ

---

ಬ್ರಾಹ್ಮ:ಪ್ರಾಜೇಶ್ಯೆಂದ್ರಾಸ್ತ್ಥೈವಚ ॥ ಐಂದ್ರಾಗ್ನ್ಯೈನ್ಯೈಋತಶ್ಚೈವ ವಾರುಣಾರ್ಯ ಮಣಾಭಗೀ । ಏತೇತ್ರಕ್ರಮಶೋಽಜ್ಞೇಯಾಮುಹೂರ್ತಾದಶಪಂಚಚ" "ಎಂದು ಹ ದಿನೈದುಮುಹೂರ್ತಗಳಿಗೂ ಬೇರೆಬೇರೆಹೆಸರುಂಟು.

5 ಮೊದಲೇ ಭರತನು ಜಟಾವಲ್ಕಲಗಳನ್ನುಟ್ಟನಾಗಿ ಹೇಳಲ್ಪಟ್ಟಿದೆ. ಇಲ್ಲಿ ಪಟ್ಟೆ ಮಡಿಯನ್ನುಟ್ಟನಾಗಿ ಹೇಳುವುದು ಹೇಗೆಂದು ಶಂಕೆಯುಂಟಾಗಬಹುದು. ಮೊದಲು ನಾರುಮಡಿಯನ್ನುಡುವುದಾಗಿ ಪ್ರತಿಜ್ಞೆಯನ್ನು ಮಾತ್ರವೇ ಮಾಡಿದನೇಹೊರತು, ಭರ ದ್ವಾಜಾಶ್ರಮಕ್ಕೆ ಬಂದಮೇಲೆಯೇ ಅದರಂತೆ ಅನುಷ್ಠಿಸಿದುದಾಗಿ ಗ್ರಹಿಸಬೇಕು.



795. ಭರತನು ವಸಿಷ್ಠಾದಿಗಳೊಡನೆ ಭರದ್ವಾಜಾಶ್ರಮಕ್ಕೆ ಹೋಗಿ ಆ ಮಹರ್ಷಿ
ಯನ್ನು ದರ್ಶನಮಾಡಿದುದು.

ದರ್ಶನಾರ್ಥವಾಗಿ ಆಶ್ರಮದಕಡೆಗೆ ಕಾಲುನಡೆಯಿಂದಲೇ ಹೊರಟನು. ಹೀಗೆ ಮುಂದೆಮುಂದೆ ಹೋಗುತ್ತ ದೂರದಿಂದಲೇ ಭರದ್ವಾಜಮಹರ್ಷಿಯನ್ನು ಕಂಡು, ತನ್ನಮಂತ್ರಿಗಳನ್ನೂ ಅಲ್ಲಿಯೇ ನಿಲ್ಲಿಸಿಬಿಟ್ಟು, ತಾನುಮಾತ್ರ ಪುರೋಹಿತನಾದ ವಸಿಷ್ಠನನ್ನು ಹಿಂಬಾಲಿಸಿಹೋದನು. ಭರದ್ವಾಜಮಹರ್ಷಿಯು ವಸಿಷ್ಠನು ಬರುತ್ತಿರುವುದನ್ನು ನೋಡಿದೊಡನೆಯೇ, ಸಂಭ್ರಮದಿಂದ ತಟ್ಟನೆ ಆಸನವನ್ನು ಬಿಟ್ಟು ಎದ್ದು, ಶಿಷ್ಯರನ್ನುನೋಡಿ "ಅರ್ಘ್ಯವೆಲ್ಲಿ? ಅರ್ಘ್ಯವೆಲ್ಲಿ?" ಎಂದು ಅತ್ಯಾತುರದಿಂದ ತ್ವರೆಪಡಿಸಿದನು. ಆಮೇಲೆ ವಸಿಷ್ಠನ ಬಳಿಗೆಬಂದು ಅವನೊಡನೆ ಕಲೆತಿರುವಾಗ [1]ಭರತನು ಆಮಹರ್ಷಿಗೆ ಸಾಷ್ಟಾಂಗಪ್ರಣಾಮವನ್ನುಮಾಡಿದನು. ಆಗ ಭರದ್ವಾಜನು ತನ್ನಧ್ಯಾನದೃಷ್ಟಿಯಿಂದಲೂ,ವಸಿಷ್ಠನ ಸಾಹಚರ್ಯದಿಂದಲೂ ಆರಾಜಕುಮಾರನು ದಶರಥನಪುತ್ರನೆಂಬುದನ್ನು ತಿಳಿದು, ವಸಿಷ್ಠನಿಗೂ ಭರತನಿಗೂ ಕ್ರಮವಾಗಿ ಅರ್ಘ್ಯಪಾದ್ಯಾದಿ ಸತ್ಕಾರಗಳನ್ನುನಡೆಸಿ, ಆಹಾರಾರ್ಥವಾಗಿ ಫಲಮೂಲಗಳನ್ನು ತಂದಿಟ್ಟು, ಕ್ಷೇಮಲಾಭಗಳನ್ನು ವಿಚಾರಿಸತೊಡಗಿ, "ಎಲೈರಾಜಪುತ್ರನೆ? ಮನೆಯಲ್ಲಿ ಎಲ್ಲರೂ ಕ್ಷೇಮದಿಂದಿರುವರೆ?" ಎಂದು ಮೊದಲು ಕುಶಲಪ್ರಶ್ನೆಯನ್ನುಮಾಡಿ, ಆಮೇಲೆ ಕ್ರಮವಾಗಿ ಅಯೋಧ್ಯೆಯ ಕ್ಷೇಮವನ್ನೂ, ಮಂತ್ರಿಗಳು, ಮಿತ್ರರು, ಬಂಡಾರಗಳು, ಇವೇಮೊದಲಾದ ರಾಜ್ಯಾಂಗಗಳ ಕ್ಷೇಮವನ್ನೂ ವಿಚಾರಿಸಿದನು.ಆದರೆ,ದಶರಥನು ಮೃತಿಹೊಂದಿದನೆಂಬ ಸುದ್ದಿಯನ್ನು ಈಮಹರ್ಷಿಯುಮೊದಲೇ ತನ್ನ ಯೋಗದೃಷ್ಟಿಯಿಂದ ತಿಳಿದವನಾಗಿದ್ದುದರಿಂದ,ಆ ದಶರಥರಾಜನ ಸುದ್ದಿಯನ್ನೇ ಎತ್ತದೆಬಿಟ್ಟುಬಿಟ್ಟನು. ಹಾಗೆಯೇ ವಸಿಷ್ಠಭರತರಿಬ್ಬರೂ ಕ್ರಮವಾಗಿ ಆಭರದ್ವಾಜಮಹರ್ಷಿಯ[2]ದೇಹಾರೋಗ್ಯವನ್ನೂ ಅಗ್ನಿಹೋತ್ರಗಳ ನಿರ್ವಿಘ್ನಪರಿಸಮಾ

---

1 ಸಮಾನವಯಸ್ಸುಳ್ಳವನಾದುದರಿಂದ ಇಲ್ಲಿ ವಸಿಷ್ಠನು ನಮಸ್ಕಾರಮಾಡಲಿಲ್ಲವೆಂದು ತಿಳಿಯಬೇಕು.

2 ಭರದ್ವಾಜನಿಗೆ ಆತನ ದೇಹವೂ, ಅಗ್ನಿಯೂ ತಪಸ್ಸಾಧನಗಳಾಗಿರುವುದರಿಂದಲೂ, ಆ ವನದ ಮೃಗಪಕ್ಷಿಗಳೆಲ್ಲವೂ ಪವಿತ್ರಗಳಾಗಿ ಆತನಿಗೆ ಶಿಷ್ಯರಂತೆ ಉಪಚರಿಸುತ್ತಿರುವುದರಿಂದಲೂ,ವೃಕ್ಷಾದಿಗಳು ಆತನ ದೇಹಧಾರಣೆಗೆ ಸಹಾಯಕಗಳಾಗಿರುವುದರಿಂದಲೂ,ಅವೆಲ್ಲವುಗಳ ಕ್ಷೇಮಲಾಭವನ್ನೂ ವಸಿಷ್ಠಭರತರು ವಿಚಾರಿಸಿದುದಾಗಿಗ್ರಹಿಸಬೇಕು.

ಪ್ತಿಯನ್ನೂ, ಶಿಷ್ಯರ ಕ್ಷೇಮವನ್ನೂ, ಆಶ್ರಮವೃಕ್ಷಗಳ ಬೆಳೆವಳಿಕೆಯನ್ನೂ, ಆ ಆಶ್ರಮದ ಮೃಗಪಕ್ಷಿಗಳ ಸೌಖ್ಯವನ್ನೂ ವಿಚಾರಿಸಿದರು. ಮಹಾತಪಸ್ವಿಯಾದ ಭರದ್ವಾಜನು ಅವರಿಬ್ಬರಿಗೂ ತನ್ನ ಕ್ಷೇಮವನ್ನು ತಿಳಿಸಿದ ಮೇಲೆ ರಾಮನಲ್ಲಿ ತನಗಿರುವ ಪ್ರೇಮಾತಿಶಯದಿಂದ ಭರತನನ್ನು ನೋಡಿ “ವತ್ಸನೆ! ರಾಜ್ಯಕಾರ್ಯವನ್ನು ನಿರ್ವಹಿಸಬೇಕಾದ ನೀನು ಇಲ್ಲಿಗೇಕೆ ಬಂದೆ? ನೀನು ಆಕಸ್ಮಿಕವಾಗಿ ರಾಜ್ಯವನ್ನು ಬಿಟ್ಟು ಇಲ್ಲಿಗೆ ಬಂದುದನ್ನು ನೋಡಿ ನನ್ನ ಮನಸ್ಸಿಗೆ ಶಂಕೆಯುಂಟಾಗಿರುವುದು! ನಿಜಸ್ಥಿತಿಯನ್ನು ವಿವರವಾಗಿ ತಿಳಿಸು! ಸಮಸ್ತಲೋಕಕ್ಕೂ ಆನಂದವರ್ಧಕನಾಗಿ, ಶತ್ರುಗಳನ್ನು ಹುಟ್ಟಡಗಿಸತಕ್ಕ ಮಹಾವೀರ್ಯವುಳ್ಳ ಯಾವಪುತ್ರರತ್ನವನ್ನು ಕೌಸಲ್ಯೆಯು ಪಡೆದಿದ್ದಳೋ, ಆ ರಾಮನು ತನ್ನ ಪತ್ನಿಯನ್ನೂ, ಸಹೋದರನನ್ನೂ ಕರೆದುಕೊಂಡು ಕಾಡಿಗೆ ಹೊರಟುಹೋದನು. ತಂದೆಯಾದ ದಶರಥನೋ ತನ್ನ ಹೆಂಡತಿಯಮಾತಿಗೆ ಮರುಳಾಗಿ ಮಹಾಯಶಸ್ವಿಯಾದ ತನ್ನ ಪುತ್ರನನ್ನು ಹದಿನಾಲ್ಕುವರ್ಷಗಳವರೆಗೆ ಕಾಡಿನಲ್ಲಿರುವಂತೆ ನಿಯಮಿಸಿಕಳುಹಿಸಿ ಬಿಟ್ಟನು. ಅದುಹೋಗಲಿ! ಹುಟ್ಟಿದುದು ಮೊದಲು ಪಾಪಕಾರ್ಯವೆಂಬುದನ್ನೇ ಕಂಡರಿಯದ ಮಹಾತ್ಮನಾದ ಆರಾಮನಿಗಾಗಲಿ, ಆತನ ತಮ್ಮನಾದ ಲಕ್ಷ್ಮಣನಿಗಾಗಲಿ, ಯಾವುದಾದರೂ ಕೇಡನ್ನುಂಟುಮಾಡಬೇಕೆಂದು ಬಯಸಿ ನೀನು ಬಂದವನಲ್ಲವಷ್ಟೆ? ಈಗ ನೀನು ಇಷ್ಟಾತುರದಿಂದ ಸೇನಾಸಮೇತನಾಗಿ ಬಂದಿರುವುದನ್ನು ನೋಡಿದರೆ, ರಾಜ್ಯವನ್ನು ನಿಷ್ಕಂಟಕವಾಗಿ ಮಾಡಿಕೊಂಡು ನೀನೊಬ್ಬನೇ ಅನುಭವಿಸಬೇಕೆಂಬ ದುರುದ್ದೇಶದಿಂದ, ಆರಾಮಲಕ್ಷ್ಮಣರನ್ನು ಕಾಡಿನಲ್ಲಿಯೂ ಇರಗೊಡಿಸದೆ,ಅವರಿಗೆ ಕೇಡನ್ನು ಬಯಸಿ ಬಂದಿರಬಹುದೆಂದು ನೋಡಿದವರೆಲ್ಲರಿಗೂ ಶಂಕೆಯುಂಟಾಗುವಂತಿದೆಯಲ್ಲವೆ?” ಎಂದನು. ಈ ಕರ್ಣಕಠೋರವಾದ ಮಾತುಗಳನ್ನು ಕೇಳಿ ಭರತನು ಪರಮದುಃಖಿತನಾಗಿ, ಕಣ್ಣೀರುಬಿಡುತ್ತ, ಮಾತುಗಳು ತಡವರಿಸುತ್ತಿರಲು, ಆ ಭರದ್ವಾಜಮಹರ್ಷಿಯನ್ನು ನೋಡಿ, “ಹಾ ನಾನು ಕೆಟ್ಟೆನು! ಇನ್ನು ನನ್ನ ಬಾಳೇಕೆ? ಸಮಸ್ತಪ್ರಪಂಚವ್ಯಾಪಾರವನ್ನೂ ಧ್ಯಾನದೃಷ್ಟಿಯಿಂದಲೇ ಕಂಡುಕೊಳ್ಳುವ ಮಹಾಮಹಿಮೆಯುಳ್ಳ ನೀನೂ ನನ್ನನ್ನು ಹೀಗೆಂದೆಣಿಸಬಹುದೆ? ನಾನು

ದೋಷಿಯೆಂದು ಸ್ವಲ್ಪಮಟ್ಟಿಗಾದರೂ ಶಂಕಿಸುವುದಕ್ಕೆ ಅವಕಾಶವಿಲ್ಲ! ನೀನು ನನ್ನನ್ನು ಹೀಗೆ ನಿರಾಕರಿಸಬಾರದು! ನನ್ನ ತಾಯಿಯೇ ಇದಕ್ಕೆಲ್ಲಾ ಮೂಲವು! ಈ ಅನರ್ಥಕಾರ್ಯಗಳು ನಡೆಯುವಾಗ ನಾನು ಮಾತ್ರ ಸಮೀಪದಲ್ಲಿದ್ದಿದ್ದರೆ ಇಷ್ಟಕ್ಕೆ ಎಂದಿಗೂ ಅವಕಾಶ ಕೊಡುತ್ತಿರಲಿಲ್ಲ! ನನ್ನ ತಾಯಿಯು ನನ್ನ ಪ್ರಯೋಜನಕ್ಕಾಗಿಯೇ ಇದನ್ನು ಮಾಡಿದುದಾಗಿದ್ದರೂ ನಾನು ಇದಕ್ಕೆ ಎಂದಿಗೂ ಒಪ್ಪುತ್ತಿರಲಿಲ್ಲ! ಇದರಿಂದ ನನಗೆ ಸ್ವಲ್ಪವೂ ಸಂತೋಷವಿಲ್ಲ! ಈಗ ನಾನು ಹೊರಟಿರುವುದು, ಆ ರಾಮನನ್ನು ಸಮಾಧಾನಪಡಿಸಿ ಹಿಂತಿರುಗಿಸಿ, ಅಯೋಧ್ಯೆಗೆ ಕರೆತರಬೇಕೆಂಬುದಕ್ಕಾಗಿಯೇ ಹೊರತು ಬೇರೆಯಲ್ಲ! ಆತನನ್ನು ಹಿಂತಿರುಗಿಸಿ ಕರೆತಂದು ಅವನ ಪಾದಶುಶ್ರೂಷೆಯನ್ನು ಮಾಡುತ್ತಿರಬೇಕೆಂಬುದೇ ನನ್ನ ಉದ್ದೇಶವು. ಈಗ ನಾನು ಹೇಳಿದುದನ್ನು ಸತ್ಯವೆಂದು ನಂಬಿ ನನ್ನಲ್ಲಿ ಪ್ರಸನ್ನನಾಗಿ ಅನುಗ್ರಹಿಸಬೇಕು. ಈಗ ನಮ್ಮ ರಾಮನು ಎಲ್ಲಿರುವನು? ದಯವಿಟ್ಟು ಹೇಳಬೇಕು." ಎಂದನು. ಆಗ ಅಲ್ಲಿದ್ದ ವಸಿಷ್ಠಾದಿ ಋತ್ವಿಕ್ಕುಗಳೆಲ್ಲರೂ ಭರತನಿಗಿರುವ ನಿಜವಾದ ರಾಮಭಕ್ತಿಯನ್ನು ತಿಳಿಸಿ ಪ್ರಾರ್ಥಿಸಲು, ಭರದ್ವಾಜಮುನಿಯು ಪ್ರಸನ್ನನಾಗಿ ಭರತನನ್ನು ಕುರಿತು, "ವತ್ಸಭರತನೆ! ರಘುವಂಶದಲ್ಲಿ ಹುಟ್ಟಿದ ಪುರುಷಶ್ರೇಷ್ಠನಾದ ನಿನಗೆ ಇದೇ ಯುಕ್ತವು. ಹಿರಿಯರನ್ನು ಅನುವರ್ತಿಸುವುದೂ, ಇಂದ್ರಿಯಗಳನ್ನಡಗಿಸಿಡುವುದೂ, ಸಾಧುಗಳ ಮಾರ್ಗವನ್ನನುಸರಿಸಿ ನಡೆಯುವುದೂ ಈ ರಘುವಂಶದ ಕುಲಧರ್ಮವು. ನಿನ್ನ ಈ ಸದ್ಗುಣಗಳೆಲ್ಲವೂ ನನಗೆ ಜ್ಞಾನದೃಷ್ಟಿಯಿಂದ ಮೊದಲೇ ತಿಳಿದಿದ್ದರೂ, ಅದನ್ನು ಮತ್ತಷ್ಟು ದೃಢಪಡಿಸುವುದಕ್ಕಾಗಿ ಹೀಗೆ ಕೇಳಿದೆನೇ ಹೊರತು ಬೇರೆಯಲ್ಲ! ನಿನ್ನ ಕೀರ್ತಿಯು ಶಾಶ್ವತವಾಗಿ ವೃದ್ಧಿಹೊಂದುತ್ತಿರಬೇಕೆಂಬುದಕ್ಕಾಗಿಯೇ ನಾನು ಹೀಗೆ ಆಕ್ಷೇಪಿಸಿ ನಿನ್ನ ಮಾತಿನಿಂದ ದೃಢೀಕರಿಸಿದೆನು. ರಾಮನಿರತಕ್ಕ ಸ್ಥಳವನ್ನು ನಾನು ಬಲ್ಲೆನು. ಈಗ ಆತನು ಸೀತಾಲಕ್ಷ್ಮಣರೊಡನೆ ಚಿತ್ರಕೂಟವೆಂಬ ಮಹಾಪರ್ವತದಲ್ಲಿರುವನು. ನಾಳೆ ನೀನು ಅಲ್ಲಿಗೆ ಹೊರಡಬಹುದು. ಈ ದಿವಸದ ಮಟ್ಟಿಗೆ ನೀನು ಮಂತ್ರಿಗಳೊಡನೆ ಇಲ್ಲಿಯೇ ಇದ್ದು, ನಾಳೆ ಮುಂದಕ್ಕೆ ಪ್ರಯಾಣಮಾಡು! ನನ್ನ ಇದೊಂದು ಕೋರಿಕೆಯನ್ನು ನಡೆಸಿಕೊಡು! ನೀನು

ಪ್ರಾಜ್ಞನಾದದರಿಂದ ನಾನು ನಿನಗೆ ವಿಶೇಷವಾಗಿ ಹೇಳಬೇಕಾದುದೊಂದೂ ಇಲ್ಲವು." ಎಂದನು. ಈಮಾತನ್ನು ಕೇಳಿ ಉದಾರಸ್ವಭಾವವುಳ್ಳ ಭರತನು ಮಹರ್ಷಿಯ ಮಾತನ್ನು ಮೀರಲಾರದೆ, ಹಾಗೆಯೇ ಆಗಲೆಂದೊಪ್ಪಿ, ಆರಾತ್ರಿಯನ್ನು ಭರದ್ವಾಜಾಶ್ರಮದಲ್ಲಿಯೇ ಕಳೆಯುವುದಾಗಿ ನಿಶ್ಚಯಿಸಿಕೊಂಡನು. ಇಲ್ಲಿಗೆ ತೊಂಬತ್ತನೆಯಸರ್ಗವು.

---

## ಭರದ್ವಾಜನು ಭರತನಿಗೂ ಅವನ ಸೈನ್ಯಕ್ಕೂ ಆತಿಥ್ಯವನ್ನು ನಡೆಸಿದುದು.

ಹೀಗೆ ಭರತನು ತನ್ನ ಪರಿವಾರಗಳೊಡಗೂಡಿ ಆ ರಾತ್ರಿಯನ್ನು ಅಲ್ಲಿಯೇ ಕಳೆಯಬೇಕೆಂದು ನಿಶ್ಚಯಿಸಿದಮೇಲೆ, ಆತನನ್ನು ನೋಡಿ ಭರದ್ವಾಜಮುನಿಯು “ವತ್ಸ ಭರತನೆ! ಈರಾತ್ರಿಗೆ ನೀನು ಸಪರಿವಾರನಾಗಿ ನಮ್ಮ ಆತಿಥ್ಯವನ್ನು ಸ್ವೀಕರಿಸಬೇಕು" ಎಂದು ಕೇಳಿಕೊಂಡನು. ಅದಕ್ಕಾಭರತನು ಋಷಿಯನ್ನು ನೋಡಿ “ಆರ್ಯನೆ! ನೀನು ಮಾಡಬೇಕಾದ ಸತ್ಕಾರಗಳೆಲ್ಲವೂ ಆಗಲೇ ನನಗೆ ಸೇರಿರುವುವಲ್ಲವೆ?ಕಾಡಿನಲ್ಲಿರುವ ನಿಮ್ಮಂತವರು ನಡೆಸಬೇಕಾದ ಅರ್ಘ್ಯಪಾದ್ಯಗಳೇ ಮೊದಲಾದುವುಗಳುಹೊರತು ವಿವಿಕ್ತವಾದ ಈ ಸ್ಥಳದಲ್ಲಿ ಇನ್ನು ಬೇರೆ ಯಾವುದು ತಾನೇಸಾಧ್ಯವು? ಇಲ್ಲಿ ನಡೆಸುವುದಕ್ಕೆ ಸಾಧ್ಯವಾದ ಅಲ್ಪಸ್ವಲ್ಪಸತ್ಕಾರಗಳನ್ನು ನೀವು ನಡೆಸಿಯೇ ಬಿಟ್ಟಿರುವಿರಿ! ಇನ್ನೇನು?" ಎಂದನು. ಅದಕ್ಕಾಭರದ್ವಾಜನು ಮಂದಹಾಸವನ್ನು ತೋರಿಸುತ್ತ, “ವತ್ಸನೆ!ನನ್ನಲ್ಲಿ ನಿನಗೆ ಪ್ರೀತಿಯಿರುವುದೆಂಬುದನ್ನು ಚೆನ್ನಾಗಿಬಲ್ಲೆನು ! ಕೇವಲ ವಾಙ್ಮಾತ್ರದಿಂದ ಉಪಚರಿಸಿದರೂ ನೀನು ಸಂತೋಷಿಸತಕ್ಕವನೆಂಬುದನ್ನೂ ನಾನು ಬಲ್ಲೆನು. ಆದರೆ ಈ ನಿನ್ನದೊಡ್ಡಸೇನೆಗೂ ತಕ್ಕಸೌತನವನ್ನು ಮಾಡಬೇಕೆಂದಪೇಕ್ಷಿಸುವೆನು. ನಿನ್ನ ಪ್ರೀತಿಗೆ ತಕ್ಕಂತೆ ನೀನು ಇದಕ್ಕನುಮತಿಸಬೇಕು! ಎಲೈ ಪುರುಷಶ್ರೇಷ್ಠನೆ! ನಿನ್ನ ಸೈನ್ಯವನ್ನು ಬಹುದೂರದಲ್ಲಿಯೇ ನಿಲ್ಲಿಸಿ ನೀನುಮಾತ್ರ ಇಲ್ಲಿಗೆ ಬಂದುದೇಕೆ? ಅವರನ್ನೂ ಇಲ್ಲಿಗೇಕೆ ಕರೆತರಲಿಲ್ಲ? ನಿನ್ನಸೇನೆಯೊಡನೆಯೇ ಇಲ್ಲಿಗೆ ಬರಬಹುದಾಗಿತ್ತಲ್ಲವೆ?" ಎಂದನು. ಆಗ ಭರತನು ಆಮಹರ್ಷಿಗೆ ಕೈಮುಗಿದು ನಿಂತು “ಎಲೈ ಪೂ

ಜ್ಯನೆ! ನಿಮ್ಮಲ್ಲಿ ಅಪಚಾರಪಡಬಾರದೆಂಬ ಭಯಕ್ಕಾಗಿ ನಾನು ಸೈನ್ಯದೊಡನೆ ಇಲ್ಲಿಗೆ ಬರಲಿಲ್ಲ! ಎಲೈಮಹಾತ್ಮನೆ! ರಾಜನಾಗಲಿ, ರಾಜಪುತ್ರನಾಗಲಿ ಸೈನ್ಯದೊಡನೆ ಪ್ರಯಾಣಮಾಡುತ್ತಿರುವ ಕಾಲದಲ್ಲಿ, ಋಷ್ಯಾಶ್ರಮವನ್ನು ಕಂಡಾಗ, ಸೈನ್ಯವನ್ನು ದೂರದಲ್ಲಿಯೇ ನಿಲ್ಲಿಸಬೇಕಾದುದು ಧರ್ಮವಲ್ಲವೆ?ಅಥವಾ ಆದಾರಿಯನ್ನೇ ಬಿಟ್ಟು ಬೇರೆದಾರಿಯಿಂದ ಹೋಗಬೇಕು! ಈಗ ನನ್ನೊಡನೆ ಬಂದಿರುವ ಸೈನ್ಯವಾದರೋ ಅಪಾರವಾಗಿರುವುದು. ಅದರಲ್ಲಿ ಅನೇಕಜಾತ್ಯಶ್ವಗಳೂ, ಕಾಲಾಳುಗಳೂ, ಮದಿಸಿದ ಆನೆಗಳೂ ಅಸಂಖ್ಯಾತವಾಗಿರುವುವು. ಆ ನನ್ನ ಸೈನ್ಯವನ್ನು ನಿಲ್ಲಿಸಿದರೆ ಬಹುವಿಸ್ತಾರವಾದ ಭೂಪ್ರದೇಶವೆಲ್ಲವೂ ದಟ್ಟವಾಗಿ ತುಂಬಿಹೋಗುವುದು.ಆ ಸೇನೆಯೆಲ್ಲವನ್ನೂ ಇಲ್ಲಿಗೆ ಕರೆತಂದರೆ,! ಆಶ್ರಮವೃಕ್ಷಗಳನ್ನೂ, ಇಲ್ಲಿನಕೊಳಗಳನ್ನೂ ನೆಲವನ್ನೂ, ಅಲ್ಲಲ್ಲಿರುವ ಪರ್ಣಶಾಲೆಗಳನ್ನೂ ಕೆಡಿಸಿಬಿಡುವುವು.ಈ ಕಾರಣದಿಂದಲೇ ಸೈನ್ಯವನ್ನು ದೂರದಲ್ಲಿಯೇ ನಿಲ್ಲಿಸಿ ನಾನೊಬ್ಬನೇ ಇಲ್ಲಿಗೆ ಬಂದೆನು." ಎಂದನು. ಆಗ ಭರದ್ವಾಜನು ಭರತನನ್ನುನೋಡಿ "ವತ್ಸನೆ ಚಿಂತೆಯಿಲ್ಲ! ಆ ಸೈನ್ಯವನ್ನು ಇಲ್ಲಿಗೆ ಕರೆಸು" ಎಂದನು. ಹೀಗೆ ಭರದ್ವಾಜನು ಆಜ್ಞಾಪಿಸಿದ ಮೇಲೆ ಭರತನು ತನ್ನಸೈನ್ಯವನ್ನು ಆಶ್ರಮಕ್ಕೆ ಕರೆಸಿದನು. ಆಮೇಲೆ ಭರದ್ವಾಜನು ಅಗ್ನಿಶಾಲೆಯನ್ನು ಪ್ರವೇಶಿಸಿ,ಮೂರಾವರ್ತಿ ಆಚಮನವನ್ನುಮಾಡಿ, ಬಾಯಿಯನ್ನು ಒರೆಸಿಕೊಂಡು, ಈ ಸೇನೆಗಳಿಗೆ ಆತಿಥ್ಯವನ್ನುನಡೆಸುವುದಕ್ಕಾಗಿ ಮಂತ್ರಬಲದಿಂದ ವಿಶ್ವಕರ್ಮನನ್ನು ಕರೆಯುತ್ತ "ಸಂಕಲ್ಪಮಾತ್ರದಿಂದಲೇ ಗೃಹಾದಿಗಳನ್ನು ನಿರ್ಮಿಸುವ ವಿಶ್ವಕರ್ಮನು ಈ ಕ್ಷಣವೇ ಇಲ್ಲಿಗೆ ಬರುವವನಾಗಲಿ!ಭರತನಿಗೂ, ಆತನ ಸೈನ್ಯಕ್ಕೂ ಈಗ ನಾನು ಆತಿಥ್ಯವನ್ನು ನಡೆಸಬೇಕೆಂದಿರುವೆನು. ಅದಕ್ಕೆ ದೇವಶಿಲ್ಪಿಯಾದ ವಿಶ್ವಕರ್ಮನು ನಡೆಸಬೇಕಾದ ಕಾರ್ಯ್ಯಗಳೆಲ್ಲವನ್ನೂ ನಡೆಸಲಿ! ಹಾಗೆಯೇ ಯಮವರುಣ ಕುಬೇರರೆಂಬ ಮೂವರು ದಿಕ್ಪಾಲಕರೂ ಇಲ್ಲಿ ಸನ್ನಿಹಿತರಾಗಿರಲಿ ? ದೇವೇಂದ್ರನೇ ಮೊದಲಾದ ದೇವತೆಗಳೂ ಸಿದ್ಧರಾಗಿ ಬರಲಿ! ಈಗ ನಾನು ಆತಿಥ್ಯವನ್ನು ನಡೆಸುವ ವಿಷಯದಲ್ಲಿ ಅವರವರು ನಡೆಸಬೇಕಾದ ಅನ್ನಪಾನಾದಿಗಳನ್ನು ಸಿದ್ಧಪಡಿಸಲಿ ! ಭೂಮಿಯಲ್ಲಿಯೂ, ಅಂತರಿಕ್ಷದಲ್ಲಿಯೂ, ಪೂರ್ವಾಭಿಮುಖವಾಗಿಯಾಗಲಿ, ಪಶ್ಚಿಮಾಭಿಮುಖವಾಗಿಯಾಗಲಿ ಪ್ರವಹಿಸುವ

ಸಮಸ್ತನದಿಗಳೂ ಒಟ್ಟಾಗಿ ಇಲ್ಲಿಗೆಬಂದುಕೂಡಲಿ! ಅವುಗಳಲ್ಲಿ ಕೆಲವು ಖರ್ಜೂರಾದಿಗಳಿಂದ ಉತ್ಪನ್ನವಾಗುವ ಮೈರೇಯವೆಂಬ ಮದ್ಯವನ್ನೂ, ಮತ್ತೆ ಕೆಲವು ಗೌಡಿ, ಪೈಷ್ಟಿ, ಮಾಧ್ವಿಗಳೆಂಬ ಮೂರುಬಗೆಯುಳ್ಳ ಸುರೆಯೆಂಬ ಮದ್ಯವನ್ನೂ, ಇನ್ನು ಕೆಲವು ಕಬ್ಬಿನರಸದಂತೆ ಸವಿಯಾದ ಶೀತಳ ಜಲವನ್ನೂ ಒದಗಿಸಿಕೊಡಲಿ! ಈಸೈನಿಕರ ಮನಸ್ಸಂತೋಷಾರ್ಥವಾಗಿ[1] ದೇವಗಂಧರ್ವಜಾತಿಗೆ ಸೇರಿದ ವಿಶ್ವಾವಸು, ಹಾಹಾ, ಹೂಹೂ,ಮೊದಲಾದ ಗಂಧರ್ವರೆಲ್ಲರೂ ಬಂದು ಗಾನಮಾಡಲಿ!ಹಾಗೆಯೇ ದೇವಜಾತಿಗೆಸೇರಿದ ಅಪ್ಸರಸ್ತ್ರೀಯರೂ ಬಂದು ಸಿದ್ಧರಾಗಲಿ! ಮತ್ತು ಈಸೈನಿಕರಮುಂದೆ ನಾಟ್ಯವಾಡುವುದಕ್ಕಾಗಿ ಘೃತಾಚಿ, ವಿಶ್ವಾಚಿ, ಮಿಶ್ರಕೇಶಿ, ಅಲಂಬುಸೆ, ನಾಗದಂತೆ, ಹೇಮೆ,ಪರ್ವತವಾಸಿನಿಯಾದ ಹಿಮೆ,ಮುಂತಾದ ದೇವಲೋಕದ ನರ್ತಕಿಯರೆಲ್ಲರೂ ಬಂದು ಸಿದ್ಧರಾಗಲಿ! ದೇವೇಂದ್ರನನ್ನು ಪಚರಿಸತಕ್ಕ ಅಪ್ಸರಸ್ತ್ರೀಯರೂ, ಚತುರ್ಮುಖಬ್ರಹ್ಮನನ್ನು ಪಚರಿಸತಕ್ಕ [2] ಅಪ್ಸರಸ್ತ್ರೀಯರೂ ತಮ್ಮ ನೃತ್ತಗೀತಾದ್ಯುಪಕರಣಗಳೊಡನೆ ತಮ್ಮ ಗಾನಶಿಕ್ಷಕನಾದ ತಂಬುರುವಿನೊಡಗೂಡಿ ಬಂದುಸಿದ್ಧರಾಗಿರಲಿ! ಮತ್ತು ಸರ್ವೋತ್ತಮವಾದ ವಸ್ತ್ರಾಭರಣಗಳನ್ನೇ ತನ್ನಲ್ಲಿರುವ ಎಲೆಗಳನ್ನಾಗಿಯೂ, ದಿವ್ಯಸ್ತ್ರೀಯರನ್ನೇ ಫಲಗಳನ್ನಾಗಿಯೂ ಪಡೆದು, ಉತ್ತರಕುರುದೇಶದಲ್ಲಿ ದೇವತಾರ್ಹವಾಗಿ ಪ್ರಕಾಶಿಸುತ್ತಿರುವ ಕುಬೇರೋದ್ಯಾನವೇ ಇಲ್ಲಿಗೆ ಬಂದು ಸನ್ನಿಹಿತವಾಗಲಿ! ಪೂಜ್ಯನಾದ ಚಂದ್ರನು ಇಲ್ಲಿಬಂದು ಭಕ್ಷ್ಯ, ಭೋಜ್ಯ, ಚೋಷ್ಯ, ಲೇಹ್ಯಗಳೆಂಬ ನಾಲ್ಕುವಿಧವಾದ ಅನ್ನಗಳನ್ನು, ವಿಶೇಷವಾಗಿ, ನಾನಾಬಗೆಯಾಗಿ ಸಿದ್ಧಪಡಿಸಿಡಲಿ! ಮತ್ತು ಸಮಸ್ತಓಷಧಿಗಳಿಗೂ ಒಡೆಯನಾದ ಆ ಚಂದ್ರನು ಗಿಡಗಳಿಂದ ಆಗಲೇ ಉದಿರಿದ ವಿಚಿತ್ರವಿಚಿತ್ರಗಳಾದ ಪುಷ್ಪಮಾಲಿಕೆಗಳನ್ನೂ, ಸುರೆ ಮೊದಲಾದ ಪಾನದ್ರವ್ಯಗಳನ್ನೂ,ಬಗೆಬಗೆಯಾದ ಮಾಂಸಗಳನ್ನೂ

1 ಮನುಷ್ಯಜಾತಿಗಂಧರ್ವರೆಂದೂ, ದೇವಜಾತಿಗಂಧರ್ವರೆಂದೂ ಎರಡುಬಗೆಯಿರುವುದರಿಂದ ಇಲ್ಲಿ ದೇವಗಂಧರ್ವರೆಂದು ಹೇಳಲ್ಪಟ್ಟಿದೆ.

2 "ತಂ ಪಂಚಶತಾನ್ಯಪ್ಸರಸಾಂ ಪ್ರತಿಧಾವಂತಿ" ಎಂಬುದರಿಂದ ಬ್ರಹ್ಮಲೋಕದಲ್ಲಿಯೂ ಅಪ್ಸರಸ್ಸುಗಳಿದ್ದರೆಂದು ವ್ಯಕ್ತವಾಗುವುದು.

ಒಪ್ಪಗಿಸಲಿ" ಎಂದು ಆಹ್ವಾನಮಂತ್ರಗಳನ್ನು ಜಪಿಸಿದನು. ಹೀಗೆ ಸರ್ವೋ ತ್ತಮವಾದ ಯೋಗಬಲದಿಂದ, ಎಣೆಯಿಲ್ಲದ ತೇಜಸ್ಸುಳ್ಳವನಾದ, ಆ ಭರದ್ವಾಜನು ಶಿಕ್ಷಾಶಾಸ್ತ್ರವನ್ನನುಸರಿಸಿ ಸ್ವರಗಳನ್ನು ಸ್ವಚ್ಛವಾಗಿಯೂ, ನಿರ್ದೋಷವಾಗಿಯೂ ಉಚ್ಚರಿಸುತ್ತ, ಪೂರ್ವಾಭಿಮುಖವಾಗಿ ಕೈಮುಗಿದು ನಿಂತು, ಆಯಾಮಂತ್ರಗಳನ್ನು ಜಪಿಸಿ ಧ್ಯಾನಿಸುತಿದ್ದನು. ಈ ಧ್ಯಾನದಲ್ಲಿರು ವಾಗಲೇ ಆಯಾದೇವತೆಗಳು ಬೇರೆಬೇರೆಯಾಗಿ ಆಶ್ರಮಕ್ಕೆ ಬಂದುಸೇರಿದರು. ಆಕ್ಷಣವೇ ಸುಗಂಧಶೀತಳವಾದ ವಾಯುವು ಮಲೆಯದರ್ದುರಗಳೆಂಬ ಬೆಟ್ಟಗಳಮೇಲೆ ಬೀಸಿ,ಸುಗಂಧಸಾರವನ್ನು ಹೊತ್ತು ಆಸೈನಿಕರ ಮೈಗೆ ಹಿತ ಕರವಾಗಿರುವಂತೆ ತಾಪಶಾಂತಿಯನ್ನುಂಟುಮಾಡಿ, ಅವರ ಮೈಯ್ಯೊ ಳಗಿನ ಬೆವರನ್ನಾರಿಸುತ್ತಾ ಮೆಲ್ಲಗೆ ಬೀಸಲಾರಂಭಿಸಿತು. ಆಕಾಶದಿಂದ ದೇವ ತೆಗಳು ಎಡೆಬಿಡದೆ ಪುಷ್ಪವೃಷ್ಟಿಗಳನ್ನು ಸುರಿಸುತಿದ್ದರು. ನಾಲ್ಕುಕಡೆಗ ಳಿಂದಲೂ ದೇವದುಂದುಭಿಗಳು ಮೊಳಗುತಿದ್ದುವು. ಸುಖಸ್ಪರ್ಶವಾದ ಗಾ ಳಿಯೂ ಬೀಸುತಿತ್ತು.ಒಂದುಕಡೆಯಲ್ಲಿ ಅಪ್ಸರಸ್ತ್ರೀಯರು ಕುಣಿಯುತಿದ್ದರು. ಮತ್ತೊಂದುಕಡೆಯಲ್ಲಿ ದೇವಗಂಧರ್ವರು ವೀಣೆಗಳನ್ನು ನುಡಿಸುತಿದ್ದರು. ಇಂ ಪಾದ ಈಮಂಗಳವಾದ್ಯಧ್ವನಿಗಳೆಲ್ಲವೂ ಭೂಮ್ಯಾಕಾಶಗಳೆಲ್ಲವನ್ನೂ ವ್ಯಾ ಪಿಸಿ, ಜನಗಳ ಕಿವಿಯಲ್ಲಿ ತುಂಬಿ ಆಪ್ಯಾಯನವನ್ನುಂಟುಮಾಡುತಿತ್ತು.ಶ್ರುತಿ ಯಲ್ಲಿ ಲಯಿಸಿ ತಾಳಕ್ರಮವನ್ನನುಸರಿಸಿ ಹಾಡುತಿದ್ದ ಗಾನಗಳೆಲ್ಲವೂ ಅತ್ಯಾ ನಂದವನ್ನುಂಟುಮಾಡುತಿದ್ದುವು. ಹೀಗೆ ಕಿವಿಗಿಂಪಾದ ದಿವ್ಯಗಾನಗಳೆಲ್ಲವೂ ಸ್ವಲ್ಪಹೊತ್ತಿನವರೆಗೆ ನಡೆದುನಿಂತುಹೋದಮೇಲೆ,ಭರತನ ಸೈನಿಕರಿಗೆ ವಿಶ್ವ ಕರ್ಮನ ಶಿಲ್ಪಚಮತ್ಕಾರವು ಅಲ್ಲಲ್ಲಿ ಕಣ್ಣಿಗೆ ಗೋಚರಿಸಿತು. ಆ ಆಶ್ರಮದಲ್ಲಿ ಸೈನಿಕರಿಳಿದಿದ್ದ ಪ್ರದೇಶಕ್ಕೆ ಸುತ್ತಲೂ ಐದುಗಾವುದಗಳವರೆಗೆ ಸ್ವಲ್ಪ ವಾದರೂ ಹಳ್ಳತಿಟ್ಟುಗಳಿಲ್ಲದೆ ಸಮಭೂಮಿಯಾಗಿ ಪರಿಣಮಿಸಿತು. ಅಲ್ಲಿ ನೀಲರತ್ನ ವೈಡೂರ್ಯಗಳಿಂದ ಕೆತ್ತಿದಂತೆ ವಿಧವಿಧವಾದ ಗರಿಕೆಹುಲ್ಲುಗಳು ಭೂಪ್ರದೇಶಗಳೆಲ್ಲವನ್ನೂ ಮುಚ್ಚಿಕೊಂಡು ದಟ್ಟವಾಗಿ ಬೆಳೆದಿದ್ದುವು. ಬಿಲ್ವ, ಬೇಲ, ಹಲಸು, ದಾಳಿಂಬ, ನೆಲ್ಲಿ, ಮಾವು, ಮೊದಲಾದ ಫಲವೃಕ್ಷಗ ಳೆಲ್ಲವೂ ಫಲಭರಿತಗಳಾಗಿ ಆಪ್ರದೇಶದ ಸುತ್ತಲೂ ತುಂಬಿಹೋದುವು. ಭರ ದ್ವಾಜಮಹರ್ಷಿಯ ಕೋರಿಕೆಯಂತೆ ಉತ್ತರಕುರುದೇಶಗಳಿಂದ ಭೋ

ರ್ಹವಾದ ಚೈತ್ರರಥವೆಂಬ ಉದ್ಯಾನವನವೇ ಅಲ್ಲಿಗೆ ಪ್ರತ್ಯಕ್ಷವಾಗಿ ಬಂದು ಸೇರಿತು. ಅನೇಕ ತೀರವೃಕ್ಷಗಳೊಡನೆ ಸಮಸ್ತದಿವ್ಯನದಿಗಳೂ ಅಲ್ಲಿ ಬಂದು ಪ್ರವಹಿಸುತಿದ್ದುವು. ಸುಣ್ಣದಿಂದ ಬೆಳಗಿ ಬಿಳುಪಾದ ಚತುಶ್ಶಾಲೆಗಳೂ, ಆನೆಕುದುರೆಲಾಯಗಳೂ, ಮಹೋನ್ನತಗಳಾದ ಉಪ್ಪರಿಗೆಗಳೂ, ಗೋಪುರಗಳೂ, ಹೊರಬಾಗಿಲುಗಳೂ, ಗೋಚರಿಸಿದುವು. ಬಿಳೀಮೇಘದಂತೆ ಮಹಾಗಂಭೀರವಾಗಿ ಹೊಳೆಯುತ್ತಿರುವ, ಮತ್ತು ಉತ್ತಮವಾದ ಬಾಗಿಲುಳ್ಳ ಒಂದು ಅರಮನೆಯೂ ಅಲ್ಲಿ ಉದ್ಭವಿಸಿತು. ಈ ಅರಮನೆಯ ಸುತ್ತಿನ ಪ್ರಾಕಾರಗಳೆಲ್ಲವೂ ಪುಷ್ಪಮಾಲಿಕೆಗಳಿಂದ ಅಲಂಕರಿಸಲ್ಪಟ್ಟು,ಧೂಪ ದೀಪ ಚಂದನಾದಿಗಳಿಂದ ಸುವಾಸಿತವಾಗಿ ಮಾಡಲ್ಪಟ್ಟಿದ್ದುವು. ಮತ್ತು ಅದು ನೂಲಳತೆಗೆ ಸರಿಯಾಗಿ ಸ್ವಲ್ಪವೂ ವ್ಯತ್ಯಾಸವಿಲ್ಲದೆ ಚತುರಶ್ರಾಕಾರವಾಗಿ,ವಿಸ್ತಾರವಾಗಿ, ಉತ್ತಮವಾದ ಹಾಸಿಗೆಗಳಿಂದಲೂ, ಆಸ್ತರಣಗಳಿಂದಲೂ, ವಾಹನಗಳಿಂದಲೂ ತುಂಬಿದುದಾಗಿತ್ತು. ಅಲ್ಲಿ ಷಡ್ರಸೋಪೇತಗಳಾದ ಭೋಜನಪದಾರ್ಥಗಳೂ, ಉತ್ತಮವಾದ ವಸ್ತ್ರಗಳೂ ತುಂಬಿದ್ದುವು. ಅಪೂಪಾದ್ಯನ್ನರಾಶಿಗಳೂ ಸಿದ್ಧವಾಗಿದ್ದುವು. ಅಲ್ಲಿ ಪಾತ್ರಗಳೆಲ್ಲವೂ ಚೆನ್ನಾಗಿ ತೊಳೆಯಲ್ಪಟ್ಟು ನಿರ್ಮಲವಾಗಿ ಹೊಳೆಯುತಿದ್ದುವು. ಇದೇ ಅಲ್ಲದೆ ಅಲ್ಲಲ್ಲಿ ಭೋಜನಸ್ನಾನಾದಿಗಳಿಗೆ ತಕ್ಕ ಆಸನಗಳೆಲ್ಲವೂ ಕ್ರಮವಾಗಿ ಪ್ರತ್ಯೇಕ ಪ್ರತ್ಯೇಕವಾಗಿ ಏರ್ಪಡಿಸಲ್ಪಟ್ಟಿದ್ದುವು. ಭಾಗ್ಯಲಕ್ಷ್ಮಿಗೆ ಇದೇ ನಿತ್ಯಾಶ್ರಯವಾಗಿ ತೋರುತಿತ್ತು. ಉತ್ತಮವಾದ ಮೇಲುಹೊದ್ದಿಕೆಗಳಿಂದ ಕೂಡಿದ ಅಮೂಲ್ಯವಾದ ಶಯನಗಳು ಅಲ್ಲಲ್ಲಿ ಸಿದ್ಧವಾಗಿದ್ದುವು. ಹೀಗೆ ಇವೆಲ್ಲವೂ ಸಿದ್ಧವಾಗಿರಲು, ಮಹಾಬಾಹುವಾದ ಭರತನು ಭರದ್ವಾಜಮಹರ್ಷಿಯ ಅಪ್ಪಣೆಯಮೇರೆ ರತ್ನಪೂರ್ಣವಾದ ಅಮನೆಯನ್ನು ಪ್ರವೇಶಿಸಿದನು. ಪುರೋಹಿತರೂ, ಮಂತ್ರಿಗಳೂ ಆಭರತನನ್ನು ಹಿಂಬಾಲಿಸಿಹೋದರು. ಹೀಗೆ ಪ್ರವೇಶಿಸಿದೊಡನೆಯೇ ಅವರೆಲ್ಲರೂ ಅಮನೆಯ ಕಟ್ಟಡದಚಮತ್ಕಾರವನ್ನು ನೋಡಿ ಪರಮಾನಂದ ಭರಿತರಾಗಿ ಆಶ್ಚರ್ಯಪಡುತ್ತಿದ್ದರು. ಭರತನು ಅಲ್ಲಿದ್ದ ದಿವ್ಯಸಿಂಹಾಸನವನ್ನೂ, ಚಾಮರವನ್ನೂ, ರಾಜಯೋಗ್ಯವಾದ ಶ್ವೇತಚ್ಛತ್ರವನ್ನೂ ನೋಡಿ ರಾಜನಂತೆಯೇ ಅದನ್ನು ಗೌರವಿಸಿ,ಮಂತ್ರಿಗಳೊಡನೆ ಅದನ್ನು ಪ್ರದಕ್ಷಿಣಮಾಡಿದನು. ಮತ್ತು ಆ ರಾಜಸಿಂಹಾಸನದಮೇಲೆ ತಾನು ಕುಳಿ

ತಿರುವಂತೆ ಮನಸ್ಸಿನಲ್ಲಿ ಭಾವಿಸಿಕೊಂಡು, ಅದರಮುಂದೆ ನಿಂತು ನಮಸ್ಕರಿಸಿ, ಅಲ್ಲಿದ್ದ ಚಾಮರವನ್ನು ಕೈಯ್ಯಲ್ಲಿ ತೆಗೆದುಕೊಂಡು ಆರಾಜಪೀಠದ ಕೆಳಭಾಗ ದಲ್ಲಿ ಮಂತ್ರಿಗಳು ಕುಳ್ಳಿರತಕ್ಕ ಒಂದಾನೊಂದು ಆಸನದಮೇಲೆ ಕುಳಿತು ಕೊಂಡನು. ಆಮೇಲೆ ಕ್ರಮವಾಗಿ ಮಂತ್ರಿಪುರೋಹಿತಾದಿಗಳೆಲ್ಲರೂ ತಮ್ಮ ತಮ್ಮ ಉಚಿತಾಸನಗಳಲ್ಲಿ ಕುಳಿತುಕೊಂಡರು. ಆಮೇಲೆ ಸೇನಾಧಿಪತಿಯೂ, ಶಿಬಿರನಾಯಕನೂ ತಮ್ಮತಮ್ಮ ಪೀಠಗಳಲ್ಲಿ ಕುಳಿತರು. ಒಂದು ಮು ಹೂರ್ತಕಾಲದೊಳಗಾಗಿಯೇ ಪಾಯಸದ ಸಾರವುಳ್ಳ ನದಿಗಳು ಭರ ತನಮುಂದೆ ಪ್ರವಹಿಸಲಾರಂಭಿಸಿದುವು. ಆನದಿಗಳ ಎರಡುತೀರಗಳಲ್ಲಿಯೂ ಈಭರದ್ವಾಜಮುನಿಯ ಮಹಿಮೆಯಿಂದ ಅತಿಮನೋಹರಗಳಾದ ದಿವ್ಯ ಗೃಹಗಳು ಉದ್ಭವಿಸಿದುವು. ಆಕ್ಷಣವೇ ಬ್ರಹ್ಮನಿಂದ ಕಳುಹಿಸಲ್ಪಟ್ಟ ದಿವ್ಯಾಭರಣ ಭೂಷಿತರಾದ ಇಪ್ಪತ್ತುಸಾವಿರ ಅಪ್ಸರಸ್ತ್ರೀಯರು ಬಂದುಸೇರಿ ದರು. ಹಾಗೆಯೇ ಕುಬೇರನಿಂದ ಕಳುಹಿಸಲ್ಪಟ್ಟು ಸ್ವರ್ಣಾಭರಣಗಳಿಂ ದಲೂ,ರತ್ನದ ಒಡಿವೆಗಳಿಂದಲೂ, ಮುತ್ತಿನಹಾರಗಳಿಂದಲೂ, ಹವಳದಸರ ಗಳಿಂದಲೂ ಅಲಂಕರಿಸಲ್ಪಟ್ಟ ಇಪ್ಪತ್ತು ಸಾವಿರಮಂದಿ ಯಕ್ಷಿಣಿಯರೂ ಬಂದುಸೇರಿದರು. ಯಾವಸ್ತ್ರೀಯರನ್ನು ಒಂದಾವರ್ತಿ ಅಪ್ಪಿಕೊಂಡ ಮಾ ತ್ರಕ್ಕೆ ಮನಷ್ಯನು ಹುಚ್ಚು ಹಿಡಿದವನಂತೆ ಮರುಳಾಗುವನೋ,ಅಂತಹ ಇಪ್ಪ ತ್ತು ಸಾವಿರಮಂದಿ ಅಪ್ಸರಸ್ತ್ರೀಯರು ದೇವೇಂದ್ರನಿಂದ ಕಳುಹಿಸಲ್ಪಟ್ಟು ನಂದನವನ್ನು ಬಿಟ್ಟುಬಂದರು ಹಾಗೆಯೇ ನಾರದ, ತುಂಬುರು, ಗೋಪ ರೆಂಬ ಸೂರ್ಯತೇಜಸ್ಸುಳ್ಳ ಮೂವರು ಗಂಧರ್ವಶ್ರೇಷ್ಠರು ಭರತನಮುಂದೆ ನಿಂತು! ಗಾನಮಾಡಲಾರಂಭಿಸಿದರು. ಅಲಂಬುಸೆ, ಮಿಶ್ರಕೇಶಿ, ಪುಂಡರೀಕೆ ವಾಮನೆ,ಮುಂತಾದದೇವವೇಶ್ಯೆಯರೆಲ್ಲರೂ ಭರದ್ವಾಜನ ಪ್ರೇರಣೆಯಿಂದ ಭರತನಮುಂದೆ ಬಂದು ನರ್ತಿಸುತಿದ್ದರು. ದೇವಲೋಕದ ನಂದನವನದಲ್ಲಿ ಯಾಗಲಿ, ಕುಬೇರನ ಚೈತ್ರರಥವೆಂಬ ತೋಟದಲ್ಲಿಯಾಗಲಿ, ಯಾವಯಾವ ವಿಚಿತ್ರಪುಷ್ಪಗಳುಂಟೋ ಅವೆಲ್ಲವೂ ಭರದ್ವಾಜನ ಮಹಿಮೆಯಿಂದ ಆತನ ಪ್ರಯಾಗಕ್ಷೇತ್ರದಲ್ಲಿಯೇ ಕಾಣುತಿದ್ದುವು. ಭರದ್ವಾಜ ಮಹರ್ಷಿಯ ದಿವ್ಯತೇಜಸ್ಸಿನಿಂದ ಅಚೇತನಗಳಾದ ಮರಗಿಡಗಳೆಲ್ಲವೂ ಭರತನನ್ನೂ, ಆತನ ಸೈನ್ಯಗಳನ್ನೂ ಉಪಚರಿಸಲಾರಂಭಿಸಿದುವು. ಬಿಲ್ವವೃಕ್ಷಗಳು ಮದ್ದಳೆ

ಯನ್ನು ನುಡಿಸುತಿದ್ದುವು. ಕಲಿವೃಕ್ಷಗಳು ತಾಳವನ್ನು ಹಾಕುತಿದ್ದುವು. ಅರಳಿಯಮರಗಳು ನರ್ತನಮಾಡಿದುವು. ಹಾಗೆಯೇ ಸರಳ, ತಾಲ, ತಿಲಕ, ನಕ್ತಮಾಲಗಳೆಂಬ ವೃಕ್ಷವಿಶೇಷಗಳೆಲ್ಲವೂ ಗೂನರಂತೆಯೂ ಗುಜ್ಜಾರಿಗಳಂತೆಯೂ ಬಂದು ಸಂತೋಷದಿಂದ ತಿರುಗುತಿದ್ದುವು. [1] ಶಿಂಶುಪಾವೃಕ್ಷಗಳೂ ಆಮಲಕೀ ವೃಕ್ಷಗಳೂ (ನೆಲ್ಲಿ) ಜಂಬೂವೃಕ್ಷಗಳೂ (ನೇರಳೆ) ಇನ್ನೂ ಇತರ ಕಾಡುಮರಗಳೂ, ಜಾಜಿ, ಮಲ್ಲಿಗೆ, ಮೊದಲಾದ ಹೂಬಳ್ಳಿಗಳೂ, ಸ್ತ್ರೀರೂಪವನ್ನು ಧರಿಸಿ ಬಂದು ಭರತನ ಸೈನಿಕರನ್ನು ನೋಡಿ““ಮದ್ಯವನ್ನು ಕುಡಿಯುವವರು ಬೇಕಾದಷ್ಟು ಮದ್ಯವನ್ನು ಕುಡಿಯಬಹುದು ! ಭೋಜನದಲ್ಲಿ ಅಪೇಕ್ಷೆಯುಳ್ಳವರು ಪಾಯಸವೇ ಮೊದಲಾದ ಭೋಜನಪದಾರ್ಥಗಳನ್ನು ತೆಗೆದುಕೊಳ್ಳಬಹುದು ! ಮಾಂಸಾಪೇಕ್ಷೆಯುಳ್ಳವರು ಬೇಕಾದಷ್ಟು ಮಾಂಸವನ್ನು ತಿನ್ನಿರಿ! ಇದೋ! ಇಲ್ಲಿ ರುಚಿಯಾದ ಮದ್ಯವಿರುವುದು. ಇಲ್ಲಿ ಪಾಯಸವಿರುವುದು. ಇಲ್ಲಿ ಶುದ್ಧವಾದ ಮಾಂಸವಿರುವುದು. ನಿಮ್ಮನಿಮ್ಮ ಮನಸ್ತೃಪ್ತಿಯಾಗುವವರೆಗೂ ಭುಜಿಸಿರಿ ! ” ಎಂದು ಕೂಗಿಕೂಗಿ ಕೊಡುತಿದ್ದುವು. ಒಬ್ಬೊಬ್ಬಪುರುಷನಿಗೂ ಏಳೆಂಟುಮಂದಿ ಸ್ತ್ರೀಯರು ಸುತ್ತಿನಿಂತು, ತೈಲಾಭ್ಯಂಗನವನ್ನುಮಾಡಿ, ಮೈಹಿಡಿದು, ಮನೋಹರವಾದ ನದೀತೀರಗಳಿಗೆ ಕರೆದುಕೊಂಡು ಹೋಗಿ ಸ್ನಾನಮಾಡಿಸುತಿದ್ದರು.ಅಂದವಾದಕಣ್ಣುಳ್ಳ ಕೆಲವುಸ್ತ್ರೀಯರು ಅವರ ಕಾಲುಗಳನ್ನೊತ್ತುತ್ತ, ಅವರ ಮೈಯನ್ನೊರೆಸಿ, ಅವರದೇಹವನ್ನಲಂಕರಿಸಿ ಮದ್ಯಗಳನ್ನು ಕುಡಿಸುತಿದ್ದರು. ಭರದ್ವಾಜಮಹರ್ಷಿಯ ಮಹಿಮೆಯಿಂದ ಸೃಷ್ಟಿಸಲ್ಪಟ್ಟ ವಾಹನಪಾಲಕರನೇಕರು ಬಂದು, ಆ ಸೈನಿಕರ ಕುದುರೆಗಳನ್ನೂ, ಆನೆಗಳನ್ನೂ, ಹೇಸರಗತ್ತೆಗಳನ್ನೂ, ಒಂಟೆಗಳನ್ನೂ, ಎತ್ತುಗಳನ್ನೂ ಆದರಿಸಿ, ಅವುಗಳಿಗೆ ತಕ್ಕ-ತಕ್ಕ ಆಹಾರಗಳನ್ನು ಕೊಟ್ಟು ತೃಪ್ತಿಪಡಿಸಿದರು. ಬಲಾಢ್ಯರಾದ ಆ ವಾಹನಪಾಲಕರು ಭರತನ ಸೈನ್ಯದಲ್ಲಿದ್ದ ಆನೆ ಮೊದಲಾದ ಸಮಸ್ತವಾಹನಗಳಿಗೂ, ಕಬ್ಬು, ಜೇನು, ಅರಳು, ಮೊದಲಾದ ರುಚಿರುಚಿಯಾದ ಆಹಾರಗಳನ್ನಿತ್ತು ನಿರ್ಬಂಧ ಪೂ

1 ಇಲ್ಲಿ ಲಿಂಗಭೇದದಿಂದ ಸ್ತ್ರೀಲಿಂಗವೃಕ್ಷಗಳು ಸ್ತ್ರೀರೂಪವನ್ನು ಧರಿಸಿ ಉಪಚರಿಸುತಿದ್ದುವೆಂದು ಗ್ರಹಿಸಬೇಕು.

ರ್ವಕವಾಗಿ ತಿನ್ನಿಸುತಿದ್ದರು. ಹೀಗೆ ಆಕಂಠಪೂರ್ತಿಯಾಗಿ ಆಹಾರವನ್ನು ತಿಂದಮೇಲೆ, ಕೊಬ್ಬಿಬಳೆದ ಆ ಸೈನ್ಯದಲ್ಲಿ, ಕುದುರೆಯ ಸವಾರರು ತಮ್ಮ ಕುದುರೆಯು ಯಾವುದೆಂದು ಕಂಡುಹಿಡಿಯಲಾರದೆ ಹೋದರು. ಮಾವಟಿಗರು ತಮ್ಮ ಆನೆಗಳ ಗುರುತನ್ನೇ ಕಂಡುಹಿಡಿಯಲಾರದಿದ್ದರು. ಹೀಗೆ ಆ ಸೈನಿಕರೆಲ್ಲರೂ ಮದಪದಾರ್ಥಗಳಿಂದ ಮದಿಸಿ, ಮೈಮರೆತು, ಮೈತಿಳಿಯದಷ್ಟು ಸಂತೋಷದಿಂದ ಸುತ್ತುತಿದ್ದರು. ತಮಗೆ ಬೇಕುಬೇಕಾದ ಭೋಗಗಳೆಲ್ಲವನ್ನೂ ಅನುಭವಿಸಿ, ರಕ್ತಚಂದನಾದಿಗಳಿಂದ ಅಲಂಕೃತರಾಗಿ,ಒಬ್ಬೊಬ್ಬರೂ ಅಪ್ಸರಸ್ತ್ರೀಯರೊಡಗೂಡಿ, ಉಲ್ಲಾಸದಿಂದ ಮಾತಾಡುತಿದ್ದರು. ಆಸೈನಿಕರು ಅಲ್ಲಲ್ಲಿ ಗುಂಪುಗೂಡಿ ಒಬ್ಬರಿಗೊಬ್ಬರು‘‘ನಾವುಇನ್ನು ಅಯೋಧ್ಯೆಗೂ ಹೋಗುವುದಿಲ್ಲ! ಅತ್ತಲಾಗಿದಂಡಕಾರಣ್ಯಕ್ಕೂಹೋಗುವುದಿಲ್ಲ!ಇಲ್ಲಿಯೇ ಇದ್ದುಬಿಡುವೆವು. ಭರತನುಹೇಗೋ ಬಂಧುವಿಥದಲ್ಲಿ ಕ್ಷೇಮದಿಂದರಲಿ! ರಾಮನೂ ಅತ್ತಲಾಗಿ ಸುಖವಾಗಿದ್ದುಕೊಂಡಿರಲಿ”ಎಂದು ಹೇಳುತಿದ್ದರು. ಕಾಲಾಳುಗಳೂ, ಮಾವಟಿಗರೂ, ರಾವುತರೂ, ಆನೆಕುದುರೆಗಳನ್ನು ಕಟ್ಟಿಡತಕ್ಕವರೂ ಆ ಭರದ್ವಾಜಮಹರ್ಷಿಯ ಆತಿಥ್ಯದಿಂದ ಕೊಬ್ಬಿ ಹಿಂದುಮುಂದುತೋರದೆ, ತಮಗೆ ಬೇರೆ ನಿಯಾಮಕರೇ ಇಲ್ಲವೆಂದೂ, ತಾವೇ ಸ್ವತಂತ್ರರೆಂದೂ ಮನಸ್ಸುಬಂದಂತೆ ಮಾತಾಡುತಿದ್ದರು. ಭರತನನ್ನು ಹಿಂಬಾಲಿಸಿ ಬಂದ ಸಮಸ್ತ ಸೈನಿಕರಿಗೂ ಸಂತೋಷವು ಮಿತಿಮೀರಿ ಹೋಯಿತು. ಎಲ್ಲರೂ ಉಲ್ಲಾಸದಿಂದ ಕೋಲಾಹಲ ಧ್ವನಿಯನ್ನು ಮಾಡುತ್ತ ‘‘ಹಾ! ಇದಕ್ಕಿಂತ ಬೇರೆಸ್ವರ್ಗವುಂಟೆ? ಇದೇಸ್ವರ್ಗವು.” ಎಂದು ಮಾತಾಡಿಕೊಳ್ಳುತಿದ್ದರು. ಅವರೆಲ್ಲರೂ ಪುಷ್ಪಮಾಲಿಕೆಯನ್ನುಧರಿಸಿ, ಕೆಲವರು ಕುಣಿಯುತ್ತಲೂ, ಕೆಲವರು ನಗುತ್ತಲೂ, ಕೆಲವರು ಹಾಡುತ್ತಲೂ ಸಾವಿರಾರು ಮಂದಿಗುಂಪುಕೂಡಿ ಸುತ್ತಲೂ ಓಡಾಡುತಿದ್ದರು. ಅವರೆಲ್ಲರೂ ಅಮೃತಪ್ರಾಯವಾದ ಆ ಅನ್ನವನ್ನು ಯಥೇಷ್ಟವಾಗಿ ಭುಜಿಸಿ ತೃಪ್ತರಾಗಿದ್ದರೂ, ಅಲ್ಲಲ್ಲಿ ರಾಶಿಹಾಕಿದ್ದ ವಿಧವಿಧವಾದ ಭಕ್ಷ್ಯಗಳನ್ನು ಕಂಡೊಡನೆಯೇ ಪುನಃ ಅವರಿಗೆ ತಿನ್ನಬೇಕೆಂಬ ಆಸೆಯು ಉಂಟಾಯಿತು. ಆಸೇನೆಯಲ್ಲಿ ಪರಿಚಾರಕರೂ, ದಾಸಿಯರೂ, ಕೆಲಸ ಮಾಡುತಿದ್ದ ಇತರ ಸ್ತ್ರೀಯರೂ, ಸಾವಿರಾರು ಮಂದಿಸೇರಿ, ಅನ್ನಪಾನಾದಿಗಳಿಂದ ತೃಪ್ತರಾಗಿ ಹೊಸಬಟ್ಟೆಗಳನ್ನುಟ್ಟು,

ಸಂತೋಷದಿಂದ ಬೆಳಗುತಿದ್ದರು. ಅಲ್ಲಿದ್ದ ಆನೆಗಳು, ಕುದುರೆಗಳು, ಒಂಟೆಗಳು, ಕತ್ತೆಗಳು, ಗೋವುಗಳು, ಮೃಗಪಕ್ಷಿಗಳು ಮುಂತಾದ ಸಮಸ್ತಪ್ರಾಣಿಗಳೂ ಸಂಪೂರ್ಣವಾಗಿ ತೃಪ್ತಿಹೊಂದಿದುವು. ಅಲ್ಲಿ ಭರದ್ವಾಜ ಮಹಾಋಷಿಯ ಮಹಿಮೆಯಿಂದುಂಟಾದ ಪದಾರ್ಥಗಳು ಹೊರತು ಬೇರೊಂದನ್ನು ಯಾರೂ ಅಪೇಕ್ಷಿಸಲಿಲ್ಲ. ಅಲ್ಲಿ ಹೊಸದಾದ ಮಡಿಬಟ್ಟೆಯನ್ನುಡದವನು ಒಬ್ಬನೂ ಇರಲಿಲ್ಲ. ಹಸಿದವನಾಗಲಿ, ಕೊಳೆಬಟ್ಟೆಯನ್ನುಟ್ಟವನಾಗಲಿ, ಕೊಳೆಮೈಯ್ಯುಳ್ಳವನಾಗಲಿ, ಕೊಳೆಯಾದ ತಲೆಕೂದಲುಳ್ಳವನಾಗಲಿ ಯಾವನೊಬ್ಬನೂ ಇರಲಿಲ್ಲ. ಮೇಕೆಯ ಮಾಂಸಗಳನ್ನೂ, ಹಂದಿಯ ಮಾಂಸಗಳನ್ನೂ, ಉತ್ತಮವಾದ ವ್ಯಂಜನಗಳನ್ನೂ, ಚೆನ್ನಾಗಿ ಮಾಗಿದ ಹಣ್ಣುಗಳನ್ನೂ, ಸಕ್ಕರೆ ಮೊದಲಾದುವುಗಳನ್ನೂ, ತೊವ್ವೆಗಳನ್ನೂ ಸುವಾಸನೆಯನ್ನು ಕೊಡುವಹಾಗೆ ಪಾಕವಿಟ್ಟ ರಸಾಯನಗಳನ್ನೂ, ಶಾಲ್ಯನ್ನಗಳನ್ನೂ ತುಂಬಿಟ್ಟ ಅನೇಕಸುವರ್ಣಪಾತ್ರೆಗಳು ಅಲ್ಲಲ್ಲಿ ಚಿತ್ರಕೆಲಸಗಳಿಂದ ಕೂಡಿ, ರಾಶಿಹಾಕಿದ ಅನ್ನದಸುತ್ತಲೂ ಸಾಲಾಗಿ ಇರಿಸಲ್ಪಟ್ಟಿದ್ದುವು. ಈ ಸುವರ್ಣಪಾತ್ರೆಗಳ ಸಾವಿರಾರು ಸಾಲುಗಳನ್ನು ನೋಡಿದವರೆಲ್ಲರೂ ಹಾಗೆಯೇ ಆಶ್ಚರ್ಯದಿಂದ ಸ್ತಬ್ಧರಾಗಿಬಿಡುತಿದ್ದರು. ತೋಟದಸುತ್ತಲೂ ಕೇವಲ ಪಾಯಸಗಳಿಂದಲೇ ತುಂಬಿದ ಬಾವಿಗಳು ಅನೇಕವಾಗಿರುತಿದ್ದುವು. ಆ ಆಶ್ರಮದಲ್ಲಿ ಮೊದಲಿದ್ದ ಗೋವುಗಳೆಲ್ಲವೂ, ಅಪೇಕ್ಷಿಸಿದಾಗಲೆಲ್ಲಾ ಕೋರಿದಷ್ಟುಹಾಲುಗಳನ್ನು ಕೊಡುವ ಶಕ್ತಿಯುಳ್ಳವುಗಳಾದುವು. ಪ್ರತಿಯೊಂದು ವೃಕ್ಷದಲ್ಲಿಯೂ ಮಕರಂದರಸವು ಅವಿಚ್ಛಿನ್ನವಾಗಿ ಸುರಿಯುತಿದ್ದುವು. ಅಲ್ಲಿನ ನಡೆಬಾವಿಗಳೆಲ್ಲವೂ ಮೈರೇಯವೆಂಬ ಮದ್ಯದಿಂದಲೇ ತುಂಬಿಹೋದುವು. ಅದರಸುತ್ತಲೂ ಪಾತ್ರೆಗಳಲ್ಲಿ ಚೆನ್ನಾಗಿ ಪಚನಮಾಡಿದ ಮೃಗಮಾಂಸಗಳೂ, ನವಿಲಿನಮಾಂಸಗಳೂ, ಕೋಳಿಯಮಾಂಸಗಳೂ, ಇರಿಸಲ್ಪಟ್ಟಿದ್ದುವು. ಅಲ್ಲಿ ಸಾವಿರಾರು ಅನ್ನಕುಂಭಗಳೂ, ಲಕ್ಷೋಪಲಕ್ಷ ವ್ಯಂಜನ ಪಾತ್ರೆಗಳೂ, ಕೋಟಿಕೋಟಿಸಂಖ್ಯೆಯುಳ್ಳ ಸುವರ್ಣಮಯವಾದ ಭೋಜನಪಾತ್ರೆಗಳೂ ತುಂಬಿದ್ದುವು. [1] ಶುಂಠಿಮೊದಲಾದ ಪರಿಕರದ್ರವ್ಯ

1 ಇಲ್ಲಿ "ಯೌವನಸ್ಥಸ್ಯಗೌರಸ್ಯ ಕಪಿತ್ಥಸ್ಯಸುಗಂಧಿನಃ । ಹ್ರದಾಃಪೂರ್ಣಾರಸಾಲಸ್ಯ ದಧ್ನಶ್ಶ್ವೇತಸ್ಯಚಾಪರೇ ॥" ಎಂದುಮೂಲವು. ಇಲ್ಲಿ "ಕಪಿತ್ಥ" ವೆಂದರೆ ಕಡೆ

ಗಳನ್ನು ಹಾಕಿ ಸಂಸ್ಕರಿಸಲ್ಪಟ್ಟ ಮೊಸರಿನಿಂದ ತುಂಬಿದ ಅನೇಕ ಕುಂಭಗಳೂ, ಹರವಿಗಳೂ, ಸಣ್ಣಪಾತ್ರೆಗಳೂ ಹೇರಳವಾಗಿದ್ದುವು. ಅಲ್ಲಲ್ಲಿ ಬಹಳ ಪುರಾತನವೂ ಅಲ್ಲದೆ, ಕೇವಲನೂತನವೂ ಅಲ್ಲದೆ, ಬೇಲದ ಹಣ್ಣಿನವಾಸನೆಯಿಂದ ಕೂಡಿ ಶುಭ್ರವಾಗಿದ್ದ ಇಂಬುಳಿಯಾದ ಮಜ್ಜಿಗೆಯ ಮಡುಗಳು ಅಪರಿಮಿತವಾಗಿದ್ದುವು. ಮತ್ತೆ ಕೆಲವುಕಡೆಗಳಲ್ಲಿ ಹಿಪ್ಪಲಿ, ಮೆಣಸು, ಏಲಕ್ಕಿ? ಲವಂಗ, ತಕ್ಕೋಲ, ನಾಗಕೇಸರಿ, ಜೀರಿಗೆ, ಸಕ್ಕರೆ, ಹಸೀಶುಂಠಿ ಮುಂತಾದ ವಾಸನಾದ್ರವ್ಯಗಳನ್ನು ಸೇರಿಸಿ ಕಡೆದಿಟ್ಟಮೊಸರಿನ ಮಡುಗಳೇ ತುಂಬಿದ್ದುವು. ಕೆಲವು ಕೊಳಗಳು ಪಾಯಸದಿಂದಲೇ ತುಂಬಿದ್ದುವು. ಇವುಗಳಿಗೆ ವ್ಯಂಜನಾರ್ಥವಾಗಿ 'ಪಕ್ಕದಲ್ಲಿ ಸಕ್ಕರೆಯು ರಾಶಿರಾಶಿಯಾಗಿ ಇಡಲ್ಪಟ್ಟಿದ್ದುವು. ಮತ್ತು ನೆಲ್ಲಿಕಾಯಿ ಮುಂತಾದ ಕಲ್ಕಗಳೂ, ಉದ್ದುಮೊದಲಾದ ಧಾನ್ಯದ ಹಿಟ್ಟುಗಳೂ, ಕಷಾಯಗಳೂ, ವಿಧವಿಧವಾದ ಸ್ನಾನಪದಾರ್ಥಗಳೂ, ಅಲ್ಲಲ್ಲಿ ಪಾತ್ರೆಗಳಲ್ಲಿ ತುಂಬಿ ನದೀತೀರಪ್ರದೇಶಗಳಲ್ಲಿ ಸಾಲಾಗಿ ಇರಿಸಲ್ಪಟ್ಟಿದ್ದುವು. ಮತ್ತು ಅಲ್ಲಿ ನಿರ್ಮಲವಾಗಿಯೂ, ಕೂರ್ಚಗಳುಳ್ಳದಾಗಿಯೂ ಇದ್ದ ಹಲ್ಲುಜ್ಜುವಕಡ್ಡಿಗಳು ನದೀತೀರಪ್ರದೇಶಗಳಲ್ಲಿ ಅಲ್ಲಲ್ಲಿ ರಾಶಿಹಾಕಲ್ಪಟ್ಟಿದ್ದುವು. ಅಲ್ಲಲ್ಲಿ ಸಿದ್ಧವಾಗಿ ಗಂಧವನ್ನು ತೇದು ಬಟ್ಟಲುಗಳಲ್ಲಿ ತುಂಬಿಟ್ಟಿದ್ದರು. ಅಲ್ಲಲ್ಲಿ ಕನ್ನಡಿಗಳನ್ನು ನಿರ್ಮಲವಾಗಿ ತೊಳೆದಿಟ್ಟಿದ್ದರು. ಅಲ್ಲಲ್ಲಿ ಮಡಿಬಟ್ಟೆಗಳನ್ನು ರಾಶಿಹಾಕಿದ್ದರು. ಅಲ್ಲಲ್ಲಿ ಜತೆಜತೆಯಾದ ಪಾದುಕೆಗಳೂ ಇರಿಸಲ್ಪಟ್ಟಿದ್ದುವು. ಅಲ್ಲಲ್ಲಿ ಕಣ್ಣುಕಪ್ಪಿನ ಕರಡಿಗೆಗಳೂ, ಬಾಚಣಿಗೆಗಳೂ, ಕಡವೆಗಳೂ, ಕೂರ್ಚಗಳೂ, ವಿಧವಿಧವಾದ ಶಸ್ತ್ರಗಳೂ, ಯುದ್ಧಕವಚವೇ ಮೊದಲಾದ ಸಾಧನಗಳೂ ಅಪರಿಮಿತವಾಗಿ ಸಿದ್ಧಪಡಿಸಲ್ಪಟ್ಟಿದ್ದುವು. ಅಲ್ಲಲ್ಲಿ ವಿಚಿತ್ರವಿಚಿತ್ರಗಳಾದ ಹಾಸಿಗೆಗಳೂ, ಆಸನಗಳೂ ಇರಿ

---

ದಮಜ್ಜಿಗೆ "ತತ್ರಂಕಪಿತ್ಥಂಮಥಿತಂ" ಎಂದು ನಿಘಂಟುಪ್ರಮಾಣವು. ಹಾಗೆಯೇ "ಅಪಕ್ವತಕ್ರಂಸವ್ಯೋಷಂ ಚತುರ್ಜಾತಗುಡಾರ್ದ್ರಕಂ । ಸಜೀರಕಂರಸಾಲಂಸ್ಯಾತ್" ಎಂಬಂತೆ ರಸಾಲವೆಂದರೆ ವ್ಯೋಷವೆಂದುಕರೆಯಲ್ಪಡುವ, ಶುಂಠಿ, ಹಿಪ್ಪಲಿ, ಮೆಣಸು, ಇವುಗಳಿಂದಲೂ ಏಲಕ್ಕಿ, ಲವಂಗ, ತಕ್ಕೋಲ, ನಾಗಪುಷ್ಪಗಳೆಂಬ ಚತುರ್ಜಾತದಿಂದಲೂ, ಬೆಲ್ಲದಿಂದಲೂ, ಜೀರಿಗೆಯಿಂದಲೂ ಸುವಾಸಿತವಾದ ಪಕ್ವಮಾಡದ ಮೊಸರು. ಇವೆಲ್ಲವೂ ಸಿದ್ಧವಾಗಿದ್ದುವೆಂದುಭಾವವು.

ಸಲ್ಪಟ್ಟಿದ್ದುವು. ಮತ್ತು ಆನೆಗಳು, ಕುದುರೆಗಳು, ಒಂಟೆಗಳು, ಕತ್ತೆಗಳು ಮೊದಲಾದ ಸೈನ್ಯದಜಂತುಗಳಿಗೆ, ತಿಂದ ಆಹಾರವನ್ನು ಜೀರ್ಣಮಾಡುವುದ ಕ್ಕೋಸ್ಕರಕುಡಿಸತಕ್ಕ ಕಷಾಯಗಳು ಮಡುವಿನಂತೆ ತುಂಬಿಡಲ್ಪಟ್ಟಿದ್ದುವು. ಸ್ನಾನಮಾಡುವುದಕ್ಕೆ ಯೋಗ್ಯವಾದ ಸೋಪಾನಘಟ್ಟಗಳಿಂದ ಕೂಡಿ, ತಾವರೆ, ನೈದಿಲೆ ಮೊದಲಾದ ಸೀರುಹೂಗಳಿಂದ ನೇತ್ರಾನಂದಕರವಾಗಿ,ಆಕಾಶದಂತೆ ಸ್ವಚ್ಛವಾದ ನೀರುಳ್ಳುದಾಗಿ, ಸುಲಭವಾಗಿ ಸ್ನಾನಮಾಡುವುದಕ್ಕೆ ತಕ್ಕ ನೆಲಗಟ್ಟುಗಳುಳ್ಳುದಾಗಿಯೂ, ಇರುವ ಅನೇಕಸರೋವರಗಳು ಅಲ್ಲಲ್ಲಿ ತುಂಬಿದ್ದುವು. ಮತ್ತು ಹಸುಗಳ ಮೇವಿಗಾಗಿ ಅಲ್ಲಲ್ಲಿ ನೀಲರತ್ನದಂತೆಯೂ, ವೈಡೂರ್ಯದಂತೆಯೂ ವಿಚಿತ್ರವರ್ಣವುಳ್ಳ ಮೃದುವಾದ ಎಳೆಗರಿಕೆಗಳಿಂದ ಕೂಡಿದ ಹುಲ್ಲು ಮೈದಾನಗಳು ವಿಸ್ತಾರವಾಗಿ ಕಾಣುತಿದ್ದುವು. ಇದೆಲ್ಲವನ್ನೂ ನೋಡಿ ಆ ಸೈನಿಕರು ಆಶ್ಚರ್ಯದಿಂದ ಪರವಶರಾಗಿದ್ದರು. ಇದುವರೆಗೆ ಯಾವಾಗಲೂ ಕಂಡುಕೇಳಿಲ್ಲದ ಈ ಮಹಾದು ತವನ್ನು ನೋಡಿ “ಇದೇನು ಸ್ವಪ್ನವೋ?ಅಥವಾ ನಿಜವೋ” ಎಂದು ತಮ್ಮಲ್ಲಿ ತಾವೇ ಸಂದೇಹಪಡುತ್ತ, ಎಲ್ಲರೂ ಬೆರಗಾಗಿದ್ದರು. ಭರದ್ವಾಜಮಹರ್ಷಿಯು ಭರತನಿಗೂ,ಅತನ ಸೈನ್ಯಕ್ಕೂ ನಡೆಸಿದ ಈಮಹಾದ್ಭುತವಾದ ಔತನವು ಒಬ್ಬೊಬ್ಬರಿಗೂ ಪರಮಾಶ್ಚರ್ಯವನ್ನುಂಟುಮಾಡಿತು. ನಂದನವನದಲ್ಲಿರುವ ದೇವತೆಗಳಂತೆ ಆ ಆಶ್ರಮದಲ್ಲಿ ವಿಹರಿಸುತಿದ್ದ ಸೈನಿಕರಿಗೆ ಆ ರಾತ್ರಿಯೆಲ್ಲವೂ ಒಂದು ವಿನಾಡಿಯಂತೆ ಕಳೆದುಹೋಯಿತು. ಆ ಮೇಲೆ ಭರದ್ವಾಜನ ಆಜ್ಞೆಯಿಂದ ಅಲ್ಲಿಗೆ ಬಂದಿದ್ದ ನದಿಗಳೂ, ಗಂಧರ್ವರೂ, ದೇವತೆಗಳೂ, ಅಪ್ಸರಸ್ತ್ರೀಯರೂ, ಆ ಮಹರ್ಷಿಯ ಅನುಮತಿಯನ್ನು ಪಡೆದು, ತಾವು ಬಂದದಾರಿಯನ್ನೇ ಹಿಡಿದು ಹೊರಟುಹೋದರು. [1]ಇತ್ತಲಾಗಿ ಸೈನಿಕರೆಲ್ಲರೂ ಮದ್ಯಪಾನದಿಂದ ಮದಿಸಿ, ಗಂಧಪುಷ್ಪಾದಿಗಳಿಂದ ಅಲಂಕೃತರಾಗಿಯೇ ಇದ್ದರು. ಅವರು ಧರಿಸಿದ್ದ ಗಂಧಮಾಲ್ಯಾದಿಗಳೆಲ್ಲವೂ ಅಲ್ಲಲ್ಲಿ ನೆಲದಮೇಲೆ ಉದಿರಿದ್ದು

---

1 ಇಂದ್ರಜಾಲದಹಾಗೆ ಅನುಭವಕಾಲದಲ್ಲಿಮಾತ್ರವೇ ಇದ್ದು ಆಮೇಲೆ ಏನ ದಂತಾಗುವುದಲ್ಲ. ಅವೆಲ್ಲವೂ ಯಥಾರ್ಥವೇ ಎಂಬುದನ್ನು ತಿಳಿಸುವುದಕ್ಕಾಗಿ ಈವಾಕ್ಯಗಳು ಹೇಳಲ್ಪಟ್ಟವೆ.

ವು. ಅವು ದೇವತೆಗಳಿಂದ ತರಲ್ಪಟ್ಟುವಾದುದರಿಂದ ಸ್ವಲ್ಪವಾದರೂ ಕಂದಿಕುಂದದೆ ಮೊದಲಿನಂತೆಯೇ ಕಾಣುತಿದ್ದುವು. ಇಲ್ಲಿಗೆ ತೊಂಬತ್ತೊಂದನೆಯ ಸರ್ಗವು.

---

{ಭರತನು ಭರದ್ವಾಜನಿಗೆ ಕೌಸಲ್ಯಾದಿಗಳನ್ನು ತಿಳಿಸಿದುದು. ಚಿತ್ರಕೂಟಪ್ರಯಾಣವು. ನಡುವೆ ಯಮುನಾತೀರವನವನ್ನು ಪ್ರವೇಶಿಸಿದುದು.}

ಹೀಗೆ ಭರತನು ಭರದ್ವಾಜನ ಆತಿಥ್ಯವನ್ನು ಹೊಂದಿದಮೇಲೆ,ರಾಮನನ್ನು ನೋಡುವ ಆತುರದಿಂದ ಭರದ್ವಾಜಮುನಿಯಬಳಿಗೆ ಹೋದನು. ಅಷ್ಟರಲ್ಲಿ ಭರದ್ವಾಜಮುನಿಯೂ ಅಗ್ನಿಹೋತ್ರಾದಿವಿಧಿಗಳನ್ನು ಮುಗಿಸಿದ್ದನು. ಭರತನು ಹೋಗಿ ಆತನ ಮುಂದೆ ಕೈಮುಗಿದು ನಿಲ್ಲಲು, ಆತನನ್ನು ನೋಡಿ ಋಷಿಯು “ಎಲೈ ಪುರುಷಶ್ರೇಷ್ಠನೆ! ನಿನಗೆ ಈ ನನ್ನಾಶ್ರಮದಲ್ಲಿ ನೆನ್ನೆರಾತ್ರಿ ಅಪ್ಯಾಗಿ ಕಷ್ಟವೇನೂ ತೋರಲಿಲ್ಲವಷ್ಟೆ? ನಾನು ಮಾಡಿಸಿದ ಆತಿಥ್ಯಗಳಿಂದ ನಿನ್ನ ಸೈನಿಕರೆಲ್ಲರೂ ತೃಪ್ತಿಪಟ್ಟಿರಬಹುದಲ್ಲವೆ? ಏನಾದರೂ ಲೋಪವಿದ್ದರೆ ತಿಳಿಸು. ನನಗೆ ಅದರ ವಿಚಾರವೇ ಬಹಳವಾಗಿರುವುದು.” ಎಂದನು. ಆಗ ಭರತನು ತನಗಿಂತಲೂ ಮೊದಲೇ ತನ್ನನ್ನುನೋಡಬೇಕೆಂದು ಹೊರಟುಬರುತಿದ್ದ ಮಹಾತೇಜಸ್ವಿಯಾದ ಆಮಹರ್ಷಿಯ ಸೌಜನ್ಯಕ್ಕೂ, ಸೌಲಭ್ಯಕ್ಕೂ ಪರಮಸಂತುಷ್ಟನಾಗಿ, ಆತನಿಗೆ ವಿನಯದಿಂದ ಸಾಷ್ಟಾಂಗಪ್ರಣಾಮವನ್ನುಮಾಡಿ, ಕೈಮುಗಿದುನಿಂತು “ಎಲೈ ಮಹಾತ್ಮನೆ! ಆ ಸೌಖ್ಯವನ್ನು ನಾನೇನೆಂದು ಹೇಳಲಿ! ನೆನ್ನೆಯರಾತ್ರಿಯೆಲ್ಲವೂ ನನಗೆ ಬಹುಸುಖವಾಗಿ ಕಳೆಯಿತು. ನಾನೊಬ್ಬನೇ ಅಲ್ಲ. ನನ್ನಮಂತ್ರಿಗಳೂ, ನನ್ನ ಸೈನಿಕರೂ, ನನ್ನ ವಾಹನಗಳೂ, ಇನ್ನೂ ನನ್ನೊಡನೆಬಂದ ಇತರ ಪರಿವಾರಗಳೆಲ್ಲವೂ ಬೇಕುಬೇಕಾದ ಸೌಖ್ಯಗಳನ್ನನುಭವಿಸಿ ತೃಪ್ತರಾಗಿರುವರು. ನಮ್ಮ ಪರಿಚಾರಕರು ಮೊದಲುಗೊಂಡು ಸಮಸ್ತರೂ ಬೇಕು ಬೇಕಾದ ಮೃಷ್ಟಾನ್ನಭೋಜನಗಳನ್ನುಂಡು, ಸುಖವಾಗಿ ವಿಶ್ರಾಂತಿಯನ್ನು ತೆಗೆದುಕೊಂಡರು. ಒಬ್ಬೊಬ್ಬರೂ ಅರಮನೆಯಂತೆ ಸುಖಾಶ್ರಯವಾದ ಬಿಡದಿಗಳಲ್ಲಿ ಮಲಗಿದ್ದರು. ಎಲೈ ಪೂಜ್ಯನೆ! ನಿನ್ನ ಮಹಾಪ್ರಭಾವದಿಂ

ದುಂಟಾದ ಈ ಆತಿಥ್ಯದಲ್ಲಿ ಹೇಗೆ ತಾನೇ ಲೋಪಗಳುಂಟಾಗುವುವು?[1]ಅದು ಹಾಗಿರಲಿ! ಈಗ ನಾನು ಅಣ್ಣನಾದ ರಾಮನಬಳಿಗೆ ಹೊರಡಬೇಕೆಂದಿರು ವೆನು. ಅನುಜ್ಞೆಯನ್ನು ಕೊಡಬೇಕು! ದಯಾದೃಷ್ಟಿಯಿಂದ ನನ್ನನ್ನು ಅನುಗ್ರಹಿಸಬೇಕು. ಧಾರ್ಮಿಕನಾದ ರಾಮನಿರತಕ್ಕ ಆಶ್ರಮಕ್ಕೆ ಯಾವ ದಾರಿಯಿಂದ ಹೋಗಬೇಕು? ಅದು ಇಲ್ಲಿಗೆ ಇನ್ನೆಷ್ಟುದೂರದಲ್ಲಿರುವುದು?" ಎಂದನು. ಹೀಗೆ ಅಣ್ಣನನ್ನು ನೋಡಬೇಕೆಂಬ ಆತುರದಿಂದ ಕೇಳುತ್ತಿರುವ ಆ ಭರತನನ್ನು ನೋಡಿ,ಮಹಾತೇಜಸ್ವಿಯಾದ ಆಮುನಿಯು“ವತ್ಸ ಭರತನೆ! ಇಲ್ಲಿಗೆ ಎರಡೂವರೆಗಾವುದಗಳ ದೂರದಲ್ಲಿ ನಿರ್ಜನವಾದ ವನವೊಂದಿರುವು ದು. ಅಲ್ಲಿ ಮಹಾತ್ಮರಾದ ಕೆಲವು ತಪಸ್ವಿಗಳು ಹೊರತು ಬೇರೆ ಸಾಮಾನ್ಯ ಜನರಿಲ್ಲವು. ಆ ವನದನಡುವೆ ಅಂದವಾದ ತಪ್ಪಲುಗಳಿಂದಲೂ, ಕಾಡುಗಳಿಂ ದಲೂ ಕೂಡಿದ ಚಿತ್ರಕೂಟವೆಂಬ ಪರ್ವತವೊಂದು ಕಾಣುವುದು. ಅದಕ್ಕೆ ಉತ್ತರದಲ್ಲಿ ಮಂದಾಕಿನಿಯೆಂಬ ನದಿಯೊಂದು ಪ್ರವಹಿಸುತ್ತಿರುವುದು. ಅ ದರ ತೀರದಲ್ಲಿ ಪುಷ್ಪಿತಗಳಾದ ಅನೇಕ ವೃಕ್ಷಗಳು ದಟ್ಟವಾಗಿ ತುಂಬಿರುವು ವು. ಅಲ್ಲಿ ಹೂತೋಟಗಳೂ ಹೇರಳವಾಗಿರುವುವು. ಆ ನದಿಯ ಪಕ್ಕದಲ್ಲಿರು ವುದೇ ಚಿತ್ರಕೂಟವು. ಅದರಲ್ಲಿ ಪರ್ಣಶಾಲೆಯನ್ನು ಮಾಡಿಕೊಂಡು ನಿನ್ನ ಸಹೋದರರಿಬ್ಬರೂ ವಾಸಮಾಡುತ್ತಿರುವರು. ಎಲೈ ಪುರುಷಶ್ರೇಷ್ಠನೆ! ಇದೋ!ಇಲ್ಲಿ ನಮ್ಮಾಶ್ರಮದ ದಕ್ಷಿಣಕ್ಕೆ ಒಂದು ದಾರಿಯು ಹೋಗುತ್ತಿರು ವುದಲ್ಲವೆ? ಈ ದಾರಿಯಿಂದಲೇ ಸ್ವಲ್ಪದೂರದವರೆಗೆ ನಿನ್ನ ಸೈನ್ಯಗಳನ್ನು ನಡೆಸಿಕೊಂಡುಹೋಗಿ, ಆಮೇಲೆ ಅಲ್ಲಿಂದ ನೈಋತ್ಯಕ್ಕೆ ತಿರುಗುವ ದಾರಿಯ ನ್ನು ಹಿಡಿದುಹೋಗು. ಈ ಕಾಡುದಾರಿಗಳೆಲ್ಲವೂ ಬಹಳ ಸಣ್ಣನಾಗಿರುವು ದರಿಂದ,ನಿನ್ನ ಆನೆ, ಕುದುರೆ, ರಥಗಳೆಂಬ ಸಮಸ್ತ ಸೈನ್ಯಗಳನ್ನೂ ಆ ದಾರಿ

---

1 ಭರತನ ಆಂತರ್ಯವನ್ನು ಕಂಡುಕೊಳ್ಳುವುದಕ್ಕಾಗಿಯೇ ಭರದ್ವಾಜನು ಇಷ್ಟು ಆತಿಥ್ಯವನ್ನು ನಡೆಸಿರುವನು. ಭರತನಿಗೆ ರಾಮನಲ್ಲಿ ನಿಜವಾದ ಭಕ್ತಿಯಿಲ್ಲದಿದ್ದರೆ, ಈ ಆಶ್ರಮದಲ್ಲಿ ಲಭಿಸಿದ ಭೋಗಸಾಮಗ್ರಿಗಳಲ್ಲಿಯೇ ಮಗ್ನನಾಗಿ, ಇಲ್ಲಿಯೇ ನಡೆದಷ್ಟು ದಿವಸಗಳವರೆಗೆ ನಿಂತುಬಿಡುವನೆಂದು ಆ ಋಷಿಯ ಅಭಿಪ್ರಾಯವು. ಹಾಗಿದ್ದರೂ ಭರತನು ಅದರಲ್ಲಿ ಮಗ್ನನಾಗದೆ ರಾಮದರ್ಶನಾತುರದಿಂದಲೇ ಕಳವಳಿಸುತಿದ್ದುದನ್ನು ನೋಡಿ ಭರದ್ವಾಜನಿಗೆ ಪೂರ್ಣವಾದ ನಂಬಿಕೆಯುಂಟಾಯಿತೆಂದು ಗ್ರಹಿಸಬೇಕು.

ಯಲ್ಲಿಯೇ ನಡೆಸಿಕೊಂಡು ಹೋಗಬೇಕೆಂದರೆ ಸಾಧ್ಯವಾಗಲಾರದು. ಆದರೆ ದಾರಿಯ ಉಭಯಪಾರ್ಶ್ವಗಳಲ್ಲಿಯೂವಿಸ್ತಾರವಾದ ಮೈದಾನಗಳಿರುವುವು. ಅವುಗಳಲ್ಲಿಯೂ ನೀನು ಧಾರಾಳವಾಗಿ ಸೈನ್ಯವನ್ನು ನಡೆಸಿಕೊಂಡು ಹೋಗಬಹುದು. ಇದೇದಾರಿಯನ್ನು ಹಿಡಿದುಹೋಗಿ ನೀನು ನಿಮ್ಮಣ್ಣನನ್ನು ನೋಡಬಹುದು." ಎಂದನು. ಈ ಪ್ರಯಾಣಸನ್ನಾಹವನ್ನು ಕೇಳಿದೊಡನೆಯೇ ದಶರಥನ ಭಾರ್ಯೆಯರೆಲ್ಲರೂ,ತಾವು ವಾಹನವನ್ನು ಬಿಟ್ಟುಹೊರಗೆ ಬರಬಾರದಾಗಿದ್ದರೂ, ಆ ಮಹರ್ಷಿಯಲ್ಲಿ ಗೌರವದಿಂದ ಇಳಿದು ಬಂದು ಭರದ್ವಾಜನಮುಂದೆ ನಿಂತರು. ಅವರಲ್ಲಿ ಮೊದಲು ದುಃಖದಿಂದ ಕಂದಿ ಕೃಶಳಾಗಿದ್ದ ಕೌಸಲ್ಯೆಯು ನಡುಗುತ್ತ, ಸುಮಿತ್ರೆಯೊಡಗೂಡಿ ಮುಂದೆಬಂದು ಆ ಮಹರ್ಷಿಯ ಪಾದಗಳೆರಡನ್ನೂ ಹಿಡಿದು ನಮಸ್ಕರಿಸಿದಳು. ಇವರನ್ನು ನೋಡಿದ ಮೇಲೆ ಕೈಕೇಯಿಯೂ ಮುಂದೆ ಬಂದಳು.ತಾನು ಕೋರಿದ ಕಾರ್ಯಗಳೆಲ್ಲವೂ ನಿಷ್ಫಲವಾದುದಲ್ಲದೆ, ಅದರಿಂದ ದೊಡ್ಡ ಲೋಕಾಪವಾದಕ್ಕೂ ತಾನು ಗುರಿಯಾಗಬೇಕಾಯಿತೆಂಬ ನಾಚಿಕೆಯಿಂದ, ಅವಳು ತಲೆಯನ್ನೆತ್ತದೆಯೇ ಮುಂದೆ ಹೋಗಿ ಋಷಿಯಪಾದಕ್ಕೆ ನಮಸ್ಕರಿಸಿದಳು.ಆ ಮೇಲೆ ಆಕೆಯು ಆ ಮಹರ್ಷಿಯ ಮುಂದೆ ನಿಲ್ಲುವುದಕ್ಕೂ ನಾಚಿಕೊಂಡು, ಆ ಮಹಾತ್ಮನನ್ನು ಪ್ರದಕ್ಷಿಣಮಾಡುವ ನೆವದಿಂದ, ಆತನ ಹಿಂಭಾಗದಿಂದ ಹೊರಟು ಭರತನಸಮೀಪಕ್ಕೆ ಬಂದು ಮರೆಯಾಗಿ ನಿಂತಿದ್ದಳು.ಆಮೇಲೆ ವ್ರತನಿಷ್ಠನಾದ ಭರದ್ವಾಜನು ಭರತನನ್ನುನೋಡಿ,[1] "ವತ್ಸನೆ! ನಿನ್ನ ಈ ಮಾತೆಯರಲ್ಲಿ ಅವರವರ ಹೆಸರೇನೆಂದು ತಿಳಿಸು." ಎಂದನು. ಅದಕ್ಕಾಭರತನು ಭರದ್ವಾಜಮಹರ್ಷಿಗೆ ಕೈಮುಗಿದು ನಿಂತು. "ಮಹಾತ್ಮನೆ! ಇದೋ ಇಲ್ಲಿ ದುಃಖದಿಂದ ನಿದ್ರಾಹಾರಗಳಿಲ್ಲದೆ ಕೃಶಳಾಗಿ ಧರ್ಮದೇವತೆಯಂತೆ ನಿನ್ನ ಮುಂದೆ ನಿಂತಿರುವವಳೇ ಕೌಸಲ್ಯೆಯೆಂಬವಳು. ಇವಳೇ ಪೂಜ್ಯನಾದ ನನ್ನ ತಂದೆಗೆ ಪಟ್ಟಮಹಿಷಿಯು. ಅದಿತಿಯು ಮಹಾವಿಷ್ಣುವನ್ನು ಪಡೆದಂತೆ, ಈ

---

1 ಸರ್ವಜ್ಞನಾದ ಭರದ್ವಾಜನು ಕೌಸಲ್ಯಾದಿಗಳನ್ನು ತಿಳಿಯದವನಲ್ಲ. ರೂ ಭರತನ ಮೂಲಕವಾಗಿ ಕೈಕೇಯಿಯ ಯೋಗ್ಯತೆಯನ್ನು ಹೊರಪಡಿಸಬೇಕೆಂಬುದಕ್ಕಾಗಿಯೇ ಹೀಗೆ ಏನೂ ತಿಳಿಯದವನಂತೆ ಕೇಳಿರುವನು.

ಕೆಯೇ ಸಿಂಹವಿಕ್ರಮನಾಗಿ ಪುರುಷಸಿಂಹನೆನಿಸಿಕೊಂಡ ಆ ರಾಮನನ್ನು ಪಡೆದವಳು. ಇದೋ! ಇಲ್ಲಿ ಕೌಸಲ್ಯೆಯ ಎಡದ ಭುಜವನ್ನು ಹಿಡಿದು, ಕಾಡಿನಲ್ಲಿ ಉದಿರಿಹೋದ ಪುಷ್ಪಗಳುಳ್ಳ ಕರ್ಣಿಕಾರವೃಕ್ಷದ ಶಾಖೆಯಂತೆ ದುಃಖದಿಂದ ಕಂದಿ ಕೃಶಳಾಗಿ ನಿಂತಿರುವ ಆಕೆಯೇ ಸುಮಿತ್ರೆಯೆಂಬವಳು.ಅಶ್ವಿನೀದೇವತೆಗಳಂತೆ ದಿವ್ಯರೂಪವುಳ್ಳವರಾಗಿಯೂ, ವೀರರಾಗಿಯೂ, ಸತ್ಯಪರಾಕ್ರಮವುಳ್ಳವರಾಗಿಯೂ ಇರುವ ಲಕ್ಷ್ಮಣಶತ್ರುಘ್ನರಿಬ್ಬರೂ ಈಕೆಯ ಮಕ್ಕಳು. ಎಲೈ ಮಹಾತ್ಮನೆ! ಅದೋ ಅಲ್ಲಿನೋಡು! ಯಾವಳ ದೆಸೆಯಿಂದ ಪುರುಷಶ್ರೇಷ್ಠರಾದ ರಾಮಲಕ್ಷ್ಮಣರಿಬ್ಬರೂ ಪ್ರಾಣಾಂತಕರವಾದ ಕಷ್ಟಕ್ಕೆ ಗುರಿಮಾಡಲ್ಪಟ್ಟು ಕಾಡುಪಾಲಾಗಿ ಹೊರಟುಹೋಗಿರುವರೋ,ಯಾವಳ ದೆಸೆಯಿಂದ ರಾಜಾಧಿರಾಜನಾದ ದಶರಥನು ಪುತ್ರವಿರಹಕ್ಕೆ ಗುರಿಯಾಗಿ ಮೃತ್ಯುವಶನಾದನೋ, ಅಂತಹ ಮಹಾಕ್ರೂರೆಯೂ, ವಿವೇಕಶೂನ್ಯಳೂ, ಕೋಪಾತ್ಮಳೂ, ತಾನೇ ತ್ರಿಲೋಕಸುಂದರಿಯೆಂಬ ಅಹಂಭಾವವುಳ್ಳವಳೂ, ಐಶ್ವರ್ಯದಲ್ಲಿ ಪರಮಲೋಭವುಳ್ಳವಳೂ ಆದ ಆಕೆಯೇ ಕೈಕೇಯಿಯೆಂಬವಳು. ಹೊರಗೆಮಾತ್ರ ಬಹುಯೋಗ್ಯಳಂತೆ ಕಾಣುತಿದ್ದರೂ, ಪರಮಘಾತುಕಿಯಾಗಿ, ಪಾಪಬುದ್ಧಿಯುಳ್ಳವಳಾಗಿರುವ ಈಕೆಯ ಹೊಟ್ಟೆಯಲ್ಲಿ ಹುಟ್ಟಬೇಕಾದ ದೌರ್ಭಾಗ್ಯಕ್ಕೆ ನಾನೇ ಗುರಿಯಾದೆನು. ಈಕೆಯಿಂದಲೇ ನಾನೂ ಇಂತಹ ಘೋರವಾದ ವ್ಯಸನದಲ್ಲಿ ಸಿಕ್ಕಿನರಳಬೇಕಾಯಿತು." ಎಂದು ಹೇಳುತ್ತ, ಭರತನು ಕೊನೆಕೊನೆಗೆ ಗದ್ಗದಸ್ವರವುಳ್ಳವನಾಗಿ, ಕಣ್ಣಿನಲ್ಲಿ ನೀರುತುಂಬಿಕೊಂಡು, ಕೆಂಪಾದ ಕಣ್ಣುಗಳುಳ್ಳವನಾಗಿ, ಕೋಪದಿಂದ ಬುಸುಗುಟ್ಟುತ್ತಿರುವ ಸರ್ಪದಂತೆ ಉದ್ದವಾಗಿ ನಿಟ್ಟುಸಿರನ್ನು ಬಿಟ್ಟನು. ಹೀಗೆ ದುಃಖದಿಂದ ಮಾತಾಡುತ್ತಿರುವ ಭರತನನ್ನು ನೋಡಿ, ಮಹಾಧೀಮಂತನಾದ ಭರದ್ವಾಜನು, ಯುಕ್ತಿಯುಕ್ತವಾದ ಮಾತುಗಳಿಂದ ಆತನನ್ನು ಸಮಾಧಾನಪಡಿಸುತ್ತ, “ವತ್ಸ ಭರತನೆ! ಚಿಂತಿಸಬೇಡ.! [1]ನೀನು ಕೈಕೇಯಿಯವಿಷಯದಲ್ಲಿ ಹಾಗೆ ದೋಷವನ್ನೆಣಿಸಬೇಡ! ರಾಮನನ್ನು ಕಾಡಿಗೆ ಕಳುಹಿಸಿದುದು ಮುಂದಿನ ಶ್ರೇಯಸ್ಸಿಗಾಗಿಯೇ ಹೊರತು ಬೇರೆಯ

1 ಇಲ್ಲಿ ದೈವಪ್ರೇರಣೆಯಿಂದಲೇ ಕೈಕೇಯಿಯು ಈ ತಂತ್ರವನ್ನು ನಡೆಸಿರುವಳೆಂದೂ, ರಾವಣಾದಿಗಳನ್ನು ಕೊಲ್ಲುವುದರ ಮೂಲಕವಾಗಿ ಇದರಿಂದ ಲೋಕಕ್ಷೇಮ

ಲ್ಲ. ಇದರಿಂದ ಮುಂದೆ ಬಹಳಸೌಖ್ಯವುಂಟು. ಇದರಿಂದ ದೇವತೆಗಳಿಗೂ, ದಾನವರಿಗೂ, ಆತ್ಮನಿಷ್ಠರಾದ ಮಹರ್ಷಿಗಳಿಗೂ ಅನೇಕವಿಧದಲ್ಲಿ ಕ್ಷೇಮವುಂಟು.'' ಎಂದನು. ಆಮೇಲೆ ಭರತನು ಆತನಿಗೆ ನಮಸ್ಕರಿಸಿ, ಆತನ ಆಶೀರ್ವಾದಗಳನ್ನು ಪಡೆದು, ಆತನನ್ನು ಪ್ರದಕ್ಷಿಣಮಾಡಿ, ಅನುಜ್ಞೆಯನ್ನು ಪಡೆದು, ಮುಂದಿನಪ್ರಯಾಣಕ್ಕೆ ಸೈನ್ಯಗಳನ್ನು ಸಿದ್ಧಪಡಿಸುವಂತೆ ಆಜ್ಞಾಪಿಸಿದನು. ಆಗಲೇ ಸೈನಿಕರೆಲ್ಲರೂ ತಮ್ಮತಮ್ಮ ಆನೆ, ಕುದುರೆ, ರಥಗಳೆಲ್ಲವನ್ನೂ ಅಲಂಕರಿಸಿಕೊಂಡು, ಆಯಾ ವಾಹನಗಳನ್ನೇರಿ ಪ್ರಯಾಣಸನ್ನದ್ಧರಾಗಿದ್ದರು. ಅಲ್ಲಿ ಹೆಣ್ಣಾನೆಗಳೂ, ಗಂಡಾನೆಗಳೂ, ಸುವರ್ಣಮಯವಾದ ಪಕ್ಷರಕ್ಷೆಗಳಿಂದಲಂಕರಿಸಲ್ಪಟ್ಟು, ಮೇಲೆತ್ತಿ ಹಿಡಿಯಲ್ಪಟ್ಟ ಧ್ವಜಪತಾಕೆಗಳುಳ್ಳುದಾಗಿ, ಮಳೆಗಾಲದಲ್ಲಿ ಗುಡುಗುತ್ತಿರುವ ಮೇಘಗಳಂತೆ ಘಂಟಾಧ್ವನಿಗಳೊಡನೆ ಹೊರಟುವು. ರಥಗಳೇ ಮೊದಲಾದ ದೊಡ್ಡದೊಡ್ಡವಾಹನಗಳೂ, ಪಲ್ಲಕ್ಕಿ ಮೊದಲಾದ ಸಣ್ಣವಾಹನಗಳೂ ಪರಿಷ್ಕೃತಗಳಾಗಿ ಸಾಗುತಿದ್ದುವು. ಕಾಲಾಳುಗಳೆಲ್ಲರೂ ಕಾಲುನಡೆಯಿಂದಲೇ ಸಾಲಾಗಿ ಹೊರಟರು. ಆಗ ಕೌಸಲ್ಯೆಯೇ ಮೊದಲಾದ ಸ್ತ್ರೀಯರು, ರಾಮನನ್ನು ನೋಡಬೇಕೆಂಬ ಆತ್ಯಾತುರದಿಂದ, ತಮ್ಮತಮ್ಮ ಉತ್ತಮವಾದ ವಾಹನಗಳನ್ನೇರಿ ಸಂತೋಷದಿಂದ ಹೊರಟರು. ಶ್ರೀಮಂತನಾದ ಭರತನು ಚಂದ್ರಸೂರ್ಯರಂತೆ ಹೊಳೆಯುತ್ತಿರುವ' ಉತ್ತಮವಾದ ಪಲ್ಲಕ್ಕಿಯೊಂದನ್ನು ಏರಿ, ಪರಿವಾರಸಮೇತನಾಗಿ ಹೊರಟನು. ಹೀಗೆ ಆನೆಗಳಿಂದಲೂ, ಕುದುರೆಗಳಿಂದಲೂ, ರಥಗಳಿಂದಲೂ ತುಂಬಿದ ಆ ಮಹಾಸೈನ್ಯವು ದಕ್ಷಿಣಾಭಿಮುಖವಾಗಿ ಹೊರಟು, ಮಹಾಮೇಘಪರಂಪರೆಗಳಂತೆ ಆ ಪ್ರದೇಶವೆಲ್ಲವನ್ನೂ ವ್ಯಾಪಿಸಿತು. ವಿಚಿತ್ರವಿಚಿತ್ರಗಳಾದ ಮೃಗಪಕ್ಷಿಗಳಿಂದ ತುಂಬಿದ ಆನೇಕವನಗಳನ್ನು ದಾಟಿ, ಗಂಗೆಯ ಆಚೆಯದಡದಲ್ಲಿದ್ದ ಬೆಟ್ಟಗಳಲ್ಲಿಯೂ, ನದಿಗಳಲ್ಲಿಯೂ, ವಿಶ್ರಾಂತಿಯನ್ನು ತೆಗೆದುಕೊಂಡು ಮುಂದೆ ಹೋಗುತಿದ್ದರು. ಆನೆ ಕುದುರೆ ಮೊದಲಾದ ಚತುರಂಗಸೈನ್ಯವೂ ಅಲ್ಲಲ್ಲಿ ದಾರಿಯಲ್ಲಿದ್ದ ಮೃಗಪಕ್ಷಿಗಳನ್ನು ಹೆದರಿಸುವಂತೆ ಉತ್ಸಾಹದಿಂದ ಕೋಲಾಹಲಧ್ವನಿಗಳನ್ನು

---

ವುಂಟಾಗುವುದೆಂದೂ, ಸರ್ವಜ್ಞನಾದ ಆ ಭರಧ್ವಾಜನು ಜ್ಞಾನದೃಷ್ಟಿಯಿಂದರಿತು ಅವರಿಗೆ ಸೂಚಿಸಿರುವನು.

ಮಾಡುತ್ತ, ಮುಂದಿದ್ದ ಒಂದು ದೊಡ್ಡ ಮಹಾರಣ್ಯವನ್ನು ಪ್ರವೇಶಿಸಿ ಅತಿವೈಭವದಿಂದ ಪ್ರಕಾಶಿಸುತಿತ್ತು. ಇಲ್ಲಿಗೆ ತೊಂಬತ್ತೆರಡನೆಯಸರ್ಗವು.

---

{ಭರತನು ಚಿತ್ರಕೂಟ ವನವನ್ನು ಪ್ರವೇಶಿಸಿದುದು.ವನ ವರ್ಣನವು. ರಾಮಾಶ್ರಮವನ್ನುಹುಡುಕುತಿದ್ದುದು.}

ಆ ದೊಡ್ಡಸೈನ್ಯವು ಹೋಗುತ್ತಿರುವಾಗ ಕಾಡಿನಲ್ಲಿರುವ ಮೃಗಗಳೆಲ್ಲವೂ ಭಯದಿಂದ ಓಡುತಿದ್ದುವು.ಕರಡಿಗಳೂ,ಜಿಂಕೆಗಳೂ, ಕೃಷ್ಣಸಾರಗಳೆಂಬ ಮಜ್ಜೆಯಿಲ್ಲದಜಿಂಕೆಗಳೂ,ಗುಂಪುಗುಂಪಾಗಿ ಬೆಟ್ಟಗಳಮಾರ್ಗವಾಗಿಯೂ, ಕಾಡುಗಳಮಾರ್ಗವಾಗಿಯೂ, ನದೀತೀರಗಳ ಮಾರ್ಗವಾಗಿಯೂ ಸಿಕ್ಕಿದ ಕಡೆಗೆ ಓಡಿಹೋಗುತಿದ್ದುವು. ಧರ್ಮಾತ್ಮನಾದ ಭರತನು ಈ ವಿನೋದಗಳನ್ನುನೋಡಿ ಸಂತೋಷಪಡುತ್ತ, ಆನಂದಘೋಷವೇ ಮೊದಲಾದ ಧ್ವನಿಗಳೊಡನೆ ಅಟ್ಟಹಾಸದಿಂದ ಕೂಗುತ್ತಿರುವ ಮಹತ್ತಾದ ತನ್ನ ಚತುರಂಗ ಸೈನ್ಯದಿಂದ ಪರಿವೃತನಾಗಿ ಹೋಗುತಿದ್ದನು. ಮಹಾಸಮುದ್ರದಂತೆ ಅಪಾರವಾದ ಆಭರತನ ಸೈನ್ಯವು, ವರ್ಷಾಕಾಲಾದಲ್ಲಿ ಮೇಘಪರಂಪರೆಗಳು ಆಕಾಶವನ್ನು ಮುಚ್ಚಿಕೊಳ್ಳುವಂತೆ ಆ ವನಪ್ರದೇಶವೆಲ್ಲವನ್ನೂ ಮರೆಸಿತು.ಕುದುರೆಗಳ ಸಾಲುಗಳಿಂದಲೂ, ಮಹಾವೇಗವುಳ್ಳ ಆನೆಗಳಿಂದಲೂ ವ್ಯಾಪ್ತವಾಗಿ, ಬಹುಕಾಲದವರೆಗೆ ಆಭೂಭಾಗವೆಲ್ಲವೂ ನೆಲವೇ ಕಾಣದಂತೆ ಮುಚ್ಚಿಹೋಗಿತ್ತು. ಹೀಗೆ ಬಹುದೂರ ಪ್ರಯಾಣಮಾಡಿ ವಾಹನಗಳೆಲ್ಲವೂ ಬಳಲಿರುವುದನ್ನು ನೋಡಿ,ಭರತನು ತನಗೆ ಮಂತ್ರಿಯಂತಿರುವ ಪುರೋಹಿತನಾದ ವಸಿಷ್ಠನನ್ನು ಕುರಿತು 'ಎಲೈ ಮಹಾತ್ಮನೆ!ನಾವು ಮೊದಲು ಈ ವನಪ್ರದೇಶವು ಹೇಗಿರುವುದೆಂದು ಎಣಿಸಿದ್ದೆವೋ, ಇತರರಿಂದ ಇದರ ಸ್ವರೂಪವನ್ನು ಕುರಿತು ಹೇಗೆ ಕೇಳಿದ್ದೆವೋ, ಹಾಗೆಯೇ ಎಲ್ಲವೂಸ್ಪಷ್ಟವಾಗಿ ಕಾಣುವುವು. ಭರದ್ವಾಜಮಹಾಮುನಿಯು ಹೇಳಿದ್ದಂತೆಯೇ ಕಾಣುತ್ತಿರುವ ಪ್ರದೇಶಕ್ಕೆ ಬಂದುಬಿಟ್ಟೆವು. ಇದೋ! ಈ ಪರ್ವತವೇ ಚಿತ್ರಕೂಟವು. ಇದೇ ಮಂದಾಕಿನೀನದಿಯು. ದೂರದಿಂದ ನೋಡಿದರೆ ನೀಲಮೇಘದಂತೆ ಕಾಣುತ್ತಿತ್ತಿರುವ ಮಹಾರಣ್ಯವು ಇಲ್ಲಿಗೇ ಗೋಚರಿಸುತ್ತಿರುವುದಲ್ಲವೆ! ಇದೋ! ಈ ಚಿತ್ರಕೂಟದ ತಪ್ಪಲುಗಳೆಲ್ಲವೂ ಅತಿಮನೋಹರವಾಗಿರುವುವು. ಪರ್ವತಗ

ಳಂತೆ ಮಹೋನ್ನತಗಳಾದ ನಮ್ಮ ಆನೆಗಳೆಲ್ಲವೂ ಆಪ್ರದೇಶದ ವನಗಳನ್ನು ಮುರಿದು ಹಾಕುತ್ತಿರುವುವು. ಈ ತಪ್ಪಲುಗಳಲ್ಲಿರುವ ಗಿಡಗಳೆಲ್ಲವೂ ವರ್ಷಾಕಾಲದಲ್ಲಿ ಕಾಲಮೇಘಗಳು ಮಳೆಯನ್ನು ಸುರಿಯುವಂತೆ ತಮ್ಮಿಷ್ಟಕ್ಕೆ ತಾವೇ ಪುಷ್ಪವೃಷ್ಟಿಯನ್ನು ಕರೆಯುತ್ತಿರುವುವು". ಎಂದುಹೇಳಿ ಶತ್ರುಘ್ನನ ಕಡೆಗೆ ತಿರುಗಿ "ವತ್ಸಶತ್ರುಘ್ನನೆ! ಇದೋ ನೋಡು! ಸಮುದ್ರವು ಮೊಸಳೆಗಳಿಂದ ತುಂಬಿರುವಂತೆ, ಸುತ್ತಲೂ ಅನೇಕ ಮೃಗಸಮೂಹದಿಂದ ವ್ಯಾಪ್ತವಾಗಿ, ಕಿನ್ನರರ ಸಂಚಾರಕ್ಕೆ ನಿತ್ಯಾಶ್ರಯವಾದ ಈ ಪರ್ವತವನ್ನು ನೋಡಿದೆಯಾ! ಶರತ್ಕಾಲದಲ್ಲಿ ವಾಯುವಿನಿಂದ ಓಡಿಸಲ್ಪಟ್ಟ ಮೇಘಪರಂಪರೆಯು ಆಕಾಶದಲ್ಲಿ ಅತಿವೇಗವಾಗಿ ಓಡುವಂತೆ, ಇದೋ ಇಲ್ಲಿ ಮೃಗಗಳೆಲ್ಲವೂ ನಮ್ಮ ಸೈನಿಕರಿಂದ ಓಡಿಸಲ್ಪಟ್ಟು ಬಹುವೇಗವಾಗಿ ಓಡುತ್ತಿರುವುವು. ಇದೋ! ಇಲ್ಲಿನೋಡು! ದಕ್ಷಿಣದೇಶದ ಜನಗಳ ಮೈಯಂತೆ ಕಪ್ಪಾಗಿ ಮಿನುಗುತ್ತಿರುವ ತಮ್ಮ ತಲೆಕೂದಲುಗಳನ್ನು ಅಂದವಾಗಿ ಎತ್ತಿಕಟ್ಟಿ, ಅವುಗಳಿಗೆ ಹೂಗಳನ್ನು ಮುಡಿದಿಡುವಂತೆ, ಈ ಗಿಡಗಳೂ ಕಪ್ಪಾದ ತಮ್ಮ ಶಾಖಾಗ್ರಗಳಲ್ಲಿ ಸುವಾಸನೆಯುಳ್ಳ ಹೂಗಳನ್ನು ಧರಿಸಿರುವುವು. ಭಯಂಕರವಾಗಿ ಕಾಣತಕ್ಕ ಈ ಅರಣ್ಯವೂಕೂಡ, ಮೊದಲು ಮನುಷ್ಯರ ಶಬ್ದವೇ ಇಲ್ಲದಿದ್ದು, ಈಗ ನಮ್ಮ ಸೈನಿಕರ ಕೋಲಾಹಲದಿಂದಕೂಡಿ ವಿಶೇಷಜನಭರಿತವಾಗಿರುವುದನ್ನು ನೋಡಿದರೆ, ನಮ್ಮ ಅಯೋಧ್ಯೆಯಂತೆಯೇ ನನಗೆ ಕಾಣುತ್ತಿರುವುದು. ನಮ್ಮ ಸೈನ್ಯದಲ್ಲಿರುವ ಕುದುರೆಗಳ ಗೊರಸಲಿನಿಂದೆದ್ದ ಧೂಳಿಯು ಆಕಾಶವೆಲ್ಲವನ್ನೂ ವ್ಯಾಪಿಸಿರುವುದನ್ನು ನೋಡಿದೆಯಾ? ಆದರೆಗಾಳಿಯು ಆ ಧೂಳಿಪರಂಪರೆಯನ್ನು ಆಯಾಕ್ಷಣವೇಸಾಗಿಸಿಕೊಂಡುಹೋಗವುದರಿಂದ, ನನಗೆ ಪ್ರಿಯವನ್ನುಂಟುಮಾಡುವಂತೆ ತೋರುತ್ತಿದೆ! ಹಾಗಿಲ್ಲದಿದ್ದರೆ ನಮಗೆ ರಾಮನ ಆಶ್ರಮವನ್ನು ಕಂಡುಹಿಡಿಯುವುದೇ ಅಸಾಧ್ಯವಾಗುತ್ತಿತ್ತಲ್ಲವೆ? ಎಲೆ ವತ್ಸನೆ! ಇದೋನೋಡು! ನಮ್ಮ ಸಾರಥಿಗಳು ರಾಮನನ್ನು ನೋಡಬೇಕೆಂಬ ಆತುರದಿಂದ ಕಾಡಿನಲ್ಲಿ ವೇಗವತ್ತಾದ ಕುದುರೆಗಳಿಂದ ಕೂಡಿದ ತಮ್ಮ ರಥಗಳನ್ನು ಎಷ್ಟು ಶೀಘ್ರದಿಂದ ನಡೆಸಿಕೊಂಡು ಬರುವರು ನೋಡಿದೆಯಾ? ಇದೋ! ಇಲ್ಲಿ ಅಂದವಾದ ಗರಿಗಳಿಂದ ಕೂಡಿ, ನೋಡುವುದಕ್ಕೆ ಅತಿಮನೋಹರವಾದ ಈ ನವಿಲುಗಳೆಲ್ಲವೂ ನಮ್ಮ ಸೈನ್ಯವನ್ನು ನೋಡಿ ಹೆದರಿ ಓಡಿ

ಹೋಗಿ, ತಮ್ಮ ತಮ್ಮ ಗೂಡುಗಳಲ್ಲಿ ಸೇರಿಕೊಳ್ಳುತ್ತಿರುವುವು. ನನಗಾದ ರೋ ಈಪ್ರದೇಶವೆಲ್ಲವೂ ಅತಿಮನೋಹರವಾಗಿರುವಂತೆ ಕಾಣುವುವು. ನಾನು ಇದನ್ನೇ ಸ್ವರ್ಗದಂತೆ ಎಣಿಸುವೆನು. ಇದು ತಪಸ್ವಿಗಳಿಗೆ ಸುಖಾಶ್ರಯವೆಂಬುದರಲ್ಲಿ ಸಂದೇಹವಿಲ್ಲ. ಇದೋ! ಇಲ್ಲಿ ಅಸಂಖ್ಯಾತಗಳಾದ ಜಿಂಕೆಗಳು ಹೆಣ್ಣುಜಿಂಕೆಗಳೊಡಗೂಡಿ ಸಂಚರಿಸುತ್ತಿರುವುವು. ಬಿಳೀಮಚ್ಚೆಗಳುಳ್ಳ ಈ ಜಿಂಕೆಗಳು ಎಷ್ಟೋಮನೋಹರವಾಗಿರುವುವು. ಇವುಗಳಮೈಯ್ಯೆಲ್ಲವೂ ಹೂಗಳಿಂದ ಚಿತ್ರಕೆಲಸ ಮಾಡಲ್ಪಟ್ಟಂತೆ ಅಂದವಾಗಿ ಕಾಣುತ್ತಿರುವುವು. ಎಲೆ ವತ್ಸನೆ ! ನಮಗೆ ಈವಿನೋದಗಳಿಂದೇನು ! ಸೈನ್ಯಗಳೆಲ್ಲವನ್ನೂ ಕಳುಹಿಸಿ ಈ ಅರಣ್ಯದಲ್ಲಿ ರಾಮಲಕ್ಷ್ಮಣರಿರುವ ಆಶ್ರಮವಾವುದೆಂಬುದನ್ನು ಕಂಡು ಹಿಡಿಯಬೇಕು. ಆದುದರಿಂದ ಈಗಲೇ ಸೈನ್ಯಗಳು ನಾನಾದಿಕ್ಕುಗಳಿಗೂ ಹೊರಡಲಿ! ಪುರುಷಶ್ರೇಷ್ಠರಾದ ಆ ರಾಮಲಕ್ಷ್ಮಣರಿರುವ ಸ್ಥಳವನ್ನು ಹುಡುಕಿಬರಲಿ !"ಎಂದನು. ಈಮಾತು ಕಿವಿಗೆ ಬಿದ್ದೊಡನೆಯೇ ಕೆಲವು ವೀರಭಟರು ಆಯುಧಪಾಣಿಗಳಾಗಿ ಆಕಾಡಿಗೆ ಪ್ರವೇಶಿಸಿದರು. ಅದರ ನಡುವೆ ದೊಡ್ಡ ಹೊಗೆಯಾಡುತ್ತಿರುವುದನ್ನೂ ನೋಡಿದರು. ಇದನ್ನು ನೋಡಿದೊಡನೆಯೇ ಅವರೆಲ್ಲರೂ ಹಿಂತಿರುಗಿ ಭರತನ ಬಳಿಗೆ ಓಡಿ ಬಂದು "ಎಲೈರಾಜಪುತ್ರನೆ!ಅದೋ!ಅಲ್ಲಿ ಹೊಗೆಯು ಕಾಣುತ್ತಿರುವುದು. ಆದುದರಿಂದ ಅಲ್ಲಿ ಯಾರೋ ಮನುಷ್ಯರಿರಬೇಕು. ಮನುಷ್ಯರಿಲ್ಲದ ಕಡೆಯಲ್ಲಿ ಹೊಗೆಗೆ ಕಾರಣವಿಲ್ಲವಲ್ಲವೆ? ಆದುದರಿಂದ ರಾಮಲಕ್ಷ್ಮಣರು ಅಲ್ಲಿಯೇ ಇರಬೇಕು. ಒಂದು ವೇಳೆ ಪುರುಷಶ್ರೇಷ್ಠರಾದ ಆರಾಜಕುಮಾರರೇ ಅಲ್ಲಿಲ್ಲದಿದ್ದರೂ,ಬೇರೆ ತಪಸ್ವಿಗಳಾದರೂ ಅಲ್ಲಿ ಆಶ್ರಮವನ್ನು ಕಟ್ಟಿಕೊಂಡಿರಬೇಕು. ಇದರಲ್ಲಿ ಸಂದೇಹವಿಲ್ಲ"ಎಂದರು. ಈಮಾತನ್ನು ಕೇಳಿ ಭರತನು ತನ್ನ ಸಮಸ್ತಸೈನ್ಯವನ್ನೂ ನೋಡಿ "ಎಲೈಸೈನಿಕರೆ ! ನೀವೆಲ್ಲರೂ ಎಚ್ಚರಿಕೆಯಿಂದ ಇಲ್ಲಿಯೇ ಇರಬೇಕು. ಇಲ್ಲಿಂದಮುಂದೆ ನೀವು ನನ್ನನ್ನು ಹಿಂಬಾಲಿಸಿ ಬರಬೇಕಾದ ಆವಶ್ಯಕವಿಲ್ಲ. ಸುಮಂತ್ರನನ್ನೂ,ವಸಿಷ್ಠನನ್ನೂ ಕರೆದುಕೊಂಡು ನಾನು ಮಾತ್ರ ಹೋಗುವೆನು" ಎಂದನು. ಭರತನು ಹೀಗೆ ಆಜ್ಞಾಪಿಸಿದುದನ್ನು ಕೇಳಿ ಆ ಸೈನಿಕರೆಲ್ಲರೂ ಅಲ್ಲಿಯೇ ನಿಂತುಬಿಟ್ಟರು. ಭರತನು ಮುಂದೆ ಹೊರಟು ಆ ಹೊಗೆಯು ಹೊರಡುತಿದ್ದ ಪ್ರದೇಶವನ್ನೇ ನೋಡುತ್ತ ಮುಂದೆ ನಡೆದನು. ಇತ್ತ

ಲಾಗಿ ಭರತನಿಂದ ತಡೆದಿರಿಲ್ಪಟ್ಟಸೈನಿಕರೂ, ಅಲ್ಲಿಯೇ ನಿಂತು, ಆ ಹೊಗೆಯನ್ನೇ ಕಣ್ಣಿಟ್ಟುನೋಡುತ್ತ, ಇನ್ನು ಶೀಘ್ರದಲ್ಲಿಯೇ ನಮ್ಮ ಪ್ರಿಯನಾದ ರಾಮನನ್ನು ಕಾಣಬಹುದೆಂಬ ಆಶೋತ್ತರವನ್ನಿಟ್ಟುಕೊಂಡು ಪರಮಸಂತೋಷದಿಂದಿದ್ದರು. ಇಲ್ಲಿಗೆ ತೊಂಬತ್ತುಮೂರನೆಯ ಸರ್ಗವು.

---

{ ರಾಮನು ಅತ್ತಲಾಗಿ ಚಿತ್ರಕೂಟದಲ್ಲಿ ನಡೆಸುತಿದ್ದ ನಿತ್ಯಕಾರ್ಯಗಳು. ಅಯೋಧ್ಯೆಗಿಂತಲೂ ಚಿತ್ರಕೂಟವು ರಮಣೀಯವೆಂಬುದನ್ನು ನಿರೂಪಿಸಿದುದು. }

ಅತ್ತಲಾಗಿ ದೇವಸಮಾನನಾದ ರಾಮನು,ಪರ್ವತಗಳಲ್ಲಿಯೂ,ಕಾಡುಗಳಲ್ಲಿಯೂ ವಾಸಮಾಡುವುದರಲ್ಲಿ ತನಗಿರುವ ಅತ್ಯಾಸೆಯನ್ನು ತೋರಿಸುತ್ತ, ಒಂದು ತಿಂಗಳಕಾಲದವರೆಗೆ ಅಲ್ಲಿಯೇ ಇದ್ದು,ಸೀತೆಯ ಮನಸ್ಸನ್ನು ಸಂತೋಷಪಡಿಸಬೇಕೆಂಬುದಕ್ಕಾಗಿಯೂ, ತನ್ನ ಮನಸ್ಸಿನ ಬೇಸರವನ್ನು ಕಳೆಯಬೇಕೆಂಬುದಕ್ಕಾಗಿಯೂ, ಶಚೀದೇವಿಯೊಡಗೂಡಿದ ಇಂದ್ರನಂತೆ, ಸೀತೆಯೊಡನೆ ಸುತ್ತಲೂ ಸಂಚರಿಸುತ್ತ, ಅವಳಿಗೆ ಅಲ್ಲಲ್ಲಿನ ವಿಚಿತ್ರಗಳನ್ನು ತೋರಿಸುತ್ತಿದ್ದನು. "ಎಲೆ ಮಂಗಳಾಂಗಿ! ಅತಿರಮ್ಯವಾದ ಈ ಪರ್ವತಪ್ರದೇಶವನ್ನು ನೋಡುವುದರಿಂದ, ನನಗೆ ರಾಜ್ಯಭ್ರಂಶದಿಂದುಂಟಾದ ದುಃಖವಾಗಲಿ, ನನ್ನ ಮಿತ್ರರನ್ನು ಅಗಲಿಬಂದ ವ್ಯಸನವಾಗಲಿ,ಯಾವುದೊಂದೂ ತೋರುವುದಿಲ್ಲ. ಎಲೆಭದ್ರೆ! ಅನೇಕಪಕ್ಷಿಸಮೂಹದಿಂದ ಕೂಡಿದ ಈ ಬೆಟ್ಟವನ್ನು ನೋಡಿದೆಯಾ? ಬಗೆಬಗೆಯ ಬಣ್ಣಗಳುಳ್ಳ ಗೈರಿಕಾದಿಧಾತುಗಳಿಂದ ವಿಚಿತ್ರವಾಗಿ ಪ್ರಕಾಶಿಸುವ ಇದರ ಶಿಖರಗಳು ಆಕಾಶವನ್ನು ಭೇದಿಸಿಕೊಂಡು ಹೋಗುವಂತೆ ಕಾಣುವುವು. ಇದರಲ್ಲಿರುವ ವಿಚಿತ್ರವಿಚಿತ್ರಗಳಾದ ಧಾತುಗಳನ್ನು ನೋಡು! ಕೆಲವುಕಡೆಗಳಲ್ಲಿ ರಜತಮಯವಾಗಿರುವಂತೆಯೂ, ಕೆಲವು ಕಡೆಗಳಲ್ಲಿ ರತ್ನಮಯವಾಗಿರುವಂತೆಯೂ, ಕೆಲವುಕಡೆಯಲ್ಲಿ ಅರಿಸಿನವನ್ನು ಸವರಿಟ್ಟಂತೆಯೂ, ಕೆಲವುಕಡೆಗಳಲ್ಲಿ ನೀಲರತ್ನಗಳನ್ನೂ, ಕೆಲವುಕಡೆಗಳಲ್ಲಿ ಪುಷ್ಯರಾಗಗಳನ್ನೂ, ಕೆಲವುಕಡೆಗಳಲ್ಲಿ ಸ್ಫಟಿಕಗಳನ್ನೂ ಕೆತ್ತಿದಂತೆಯೂ, ಕಾಣುವುದು. ಕೆಲವುಪ್ರದೇಶಗಳು ತಾಳೆಹೂವಿನಂತೆ ಹೊಂಬಣ್ಣದಿಂದಿರುವುದು.

ಕೆಲವುಪ್ರದೇಶಗಳು ನಕ್ಷತ್ರದಂತೆ ಮಿನುಗುತ್ತಿರುವುವು. ಕೆಲವು ಭಾಗಗಳು ಪಾದರಸವನ್ನು ತುಂಬಿದಂತೆ ಕಾಣುವುವು. ಹುಲಿಗಳು, ಚಿರತೆಗಳು, ಕರಡಿಗಳು, ಜಿಂಕೆಗಳು ಮುಂತಾದ ಮೃಗಜಾತಿಗಳೆಲ್ಲವೂ ಅಲ್ಲಲ್ಲಿ ವಿಶೇಷವಾಗಿ ಸಂಚರಿಸುತ್ತಿರುವುವು. ಹೀಗಿದ್ದರೂ ಇಲ್ಲಿರತಕ್ಕ ಮಹರ್ಷಿಗಳ ಪ್ರಭಾವದಿಂದ ಈ ಪ್ರದೇಶವು ಬಹುಶಾಂತವಾಗಿರುವಂತೆಯೇ ಕಾಣುವುದು. ಇಲ್ಲಿರತಕ್ಕ ಪಕ್ಷಿಸಮೂಹಗಳೆಲ್ಲವೂ ವಿಚಿತ್ರವಿಚಿತ್ರಗಳಾಗಿರುವುವು. ಮಾವು, ನೇರಳೆ, ಹಲಸು, ಕಡವು, ಬೆತ್ತ, ಬಿದಿರು, ಸಾಲೆ, ಲೋಧ್ರಕ, ಅಂಕೋಲೆ, ಬಿಲ್ವ, ಬೇವು, ಎಲಚಿ, ನೆಲ್ಲಿ, ದಾಳಿಂಬಿ, ಮುಂತಾದ ಸಮಸ್ತವೃಕ್ಷಜಾತಿಗಳೂ ಪುಷ್ಪಫಲಸಮೃದ್ಧಗಳಾಗಿ,ಎಲೆಗಳು ದಟ್ಟವಾಗಿ ತುಂಬಿರುವುದರಿಂದ ತಂಪಾದ ನೆರಳನ್ನೂ ಉಂಟುಮಾಡುತ್ತ ಮನೋಹರವಾಗಿ ಕಾಣುತ್ತಿರುವುದನ್ನು ನೋಡಿದೆಯಾ! ಈಪರ್ವತವು ಸೌಭಾಗ್ಯಕ್ಕೆ ನಿತ್ಯಾಶ್ರಯವಾಗಿರುವುದೆಂದೇ ನಾನೆಣಿಸುವೆನು. ಎಲೆಪ್ರಿಯೆ! ಇದೋ!ಇತ್ತಲಾಗಿ ಮನೋಹರವಾದ ಈಬೆಟ್ಟದ ತಪ್ಪಲುಗಳಲ್ಲಿ ಕಿನ್ನರದಂಪತಿಗಳು ಸಂತೋಷದಿಂದ ಅಲ್ಲಲ್ಲಿ ವಿಹರಿಸುತ್ತಿರುವುದನ್ನು ನೋಡು! ಇವರ ಸಂಭ್ರಮವನ್ನೂ, ಇವರ ರೂಪಾತಿಶಯವನ್ನೂ ನೋಡಿದರೆ, ನನಗೆ ಮೈಯ್ಯಲ್ಲಿ ರೋಮಾಂಚವೇಳುತ್ತಿರುವುದು. ಇದೋ! ಇತ್ತಲಾಗಿ ವಿಧ್ಯಾಧರರು ಈ ಮರದಕೊಂಬೆಗಳಲ್ಲಿ ತಮ್ಮ ಖಡ್ಗಗಳನ್ನೂ, ವಸ್ತ್ರಗಳನ್ನೂ ತಗುಲಿಸಿಟ್ಟು, ತಮ್ಮ ತಮ್ಮ ಸ್ತ್ರೀಯರೊಡನೆಸೇರಿ ಕ್ರೀಡಿಸುತ್ತಿರುವ ಪ್ರದೇಶಗಳು ಎಷ್ಟುಮನೋಹರವಾಗಿರುವುವು ನೋಡು! ಅಲ್ಲಲ್ಲಿ ಗಿರಿನದಿಗಳೂ, ಜಲಪಾತಗಳೂ, ಚಿಲುಮೆಗಳೂ ಹರಿಯುತ್ತಿರುವುದನ್ನು ನೋಡಿದರೆ, ಈಪರ್ವತವು ಮದಜಲವನ್ನು ಸುರಿಸುತ್ತಿರುವ ಒಂದು ದೊಡ್ಡ ಆನೆಯಂತೆ ಕಾಣುವುದು. ಇದೋ! ಈ ಪರ್ವತದ ಗುಹಾದ್ವಾರಗಳಿಂದ ಹೊರಟು ಬೀಸುತ್ತಿರುವ ಗಾಳಿಯು, ಈ ಬೆಟ್ಟದಮೇಲಿನ ಬಗೆಬಗೆಯ ಹೂಗಳ ವಾಸನೆಯನ್ನು ಹೊತ್ತುತಂದು,ನಮ್ಮ ಘ್ರಾಣೇಂದ್ರಿಯಗಳಿಗೆ ಎಷ್ಟು ತೃಪ್ತಿಯನ್ನುಂಟುಮಾಡುತ್ತಿರುವುದು ನೋಡಿದೆಯಾ? ಇದೆಲ್ಲವನ್ನೂ ಅನುಭವಿಸಿದರೆ ಯಾರ ಮನಸ್ಸಿಗೆ ತಾನೇ ಉಲ್ಲಾಸವುಂಟಾಗ

ದು?ಎಲೆ ಆರ್ಯೆ!ನಾನು ನಿನ್ನೊಡನೆಯೂ, ಲಕ್ಷ್ಮಣನೊಡನೆಯೂ[1]ಕೂಡಿಯೇ ಇರುವುದಾದರೆ,ಎಷ್ಟು ವರುಷಗಳಿದ್ದರೂ ನನ್ನಮನಸ್ಸಿಗೆ ದುಃಖವೆಂಬುದೇಕಾಣುವುದಿಲ್ಲ. ಅನೇಕ ಪಕ್ಷಿಸಮೂಹದಿಂದ ಕೂಡಿ, ಪುಷ್ಪಫಲಗಳಿಂದ ತುಂಬಿ, ವಿಚಿತ್ರವಾದ ಶಿಖರಗಳಿಂದ ಅತಿಮನೋಹರವಾಗಿರುವ ಈಪರ್ವತಪ್ರದೇಶಗಳಲ್ಲಿಯೇ ನನ್ನ ಮನಸ್ಸು ಸಂಪೂರ್ಣವಾಗಿ ನಟ್ಟು ಹೋಗಿರುವುದು. ಪಂಚೇಂದ್ರಿಯಗಳಿಗೂ ಉಲ್ಲಾಸವನ್ನುಂಟುಮಾಡುವ ಈ ವನಪ್ರದೇಶವನ್ನು ಬಿಟ್ಟುಹೋಗುವುದಕ್ಕೇ ನನಗೆ ಮನಸ್ಸುಬಾರದು. ಎಲೆದೇವಿ!ಮುಖ್ಯವಾಗಿ ಈವನವಾಸದಿಂದ ನನಗೆ ಎರಡು ವಿಧವಾದ ಫಲವುಂಟಾಯಿತು. ತಂದೆಯ ಋಣವನ್ನು ತೀರಿಸಿದುದೊಂದು ; ನನ್ನ ಪ್ರಿಯಸಹೋದರನಾದ ಭರತನಿಗೆ ಪ್ರಿಯವನ್ನುಂಟುಮಾಡಿದುದು ಮತ್ತೊಂದು; ಹೀಗೆ ಮುಖ್ಯವಾದ ಎರಡುಫಲಗಳು ಸಿದ್ಧಿಸಿದುವು. ಎಲೆ ಸೀತೆ! ಈ ಮನೋಹರವಾದ ಚಿತ್ರಕೂಟದಲ್ಲಿ ನೀನು ನನ್ನೊಡನೆ ವಿಹರಿಸುತ್ತಿರುವುದರಿಂದ, ನಿನ್ನ ಮನಸ್ಸಿಗೇನಾದರೂ ಬೇಸರವು ತೋರುತ್ತಿದೆಯೆ ? ಇಲ್ಲಿರತಕ್ಕ ಮಲಯಮಾರುತಗಳೂ, ಕೋಕಿಲಧ್ವನಿಗಳೂ, ಫಲಪುಷ್ಪಸಮೃದ್ಧಿಗಳೂ, ಇನ್ನೂ ಶೃಂಗಾರರಸೋದ್ದೀಪಕಗಳಾದ ಇತರ ವಿಷಯಗಳೂ, ಕಿನ್ನರರ, ಮತ್ತು ಕಾಡುಮೃಗಗಳ ವ್ಯಾಪಾರಗಳೂ ಯಾರಿಗಾದರೂ ಮನೋವಾಕ್ಕಾಯಗಳೆಂಬ ತ್ರಿಕರಣಗಳನ್ನೂ ವಶಪಡಿಸಿಕೊಳ್ಳದಿರಲಾರವು. ಇವೆಲ್ಲವನ್ನೂ ನೀನು ನೋಡುತ್ತ,ಮನಃ ಪೂರ್ವಕವಾದ ಸಂತೋಷದಿಂದ ನನ್ನೊಡನೆ ವಿಹರಿಸುತ್ತಿರುವೆಯಾ? ನನ್ನ ಮುತ್ತಾತಂದಿರೇ ಮೊದಲಾದ ಪುರಾತನ ರಾಜಋಷಿಗಳು,ದೇಹಾವಸಾನದಲ್ಲಿ ಸಂಸಾರಬಂಧವನ್ನು ಬಿಡಿಸಿಕೊಳ್ಳುವುದಕ್ಕಾಗಿ,ವಾನಪ್ರಸ್ಥರಿಗೆ ಯೋಗ್ಯವಾದ ಈ ವನವಾಸವನ್ನೇ ಅಮೃತದಂತೆ ಭೋಗ್ಯವನ್ನಾಗಿ ಅಂಗೀಕರಿಸಿರುವರು.ಇದೇ ಮೋಕ್ಷವೆಂದೂ ಹೇಳಿರುವರು. ಎಲೆ

1 ಇದಕ್ಕೆ "ಯದಿವತ್ಸ್ಯಾಮಿ" ಎಂದು ಮೂಲವು, ಇಲ್ಲಿ "ಯದಿ" ಎಂಬ ಪಕ್ಷಾಂತರವಾಚಕಶಬ್ದದಿಂದ, ಮುಂದೆ ಈ ಸ್ಥಿತಿಯಲ್ಲಿಯೂ ಸ್ಥಿರವಾಗಿ ನಿಲ್ಲುವುದಕ್ಕವಕಾಶವಿಲ್ಲದೆ, ಸೀತೆಯನ್ನಗಲಿರಬೇಕಾದ ಸಂಭವವೂ ಬರುವುದೆಂದು ಭವಿಷ್ಯದ್ವೃತ್ತಾಂತವು ಸೂಚಿತವಾಗುವುದು.

ಪ್ರಿಯೆ! ಈ ಬೆಟ್ಟದಲ್ಲಿರುವ ವಿಸ್ತಾರವಾದ ಕಲ್ಲು ಬಂಡೆಗಳನ್ನು ನೋಡು ! ಕಪ್ಪು, ಹಳದಿ, ಬಿಳುಪು, ಕೆಂಪು,ಮುಂತಾದ ವಿಚಿತ್ರವರ್ಣಗಳಿಂದ ಕೂಡಿ ಸುತ್ತಲೂ ಅಸಂಖ್ಯಾತವಾಗಿ ಕಾಣುತ್ತಿರುವುವು. ಮತ್ತು ಈ ಬೆಟ್ಟದಮೇಲೆ ಬೆಳೆದಿರುವ ಗಿಡುಬಳ್ಳಿಗಳ ವೈಚಿತ್ರ್ಯವನ್ನು ನೋಡು! ಈ ಓಷಧಿಗಳಲ್ಲಿ ಕೆಲವು, [1]ರಾತ್ರಿಕಾಲಗಳಲ್ಲಿ ತಮ್ಮ ತಮ್ಮ ತೇಜಸ್ಸನ್ನು ಹೊರಕ್ಕೆ ಕಾಣಿಸಿ, ಅಗ್ನಿಜ್ವಾಲೆಗಳಂತೆ ಜಾಜ್ವಲ್ಯಮಾನವಾಗಿ ಉರಿಯುತ್ತಿರುವುವು. ಈಪರ್ವತದಲ್ಲಿರುವ ಮತ್ತೊಂದು ವೈಚಿತ್ರ್ಯವನ್ನು ನೋಡು! ಕೆಲವುಕಡೆಯಲ್ಲಿ ಇದರ ಗುಹೆಗಳು ನಿವಾಸಯೋಗ್ಯವಾದ ದೊಡ್ಡದೊಡ್ಡ ಕಟ್ಟಡಗಳಂತೆಯೇ ಕಾಣುವುವು.ಕೆಲವುಕಡೆಗಳಲ್ಲಿ ಉದ್ಯಾನವನಗಳಂತೆ ತೋರುವುವು. ಕೆಲವು ಕಡೆಯಲ್ಲಿ ವಿಸ್ತಾರವಾಗಿರುವ ಇದರ ಬಂಡೆಗಳನ್ನು ನೋಡಿದರೆ ಈಪರ್ವತವೆಲ್ಲವೂ ಒಂದೇಕಲ್ಲಿನಿಂದಾದಂತೆ ಕಾಣುವುದು. ಈ ಚಿತ್ರಕೂಟಪರ್ವತವು ಭೂಭಾಗವನ್ನುಭೇದಿಸಿ ಕೊಂಡುಮೇಲಕ್ಕೆ ಎದ್ದುಬಂದಿರುವುದೋ ಎಂಬಂತೆ ಕಾಣುತ್ತಿರುವುದು!ಶಿಖರಗಳೆಲ್ಲವೂ ಎಷ್ಟುಮನೋಹರವಾಗಿ ಕಾಣುವುವು ನೋಡು!ಮತ್ತು ಇಲ್ಲಿಪುತ್ರಜೀವಿಯ ಹೂಗಳನ್ನೂ,ಪುನ್ನಾಗಪುಷ್ಪಗಳನ್ನೂ, ನೈದಿಲೆಯಹೂಗಳನ್ನೂ, ಭುಜಪತ್ರಿಯ ತೊಗಟೆಗಳನ್ನೂ ಮೇಲೆಹೊದ್ದಿಸಿ, ಕೆಳಗೆ ಕಮಲದಳಗಳನ್ನುಹರಡಿ ಸಿದ್ಧಪಡಿಸಿರುವ ಹಾಸಿಗೆಗಳನ್ನು ನೋಡಿದೆಯಾ ? ಕಾಮುಕರು ಬಂದು ಇಲ್ಲಿಕ್ರೀಡಿಸುವುದಕ್ಕಾಗಿ ಇವುಗಳನ್ನು ಕಲ್ಪಿಸಿರುವರು. ಎಲೆಪ್ರಿಯೆ! ಇಲ್ಲಿ ಕಾಮುಕರು ಬಂದು,ವಾಸನೆಯನ್ನನುಭವಿಸಿ ಅಲ್ಲಲ್ಲಿ ಬಿಸುಟಿರುವುದರಿಂದ ಕಂದಿಹೋದ ತಾವರೆಹೂಗಳೂ, ಅವರವರು ರುಚಿನೋಡಿ ಬಿಸುಟಿರುವ ಬಗೆಬಗೆಯ ಹಣ್ಣುಗಳೂ ಬಿದ್ದಿರುವುದನ್ನು ನೋಡು. ಕುಬೇರನಗರಿಯಲ್ಲಿರುವ ಮಾನಸಸರೋವರವನ್ನೂ, ಉತ್ತರಕುರುದೇಶಗಳನ್ನೂ ಅತಿಶಯಿಸಿರುವಂತೆ ಬಗೆಬಗೆಯ ಫಲಮೂಲಗಳಿಂದಲೂ, ತಿಳಿನೀರಿನಿಂದಲೂ! ಕೂಡಿರುವ ಈ ಪರ್ವತಪ್ರದೇಶವನ್ನು ನೋಡು? ಎಲೆಪ್ರಿಯೆ! ನಾನು ಉತ್ತಮವಾದನಿಯಮವನ್ನನುಸರಿಸಿ ಸತ್ಪುರುಷರ ಮಾರ್ಗವನ್ನೇಹಿಡಿದು ನಿನ್ನೊಡನೆಯೂ, ಲಕ್ಷ್ಮಣನೊಡನೆಯೂ ಕೂಡಿ ನನ್ನ ವನವಾಸಕಾಲಗಳೆಲ್ಲವನ್ನೂ ಇಲ್ಲಿಯೇ

1. ಇವುಗಳಿಗೆ ಜ್ಯೋತಿಷ್ಮತೀಲತೆಗಳೆಂದು ಹೆಸರು.

ಕಳೆದು, ಆ ಮೇಲೆ ನಮ್ಮ ಕುಲಧರ್ಮವಾದ ಪ್ರಜಾಪಾಲವನ್ನು ನಡೆಸುತ್ತ, ರಾಜಸುಖವನ್ನನುಭವಿಸುವೆನು." ಎಂದನು. ಇಲ್ಲಿಗೆ ತೊಂಬತ್ತುನಾಲ್ಕನೆಯ ಸರ್ಗವು.

---

{ ರಾಮನು ಮಂದಾಕಿನೀನದಿಯ ಅಂದವನ್ನು ವರ್ಣಿಸಿ ಸೀತೆಯನ್ನು ವಿನೋದಪಡಿಸಿದುದು. }

ರಾಮನು ಹೀಗೆ ಸೀತಾದೇವಿಗೆ ಚಿತ್ರಕೂಟಪರ್ವತವನ್ನು ವರ್ಣಿಸಿತೋರಿಸುತಿದ್ದು,ಅಲ್ಲಿಂದ ಹಾಗೆಯೇ ಸಂಚರಿಸಿಬರುತ್ತ, ಆಕೆಯೊಡನೆ ಮಂದಾಕಿನೀತೀರಕ್ಕೆ ಬಂದು,ಸ್ವಚ್ಛವಾದ ನೀರುಳ್ಳ ಆನದಿಯನ್ನೂ ತೋರಿಸಿದನು.ಕಮಲಪಂತೆ ಕಣ್ಣುಳ್ಳ ಆರಾಮನು, ಕಾಡುಗಳನ್ನೂ, ಬೆಟ್ಟಗಳನ್ನೂ,ನದಿಗಳನ್ನೂ ನೋಡುವ ಕುತೂಹಲದಿಂದ ಉಲ್ಲಾಸಗೊಂಡು, ಚಂದ್ರಬಿಂಬದಂತೆ ಪ್ರಕಾಶಿಸುವ ಮುಖವುಳ್ಳ ಸೀತೆಯನ್ನುನೋಡಿ [1]"ಎಲೆಪ್ರಿಯೆ!ಇದೋ! ಈ ನದಿಯನ್ನು ನೋಡು!ಇದರಸುತ್ತಲೂ ವಿಚಿತ್ರ ವಿಚಿತ್ರಗಳಾದ ಮರಳುದಿಣ್ಣೆಗಳಿರುವುವು.ಇದರಲ್ಲಿ ಹಂಸಸಾರಸಾದಿ ಜಲಚರಪಕ್ಷಿಗಳೆಲ್ಲವೂ ಕೂಗುತ್ತ ಉಲ್ಲಾಸದಿಂದ ಸಂಚರಿಸುತ್ತಿರುವುವು.ತಾವರೆಹೂಗಳು;ವಿಶೇಷವಾಗಿತುಂಬಿರುವುವು. ಇದರತೀರದಲ್ಲಿ ಪುಷ್ಪಫಲಗಳಿಂದ ತುಂಬಿದ ಬಗೆಬಗೆಯ ವೃಕ್ಷಗಳು ಸಾಲಾಗಿ ಬೆಳೆದಿರುವುವು. ಇದನ್ನು ನೋಡಿದರೆ ಕುಬೇರನ ಮಾನಸಸರಸ್ಸನ್ನೇ ಹೀಗಳೆಯುವಂತೆ ಪ್ರಕಾಶಿಸುವುದು. ಅಲ್ಲಲ್ಲಿ ಮೃಗಗಳು ನೀರನ್ನು ಕುಡಿದು ನೀರೆಲ್ಲವೂ ಕಲಗಿದ್ದರೂ,ರಮಣೀಯವಾದ ಇದರ ಘಟ್ಟಗಳು ನನ್ನ ಮನಸ್ಸನ್ನು ವಿಶೇಷವಾಗಿ ಆಕರ್ಷಿಸುತ್ತಿರುವುವು. ಎಲೆಪ್ರಿಯೆ! ಜಟೆಗಳನ್ನೂ,

---

1 ಇದರಿಂದ ರಾಮನು ಸೀತೆಯನ್ನು ನೋಡುತ್ತ, ಆಕೆಯ ಸೌಂದರ್ಯಕ್ಕೆ ಮೋಹಿತನಾಗಿ, ಶೃಂಗಾರೋದ್ದೀಪಕಗಳಾದ ಮಾತುಗಳಿಂದ ಅವಳ ಮನಸ್ಸಿನ ಬೇಸರವನ್ನು ಕಳೆಯಬೇಕೆಂಬುದಕ್ಕಾಗಿ, ಅವಳನ್ನು ಮಂದಾಕಿನೀನದಿಯೊಡನೆ ಹೋಲಿಸಿ ವರ್ಣವುದಾಗಿ ಅಲಂಕಾರವು ಧ್ವನಿತವಾಗುವುದು. ಹೇಗೆಂದರೆ:—"ನಿನ್ನ ನಿತಂಬಪ್ರದೇಶಗಳಂತೆ ಉನ್ನತವಾದ ಮರಳುದಿಣ್ಣೆಗಳನ್ನೂ, ನಿನ್ನ ಕಂಠಸ್ವರದಂತೆ ಇಂಪಾದ ಹಂಸಸಾರಸಾದಿ ಜಲಜಂತುಗಳ ಧ್ವನಿಗಳನ್ನೂ, ನಿನ್ನ ಕರಚರಣಮುಖಾದಿಗಳಂತೆ ಅಂದವಾದ ಕಮಲಗಳನ್ನೂ ಒಳಕೊಂಡ ಈನದಿಯು ನಿನ್ನಂತೆಯೇ ಕಾಣುತ್ತಿರುವು" ದೆಂದು ಭಾವವು.

ಕೃಷ್ಣಾಜಿನವನ್ನೂ ಧರಿಸಿ, ನಾರುಮಡಿಯನ್ನುಟ್ಟ ಋಷಿಗಳು ತಮ್ಮ ತಮ್ಮ ನಿಯಮಕಾಲಕ್ಕೆ ಬಂದು ಈಮಂದಾಕಿನೀನದಿಯಲ್ಲಿ ಸ್ನಾನಮಾಡುತ್ತಿರುವುದನ್ನು ನೋಡಿದೆಯಾ ! ಮತ್ತು ಅಲ್ಲಲ್ಲಿ ತೀರಪ್ರದೇಶಗಳಲ್ಲಿ ಕೆಲವರು ತಮ್ಮ ತೋಳುಗಳನ್ನು ಮೇಲಕ್ಕೆ ನೀಡಿ, ನಿಯಮದಿಂದ ಸೂರ್ಯೋಪಸ್ಥಾನವನ್ನು ಮಾಡುತ್ತಿರುವರು. ಇದೋ ! ಈಚಿತ್ರಕೂಟಪರ್ವತದಮೇಲೆ ಬೆಳೆದ ವೃಕ್ಷಗಳೆಲ್ಲವೂ ಗಾಳಿಗೆ ಅಲುಗುತ್ತಿರುವ ತಮ್ಮ ಕೊಂಬೆಗಳಿಂದ ಹೂಗಳನ್ನು ಉದಿರಿಸುತ್ತಿರುವುವು. ಇದನ್ನು ನೋಡಿದರೆ ಈಪರ್ವತವು ನರ್ತಕನಂತೆ ಪುಷ್ಪಾಂಜಲಿಯನ್ನು ಚೆಲ್ಲಿ ಕೈಕಾಲುಗಳನ್ನಾಡಿಸುತ್ತಿರುವಂತೆ ತೋರುವುದು! ಈ ನದೀಪ್ರವಾಹದ ವೈಚಿತ್ರ್ಯವನ್ನು ನೋಡಿದೆಯಾ? [1]ಒಂದೊಂದು ಕಡೆಯಲ್ಲಿ ಇದರ ನೀರು ಮುತ್ತಿನಂತೆ ಥಳಥಳಿಸುತ್ತಿರುವುದು.ನಡುನಡುವೆ ಉಬ್ಬಿದ ಮರಳುದಿಣ್ಣೆಗಳು ಕಾಣುತ್ತಿರುವುವು. ಸಿದ್ಧರು ಬಂದು ಜಲಕ್ರೀಡೆಯನ್ನಾಡುತ್ತಿರುವರು.[2]ತೀರವೃಕ್ಷದಲ್ಲಿರುವ ಹೂಗಳೆಲ್ಲವೂ ಗಾಳಿಗೆ ಉದಿರಿಬಿದ್ದು ನದೀತೀರಪ್ರದೇಶಗಳೆಲ್ಲವನ್ನೂ ಪುಷ್ಪೋಪಹಾರದಿಂದ ಅಲಂಕರಿಸಿಟ್ಟಂತೆ ಕಾಣುವುವು. ಇವುಗಳಲ್ಲಿ ಕೆಲವು ನೀರಿನಲ್ಲಿ ಬಿದ್ದು ಪ್ರವಾಹವೇಗಕ್ಕೆ ಸಿಕ್ಕಿ ವಿಚಿತ್ರಗತಿಯಿಂದ ತೇಲಿಹೋಗುತ್ತಿರುವುದನ್ನು ನೋಡು! ಅದೋ!ಅತ್ತಲಾಗಿ [3]ಚಕ್ರವಾಕದಂಪತಿಗಳು ಜತೆಜತೆಯಾಗಿ ಕೂಡಿ ಪರಸ್ಪರಾನುರಾಗದಿಂದ ರತಿಕೇಳಿಗಾಗಿ ಒಂದಕ್ಕೊಂದು ಮುದ್ದುಮಾತುಗಳನ್ನಾಡಿ ಕರೆಯುತ್ತ, ಮಧುರವಾದ ಕಂಠಧ್ವನಿಯಿಂದ ಕೂಗುತ್ತ, ಈ ಹೂಗಳ ರಾಶಿಯಮೇಲೆ ಏರಿ

---

1 ಇಲ್ಲಿ ನೀರನ್ನು ಬಿಳೀಮುತ್ತಿಗೆ ಹೋಲಿಸಿರುವುದರಿಂದಲೂ, ಪುಳಿನಪ್ರದೇಶದ ಅಂದವನ್ನು ವರ್ಣಿಸಿರುವುದರಿಂದಲೂ, ದುಕೂಲವನ್ನುಟ್ಟು, ಅಂದವಾದ ನಿತಂಬವುಳ್ಳವಳಾಗಿ,ಕಾಮುಕರಿಂದ ಸುತ್ತಲ್ಪಟ್ಟಿರುವ ರೂಪವತಿಯಾದ ಒಬ್ಬಸ್ತ್ರೀಯ ರೂಪವು ಧ್ವನಿತವಾಗುವುದು.

2 ಹಿಂದಿನಂತೆಯೇ ಇಲ್ಲಿಯೂ ಗಾಳಿಯಿಂದ ತೀರದ ಕಡೆಗೊತ್ತರಿಸಲ್ಪಟ್ಟ ಹೂಗಳನ್ನು ವರ್ಣಿಸಿರುವುದರಿಂದಲೂ, ಕಾಮುಕನಾದ ನಾಯಕನಿಂದೆಳೆಯಲ್ಪಟ್ಟ ವಸ್ತ್ರವುಳ್ಳ ನಾಯಿಕೆಯೊಬ್ಬಳು,ನಾಚಿಕೆಯಿಂದ ವಸ್ತ್ರಾರ್ಧವನ್ನು ಮೈಗೆ ಮರೆಸಿಕೊಂಡಿರುವಳೆಂದು ಧ್ವನಿತವಾಗುವುದು.

3 ಇಲ್ಲಿಯೂ ಚಕ್ರವಾಕದಂಪತಿಗಳ ರತಿಯು ಸೂಚಿತವಾಗಿದೆ.

ಭೋಗಿಸುತ್ತಿರುವುದನ್ನು ನೋಡು! ಎಲೆಮಂಗಳಾಂಗಿ! ಹೀಗೆ ಏಕಾಂತವಾಗಿ ಭೋಗಸ್ಥಾನವಾದ ಈ ಚಿತ್ರಕೂಟಪರ್ವತದ ನೋಟವು ಅಯೋಧ್ಯೆಯ ವಾಸಕ್ಕಿಂತಲೂ ಹೆಚ್ಚು ಸುಖವನ್ನುಂಟುಮಾಡುವುದೆಂದೇ ನನಗೆ ತೋರಿರುವುದು. ಮತ್ತು ಮನ್ಮಥೋದ್ದೀಪಕವಾಗಿರುವ ಈ ಮಂದಾಕಿನೀನದಿಯ ದರ್ಶನವು ನಿನ್ನದರ್ಶನಕ್ಕಿಂತಲೂ ಮೇಲಾಗಿಯೇ ಇರುವುದೆಂದು ನನ್ನ ಅಭಿಪ್ರಾಯವು. ಎಲೆ ಪ್ರಿಯೆ! ತಪಸ್ಸು, ಶಮೆ, ದಮೆ, ಮೊದಲಾದುವುಗಳಿಂದ ಕೂಡಿ, ಪಾಪರಹಿತರಾಗಿ ಇಲ್ಲಿ ನಿತ್ಯವಾಸವನ್ನು ಮಾಡುತ್ತಿರುವ ಸಿದ್ಧರು, ಇದರಲ್ಲಿ ಯಾವಾಗಲೂ ಸ್ನಾನಮಾಡುತ್ತಿರುವುದರಿಂದ ಪರಮಪಾವನವೆನಿಸಿಕೊಂಡ ಈನದಿಯಲ್ಲಿ ನಾವಿಬ್ಬರೂ ಜಲಕ್ರೀಡೆಯನ್ನಾಡುವೆವೆ ? ಎಲೆ ಸೀತೆ!ನಿನ್ನ ಸಖೀಜನದೊಡನೆ ನೀನು ಸರೋವರಗಳಲ್ಲಿಳಿದು ವಿನೋದಿಸುವಂತೆ ನನ್ನೊಡನೆ ಇದರಲ್ಲಿಳಿದು ಇದರೊಳಗಿನಕಮಲಗಳನ್ನೂ,ಬಿಳಿದಾವರೆಗಳನ್ನೂ ಕದಲಿಸಿ,ನೀರಿನಲ್ಲಿ ಮುಳುಗಿಸುತ್ತ ನನ್ನೊಡನೆ ಇದರಲ್ಲಿ ವಿಹರಿಸು!ಎಲೆಪ್ರಿಯೆ! ನೀನು ಈಪ್ರದೇಶಗಳನ್ನು ಕಾಡುಗಳೆಂದೆಣಿಸಬೇಡ!ಇಲ್ಲಿರತಕ್ಕ ವನಚರಪ್ರಾಣಿಗಳನ್ನು ಪುರವಾಸಿಗಳಂತೆಯೂ, ಈಪರ್ವತಪ್ರದೇಶವನ್ನು ಅಯೋಧ್ಯೆಯಂತೆಯೂ, ಈನದಿಯನ್ನೇ ಸರಯೂನದಿಯಂತೆಯೂ ಭಾವಿಸಿ ಪ್ರೀತಿಯಿಂದ ವಿಹರಿಸು! ಪಟ್ಟಣವನ್ನು ಬಿಟ್ಟುಬಂದೆನೆಂಬ ಕ್ಲೇಶವನ್ನು ಬಿಟ್ಟುಬಿಡು! ನನ್ನ ತಮ್ಮನಾದ ಲಕ್ಷ್ಮಣನೂ ಧರ್ಮವನ್ನು ಬಿಡದೆ ನನ್ನ ಆಜ್ಞೆಯಲ್ಲಿಯೇ ಇದ್ದುಕೊಂಡಿರುವನು. ನೀನೂ ನನ್ನ ಮನೋನುಕೂಲೆಯಾಗಿರುವೆ. ಹೀಗೆ ನೀವಿಬ್ಬರೂ ನನಗೆ ಎಷ್ಟೋ ಪ್ರೀತಿಯನ್ನುಂಟುಮಾಡುತ್ತಿರುವಿರಿ ! ಇದಕ್ಕಿಂತಲೂ ನನಗೆ ಬೇರೆ ಸುಖವೇನುಂಟು? ಈಕಾಡಿನಲ್ಲಿ ತ್ರಿಸಂಧ್ಯೆಗಳಲ್ಲಿಯೂ ಸ್ನಾನಮಾಡಿ, ಅಲ್ಲಲ್ಲಿ ಸಿಕ್ಕುವ ರುಚಿಯಾದ ಹಣ್ಣುಗಳನ್ನೂ, ಗಡ್ಡೆಗೆಣಸುಗಳನ್ನೂ,ಹೊಸದಾದ ಜೇನನ್ನೂ ಭುಜಿಸುತ್ತ, ನಿನ್ನೊಡನೆ ವಿಹರಿಸುತ್ತಿದ್ದರೆ ನನಗೆ ಅಯೋಧ್ಯೆಯೂ ಬೇಡ ! ರಾಜ್ಯಾಧಿಕಾರದಲ್ಲಿಯೂ ನನಗೆ ಆಸೆಯುಂಟಾಗದು. ಈ ಮಂದಾಕಿನೀ ನದಿಯಾದರೋ ಅತಿರಮಣೀಯವಾಗಿ ಅನೇಕಮೃಗಸಮೂಹಗಳಿಂದ ಕೂಡಿ ಶೋಭಿಸುತ್ತಿರುವುದು.ಇಲ್ಲಿ ವಾಸವಾಗಿರತಕ್ಕ ಋಷಿಗಳ ಮಹಿಮೆಯಿಂದ ಮೃಗಗಳೆಲ್ಲವೂ ಸ್ವಾಭಾವಿಕವೈರಗಳನ್ನು ಬಿಟ್ಟು ಪರಸ್ಪರಸ್ನೇಹಭಾವವನ್ನು ತೋರಿಸುತ್ತ, ಈನದಿಯಲ್ಲಿ ಜಲಪಾನ

ವನ್ನು ಮಾಡುತ್ತಿರುವುವು. ಬಂದುಕಡೆಯಲ್ಲಿ ಆನೆಗಳು, ಮತ್ತೊಂದು ಕಡೆಯಲ್ಲಿ ಸಿಂಹಗಳು, ಬೇರೊಂದುಕಡೆಯಲ್ಲಿ ವಾನರಗಳು, ಇವೆಲ್ಲವೂ ಬಂದು ಸುತ್ತಲೂ ಈ ನದಿಯನ್ನು ಸೇವಿಸುತ್ತಿರುವುವು. ಇದರ ತೀರಪ್ರದೇಶದಲ್ಲಿ ವೃಕ್ಷಗಳೆಲ್ಲವೂ ಪುಷ್ಪಭರಿತಗಳಾಗಿ ಪ್ರಕಾಶಿಸುತ್ತಿರುವುವು. ಹೀಗೆ ಅತಿಪವಿತ್ರವಾಗಿಯೂ, ಮನಸ್ಸಿಗೆ ಉದ್ದೀಪಕವಾಗಿಯೂ ಇರುವ ಈ ನದಿಯನ್ನು ನೋಡಿದಮಾತ್ರಕ್ಕೆ ಎಷ್ಟು ಬಳಲಿಕೆಯಿದ್ದರೂ ಹೋಗುವುದು. ಇಂತಹ ನದಿಯಲ್ಲಿ ಇಳಿದು,ಸ್ನಾನಪಾನಾದಿಗಳನ್ನು ಮಾಡಿದಪಕ್ಷದಲ್ಲಿ ಯಾರಿಗೆ ತಾನೇ ಮನಸ್ಸಿಗೆ ಹರ್ಷವುಂಟಾಗದು ?" ಎಂದನು. ಹೀಗೆ ರಾಮನು ತನ್ನ ಪ್ರಿಯೆಯಾದ ಸೀತೆಯೊಡನೆ ಆ ಮಂದಾಕಿನೀನದಿಯನ್ನು ವರ್ಣಿಸುತ್ತ ಕಣ್ಣುಗಪ್ಪಿನಂತೆ ನೀಲವರ್ಣವಾಗಿ, ಅತಿಮನೋಹರವಾಗಿ ಪ್ರಕಾಶಿಸುತ್ತಿರುವ ಆಚಿತ್ರಕೂಟಪರ್ವತದಲ್ಲಿಯೇ ಅಲ್ಲಲ್ಲಿ ವಿಹರಿಸುತಿದ್ದನು. ಇಲ್ಲಿಗೆ ತೊಂಬತ್ತೈದನೆಯ ಸರ್ಗವು.

---

ಸೀತಾರಾಮರಿಬ್ಬರೂ ವಿನೋದದಿಂದ ಕುಳಿತು ಮಾಂಸಾಹಾರವನ್ನು ತೆಗೆದುಕೊಳ್ಳುತ್ತಿರುವ ಕಾಲದಲ್ಲಿ, ವನಜಂತುಗಳು ಭಯಪಟ್ಟು ಓಡುತ್ತಿರುವುದನ್ನು ನೋಡಿ, ಅದರ ಕಾರಣವನ್ನು ತಿಳಿದು ಬರುವುದಕ್ಕಾಗಿ ಲಕ್ಷ್ಮಣನನ್ನು ಕಳುಹಿಸಿದುದು.ಲಕ್ಷ್ಮಣನು ಒಂದುಮರದಮೇಲೆ ಏರಿನಿಂತು, ಭರತನು ಸೇನಾಸಮೇತನಾಗಿ ಬರುವುದನ್ನು ಕಂಡು ಶಂಕಿಸಿದುದು.

ಹೀಗೆ ರಾಮನು ಸೀತೆಗೆ ಮಂದಾಕಿನಿಯ ಅಂದವನ್ನು ತೋರಿಸಿದ ಮೇಲೆ,ಆಪರ್ವತದ ಸಾನುಪ್ರದೇಶದಲ್ಲಿ ಒಂದಾನೊಂದು ಕಡೆಯಲ್ಲಿ ಕುಳಿತು, ಆಕೆಗೆ ಭೋಜನಾರ್ಥವಾಗಿ ಮೃಗಮಾಂಸವನ್ನು ತಂದಿಟ್ಟು,"ಪ್ರಿಯೆ! ಇದೋ!ಮಾಂಸವನ್ನು ತಂದಿರುವೆನು.ಇದುಬಹುಪರಿಶುದ್ಧವಾದುದು. ಇದು ರಸವತ್ತಾಗಿಯೂ ಚೆನ್ನಾಗಿ ಪಕ್ವವಾಗಿಯೂ ಇರುವುದು.ಭುಜಿಸು"ಎಂದು ಆಕೆಯ ಮನಸ್ಸಿಗೆ ಆಪ್ಯಾಯಕವಾದ ಮಾತುಗಳನ್ನಾಡುತ್ತ ಆಕೆಯೊಡನೆ ಕುಳಿತಿದ್ದನು. ಹೀಗೆ ಅವರಿಬ್ಬರೂ ಕುಳಿತಿರುವಾಗಲೇ ಇತ್ತಲಾಗಿ ಭರತನ



825. ಸೀತಾರಾಮರು ಕುಳಿತಿರುವಾಗ ಕಾಡುಮೃಗಗಳು ಅಲ್ಲಲ್ಲಿ ಓಡುತ್ತಿರುವುದನ್ನು ಕಂಡು, ಲಕ್ಷ್ಮಣನನ್ನು ಕಳುಹಿಸಲು, ಅವನು ಮರದಮೇಲೇರಿ ನೋಡಿದುದು.

ಕಡೆಯ ಸೈನ್ಯವು ಮುಂದೆ ಮುಂದೆ ಬರುತ್ತಿರಲು,ಅದರಿಂದೆದ್ದ ಧೂಳಿಯೂ, ಸೈನಿಕರ ಕೋಲಾಹಲವೂ ಆಕಾಶವನ್ನು ವ್ಯಾಪಿಸುವಂತೆ ಹರಡಿತು. ಇಷ್ಟ ರಲ್ಲಿ ಈಮಹಾಧ್ವನಿಯಿಂದ ಹೆದರಿ ಆ ಪರ್ವತಪ್ರಾಂತದಲ್ಲಿದ್ದ ಮದಿಸಿದಮೃ ಗಗಳ ಹಿಂಡುಗಳೆಲ್ಲವೂದಿಕ್ಕುದಿಕ್ಕಿಗೆ ಗುಂಪುಗುಂಪಾಗಿ ಓಡಲಾರಂಭಿಸಿದುವು. ಆಗ ರಾಮನು ಈ ಸೈನ್ಯರಜಸ್ಸಮೂಹದೊಡನೆ ಬಂದ ಧ್ವನಿಯನ್ನು ಕೇಳಿ ದನು.ಹಾಗೆಯೇ ನಾನಾಕಡೆಗಳಿಗೂ ಓಡುತ್ತಿರುವ ಮೃಗಗಳ ಗುಂಪನ್ನೂ ನೋಡಿದನು. ಹೀಗೆ ಕಾಡಿನಲ್ಲಿ ಆಕಸ್ಮಿಕವಾಗಿ ಒಂದು ಮಹಾಧ್ವನಿಯುಂಟಾ ದುದನ್ನೂ,ಯಾವಾಗಲೂ ಶಾಂತವಾಗಿದ್ದಆ ಪುಣ್ಯಪ್ರದೇಶದಲ್ಲಿಇದ್ದಕ್ಕಿದ್ದ ಹಾಗೆ ಮೃಗಗಳು ಚದರಿ ಓಡುತ್ತಿರುವುದನ್ನೂ ಕಂಡು ರಾಮನು ಶಂಕಿತ ನಾಗಿ, ತೇಜಸ್ವಿಯಾದ ಲಕ್ಷ್ಮಣನನ್ನು ಕುರಿತು ! ವತ್ಸಲಕ್ಷ್ಮಣನೆ ! ಇದೇ ನು ! ಅಲ್ಲಿನೋಡು ! ಗುಡುಗಿನಂತೆ ಭಯಂಕರವಾಗಿಯೂ, ಗಂಭೀರವಾಗಿ ಯೂ ಇರುವ ಮಹಾಧ್ವನಿಯೊಂದು ಕಿವಿಗೆ ಕೇಳಿಸುತ್ತಿರುವುದು. ಜನಗಳು ಗುಂಪುಕೂಡಿ ಒಟ್ಟಿಗೆ ಕೂಗಿಕೊಳ್ಳುವಂತೆ ಕಾಣುವುದು. ಇದೋ!ಈ ಕಾಡಿ ನಲ್ಲಿ ಆನೆಯ ಹಿಂಡುಗಳೋ, ಕಾಡೆಮ್ಮೆಗಳೋ, ಅಥವಾ ಇತರಮೃಗಗಳೋ ನಾನಾದಿಕ್ಕುಗಳಿಗೂ ಓಡುತ್ತಿರುವುವು ! ಇವು ಸಿಂಹಗಳನ್ನು ನೋಡಿ ಹೆದರಿ ಓಡುತ್ತಿರಬಹುದೆ? ಅಥವಾ ಅಲ್ಲಲ್ಲಿ ಸಿಂಹಗಳೂ ಈ ಮೃಗಗಳೊಡನೆ ಸೇರಿ ಭಯದಿಂದ ಓಡುತ್ತಿರುವ ಹಾಗಿದೆ! ಆದುದರಿಂದ ರಾಜನೋ ಅಥವಾ ರಾಜ ಸಮಾನನಾದ ಬೇರೊಬ್ಬನೋಬೇಟೆಗಾಗಿ ಇಲ್ಲಿಗೆ ಬಂದಿರಬಹುದು.ಇಲ್ಲವೇ, ಬೇರೆ ಯಾವುದಾದರೂ ಕ್ರೂರಜಂತುವು ಈಅರಣ್ಯಕ್ಕೆಪ್ರವೇಶಿಸಿರಬಹುದು! ಎಲೈಸುಮಿತ್ರಾಪುತ್ರನೆ ! ಇದಕ್ಕೆ ಕಾರಣವೇನೆಂಬುದನ್ನು ತಿಳಿಯಬೇಕಲ್ಲವೆ? ಈಗ ಈಪರ್ವತದಲ್ಲಿ ಪಕ್ಷಿಗಳೂಕೂಡ ಸಂಚರಿಸಲಾರದೆ ಅಲ್ಲಲ್ಲಿ ಅಡಗಿಕೊಂ ಡಿರುವುದನ್ನು ನೋಡಿದೆಯಾ ! ಇದಕ್ಕೆ ನಿಜವಾದ ಕಾರಣವೇನೆಂಬುದನ್ನು ಶೀಘ್ರದಲ್ಲಿಯೇ ತಿಳಿದುಬಾ ! " ಎಂದನು. ಈಮಾತನ್ನು ಕೇಳಿದೊಡನೆಯೇ ಲಕ್ಷ್ಮಣನು,ಪುಷ್ಪಿತವಾಗಿ ವಿಶೇಷ ಎಲೆಗಳಿಲ್ಲದ ಒಂದಾನೊಂದು ಮರವನ್ನೇ ರಿ, ಸುತ್ತಲೂ ತಿರುಗಿ ನಾಲ್ಕುದಿಕ್ಕುಗಳನ್ನೂ ನೋಡುತ್ತ, ಹಾಗೆಯೇ ಪೂರ್ವದಿಂದತಿರುಗಿ ಉತ್ತರದಿಕ್ಕಿನಲ್ಲಿ ನೋಡಿದಾಗ ಒಂದುದೊಡ್ಡ ಸೈ ನ್ಯವು ಇದಿರಾಗಿ ಬರುತಿದ್ದುದನ್ನು ಕಂಡನು. ಅದರಲ್ಲಿ ಆನೆಗಳೂ, ಕುದು

ರೆಗಳೂ, ರಥಗಳೂ ದಟ್ಟವಾಗಿ ತುಂಬಿದ್ದುವು. ಕಾಲಾಳುಗಳು ಎಚ್ಚರಿಕೆ ಯಿಂದ ಸಾಲಾಗಿ ನಡೆದು ಬರುತಿದ್ದರು. ಆನೆಕುದುರೆಗಳೇ ಅದರಲ್ಲಿ ವಿಶೇಷ ವಾಗಿ ಕಾಣುತಿದ್ದುವು. ರಥದಮೇಲಿನ ಧ್ವಜಗಳು ಆ ಸೈನಕ್ಕೆ ಅಲಂಕಾರ ಪ್ರಾಯವಾಗಿ ಕಾಣುತಿದ್ದುವು. ಆಗಲೇ ರಾಮನನ್ನು ಕೂಗಿ “ಅಣ್ಣಾ! ಮಹಾಸೇನೆಯೊಂದು ಇತ್ತಲಾಗಿ ಬರುತ್ತಿರುವುದು! ಹೊಗೆಯಾಡು ತ್ತಿರುವ ನಮ್ಮ ಅಗ್ನಿಹೋತ್ರವನ್ನು ನಂದಿಸಿಬಿಡು! ಸೀತೆಯನ್ನು ಇತ್ತಲಾಗಿ ಯಾವುದಾದರೂ ಒಂದುಗುಹೆಯಲ್ಲಿ ಬಚ್ಚಿಟ್ಟುಬಾ! ಬಿಲ್ಲುಬಾಣಗಳನ್ನೂ, ಕವಚಗಳನ್ನೂ ಸಿದ್ಧಪಡಿಸಿಡು” ಎಂದನು. ಆಗ ಪುರುಷಶ್ರೇಷ್ಠನಾದ ರಾ ಮನು ಹೀಗೆ ಆತುರಪಡುತ್ತಿರುವ ಲಕ್ಷ್ಮಣನನ್ನು ನೋಡಿ “ವತ್ಸನೆ! ಚೆನ್ನಾ ಗಿ ನೋಡು. ಅದು ಯಾರಸೈನ್ಯವೆಂದು ನಿನಗೆ ತೋರಿರುವುದು?” ಎಂದನು. ಆಗ ಲಕ್ಷ್ಮಣನು ಬಹುಕೋಪಾವಿಷ್ಟನಾಗಿ,ಆಸೇನೆಯೆಲ್ಲವನ್ನೂ ತನ್ನ ಕೋ ಪಾಗ್ನಿಯಿಂದಲೇ ಸುಟ್ಟುಬಿಡುವಂತೆ ನೋಡುತ್ತ, ರಾಮನನ್ನು ಕುರಿತು “ಅಣ್ಣಾ! ಇನ್ನೇನು! ಇದು ಯಾರ ಸೈನ್ಯವೆಂಬುದನ್ನು ಕೇಳಬೇಕೆ? ದುಷ್ಟೆ ಯಾದ ಆಕೈಕೇಯಿಯ ಮಗನೇ ಸೈನ್ಯವನ್ನು ತೆಗೆದುಕೊಂಡು ಬರುತ್ತಿರು ವನು! ತನ್ನತಾಯಿಯ ತಂತ್ರದಿಂದ ತನಗಂತೂ ಪಟ್ಟಾಭಿಷೇಕವಾಯಿತು. ಅಷ್ಟರಲ್ಲಿಯೂ ಆತನು ತೃಪ್ತಿಪಡದೆ, ರಾಜ್ಯವನ್ನು ನಿಷ್ಕಂಟಕವಾಗಿ ಮಾಡಿ ಕೊಳ್ಳಬೇಕೆಂಬ ದುರಾಲೋಚನೆಯಿಂದ ನಮ್ಮನ್ನು ಕೊಲ್ಲುವುದಕ್ಕಾಗಿಯೇ ಸೈನ್ಯದೊಡನೆ ಬರುತ್ತಿರುವನು. ಇದರಲ್ಲಿ ಸಂದೇಹವೇ ಇಲ್ಲ!ಅದೋ! ಧ್ವಜ ದಲ್ಲಿ ವೃಕ್ಷದ ಗುರುತು ಕಾಣುತ್ತಿರುವುದು. ರಥದಲ್ಲಿ ಎತ್ತರವಾದ ಬುಡ ವುಳ್ಳ ಕೋವಿದಾರವೃಕ್ಷದಿಂದ ಕೂಡಿದ ಧ್ವಜವೇ ಸ್ಪಷ್ಟವಾಗಿ ಕಾಣುತ್ತಿ ರುವುದು! ಅದೋ! ಅಲ್ಲಿ ಕುದುರೆಯ ರಾವುತರು ವೇಗವತ್ತಾದ ಕುದುರೆಗ ಳನ್ನೇರಿ ಧಾರಾಳವಾಗಿ ಮುಂದೆಬರುತ್ತಿರುವರು. ಗಜಯೋಧರೆಲ್ಲರೂ ತಮ್ಮ ತಮ್ಮ ಆನೆಗಳನ್ನು ನಡೆಸಿಕೊಂಡು ಉತ್ಸಾಹದಿಂದ ಮುಂದುವರಿಯು ತ್ತಿರುವರು. ಇನ್ನುನಾವು ಉದಾಸೀನರಾಗಿರುವುದಕ್ಕೆ ಕಾಲವಲ್ಲ! ನಾವು ನಮ್ಮನಮ್ಮ ಧನುಸ್ಸನ್ನು ಹಿಡಿದು ಈ ಬೆಟ್ಟದಲ್ಲಿ ಯಾವುದಾದರೂ ಒಂದು ಎತ್ತರವಾದ ದುರ್ಗಪ್ರದೇಶವನ್ನಾಶ್ರಯಿಸಬೇಕು. ಅಥವಾ ಇಲ್ಲಿಯೇ ನಮ್ಮ ನಮ್ಮ ಶಸ್ತ್ರಗಳನ್ನು ಸಿದ್ಧಪಡಿಸಿಕೊಂಡು ಎಚ್ಚರಿಕೆಯಿಂದ ನಿಲ್ಲಬೇಕು.

ಕೋವಿದಾರಧ್ವಜವುಳ್ಳ ಆ ಕೈಕೇಯೀಪುತ್ರನು ಇಷ್ಟು ಸೈನ್ಯಗಳೊಡನೆ ಬರುತ್ತಿರುವುದರಿಂದ ಯುದ್ಧದಲ್ಲಿ ನಮ್ಮ ಕೈಗೆ ಸಿಕ್ಕದಿರನು! ರಾಮಾ! ನಮಗೆ ಇಷ್ಟು ವ್ಯಸನವನ್ನು ತಂದಿಟ್ಟ ಆ ಭರತನು ನಮ್ಮ ಕಣ್ಣಿಗೆ ಬೀಳುವನೆ? ನಿನಗೂ ಸೀತೆಗೂ, ನನಗೂ ಇಷ್ಟು ಕಷ್ಟವನ್ನು ತಂದಿಟ್ಟ ಆತನು ಕೈಗೆ ಸಿಕ್ಕಿದರೆ ಸಾಕು! ಆಕ್ಷಣವೇ ಧ್ವಂಸಮಾಡಿ ಬಿಡುವೆನು. ಅವನು ನಿನ್ನ ಕೈಯ್ಯಲ್ಲಿ ಶಾಶ್ವತ ವಾಗಿರಬೇಕಾದ ರಾಜ್ಯವನ್ನು ತಪ್ಪಿಸಿದ ಮಹಾಪಾಪಿಯಲ್ಲವೆ? ಆತನು ಕೈಗೆ ಸಿಕ್ಕಿದಾಗ ನಾನು ಕೊಲ್ಲದೇ ಬಿಡುವೆನೇ? ಆತನನ್ನು ಕೊಂದುದರಿಂದ ಯಾವದೋಷವೂ ಇಲ್ಲವೆಂದೇ ನನಗೆ ತೋರುವುದು. ಮೊದಲು ನಮಗೆ ಅಪಕಾರಮಾಡಿದವರನ್ನು ಕೊಲ್ಲುವುದು ಅಧರ್ಮವೆಂದು ಇದುವರೆಗೆ ಯಾವ ಶಾಸ್ತ್ರವೂ ವಿಧಿಸಿಲ್ಲವು. ಭರತನು ನಮಗೆ ಮೊದಲೇ ಅಪಕಾರಮಾಡಿದವ ನಲ್ಲವೆ? ಅವನು ನಮಗೆ ಮಾಡಿದ ಅಪಕಾರವು ಒಂದುವೇಳೆ ಏನೋ ಅಜ್ಞಾ ನವಶದಿಂದ ಸಂಭವಿಸಿದ್ದರೂ ನಾವು ಮನ್ನಿಸಿಬಿಡಬಹುದು! ಆತನು ಬುದ್ಧಿ ಪೂರ್ವಕವಾಗಿಯೇ ಹೀಗೆ ಮಾಡಿರುವನು. ಆತನನ್ನು ಕೊಲ್ಲುವುದಕ್ಕೂ, ಭೂ ಮಿಯನ್ನು ನಿನ್ನಧೀನವಾಗಿಮಾಡಿ ನೀನು ಸುಖವಾಗಿ ರಾಜ್ಯವನ್ನನುಭವಿಸುವ ಹಾಗೆ ಮಾಡುವುದಕ್ಕೂ ತಕ್ಕ ಕಾಲವು ಬಂದೊದಗಿರುವುದು. ರಾಜ್ಯದಲ್ಲಿ ಹೇರಾಸೆಯುಳ್ಳ ಆ ಕೈಕೇಯಿಯು, ಆನೆಯಿಂದ ಮುರಿಯಲ್ಪಟ್ಟ ಮರದಂತೆ, ಈಗಲೇ ಯುದ್ಧದಲ್ಲಿ ನನ್ನಿಂದ ಹತನಾಗುವ ಮಗನನ್ನು ನೋಡಿ ಸಂಕಟದಿಂ ದ ಕೊರಗಿ ಸಾಯಲಿ! ನಾನು ಕೈಕೇಯಿಯನ್ನೂ, ಮಂಥರೆಯೇ ಮೊದಲಾದ ಅವಳ ಪರಿವಾರಗಳೊಡನೆಯೂ, ಅವಳ ಇತರಬಂಧುಗಳೊಡನೆಯೂ ಕೊಂ ದು ಹಾಕುವೆನು. ಈ ದಿನವೇ ಈ ಭೂಮಿಯು ಕೈಕೇಯಿಯರೂಪದಿಂದ ತನ್ನ ಮೇಲಿರುವ ಮಹಾಪಾತಕವನ್ನು ಕಳೆದುಕೊಂಡು ಪರಿಶುದ್ಧೆಯಾಗಲಿ! ಅಣ್ಣಾ! ಇನ್ನು ಹೆಚ್ಚಾಗಿ ಹೇಳಿದುದರಿಂದೇನು? ಇದುವರೆಗೆ ನಾನು ಅಡಗಿ ಸಿಟ್ಟುಕೊಂಡಿದ್ದ ನನ್ನ ಕೋಪಾಗ್ನಿಯನ್ನೂ, ನಾನು ಇದುವರೆಗೆ ತಡೆದಿ ಟ್ಟುಕೊಂಡಿದ್ದ ಅವಮಾನವನ್ನೂ, ಈಗ ಬಾಣರೂಪವಾಗಿ ಶತ್ರುಸೈನ್ಯಗಳ ಮೇಲೆ ಬಿಡುವೆನು. ನೋಡು! ಒಣಗಿದ ಹುಲ್ಲುಪೊದೆಗಳಿಗೆ ಬೆಂಕಿಯಿಟ್ಟಂತೆ ಆ ನನ್ನ ಕೋಪಾಗ್ನಿಯೇ ಶತ್ರುಸೈನ್ಯಗಳನ್ನು ಸುಟ್ಟು ಭಸ್ಮಮಾಡುವುದು. ಈಗ ನನ್ನ ತೀಕ್ಷ್ಣವಾದ ಬಾಣಗಳಿಂದ ಭೇದಿಸಲ್ಪಟ್ಟ ಶತ್ರುಗಳ ದೇಹವನ್ನೂ

ಆನೆಕುದುರೆಗಳೇ ಮೊದಲಾದ ಶತ್ರುಸೈನ್ಯವೆಲ್ಲವನ್ನೂ ಇಲ್ಲಿನ ಕ್ರೂರಮೃಗಗಳು ಎಳೆದಾಡಲಿ ! ನಾನು ಇದುವರೆಗೇ ಅನೇಕಯುದ್ಧಗಳಲ್ಲಿ ನನ್ನ ಧನುರ್ಬಾಣಗಳಿಗೆ ಸಾಕಾದಷ್ಟು ಶತ್ರುಸೈನ್ಯಗಳನ್ನು ಆಹುತಿಯಾಗಿ ಕೊಟ್ಟು ಅವುಗಳ ಸಾಲವನ್ನು ತೀರಿಸಿಕೊಂಡೇ ಇರುವೆನು! ಈಗಲೂ ಮಹಾಯುದ್ಧವೊಂದು ಪ್ರಾಪ್ತವಾಗಿರುವುದು. ಇದರಲ್ಲಿಯೂ ಭರತನನ್ನೂ, ಅವನ ಸೇನೆಯನ್ನೂ, ತುಮುರುತುಮುರಾಗಿಸಿ,ಅವುಗಳ ವಿಷಯದಲ್ಲಿ ನಾನು ತೀರಿಸಬೇಕಾದ ಉಳಿದ ಸಾಲವನ್ನೂ ತೀರಿಸಿಕೊಳ್ಳುವೆನು" ಎಂದನು. ಇಲ್ಲಿಗೆ ತೊಂಬತ್ತಾರನೆಯ ಸರ್ಗವು.

---

ರಾಮನು ಲಕ್ಷ್ಮಣನ ಕೋಪವನ್ನು ಸಮಾಧಾನಪಡಿಸಿದುದು.

ಆಗ ರಾಮನಾದರೋ ಮಿತಿಮೀರಿದ ಕೋಪದಿಂದ ಹೀಗೆ ಆರ್ಭಟಿಸುತ್ತಿರುವ ಲಕ್ಷ್ಮಣನನ್ನು ನೋಡಿ "ವತ್ಸಲಕ್ಷ್ಮಣನೆ! ಕೋಪಿಸಬೇಡ! ಭರತನವಿಷಯದಲ್ಲಿ ನೀನು ಹಾಗೆಣಿಸಬೇಡ! ಅತನು ಮಹಾಧನುಷ್ಮಂತನು. ಬಹಳಪ್ರಾಜ್ಞನು ! ತಾನಾಗಿಯೇ ಆತನು ನಮ್ಮಲ್ಲಿಗೆ ಬರುತ್ತಿರುವಾಗ, ಆತನಿಗಿದಿರಾಗಿ ನಾವು ಕತ್ತಿಯನ್ನೂ ಬಿಲ್ಲನ್ನೂ ಹಿಡಿದು ನಿಲ್ಲುವುದೆಂದರೇನು?ಇದು ನಮಗುಚಿತವಲ್ಲ!ವತ್ಸನೆ! ನಾವು ಪಿತ್ರಾಜ್ಞೆಯನ್ನು ಪರಿಪಾಲಿಸುವುದಕ್ಕಾಗಿಯೇ ಈ ಕಾಡಿಗೆ ಬಂದಿರುವೆವು. ಈಗ ನಮ್ಮಲ್ಲಿಗೆ ಬರುತ್ತಿರುವ ಭರತನನ್ನು ನಾವು ಕೊಂದುಬಿಟ್ಟರೆ ನಮಗೆ ದೊಡ್ಡ ಲೋಕಾಪವಾದವುಂಟಾಗುವುದೇ ಹೊರತು ಬೇರೆಯಲ್ಲ! ಹೀಗೆ ಲೋಕಾಪವಾದಕ್ಕೆ ಗುರಿಯಾಗಿಯೂ ನಾವು ರಾಜ್ಯವನ್ನು ಸಂಪಾದಿಸಿ ಮಾಡಬೇಕಾದುದೇನು? ವಿಷಮಿಶ್ರವಾಗಿ ಮಾಡಲ್ಪಟ್ಟ ಆಹಾರಪದಾರ್ಥಗಳಂತೆ ಬಂಧುಗಳನ್ನೂ, ಮಿತ್ರರನ್ನೂಕೊಂದು ಸಂಪಾದಿಸಿದ ಹಣವು ನನಗೆ ಯಾವಾಗಲೂ ಪ್ರತಿಗ್ರಾಹ್ಯವಾಗಿರಲಾರದು! ಧರ್ಮವನ್ನಾಗಲಿ, ಅರ್ಥವನ್ನಾಗಲಿ, ಕಾಮವನ್ನಾಗಲಿ, ಕೊನೆಗೆ ಭೂಮಿಯನ್ನಾಗಲಿ ನಾನು ನಿಮಗೋಸ್ಕರವೇ ಅಪೇಕ್ಷಿಸಬೇಕೇ ಹೊರತು ನನಗೆ ಅದರಿಂದ ಯಾವಪ್ರಯೋಜನವೂ ಇಲ್ಲವು. ಇದನ್ನು ನೀನು ನಂಬದಿದ್ದರೆ ಆಣೆಯಿಟ್ಟು ಹೇಳುವೆನು. ರಾಜ್ಯವೆಂಬುದು ಅನೇಕವಿಧವಾದ ಕಷ್ಟಗಳಿಗೆ ನಿತ್ಯಾಶ್ರಯವಾಗಿರುವುದು. ಹಾಗಿದ್ದರೂ

ನಾನು ಆ ರಾಜ್ಯವನ್ನು ವಹಿಸಬೇಕೆಂದರೆ ನನ್ನ ಸಹೋದರರಾದ ನಿಮ್ಮಗ-
ಳ ಸಂತೋಷಾರ್ಥವಾಗಿಯೂ, ನಿಮ್ಮ ಸುಖಕ್ಕಾಗಿಯೂ, ನಿಮಗಾಗಿ ಹಣ
ವನ್ನು ಸಂಗ್ರಹಿಸಿಡುವುದಕ್ಕಾಗಿಯೂ ಅಲ್ಲದೆ ಬೇರೆಯಲ್ಲ. ಇದೋ! ಈ ವಿ
ಷಯದಲ್ಲಿ ನನ್ನ ಆಯುಧದಮೇಲೆ ಆಣೆಯಿಟ್ಟು ಹೇಳುವೆನು. ಎಲೆ ಸೌ
ಮ್ಯನೆ! ನನಗೆ ಈ ಭೂಮಿಯನ್ನು ಸಂಪಾದಿಸುವುದು ಅಸಾಧ್ಯವೆಂದು ಎಂ-
ದಿಗೂ ತಿಳಿಯಬೇಡ! ನಾನುಮಾತ್ರ ಮನಃಪೂರ್ವಕನಾಗಿ ಪ್ರಯತ್ನಿಸಿದರೆ,
ಸಮುದ್ರಪರ್ಯಂತವಾದ ಈ ಸಮಸ್ತ ಭೂಮಿಯನ್ನೂ ನಿಮಿಷಮಾತ್ರದಲ್ಲಿ
ಕೈವಶಮಾಡಿಕೊಳ್ಳಬಲ್ಲೆನು. ಅಧರ್ಮದಿಂದ ಬರುವುದಾದರೆ ಇಂದ್ರ
ಪದವಿಯನ್ನಾದರೂ ನಾನು ಕೋರುವನಲ್ಲ! ಭರತನಿಗಾಗಲಿ, ನಿನಗಾಗಲಿ,
ಶತ್ರುಘ್ನನಿಗಾಗಲಿ ಒಂದು ಕೇಡನ್ನುಂಟುಮಾಡಿ, ಪ್ರಿಯಸಹೋದರರಾದ
ನಿಮ್ಮನ್ನು ಬಿಟ್ಟು ನನಗೆ ಲಭಿಸುವ ಸುಖವು, ಎಷ್ಟೇ ಮಹತ್ತಾಗಿದ್ದರೂ
ಅಥವಾ ಅಲ್ಪವಾಗಿದ್ದರೂ ಆ ಸುಖವನ್ನು ಸುಡಬೇಕು. ಆ ಸುಖವನ್ನು
ನಾನೆಂದಿಗೂ ಅಪೇಕ್ಷಿಸತಕ್ಕವನಲ್ಲ. ಭರತನನ್ನು ಸಾಮಾನ್ಯನೆಂದು ತಿಳಿ
ಯಬೇಡ! ಆತನು ಅಣ್ಣತಮ್ಮಂದಿರಲ್ಲಿ ಪರಮವಾತ್ಸಲ್ಯವುಳ್ಳವನು. ನನಗೆ
ಪ್ರಾಣಕ್ಕಿಂತಲೂ ಪ್ರಿಯನಾದವನು. ಆದುದರಿಂದ ಆತನು ಪಿತೃಶುಶ್ರೂ
ಷೆಯೆಂಬ ತನ್ನ ಕುಲಧರ್ಮವನ್ನು ಬಿಟ್ಟಿರಲಾರದೆ ಮಾವನ ಮನೆಯನ್ನುಬಿ
ಟ್ಟು ಅಯೋಧ್ಯೆಗೆ ಬಂದಿರಬಹುದು. ಅಲ್ಲಿ ಬಂದಮೇಲೆ ನಾನು ತಂದೆ
ಯಾಜ್ಞೆಯಿಂದ ಜಡೆಯನ್ನೂ, ನಾರುಮಡಿಯನ್ನೂಧರಿಸಿ, ಸೀತೆಯನ್ನೂ
ನಿನ್ನನ್ನೂ ಕರೆದುಕೊಂಡು ಇತ್ತಲಾಗಿ ಕಾಡಿಗೆ ಹೊರಟುಬಂದ ವೃತ್ತಾಂ
ತವನ್ನುಕೇಳಿ ನಮ್ಮಲ್ಲಿ ಸ್ನೇಹದಿಂದಲೂ, ದುಃಖದಿಂದಲೂ, ಕದಲಿದ ಮನ
ಸುಳ್ಳವನಾಗಿ ನಮ್ಮನ್ನು ಬಿಟ್ಟಿರಲಾರದೆ ಇಲ್ಲಿಗೆ ಹೊರಟು ಬಂದಿದ್ದರೂ
ಬಂದಿರಬಹುದು. ಹೀಗಲ್ಲದೆ ಆತನು ಬೇರೆ ದುರಭಿಪ್ರಾಯದಿಂದ ಎಂ
ದಿಗೂ ಬಂದಿರಲಾರನು ಈ ಭಾಗದಲ್ಲಿ ಆತನು ತನ್ನತಾಯಿಯಾದ ಕೈಕೇ
ಯಿಯನ್ನೂ ಲಕ್ಷ್ಯಮಾಡತಕ್ಕವನಲ್ಲ. ಆಕೆಯ ಅಭಿಪ್ರಾಯಕ್ಕೆ ಅವನು
ಕೋಪಿಸಿಕೊಂಡು, ಆಕೆಯನ್ನೂ ಕ್ರೂರವಾಗಿ ನಿಂದಿಸಿ, ನಮ್ಮ ತಂದೆಗೂ ಸ
ಮಾಧಾನವನ್ನುಹೇಳಿ, ಆತನನ್ನೂ ತನ್ನದಾರಿಗೆ ಬರುವಂತೆ ಮಾಡಿಕೊಂಡು
ನನಗೆ ರಾಜ್ಯವನ್ನು ಕೊಡಿಸುವುದಕ್ಕಾಗಿಯೇ ಇಲ್ಲಿಗೆ ಹೊರಟು ಬಂದಿರಬಹು-

ವು. ಭರತನು ಈಗ ಇಲ್ಲಿಗೆ ಆ ಅಭಿಪ್ರಾಯದಿಂದ ಹೊರಟುಬರುವುದಕ್ಕೆ ಇದು ಸಕಾಲವಾಗಿಯೇ ಇರುವುದಲ್ಲವೆ? ಈತನು ನಮ್ಮವಿಷಯದಲ್ಲಿ ಮನಸ್ಸಿನಿಂದಲಾದರೂ ಕೇಡನ್ನೆಣಿಸತಕ್ಕವನಲ್ಲ!ವತ್ಸ ಲಕ್ಷ್ಮಣನೆ! ನೀನೇ ಪರ್ಯಾಲೋಚಿಸಿ ನೋಡು! ಇದುವರೆಗೆ ಆತನು ನಿನಗೆ ಯಾವುದಾದರೂ ಅಪಕಾರವನ್ನುಮಾಡಿರುವನೆ? ಅಥವಾ ನಿನ್ನೊಡನೆ ಯಾವುದಾದರೂ ಅಪ್ರಿಯವಾಕ್ಯವನ್ನಾಗಲಿ ಹೇಳಿರುವನೆ? ನಿನಗೆ ಭಯವನ್ನು ಹುಟ್ಟಿಸತಕ್ಕ ಮಾತುಗಳು ಎಂದಾದರೂ ಅವನಬಾಯಿಂದ ಹೊರಟಿರುವುವೆ? ಆತನವಿಷಯದಲ್ಲಿ ನೀನು ಹೀಗೆ ಸಂದೇಹಿಸುವುದಕ್ಕೆ ಕಾರಣವೇನು? ನೀನು ಈಗ ಭರತನನ್ನು ನೋಡಿದಾಗ ಎಷ್ಟುಮಾತ್ರಕ್ಕೂ ಕ್ರೂರವಾಕ್ಯವನ್ನಾಗಲಿ, ಅಪ್ರಿಯವನ್ನಾಗಲಿ, ಹೇಳಲೇ ಕೂಡದು! ನೀನು ಆತನವಿಷಯದಲ್ಲಿ ಮಾತ್ರ ಯಾವುದಾದರೂ ಅಪ್ರಿಯವನ್ನು ಹೇಳಿದ ಪಕ್ಷದಲ್ಲಿ, ಅದು ನನಗೆ ಹೇಳಿದಂತೆಯೇ ಆಗುವುದು. ಎಲೆ ವತ್ಸನೆ! ಅದುಹೋಗಲಿ![1]ಲೋಕದಲ್ಲಿ ಎಷ್ಟೇ ಆಪತ್ತಿನಲ್ಲಿ ಸಿಕ್ಕಿದ್ದರೂ ಮಕ್ಕಳು ತಂದೆಯನ್ನಾಗಲಿ, ಒಡಹುಟ್ಟಿದವರು ತಮ್ಮ ಅಣ್ಣತಮ್ಮಂದಿರನ್ನಾಗಲಿ ಕೊಂದುದನ್ನು ನೀನು ಕೇಳಿರುವೆಯಾ? ಪ್ರಾಣಕ್ಕೆ ಸಮಾನರಾದ ಅಂತಹ ಪ್ರಿಯಬಂಧುಗಳನ್ನು ಯಾರು ತಾನೇ ಕೊಲ್ಲುವರು? ಲಕ್ಷ್ಮಣನೆ! ಒಂದುವೇಳೆ ನೀನು ರಾಜ್ಯದಾಸೆಗಾಗಿ ಈ ಮಾತುಗಳನ್ನು ಹೇಳಿರಬಹುದು. ಹಾಗಿದ್ದರೆ ಆ ಭರತನು ಇಲ್ಲಿಗೆ ಬಂದಮೇಲೆ ನಾನೇ ಆತನನ್ನು ನೋಡಿ "ನಿನ್ನರಾಜ್ಯವನ್ನು ಲಕ್ಷ್ಮಣನಿಗೆ ಕೊಟ್ಟುಬಿಡು" ಎಂದು ಹೇಳುವೆನು. ಆಗ ಅವನ ಸುಸ್ವಭಾವವನ್ನು ನೀನೇ ಚೆನ್ನಾಗಿ ತಿಳಿಯಬಹುದು. ನಾನು ಈ ಮಾತನ್ನು ಮನಃಪೂರ್ವಕವಾಗಿಲ್ಲದೆ ಕೇವಲಪರೀಕ್ಷಾರ್ಥವಾಗಿಯೇ ಹೇಳಿದರೂ,ಆತನು ಅದನ್ನೇ ನಿಜವೆಂದು ನಂಬಿ"ಹಾಗೆಯೇ ಆಗಲಿ"ಎಂದು ಹೇಳುವನೇ ಹೊರತು ಬೇರೆಮಾತನ್ನೇ ಆಡಲಾರನು" ಎಂದನು. ಧರ್ಮಶೀಲನಾದ ರಾಮನು

---

1 ಲಕ್ಷ್ಮಣನು ಮೊದಲು ತನ್ನ ತಂದೆಯಾದ ದಶರಥನನ್ನೇ ಕೊಂದುಬಿಡಬೇಕೆಂದು ಹೇಳಿದ್ದನಲ್ಲದೆ, ಈಗ ಭರತನವಿಷಯದಲ್ಲಿಯೂ ಅದೇ ವಿರೋಧಬುದ್ಧಿಯನ್ನಿಟ್ಟು ಅವನನ್ನೂ ಕೊಂದುಬಿಡಬೇಕೆಂದು ಹೇಳುತ್ತಿರುವನು. ಈಗ ಸುಮ್ಮನಿದ್ದರೆ ಏನಾದರೂ ಅನರ್ಥವು ನಡೆದು ಕಾರ್ಯಹಾನಿಯುಂಟಾಗಬಹುದೆಂಬ ಶಂಕೆಯಿಂದ, ರಾಮನು ಆತನಿಗೆ ಲೋಕಸಾಮಾನ್ಯವಾದ ಈ ಬುದ್ಧಿವಾದಗಳನ್ನು ಹೇಳಿದುದಾಗಿ ಗ್ರಹಿಸಬೇಕು.

ಹೀಗೆ ಹೇಳಿದ ಬುದ್ಧಿವಾದಗಳನ್ನು ಕೇಳಿದೊಡನೆಯೇ ಲಕ್ಷ್ಮಣನಿಗೆ ನಾಚಿಕೆಯಿಂದ ಮೈಯೆಲ್ಲವೂ ಕುಗ್ಗಿತು. ತನ್ನ ಅವಯವಗಳಲ್ಲಿಯೇ ತಾನು ಮರಸಿಕೊಂಡಂತೆ ಉಡುಗಿದ ದೇಹವುಳ್ಳವನಾಗಿದ್ದನು. ಆತನ ತಲೆಯು ತಗ್ಗಿತು. ಲಕ್ಷ್ಮಣನಾದರೋ ರಾಮನ ಮನಸ್ಸನ್ನೇ ಅನುವರ್ತಿಸಿ,ಆತನಿಗೆ ಹಿತವಾಗಿಯೇ ನಡೆಯತಕ್ಕವನು. ಈಗಲೂ ಭರತನು ರಾಮನಿಗೆ ಯಾವ ಅಪಾಯವನ್ನು ತಂದಿಡುವನೋ ಎಂಬ ಭಯದಿಂದಲೇ ಹಿಂದು ಮುಂದು ನೋಡದೆ ರಾಮನ ಮನೋಭಿಪ್ರಾಯಕ್ಕೆ ವಿರೋಧವಾಗಿ ಈ ಮಾತುಗಳನ್ನಾಡಿಬಿಟ್ಟನು. ಹಾಗಿದ್ದರೂ ಆತನಿಗೆ ಈಗ ಮಿತಿಮೀರಿದ ನಾಚಿಕೆಯುಂಟಾಯಿತು. ಆಗ ರಾಮನನ್ನು ನೋಡಿ“ಅಣ್ಣಾ!ಒಂದುವೇಳೆ ನಮ್ಮ ತಂದೆಯಾದ ದಶರಥನು ನಿನ್ನನ್ನು ನೋಡಬೇಕೆಂದು ತಾನಾಗಿಯೇ ಇಲ್ಲಿಗೆ ಬರುತ್ತಿರಬಹುದೆಂದೂ ನನಗೆ ತೋರುವುದು” ಎಂದನು. ಹೀಗೆ ಲಜ್ಜಿತನಾಗಿ ಬೇರೊಂದು ವಿಷಯವನ್ನೆತ್ತುತ್ತಿರುವ ಲಕ್ಷ್ಮಣನನ್ನು ನೋಡಿ ರಾಮನು,ಆತನಿಗುಂಟಾಗಿರುವ ಮಿತಿಮೀರಿದ ನಾಚಿಕೆಯನ್ನು ಹೋಗಲಾಡಿಸುವುದಕ್ಕಾಗಿ ಆತನ ಮಾತನ್ನೇ ಅನುಸರಿಸಿ “ವತ್ಸನೆ! ಹಾಗಿದ್ದರೂ ಇರಬಹುದು. ಮಹಾಬಾಹುವಾದ ದಶರಥನೇ ನಮ್ಮನ್ನು ನೋಡುವುದಕ್ಕಾಗಿ ತಾನಾಗಿಇಲ್ಲಿಗೆಹೊರಟು ಬರುವಸಂಭವವೂ ಉಂಟು. ಅಥವಾ ಅವನು ಸುಖಾರ್ಹರಾದ ನಮಗೆ ಈ ವನವಾಸದ ಕಷ್ಟವು ಯೋಗ್ಯವಲ್ಲವೆಂದು ಮನಸ್ಸಿನಲ್ಲಿ ನೆನೆಸಿಕೊಂಡು, ನಮ್ಮನ್ನು ಹಿಂತಿರುಗಿಸಿಮನೆಗೆಕರೆದುಕೊಂಡು ಹೋಗುವುದಕ್ಕಾಗಿಯೇ ಇಲ್ಲಿಗೆ ಬರುತಿದ್ದರೂ ಇರಬಹುದು. ಹಾಗಿಲ್ಲದಿದ್ದರೆ ಕೊನೆಗೆ ಆತನು ಯಾವಾಗಲೂ ಸುಖವನ್ನೇ ಅನುಭವಿಸುವುದಕ್ಕೆ ಯೋಗ್ಯಳಾದ ಈ ಸೀತೆಯೊಬ್ಬಳನ್ನಾದರೂ ಮನೆಗೆ ಕರೆದುಕೊಂಡು ಹೋಗದೆ ಬಿಡಲಾರನೆಂದೇ ತೋರುವುದು. ಎಲೈ!ವೀರನೆ! ಅದೋನೋಡು! ಅಲ್ಲಿ ವಾಯುವೇಗವುಳ್ಳವುಗಳಾಗಿ, ಉತ್ತಮಜಾತಿಯಲ್ಲಿ ಹುಟ್ಟಿ, ಅಂದವಾದ ರೂಪವುಳ್ಳ ಆ ರಥಾಶ್ವಗಳೆರಡನ್ನೂ ನೋಡು. ಅವು ನಮ್ಮ ತಂದೆಯ ರಥಾಶ್ವಗಳಲ್ಲವೆ? ಮತ್ತು ಅಲ್ಲಿ ಮಹಾದೇಹವುಳ್ಳ ಶತ್ರುಂಜಯವೆಂಬ ನಮ್ಮ ತಂದೆಯಪಟ್ಟದಾನೆಯೂ ಆ ಸೇನೆಯ ಮುಂಭಾಗದಲ್ಲಿ ಬರುತ್ತಿರುವುದನ್ನು ನೋಡಿದೆಯಾ? ವತ್ಸ ಲಕ್ಷ್ಮಣನೆ! ಅದುಹಾಗಿರಲಿ! ಇದೇನು ? ನಮ್ಮ ತಂದೆಗೆ ಮುಖ್ಯರಾಜಚಿಹ್ನವಾಗಿ, ಲೋಕ

ಪೂಜ್ಯವೆನಿಸಿಕೊಂಡಿರುವ ಶ್ವೇತಚ್ಛತ್ರವುಮಾತ್ರ ಇಲ್ಲಿರುವಹಾಗೆ ಕಾಣ ಲಿಲ್ಲ. ಇದನ್ನು ನೋಡಿದರೆ ನನ್ನ ಮನಸ್ಸಿಗೇನೋ ಬಹಳ ಸಂದೇಹವುಂಟಾ ಗಿರುವುದು.ನಮ್ಮ ತಂದೆಯು ಯಾವಾಗಲೂ ಹೀಗೆ ಹೊರಟವನಲ್ಲ. ವತ್ಸನೆ! ಹೇಗಾದರೂ ಆಗಲಿ ! ಇನ್ನು ನೀನು ಮರದಿಂದಿಳಿದು ಬಾ ! ನಾನುನಿನಗೆ ಹಿಂದೆ ಹೇಳಿದವಿಷಯಗಳನ್ನು ಮಾತ್ರ ಚೆನ್ನಾಗಿ ಮನಸ್ಸಿನಲ್ಲಿಟ್ಟು ನಾನು ಹೇಳಿದಂತೆಯೇ ಶಾಂತನಾಗಿರು" ಎಂದನು ಧರ್ಮಾತ್ಮನಾದ ರಾಮನು ಹೇ ಳಿದಮಾತನ್ನು ಕೇಳಿ ಲಕ್ಷ್ಮಣನು ಆಗಲೇ ಮರದಿಂದಿಳಿದು ಬಂದು ರಾಮನ ಪಾರ್ಶ್ವದಲ್ಲಿ ಕೈಕಟ್ಟಿಕೊಂಡು ನಿಂತಿದ್ದನು. ಇತ್ತಲಾಗಿ ಭರತನು ತನ್ನ ಸೈನ್ಯಕ್ಕೆ ಆ ಪರ್ವತಪ್ರಾಂತಗಳಲ್ಲಿ ಯಾವುದೊಂದು ಗದ್ದಲವನ್ನೂ ಮಾಡ ಬಾರದೆಂದು ನಿಯಮಿಸಿ, ಆಸೈನ್ಯಗಳೆಲ್ಲವನ್ನೂ ದೂರದೂರದಲ್ಲಿಯೇ ನಿಲ್ಲಿ ಸಿದ್ದನು. ಆತನಾಜ್ಞೆಯಂತೆ ಅವನ ಚತುರಂಗಸೈನ್ಯವೂ ಆಪರ್ವತದ ಪಾರ್ಶ್ವ ಗಳಲ್ಲಿ ಒಂದೂವರೆಯೋಜನದ ದೂರದವರೆಗೆ ವ್ಯಾಪಿಸಿ ಮಂಡಲಾಕಾರ ವಾಗಿ ನಿಂತಿತು. ಆಗ ಭರತನು ತನ್ನ ಸಮಸ್ತಸೈನ್ಯವನ್ನೂ ಆಶ್ರಮಕ್ಕೆ ನಡೆಸಿಕೊಂಡು ಹೋದರೆ ರಾಮನನ್ನು ಪ್ರಸನ್ನನಾಗಿ ಮಾಡುವುದು ಕಷ್ಟ ವಾಗುವುದೆಂಬ ನೀತಿಯನ್ನು ಪರ್ಯಾಲೋಚಿಸಿ, ವಿನಯವೇಷದಿಂದಲೇ ಆ ತನ ಸಮೀಪಕ್ಕೆ ಹೋಗಬೇಕೆಂಬ ಧರ್ಮವನ್ನು ಮುಂದಿಟ್ಟುಕೊಂಡು, ಗರ್ವ ವನ್ನು ಬಿಟ್ಟು, ತಾನುಮಾತ್ರ ಮುಂದೆ ಹೊರಟನು. ಸೈನ್ಯವೆಲ್ಲವೂ| ಆತನ ಆಜ್ಞೆಗೆ ಕಟ್ಟು ಬಿದ್ದು|ಆಪರ್ವತ ಪ್ರಾಂತ್ಯಗಳಲ್ಲಿಯೇ ಅಲ್ಲಲ್ಲಿ ನಿಂತಿದ್ದುವು. ಇಲ್ಲಿಗೆ ತೊಂಬತ್ತೇಳನೆಯ ಸರ್ಗವು.

---

ಭರತನು ಪಾದಚಾರಿಯಾಗಿ ಹೊರಟು ರಾಮಾಶ್ರಮ ವನ್ನು ಹುಡುಕುತ್ತಿದ್ದುದು. ಹೊಗೆಯ ಗುರುತನ್ನು ನೋಡಿದಮೇಲೆ ಇತರಪರಿವಾರಗಳನ್ನೂ ಅಲ್ಲಿಯೇ ನಿಲ್ಲಿ ಸಿ, ಗುಹಶತ್ರುಘ್ನರೊಡನೆ ಮುಂದೆ ಬಂದುದು.

ಪರಮಧಾರ್ಮಿಕನಾದ ರಾಮನ ಬಳಿಗೆ ನಡೆದು ಹೋಗತಕ್ಕ ಭಾಗ್ಯ ವು ತನ್ನ ಕಾಲುಗಳಿಗೆ ಸಂಭವಿಸಿದುದಕ್ಕಾಗಿ, ಧನ್ಯವಾದ ಪಾದಪದ್ಮ ವುಳ್ಳವನೆನಿಸಿಕೊಂಡ ಭರತನು, ಸೇನೆಯನ್ನು ಅಲ್ಲಿಯೇ ನಿಲ್ಲಿಸಿ, ಪಿತ್ರಾಜ್ಞಾ

ನುವರ್ತಿಯಾದ ಅಣ್ಣನನ್ನು ಹುಡುಕಿಕೊಂಡು ಪಾದಚಾರಿಯಾಗಿಯೇ ಹೊರಡಬೇಕೆಂದುದ್ದೇಶಿಸಿದನು. ಸೈನ್ಯವು ತಮತಮಗೆ ಅನುಕೂಲವಾದ ಸ್ಥಳವನ್ನು ಕಲ್ಪಿಸಿಕೊಂಡು ಅಲ್ಲಲ್ಲಿ ನಿಂತೊಡನೆಯೇ, ಭರತನು ವಿನಯವೇಷವನ್ನು ಧರಿಸಿ, ಪಕ್ಕದಲ್ಲಿದ್ದ ಶತ್ರುಘ್ನನನ್ನು ನೋಡಿ “ವತ್ಸ ಶತ್ರುಘ್ನನೆ ! ನೀನು ನಮ್ಮ ಸೇನೆಯಲ್ಲಿ ಕೆಲವು ಮನುಷ್ಯರನ್ನೂ, ಕೆಲವುಬೇಡರನ್ನೂ ಸಹಾಯಕ್ಕಾಗಿ ಕರೆದುಕೊಂಡು, ಈವನದ ಸುತ್ತಲೂ ಹುಡುಕಿಬರಬೇಕು. ಹಾಗೆಯೇ ಈ ಗುಹನೂ ಧನುರ್ಬಾಣಧಾರಿಗಳಾದ ತನ್ನ ಕಡೆಯ ಸಾವಿರಾರು ಮಂದಿಬೇಡರೊಡನೆ ಹೊರಟು, ರಾಮಲಕ್ಷ್ಮಣರಿರುವ ಸ್ಥಳವನ್ನು ಹುಡುಕಿಬರಲಿ! ನಾನೂ ನಮ್ಮ ಮಂತ್ರಿಗಳನ್ನೂ, ಕೆಲವು ಪುರವಾಸಿಗಳನ್ನೂ, ಗುರುಜನರನ್ನೂ, ಕೆಲವು ಬ್ರಾಹ್ಮಣರನ್ನೂ, ಸಂಗಡ ಕರೆದುಕೊಂಡು ಕಾಲುನಡೆಯಿಂದಲೇ ಈ ಕಾಡುಗಳೆಲ್ಲವನ್ನೂ ಸುತ್ತಿಬರುವೆನು. ರಾಮನನ್ನಾಗಲಿ, ಬಲಾಢ್ಯನಾದ ಲಕ್ಷ್ಮಣನನ್ನಾಗಲಿ, ಭಾಗ್ಯವತಿಯಾದ ಸೀತೆಯನ್ನಾಗಲಿ ಕಣ್ಣಾರೆಕಂಡ ಹೊರತು ನನ್ನ ಮನಸ್ಸಿಗೆ ನೆಮ್ಮದಿಯಿರದು. ಕಮಲದಳಗಳಂತಿರುವ ಕಣ್ಣುಗಳಿಂದ ಕೂಡಿ, ಚಂದ್ರಬಿಂಬಕ್ಕೆ ಸಮಾನವಾಗಿರುವ ಆ ನನ್ನ ಅಣ್ಣನ ಮುಖವನ್ನು ಕಂಡಹೊರತು ನನ್ನ ಮನಸ್ಸಿಗೆ ಸಮಾಧಾನವಿಲ್ಲ. ರಾಜಚಿಹ್ನಗಳಿಂದ ಕೂಡಿದ ಆ ನನ್ನ ಅಣ್ಣನ ಪಾದಕಮಲಗಳನ್ನು ನಾನು ನನ್ನ ಶಿರಸ್ಸಿನಿಂದ ಧರಿಸಿದ ಹೊರತು ನನ್ನ ಮನಸ್ಸಿಗೆ ಶಾಂತಿಯುಂಟಾಗದು. ರಾಜ್ಯಾರ್ಹನಾದ ಆರಾಮನು ನಮ್ಮ ಪಿತೃಪಿತಾಮಹ ಪರಂಪರೆಯಾಗಿ ಬಂದ ರಾಜ್ಯದಲ್ಲಿ ನೆಲೆಗೊಂಡು, ಅಭಿಷೇಕತೀರ್ಥದಿಂದ ಪ್ರೋಕ್ಷಿಸಲ್ಪಡುವುದನ್ನು ನೋಡಿದ ಹೊರತು ನನ್ನ ಮನಸ್ಸಿನ ಕಳವಳವು ನಿಲ್ಲದು. ಆಹಾ ! ಚಂದ್ರಬಿಂಬಕ್ಕೆ ಸಮಾನವಾದ ಆ ರಾಮನ ಮುಖವನ್ನು ಎಡೆಬಿಡದೆ ಯಾವಾಗಲೂ ನೋಡುತ್ತಿರುವ ಲಕ್ಷ್ಮಣನೇ ಪರಮಭಾಗ್ಯಶಾಲಿಯು ! ಆತನೇ ಧನ್ಯನು! ಸಮುದ್ರಮೇಖಲೆಯಾದ ಈ ಸಮಸ್ತಭೂಮಿಗೂ ಅಧಿನಾಥನಾದ ರಾಮನನ್ನು ಹಿಂಬಾಲಿಸಿ ಹೋಗಿರುವ ಆಸೀತೆ

ಯೇ ಕೃತಾರ್ಥಳು. ಆಕೆಯೇ ಪರಮಭಾಗ್ಯಶಾಲಿನಿಯು ! [1] ನಂದನವನದಲ್ಲಿ ಕುಬೇರನು ವಿಹರಿಸುವಂತೆ, ಇಲ್ಲಿ ಕಾಕುತ್ಥ್ಸನಾದ ಈರಾಮನು ವಾಸಮಾಡು

---

1 ಇಲ್ಲಿ "ಸುಭಗಶ್ಚಿತ್ರಕೂಟೋಽಸೌ ಗಿರಿರಾಜೋಪಮೋಗಿರಿಃ। ಯಸ್ಮಿನ್ವಸತಿ ಕಾಕುತ್ಸ್ಥಃ ಕುಬೇರ ಇವನಂದನೇ ॥" ಎಂದು ಮೂಲವು, ಇದಕ್ಕೆ ಗೋವಿಂದರಾಜೀಯ ವ್ಯಾಖ್ಯಾನಾನುಸಾರವಾದ ವಿಶೇಷಾರ್ಥಗಳೇನೆಂದರೆ:–(ಸುಭಗಃ) ಅತಿಮನೋಹರವಾದುದು. ರಾಮನ ವಾಸಸ್ಥಳವಾಗಿರುವುದರಿಂದ, ಬೇರೆ ಎಲ್ಲಾ ಸ್ಥಳಗಳಿಗಿಂತಲೂ ಮನೋಹರವಾದುದೆಂದು ಭಾವವು. ಮತ್ತು (ಚಿತ್ರಕೂಟಃ) ವಿಚಿತ್ರವಾದ ಶಿಖರಗಳುಳ್ಳುದು. ಶ್ರೀರಾಮನ ನಿವಾಸಯೋಗ್ಯವಾದುದರಿಂದ ಇದಕ್ಕೆ ಈ ವಿಧವಾದ ಅನನ್ಯಸಾಧಾರಣವಾದ ಶೋಭೆಯುಂಟಾಗಿರುವುದು ಮಾತ್ರವೇ ಅಲ್ಲದೆ, ಸಹಜವಾದ ತನ್ನ ಸ್ವರೂಪದಿಂದಲೂ ಇದು ಲೋಕಮೋಹಕವಾಗಿರುವುದೆಂದು ಭಾವವು. (ಅಸೌ) "ಇದು" ಎಂದರೆ ಪೂರ್ವದಲ್ಲಿ ವಿಭೀಷಣನು ರಾಮನನ್ನು ಪ್ರಾರ್ಥಿಸಿ, ರಘುವಂಶದವರ ಗೃಹಾರಾಧನದಲ್ಲಿದ್ದ ರಂಗನಾಥಮೂರ್ತಿಯನ್ನು ತನ್ನ ರಾಜಧಾನಿಯಾದ ಲಂಕೆಗೆ ಬಿಜಯಮಾಡಿಸಿಕೊಂಡು ಹೋಗುತಿದ್ದಾಗ, ದಾರಿಯಲ್ಲಿ ಶ್ರೀರಂಗನಾಥನು ಶ್ರೀರಂಗಕ್ಷೇತ್ರದ ಭೋಗ್ಯತೆಯನ್ನು ನೋಡಿ, ಅಲ್ಲಿಯೇ ಸ್ಥಿರವಾಗಿ ನೆಲೆಸಿಬಿಟ್ಟಂತೆ, ಈಗ ರಾಮನೂ ಅಯೋಧ್ಯೆಯಿಂದ ದಂಡಕಾವನಕ್ಕೆ ಹೊರಟುಬರುವಾಗ, ನಡುದಾರಿಯಲ್ಲಿ ಸಿಕ್ಕಿದ ಈಪರ್ವತದ ಅಂದವನ್ನು ನೋಡಿ ಮೋಹಗೊಂಡು ಇಲ್ಲಿಯೇ ನಿಂತು ಬಿಟ್ಟಿರುವನಲ್ಲವೆ? ಹೀಗೆ ರಾಮನ ಮನಸ್ಸನ್ನೂ ಆಕರ್ಷಿಸಿದ ಮಹಾಮಹಿಮೆಯುಳ್ಳ ಈ ಪ್ರದೇಶವೆಂದು ಭಾವವು. ಮತ್ತು (ಗಿರಿರಾಜೋಪಮಃ) ಸಾಕ್ಷಾಚ್ಛ್ರೀನಿವಾಸನ ಸಾನ್ನಿಧ್ಯದಿಂದ ಪ್ರಸಿದ್ಧಿಹೊಂದಿರುವ ವೇಂಕಟಾಚಲವೆಂಬ ಪುಣ್ಯಕ್ಷೇತ್ರಕ್ಕೆ ಸಮಾನವಾದುದು. (ಯಸ್ಮಿನ್ವಸತಿ ಕಾಕುತ್ಸ್ಥಃ) ರಾಮನು ಸುಖದಿಂದ ವಾಸಮಾಡುತ್ತಿರುವ ಸ್ಥಳವು. ಸಾಕ್ಷಾದ್ಭಗವದಂಶದಿಂದವತರಿಸಿದ ರಾಮನು ಹುಟ್ಟಿ ಕೆಲವುಕಾಲ ಬಳೆದಮೇಲೆ ಆತನನ್ನಗಲಿದ ಅಯೋಧ್ಯೆಯಂತೆಯೂ ಅಲ್ಲದೆ, ಆತನು ಹುಟ್ಟಿದೊಡನೆಯೇ ಆತನನ್ನಗಲಿದ ಮಧುರಾಪುರಿಯಂತೆಯೂ ಅಲ್ಲದೆ, ಅವನ ನಿತ್ಯವಾಸಕ್ಕೆ ಯೋಗ್ಯವಾದ ನಿರತಿಶಯವಾದ ಸ್ಥಳವೆಂದು ಭಾವವು. (ಕಾಕುತ್ಸ್ಥೋಯಸ್ಮಿನ್ವಸತಿ) ಈತನು ಈಪರ್ವತದಲ್ಲಿರುವುದರಿಂದ, ಇವನ ಕುಲಕ್ಕೆ ಕೂಟಸ್ಥನಾದ ರಾಜನೊಬ್ಬನು, ವೃಷಭರೂಪವನ್ನು ಧರಿಸಿದ ಇಂದ್ರನ ಹೆರಳಿನಮೇಲೆ ಕುಳಿತಂತೆ, ಈಪ್ರದೇಶಕ್ಕೇ ಇದೊಂದು ಶೋಭೆಯನ್ನುಂಟುಮಾಡುತ್ತಿರುವುದೆಂದು ಭಾವವು. ಮತ್ತು (ಕುಬೇರ ಇವನಂದನೇ) ಕುಬೇರನು ತನಗೆ ಸ್ವಕೀಯವಾದ ಚೈತ್ರರಥವೆಂಬ ಉದ್ಯಾನವನ್ನು ಬಿಟ್ಟು, ಇಂದ್ರನ ವಿಹಾರೋದ್ಯಾನವಾದ ನಂ

ತ್ತಿರುವುದರಿಂದ ಹಿಮವತ್ಪರ್ವತಕ್ಕೆ ಸಮಾನವಾದ ಈ ಬೆಟ್ಟವೂ ಎಷ್ಟೋ ಭಾಗ್ಯವುಳ್ಳುದೆಂದೆಣಿಸುವೆನು. ಈ ಅರಣ್ಯವು ಅನೇಕಕ್ರೂರಮೃಗಗಳಿಗಾಶ್ರಯವಾಗಿ ದುರ್ಗಮವಾಗಿದ್ದರೂ, ಮಹಾತೇಜಸ್ವಿಯಾಗಿ, ಶಸ್ತ್ರಧಾರಿಗಳಲ್ಲಿ ಶ್ರೇಷ್ಠನೆನಿಸಿಕೊಂಡಿರುವ ರಾಮನು ಇದರಲ್ಲಿ ವಾಸಮಾಡುವುದರಿಂದಲೇ ಕೃತಾರ್ಥವಾಯಿತಲ್ಲವೆ?" ಎಂದು ಹೇಳಿಪ್ರಲಾಪಿಸುತ್ತ,ಪುರುಷಶ್ರೇಷ್ಠನಾಗಿಯೂ ತೇಜಸ್ವಿಯಾಗಿಯೂ ಇರುವ ಭರತನು ಕಾಲುನಡೆಯಿಂದಲೇ ಆ ವನವನ್ನು ಪ್ರವೇಶಿಸಿ ಸುತ್ತುತಿದ್ದನು. ಅಲ್ಲಲ್ಲಿ ತಪ್ಪಲುಗಳಲ್ಲಿ ಬೆಳೆದಿರುವ ಪುಷ್ಪಿತಗಳಾದ ಮರಗಳ ಗುಂಪಿನ ನಡುವೆ,ರಾಮನೊಡನೆ ತಾನು ಹೇಳಬೇಕಾದ ಮಾತುಗಳನ್ನೇ ಚಿಂತಿಸುತ್ತ ಹೋದನು. ಮುಂದೆ ಪುಷ್ಪಿತವಾಗಿದ್ದ

---

ದನವನದಲ್ಲಿ ಆಸೆಪಟ್ಟು ಅಲ್ಲಿಹೋಗಿ ವಿಹರಿಸುವಂತೆ, ರಾಮನು ಅಯೋಧ್ಯೆಯನ್ನು ಬಿಟ್ಟು ಬಂದು ಇಲ್ಲಿ ವಿಹರಿಸುವನೆಂದೂ ಭಾವವು. ಅಥವಾ"ಇಕ್ಷ್ವಾಕೂಣಾಮಿಯಂ ಭೂಮಿಸ್ಸ ಶೈಲವನಕಾನನಾ" ಎಂಬಂತೆ, ಆ ಚಿತ್ರಕೂಟವೂ ಕೋಸಲದೇಶಕ್ಕೇ ಸೇರಿದುದಾಗಿರುವುದರಿಂದ, ಮನೆಯನ್ನು ಬಿಟ್ಟು ಗೃಹೋದ್ಯಾನದಲ್ಲಿ ವಿಹರಿಸುವ ಕುಬೇರನಂತೆ ರಾಮನೂ ಅರಮನೆಯನ್ನು ಬಿಟ್ಟುಬಂದು ಅದಕ್ಕೆ ಹೊರತೋಟದಂತಿರುವ ಇಲ್ಲಿ ವಿಹರಿಸುತ್ತಿರುವನೆಂದೂ ಗ್ರಹಿಸಬಹುದು.ಮತ್ತು (ಕುಬೇರಇವನಂದನೇ) "ಕು" ಭೂಮಿಯನ್ನೇ "ಬೇರ:"ಶರೀರವಾಗಿ ಉಳ್ಳವನು. ಜಗಚ್ಛರೀರಿಯಾದ ಪರಮಾತ್ಮನೆಂದರ್ಥವು. (ನಂದನೇ) ವೈಕುಂಠೋದ್ಯಾನದಲ್ಲಿ ವಿಹರಿಸುವಂತೆ, ರಾಮನು ಇಲ್ಲಿ ವಸಿಸುತ್ತಿರುವನೆಂದೂ ಭಾವವು. (ಇಲ್ಲಿ "ಯಸ್ಮಿನ್ವಸತಿ ಕಾಕುತ್ಸ್ಥ:) ಮತ್ತು (ಗಿರಿರಾಜೋಪಮ:) ಎಂಬಿವುಗಳಿಂದ, ನಮ್ಮ ಭರತಖಂಡದಲ್ಲಿ, "ಶ್ರೀರಂಗಮಂಗಲಮಣಿಂ ಕರುಣಾನಿವಾಸಂ ಶ್ರೀವೇಂಕಟಾದ್ರಿ, ಶಿಖರಾಲಯಕಾಲಮೇಘಂ। ಶ್ರೀಹಸ್ತಿಶೈಲಶಿಖರೋಜ್ಜ್ವಲಪಾರಿಜಾತಂ ಶ್ರೀಶಂ ನಮಾಮಿ ಶಿರಸಾ ಯದುಶೈಲದೀಪಂ" ಎಂಬುದಾಗಿ, ನಮ್ಮ ಪೂರ್ವಾಚಾರ್ಯರಿಂದ ಕೀರ್ತಿಸಲ್ಪಟ್ಟು ಪ್ರಸಿದ್ಧಿಗೊಂಡ ಶ್ರೀರಂಗಾದಿಗಳಾದ ನಾಲ್ಕು ದಿವ್ಯಕ್ಷೇತ್ರಗಳೂ ಧ್ವನಿತವಾಗುವುವು.ಕಕುತ್ಸ್ಥವಂಶದವರಿಗೆ ಕುಲಧನವಾದ ಶ್ರೀರಂಗನಾಥನು ವಾಸಮಾಡತಕ್ಕ ಶ್ರೀರಂಗಕ್ಷೇತ್ರವೂ, ವೆಂಕಟಗಿರಿ (ತಿರುಪತಿ) ಹಸ್ತಿಗಿರಿ (ಕಂಚಿ) ಯದುಗಿರಿ (ಮೇಲುಕೋಟೆ) ಎಂಬ ಮೂರು ಪರ್ವತಶ್ರೇಷ್ಠಗಳೂ, ಇಲ್ಲಿಯೇ ಸಾನ್ನಿಧ್ಯವನ್ನು ಹೊಂದಿದಂತೆ, ರಾಮಸಾನ್ನಿಧ್ಯದಿಂದ ಈಚಿತ್ರಕೂಟಕ್ಕೆ ಬಂದು ಮಹಾಮಹಿಮೆಯುಂಟಾಗಿರುವುದೆಂದೂ ಭಾವವು.

ಒಂದುದೊಡ್ಡ ಮರದಡಿಯಲ್ಲಿ ನಿಂತಾಗ, ಆಶ್ರಮಮಧ್ಯದಿಂದ ಹೊಗೆಯು ಹೊರಡುತ್ತಿರುವುದನ್ನು ಸ್ಪಷ್ಟವಾಗಿ ಕಂಡನು. ಆಗಲೇ ಆತನ ಸಂತೋಷವು ಉಕ್ಕಿತು. ಆತನ ಸಂಗಡಿಗರೂ ಅತ್ಯಾನಂದದಿಂದುಬ್ಬಿದರು. ಸಮುದ್ರ ದಲ್ಲಿ ಬಿದ್ದವನಿಗೆ ದಡವು ಸಿಕ್ಕಿದಂತೆ ಅದನ್ನು ಕಂಡು ಹಿಗ್ಗುತಿದ್ದನು. ಆ ಚಿತ್ರಕೂಟದಲ್ಲಿ ಸತ್ಪುರುಷಸೇವಿತವಾದ ಆ ಆಶ್ರಮಚಿಹ್ನವನ್ನು ನೋ ಡಿದೊಡನೆ, ಸಂಗಡಬಂದಿದ್ದ ಸೇನೆಯನ್ನು ಅಲ್ಲಿಯೇ ನಿಲ್ಲಿಸಿ, ಗುಹನೊಡನೆ ಕೂಡಿ ವೇಗದಿಂದ ಮುಂದೆ ಹೋದನು.ಇಲ್ಲಿಗೆ ತೊಂಬತ್ತೆಂಟನೆಯ ಸರ್ಗವು.

---

{ ಭರತನು ಹಿಂದೆ ನಿಲ್ಲಿಸಿದ್ದ ತನ್ನ ಮಾತೆಯರನ್ನು ಕರೆ ತರುವುದಕ್ಕಾಗಿ ವಸಿಷ್ಠನನ್ನು ಕಳುಹಿಸಿ,ತಾನು ಗುಹ ಸುಮಂತ್ರರೊಡನೆ ಹೊರಟು ರಾಮನನ್ನು ಸೇರಿದುದು. }

ಹೀಗೆ ಸೈನ್ಯವನ್ನು ನಿಲ್ಲಿಸಿಟ್ಟು ಭರತನು ಅಲ್ಲಿಯೇ ಕ್ಷಣಕಾಲವಿದ್ದು, ಆಮೇಲೆ ರಾಮನನ್ನು ನೋಡಬೇಕೆಂಬ ಆತುರದಿಂದ ಹೊರಟು, ಶತ್ರುಘ್ನ ನಿಗೆ ಆಶ್ರಮದ ಗುರುತುಗಳನ್ನು ತೋರಿಸುತ್ತ, ತನ್ನ ಮಾತೆಯರನ್ನು ಕರೆತರುವಂತೆ ವಸಿಷ್ಠನಿಗೆ ಹೇಳಿ ತಾನುಮಾತ್ರ ಅತ್ಯಾತುರದಿಂ ದ ಮುಂದೆಮುಂದೆ ಹೋಗುತಿದ್ದನು. ಆತನಹಿಂದೆ ಶತ್ರುಘ್ನನೂ, ;ಅವನ ಹಿಂದೆ ಸುಮಂತ್ರನೂ ಹೊರಟುಬರುತ್ತಿದ್ದರು. ರಾಮನನ್ನು ನೋಡಬೇಕೆಂಬ ಭರತನಕಾಗೆಯೇ ಶತ್ರುಘ್ನನೂ ಅತ್ಯಾತುರದಿಂದ ತತ್ತಳಿಸುತ್ತಿದ್ದನು. ಹೀಗೆ ಭರತನು ಶತ್ರುಘ್ನ ಸುಮಂತ್ರರೊಡನೆ ಸ್ವಲ್ಪದೂರನಡೆದು ಹೋದ ಮೇಲೆ,ತಪಸ್ವಿಗಳ ಮನೆಯಂತೆ ಶಾಸ್ತ್ರೋಕ್ತವಾಗಿ ಕಟ್ಟಲ್ಪಟ್ಟಿದ್ದ ಒಂದು ಪರ್ಣಶಾಲೆಯನ್ನೂ, ಅಗ್ನಿಹೋತ್ರಗೃಹಗಳನ್ನೂ, ಅತಿಥಿಪೂಜಾ ಸ್ಥಾನ ಗಳೇ ಮೊದಲಾದ ಇತರಸನ್ನಿವೇಶಗಳನ್ನೂ ಕಂಡನು. ಆಪರ್ಣಶಾಲೆಯ ಮುಂದೆ ಅಲ್ಲಲ್ಲಿ ಮುರಿದು ಹಾಕಿದ ಸೌದೆಯ ರಾಶಿಗಳನ್ನೂ, ದೇವಪೂಜಾ ರ್ಥವಾಗಿ ಅಲ್ಲಲ್ಲಿ ಸಂಗ್ರಹಿಸಿಡಲ್ಪಟ್ಟಿರುವ ಪುಷ್ಪಗಳನ್ನೂ ನೋಡಿದನು. ಅ ಲ್ಲಲ್ಲಿರಾಮಲಕ್ಷ್ಮಣರು ಸ್ನಾನಮಾಡುವುದಕ್ಕಾಗಿ ಸರೋವರಗಳಿಗೆ ಹೋಗಿಬ ರುವಾಗದಾರಿಯನ್ನು ತಿಳಿಯುವುದಕ್ಕಾಗಿಯೂ, ತಾವುಹೋಗಿ ಬಂದುದನ್ನು

ಒಬ್ಬರಿಗೊಬ್ಬರಿಗೆ ತಿಳಿಸುವುದಕ್ಕಾಗಿಯೂ, ಅಲ್ಲಲ್ಲಿ ಮರಗಳಮೇಲೆ ದರ್ಭೆಗಳಿಂದಲೂ, ನಾರುಮಡಿಗಳಿಂದಲೂ ಗುರತುಮಾಡಿಟ್ಟಿರುವುದನ್ನೂ ನೋಡಿದನು. ಆಕಾಡಿನಲ್ಲಿ ಚಳಿಯನ್ನು ತಡೆಯಲಾರದೆ ಆಗಾಗ ಬೆಂಕಿಯನ್ನು ಕಾಯಿಸುವುದಕ್ಕಾಗಿ ಅಲ್ಲಲ್ಲಿ ರಾಶಿರಾಶಿಯಾಗಿ ಸಂಗ್ರಹಿಸಿಟ್ಟಿರುವ ಕಾಡು ಬೆರಣಿಗಳನ್ನೂ ಕಂಡನು. ಹೀಗೆ ಭರತನು ಇವೆಲ್ಲವನ್ನೂ ನೋಡಿ ಸಂತೋಷದಿಂದ ಅರಳಿದ ಮುಖಕಾಂತಿಯುಳ್ಳವನಾಗಿ, ಮನಸ್ಸಿಗೆ ಸಂಪೂರ್ಣವಾದ ಧೈರ್ಯವನ್ನು ತಂದುಕೊಂಡು, ಸಮೀಪದಲ್ಲಿದ್ದ ಶತ್ರುಘ್ನನನ್ನೂ, ತನ್ನನ್ನು ಸುತ್ತಿ ಬರುತಿದ್ದ ಇತರ ಮಂತ್ರಿಗಳನ್ನೂ ನೋಡಿ ''ಭರದ್ವಾಜನು ಹೇಳಿದ್ದ ಸ್ಥಳಕ್ಕೆ ನಾವು ಬಂದು ಬಿಟ್ಟಂತೆಯೇ ತೋರುವುದು. ಆಮಂದಾಕಿನೀ ನದಿಯೂಕೂಡ ಇಲ್ಲಿಗೆ ಬಹಳದೂರವಿಲ್ಲವೆಂದೆಣಿಸುವೆನು. ಇದೋ! ಇಲ್ಲಿ ನೋಡಿರಿ! ಈ ಮರದಮೇಲೆ ನಾರುಮಡಿಗಳು ಕಟ್ಟಿಡಲ್ಪಟ್ಟಿರುವುವು. ಒಂದುವೇಳೆ ಇದನ್ನು ಲಕ್ಷ್ಮಣನೇ ಕಟ್ಟಿರಬಹುದು. ಅಕಾಲಗಳಲ್ಲಿ ಹಣ್ಣುಗಳನ್ನಾಗಲಿ, ನೀರನ್ನಾಗಲಿ ತರುವುದಕ್ಕಾಗಿ ಹೊರಟು, ಹಿಂತಿರುಗಿ ಪರ್ಣಶಾಲೆಗೆ ಹೋಗುವಾಗ, ದಾರಿಯ ಗುರುತಿಗಾಗಿ ಇವುಗಳನ್ನು ಕಟ್ಟಿರಬಹುದು. ಆದುದರಿಂದ ನಾವು ಈ ದಾರಿಯಿಂದಲೇ ಹೋಗುವುದುತ್ತಮವು. ಇದೋ ಇಲ್ಲಿನೋಡಿರಿ![1]ಉದ್ಧವಾದ ದಂತಗಳಿಂದ ಕೂಡಿದಮಹಾವೇಗವುಳ್ಳಆನೆಗಳು ಒಂದನ್ನೊಂದು ನೋಡಿ ಕೋಪದಿಂದ ಗರ್ಜಿಸುತ್ತ ತಿರುಗಾಡಿದ ಕಾಲಿನ ಗುರುತುಗಳೇ ಅಲ್ಲಲ್ಲಿ ಕಾಣುತ್ತಿರುವುವು.ಕಾಡಿನಲ್ಲಿ ತಾಪಸರು ಯಾವಾಗಲೂ ಹೋಮಮಾಡುವುದಕ್ಕಾಗಿ ರಕ್ಷಿಸಿಡುವ [2]ಅಗ್ನಿಹೋತ್ರದ ದಟ್ಟವಾದ ಧೂ

---

1 ಇಲ್ಲಿ ಆನೆಗಳ ಹಾವಳಿಯಿಂದ ದಾರಿಯ ಗುರುತು ಸಿಕ್ಕದಂತಾಗಿರುವುದರಿಂದಲೇ, ನಾರುಮಡಿ ಮೊದಲಾದುವುಗಳನ್ನು ಮಾರ್ಗಚಿಹ್ನವಾಗಿ ಅಲ್ಲಲ್ಲಿ ತಗುಲಿಸಿಟ್ಟಿರುವರೆಂದು ಭಾವವು.

2 ಇಲ್ಲಿ ''ಯಮೇವಾಧಾತು ಮಿಚ್ಛಂತಿ ತಾಪಸಾಸ್ಸತತಂವನೇ। ತಸ್ಯಾಸೌದೃಶ್ಯತೇ ಧೂಮಸ್ಸಂಕುಲಃ ॥ " ಎಂದು ಮೂಲವು. ಇಲ್ಲಿ ಸಂಕುಲವಾದ ಧೂಮವೆಂದರೆ ದಟ್ಟವಾದ ಹೊಗೆಯೆಂದರ್ಥವು. ಪಚನಕಾಲದಲ್ಲಿ ಉರಿಯೂ,ಹೋಮಕಾಲದಲ್ಲಿ ಕೆಂಡವೂ ಹೆಚ್ಚಾಗಿರಬೇಕಾದುದರಿಂದ,ಆಗ ದಟ್ಟವಾಗಿ ಹೊಗೆಯು ಹೊರಡಲಾರದು. ಆದುದರಿಂದ ಈ ಅಗ್ನಿಯು ಪಚನಹೋಮಾಗ್ನಿಗಳೆರಡೂ ಅಲ್ಲವೆಂದೂ, ಇದು ಗಾರ್ಹಪತ್ಯಾಗ್ನಿಯೇ

ಮಪರಂಪರೆಯು ಮೇಲೆ ಏಳುತ್ತಿರುವುದನ್ನು ನೋಡಿರಿ! ಈ ಆಶ್ರಮದಲ್ಲಿ ಯೇ

---

ಆಗಿರಬೇಕೆಂದೂ ಸಿದ್ಧವಾಗುವುದು. ರಾಮನು ಅಗ್ನ್ಯಾಧಾನಮುಂತಾದುವುಗಳನ್ನು ಮಾಡುತ್ತಿರಲಿಲ್ಲವಾದುದರಿಂದ ಇದು ಶ್ರೌತಾಗ್ನಿಯಲ್ಲವು. ಭಾರ್ಯವಾದ ಸ್ಮಾರ್ತಾಗ್ನಿಯೆಂದೇ ಹೇಳಬೇಕು. ರಾಮನಿಗೆ ಈಗ ಶ್ರೌತಾಗ್ನಿಯಿದ್ದಿದ್ದರೆ, ಮುಂದೆ ರಾಮನು ಕಾಡಿನಿಂದ ಅಯೋಧ್ಯೆಗೆ ಹಿಂತಿರುಗಿ ಬರುವಾಗ "ರಾಮಃ ಕಮಲಪತ್ರಾಕ್ಷಃ ಪುರೋಧಸಮಥಾಬ್ರವೀತ್ । ಅಗ್ನಿಹೋತ್ರಂ ವ್ರಜತ್ವಗ್ರೇ ಸರ್ಪಿರ್ಜ್ವಲಿತಪಾವಕಂ ॥" ಎಂದು ಅಗ್ನಿಹೋತ್ರವನ್ನು ಪುರಸ್ಕರಿಸಿಕೊಂಡೇ ಬಂದುದಾಗಿ ಹೇಳಿರುವಂತೆ, ಕಾಡಿಗೆ ಹೋಗುವಾಗಲೂ ಹಾಗೆಯೇ ಅವನು ಅಗ್ನಿಯನ್ನು ಸಾಗಿಸಿತಂದುದಾಗಿ ಹೇಳಬೇಕಾಗಿತ್ತು. ಹಿಂದೆ ಆವಿಷಯವೇನೂ ಕಾಣುವುದಿಲ್ಲ. ಮತ್ತು ಇವನನ್ನು ತಮಸಾತೀರದವರೆಗೆ ಅನುಸರಿಸಿ ಬಂದ ಪೌರವೃದ್ಧರನ್ನು "ಸಾಗ್ನಯ ಏವಸಮಾಗತಾಃ" ಅಗ್ನಿ ಸಹಿತರಾಗಿಯೇ ಬಂದರೆಂದು ಹೇಳಿರುವಾಗ, ರಾಮನನ್ನು ಮಾತ್ರ ಹಾಗೆ ಹೇಳದಿರುವುದಕ್ಕೆ ಕಾರಣವಿಲ್ಲ. ಆದ್ದರಿಂದ ಅವನು ಶ್ರೌತಾಗ್ನಿಯನ್ನು ಸಾಗಿಸಿಕೊಂಡು ಬರಲಿಲ್ಲವೆಂದು ಸ್ಪಷ್ಟಪಡುವುದು. ಮತ್ತು "ದೀಕ್ಷಿತಂವ್ರತಸಂಪನ್ನಂ ವರಾಜಿನಧರಂಶುಚಿಂ । ಕುರಂಗಶೃಂಗಪಾಣಿಂಚ ಪಶ್ಯಂತೀತ್ವಾಂ ಭಜಾಮ್ಯಹಂ ॥" ಎಂಬುದಾಗಿ ಸೀತೆಯು ರಾಮನ ಯಜ್ಞದೀಕ್ಷೆಯನ್ನು ಅಪೇಕ್ಷಿಸುವುದರಿಂದಲೇ, ರಾಜ್ಯಾಭಿಷೇಕಕ್ಕೆ ಮೊದಲು ಆತನು ಯಜ್ಞವೊಂದನ್ನೂ ಅನುಷ್ಠಿಸಲಿಲ್ಲವೆಂದೂ ತಿಳಿದು ಬರುವುದು. ಆದುದರಿಂದ ಇಲ್ಲಿ ಹೇಳಿದ ಅಗ್ನಿಯು ಗೃಹ್ಯಾಗ್ನಿಯೇ ಆಗಿರಬೇಕೆಂಬುದು ನಿಜವು. ಆದರೆ "ಕಾಡಿಗೆ ಹೊರಡುವಾಗ ಆ ಅಗ್ನಿಯನ್ನಾದರೂ ತಂದುದಾಗಿ ಹೇಳಬೇಕಲ್ಲವೆ? ಹಾಗೆ ಹೇಳದಿರುವುದಕ್ಕೆ ಕಾರಣವೇನೆಂದು ಶಂಕೆಯುಂಟಾಗಬಹುದು. ಅದನ್ನು ಆತ್ಮಸಮಾರೋಪಣಮಾಡಿ ತೆಗೆದುಕೊಂಡು ಬಂದಿರಬಹುದು. ಹಾಗೆ ಆತ್ಮಸಮಾರೋಪಣಮಾಡಿತಂದರೂ, ಅದರಲ್ಲಿ ಎರಡುವೇಳೆಯೂ ಹೋಮಮಾಡಬೇಕು. ಹಾಗೆ ಮಾಡುತಿದ್ದಂತೆ ಎಲ್ಲಿಯೂ ಕಾಣಿಸಲ್ಪಟ್ಟಿಲ್ಲ. ಮತ್ತು ತಮಸಾತೀರದಲ್ಲಿಯೂ, ಗಂಗಾತೀರದಲ್ಲಿಯೂ, ವೃಕ್ಷಮೂಲದಲ್ಲಿಯೂ, ಭರದ್ವಾಜಾಶ್ರಮದಲ್ಲಿಯೂ, ಯಮುನಾತೀರದಲ್ಲಿಯೂ ಸಂಧ್ಯಾವಂದನೆಯನ್ನು ಮಾತ್ರವೇ ನಡೆಸಿದುದಾಗಿಯೂ ಹೇಳಲ್ಪಟ್ಟಿದೆ. ಮತ್ತು ಮೇಲಿನ ಶ್ಲೋಕದಲ್ಲಿ, ತಾಪಸಶಬ್ದದಿಂದಲೂ, ವನಶಬ್ದದಿಂದಲೂ, ಕಾಡಿನಲ್ಲಿ ತಾಪಸರು ಶೀತನಿವಾರಣೆಗಾಗಿಯೂ, ಕಂದಮೂಲಾದಿಗಳನ್ನು ಪಕ್ವಮಾಡುವುದಕ್ಕಾಗಿಯೂ, ಸಂಗ್ರಹಿಸಿಡುವ ಸಾಮಾನ್ಯಾಗ್ನಿಯನ್ನೇ ಹೇಳಿದುದಾಗಿಯೂ ಗ್ರಹಿಸಬಹುದು. ಇದನ್ನನುಸರಿಸಿ "ಆಥಾತಂ" ಎಂಬಪದಕ್ಕೆ "ಸಂಗ್ರಹಿಸುವುದಕ್ಕಾಗಿ" ಎಂದೂ ಅರ್ಥವನ್ನು ಮಾಡಿಡಬಹುದು. ಆದುದರಿಂದ ಈ ಅಗ್ನಿಯು

ಲಾದ ಮಂತ್ರೋಪದೇಶಗಳನ್ನು ಮಾಡುವ ಮಹರ್ಷಿಗಳಂತಿರುವ ಪುರುಷಶ್ರೇಷ್ಠನಾದ ಆರಾಮನನ್ನು ನಾವು ನೋಡುವುದರಲ್ಲಿ ಸಂದೇಹವಿಲ್ಲ. ಈಗಲೇ ಆತನ ದರ್ಶನದಿಂದುಂಟಾದ ಸಂತೋಷಕ್ಕೆ ನಾವು ಭಾಗಿಗಳಾಗಬಹುದು"ಎಂದನು.ಆಮೇಲೆ ಹಾಗೆಯೇ ಮುಂದೆನಡೆದು,ಒಂದು ಮುಹೂರ್ತಕಾಲದವರೆಗೆ ಚಿತ್ರಕೂಟಪರ್ವತಪ್ರಾಂತದಲ್ಲಿ ಸಂಚರಿಸುತ್ತ, ಮಂದಾಕಿ

---

ಪಚನಾದಿಗಳಿಗುಪಯುಕ್ತವಾದ ಅಗ್ನಿಯೆಂದೇ ಹೇಳಬೇಕೇಹೊರತು ಧಾರ್ಯವಾದ ಸ್ಮಾರ್ತಾಯೆಲ್ಲವು." ಎಂದು ಪೂರ್ವಪಕ್ಷವುಂಟಾಗುವುದು. ಇದರ ಸಿದ್ಧಾಂತವೇನೆಂದರೆ:- "ಪ್ರಾಗುದಕ್ಪ್ರವಣಾಂ ವೇದಿಂ ವಿಶಾಲಾಂ ದೀಪ್ತಪಾವಕಾಂ।" ಎಂದು ಮುಂದೆ ಹೇಳಲ್ಪಡುವುದು. ಸಂಸ್ಕರಿಸಲ್ಪಡದ ಸಾಮಾನ್ಯಾಗ್ನಿಗೆ ವೇದಿಸಂಬಂಧವು ಪ್ರಸಿದ್ಧವಲ್ಲ. "ಪ್ರಾಗುದಕ್ಪ್ರವಕ್ಪ್ರವಣಾಂ"ಇತ್ಯಾದಿಲಕ್ಷಣಗಳನ್ನು ವೇದಿಕೆಗೆ ಹೇಳಿರುವುದರಿಂದಲೇ ಅಗ್ನಿಯೂ, ಅಗ್ನಿವೇದಿಕೆಯೂ ಸಂಸ್ಕರಿಸಲ್ಪಟ್ಟುದೆಂದೇ ಸ್ಪಷ್ಟವಾಗುವುದು. ಹಾಗೆ ಸಂಸ್ಕೃತವಾದ ಅಗ್ನಿಯೇ ಆಗಿದ್ದ ಪಕ್ಷದಲ್ಲಿ, ಅದರಲ್ಲಿ ಪ್ರತಿದಿನವೂ ಹೋಮಮಾಡುತಿದ್ದಂತೆ ಹೇಳದಿರುವುದಕ್ಕೆ ಕಾರಣವೇನೆಂದು ಕೇಳಬಹುದು. ಆದಿಕವಿಯಾದ ವಾಲ್ಮೀಕಿಯು ನಿರಂಕುಶನಾದುದರಿಂದ,ಒಂದಾವರ್ತಿ ಹೇಳಿದುದನ್ನು ಪುನಃಪುನಃ ಹೇಳುವವನಲ್ಲ. ಮುಂದೆ ಸುತೀಕ್ಷ್ಣಾಶ್ರಮದಲ್ಲಿ ಈವಿಷಯವನ್ನು ಒಂದಾವರ್ತಿ ಸೂಚಿಸಿರುವನು. "ಅಥ ತೇಽಗ್ನಿಂ ಸುರಾಂಶ್ಚೈವ ವೈದೇಹೀ ರಾಮಲಕ್ಷ್ಮಣೌ। ಕಾಲ್ಯಂವಿಧಿವದಭ್ಯರ್ಚ್ಯ ತಪಸ್ವಿಶರಣೇವನೇ॥ ಉದಯನ್ತಂ ದಿನಕರಂ ದೃಷ್ಟ್ವಾವಿಗತಕಲ್ಮಷಾಃ॥ ಸುತೀಕ್ಷ್ಣಮಭಿಗಮ್ಯ" ಎಂಬುದಾಗಿದೆ- ಇಲ್ಲಿ ಹೋಮಮಾಡಿದುದಾಗಿ ಸ್ಪಷ್ಟವಾಗಿ ಕಾಣಿಸದಿದ್ದರೂ, ಉದಯಕಾಲಕ್ಕೆ ಮೊದಲೇ ಅಗ್ನಿಕಾರ್ಯವನ್ನು ಹೇಳಿರುವುದರಿಂದ, ಅದನ್ನು ಔಪಾಸನಕಾರ್ಯವೆಂದೇ ಸ್ಪಷ್ಟವಾಗಿ ಗ್ರಹಿಸಬಹುದು. ಈ ಅಗ್ನಿಕಾರ್ಯಗಳಲ್ಲಿ ರಾಮನು ಪ್ರಧಾನನಾಗಿಯೂ, ಸೀತೆಯು ಸಂಗಡವೇ ಇದ್ದು ಪ್ರಣಯನಾದಿಗಳಿಂದಲೂ,ಲಕ್ಷ್ಮಣನು ಸಮಿಧಾಹರಣಾದಿಗಳಿಂದಲೂ ಅನ್ವಯಿಸಿರುವುದಾಗಿ ತಿಳಿಯಬೇಕು. ಆದುದರಿಂದ ಹದಿನಾಲ್ಕು ವರ್ಷಗಳ ವನವಾಸಕಾಲದಲ್ಲಿ, ಸೀತಾಪಹರಣದವರೆಗೆ ರಾಮನು ಚಿತ್ರಕೂಟ ಪಂಚವಟೀ ಪ್ರದೇಶಗಳೊಳಗೆಲ್ಲಾ, ಹೆಚ್ಚು ದಿವಸಗಳವರೆಗೆ ನಿಂತಸ್ಥಳಗಳಲ್ಲಿ ಮಾತ್ರ ಸ್ಮಾರ್ತಾಗ್ನಿಯನ್ನು ಹೊರಗಿಟ್ಟು ಉಪಾಸನಾದಿಗಳನ್ನು ನಡೆಸುತಿದ್ದನೆಂದೂ, ಉಳಿದ ಕಾಲಗಳಲ್ಲಿ ಆತ್ಮಸಮಾರೋಪಣವನ್ನೋ, ಅಥವಾ ಸಮಿಧಾರೋಪಣವನ್ನೋ ಮಾಡಿಟ್ಟು, ಹೋಮಕಾಲದಲ್ಲಿ ಆವಾಹನಮಾಡಿ ಪ್ರತಿದಿನವೂ ಔಪಾಸವನ್ನು ನಡೆಸುತಿದ್ದನೆಂದೂ ಗ್ರಾಹ್ಯವು.

ಸೀನದಿಯನ್ನುಸೇರಿ, ಶತ್ರುಘ್ನಾದಿಗಳನ್ನು ನೋಡಿ"ಅಯ್ಯೋ!ಇನ್ನು ನಾನು ಬದುಕಿದ್ದು ಪ್ರಯೋಜನವೇನು? ಜನನಾಥನಾಗಿಯೂ, ಪುರುಷಶ್ರೇಷ್ಠನಾಗಿಯೂ ಇರುವ ರಾಮನು ಹೀಗೆ ಜನಶೂನ್ಯವಾದ ಈ ಕಾಡಿನಲ್ಲಿ ಬರೀನೆಲದಮೇಲೆ ವೀರಾಸನದಲ್ಲಿ ಕುಳಿತಿರಬೇಕಾಯಿತಲ್ಲಾ! ಲೋಕನಾಥನಾಗಿ ಶ್ರೀಮಂತನಾದ ಆರಾಮನು ಈವ್ಯಸನವೆಲ್ಲವನ್ನೂ ನನಗಾಗಿಯೇ ಅನುಭವಿಸುತ್ತಿರುವನಲ್ಲಾ! ಅವನು! ಸಮಸ್ತವಾದ ರಾಜಭೋಗಗಳನ್ನೂ ಬಿಟ್ಟು ಹೀಗೆಕಾಡಿನಲ್ಲಿರಬೇಕಾಯಿತು ಛೀ!ನಾನು ಎಂತಹಲೋಕಾಪವಾದಕ್ಕೆಗುರಿಯಾದೆನು. ಈಗಲಾದರೂ ಆತನನ್ನು ಪ್ರಸನ್ನನನ್ನಾಗಿ ಮಾಡುವುದಕ್ಕೆ ಆ ರಾಮನ ಪಾದಗಳಲ್ಲಿ ಹೋಗಿ ಬಿದ್ದುಬಿಡುವೆನು. ಸೀತಾ ಲಕ್ಷ್ಮಣರು ನನಗಿಂತಲೂ ಚಿಕ್ಕವರಾದರೂ ಚಿಂತೆಯಿಲ್ಲ. ಅವರಿಬ್ಬರ ಕಾಲುಗಳಿಗೂ ಬೀಳುವೆನು" ಎಂದು ನಾನಾವಿಧದಲ್ಲಿ ಪ್ರಲಾಪಿಸುತ್ತ, ಮುಂದೆ ಅತಿಪವಿತ್ರವಾಗಿಯೂ, ಮನೋಹರವಾಗಿಯೂ ಇರುವ ಆಪರ್ಣಶಾಲೆಯನ್ನು ಚೆನ್ನಾಗಿ ಕಂಡನು. ಆ ಪರ್ಣಶಾಲೆಯಾದರೋ, ಮತ್ತಿ, ಅಶ್ವಕರ್ಣಿ ಮೊದಲಾದ ಬಗೆಬಗೆಯ ಮರದೆಲೆಗಳಿಂದ ದಟ್ಟವಾಗಿ ಮುಚ್ಚಲ್ಪಟ್ಟು ವಿಸ್ತಾರವಾದ ಯಜ್ಞವೇದಿಕೆಯಂತೆ ಮೃದುವಾದ ದರ್ಭೆಗಳಿಂದ ಕೂಡಿ ಪ್ರಕಾಶಿಸುತಿತ್ತು. ಇಂದ್ರಧನುಸ್ಸಿಗೆ ಸಮಾನವಾಗಿಯೂ, ಬಹಳ ಭಾರವುಳ್ಳವಾಗಿಯೂ, ಚಿನ್ನದಕಟ್ಟುಗಳುಳ್ಳದಾಗಿಯೂ, ಬಹಳ ದೃಢವಾಗಿಯೂ, ಇರುವ ಅನೇಕಧನುಸ್ಸುಗಳು ಶತ್ರುನಿಗ್ರಹಣಾರ್ಥವಾಗಿ ಅಲ್ಲಲ್ಲಿ ಇರಿಸಲ್ಪಟ್ಟಿದ್ದುವು. ಸೂರ್ಯಕಾಂತಿಯಂತೆ ಜ್ವಲಿಸುತ್ತ ಭಯಂಕರಾಕಾರವುಳ್ಳವುಗಳಾಗಿ, ಉರಿಯುತ್ತಿರುವ ಅಲಗುಳ್ಳವುಗಳಾಗಿದ್ದ ಬಾಣಗಳು ಬತ್ತಳಿಕೆಯಲ್ಲಿ ತುಂಬಿ ಅಲ್ಲಲ್ಲಿ ತೂಗುಹಾಕಲ್ಪಟ್ಟಿದ್ದವು. ಇವುಗಳಿಂದ ಆ ಪ್ರದೇಶವೆಲ್ಲವೂ ಸರ್ಪಗಳಿಂದ ತುಂಬಿದ ಭೋಗವತೀ ಪಟ್ಟಣದಂತೆ ಕಾಣುತಿತ್ತು. ಬೆಳ್ಳಿಯ ಒರೆಗಳಲ್ಲಿಡಲ್ಪಟ್ಟ ಸರ್ವೋತ್ತಮವಾದ ಎರಡು ಕತ್ತಿಗಳು ಜಾಜ್ವಲ್ಯಮಾನವಾಗಿ ಹೊಳೆಯುತ್ತಿದ್ದುವು. ಬಂಗಾರದ ಬೊಟ್ಟುಗಳಿಂದಕೂಡಿ, ವಿಚಿತ್ರಾಕಾರವುಳ್ಳ ಗುರಾಣಿಗಳೆರಡು ಒಂದುಕಡೆಯಲ್ಲಿರಿಸಲ್ಪಟ್ಟಿದ್ದುವು. ಉಡುವಿನ ಚರ್ಮದಿಂದ ಮಾಡಲ್ಪಟ್ಟ, ಮತ್ತು ಸುವರ್ಣದ ಚಿತ್ರಕೆಲಸಗಳಿಂದ ಕೂಡಿದ ಕೈಚೀಲಗಳು ಅಲ್ಲಲ್ಲಿ ತೂಗಾಡುತಿದ್ದುವು.

ಸಾಮಾನ್ಯಮೃಗಗಳಿಗೆ ಸಿಹ್ಮವಿರುವ ಗುಹೆಯು ಹೇಗೋಹಾಗೆ, ಆ ಪ್ರದೇಶವು ಶತ್ರುಗಳಿಗೆ ನೋಡುವಾಗಲೇ ಭಯವನ್ನುಂಟುಮಾಡಿ ದುಷ್ಪ್ರವೇಶವಾಗಿತ್ತು. ಆ ಪರ್ಣಶಾಲೆಯಲ್ಲಿ, ಅತಿಪವಿತ್ರವಾದ ಅಗ್ನಿವೇದಿಕೆಯೊಂದು ಕಾಣಿಸಿತು. ಆ ವೇದಿಕೆಯು ಕ್ರಮಕ್ರಮವಾಗಿ ಈಶಾನ್ಯದಿಕ್ಕಿಗೆ ತಗ್ಗಿ, ಜ್ವಲಿಸುತ್ತಿರುವ ಅಗ್ನಿಯಿಂದ ಕೂಡಿತ್ತು.[1]ಆ ಪರ್ಣಶಾಲೆಯ ನಡುವೆ ರಾಮನು ಜಡೆಯನ್ನು ಧರಿಸಿ ತಪಸ್ಸಿನಲ್ಲಿದ್ದನು. ರಾಮನ ಈ ಅಪೂರ್ವವೇಷವನ್ನು ಹಿಂದೆ ಭರತನು ಯಾವಾಗಲೂ ಕಂಡಿಲ್ಲದಿದ್ದುದರಿಂದ, ಆತನು ರಾಮನೋ ಅಲ್ಲವೋ ಎಂಬುದನ್ನು ನಿರ್ಧರಿಸಿಕೊಳ್ಳುವುದಕ್ಕಾಗಿ ಕ್ಷಣಕಾಲದವರೆಗೆ ಚೆನ್ನಾಗಿ ಗಮನಿಸಿನೋಡಿದನು. ಕೊನೆಗೆ ಆತನೇ ತನ್ನಣ್ಣನೆಂಬುದು ವ್ಯಕ್ತವಾಗಿ ತಿಳಿಯಿತು. ಸಿಹ್ಮದಂತೆ ಹೆಗಲೂ, ಉದ್ದವಾದ ಭುಜಗಳೂ, ತಾವರೆಯ ಸಳುಗಳಂತೆ ನೇತ್ರಗಳೂ, ಇನ್ನೂ ಅನೇಕ ಮಹಾಪುರುಷಲಕ್ಷಣಗಳೂ ಕ್ರಮಕ್ರಮವಾಗಿ ಆತನಲ್ಲಿ ಕಂಡುಬಂದುವು. ಸಮುದ್ರಾಂತವಾದ ಈಸಮಸ್ತಭೂಮಿಗೂ ನಾಯಕನಾಗಿದ್ದರೂ, ಧರ್ಮಾಚರಣಕ್ಕಾಗಿ [2] ಜಿಂಕೆಯ ಚರ್ಮವನ್ನು ಹೊದ್ದುಕೊಂಡು, ನಾರುಮಡಿಯನ್ನುಟ್ಟು ದರ್ಭಾಸನದಮೇ

---

1 ಇಲ್ಲಿ "ನಿರೀಕ್ಷ್ಯಸಮುಹೂರ್ತಂತು ದದರ್ಶಭರತೋಗುರುಂ । ಉಟಜೇರಾಮಮಾಸೀನಂ ಜಟಾಮಂಡಲಧಾರಿಣಂ"ಎಂದು ಮೂಲವು ಇದರ ಕೊನೆಯ ಪಾದದಲ್ಲಿರುವ "ಣ" ಕಾರವು ಗಾಯತ್ರಿಯ ಏಳನೆಯ್ಯೆಅಕ್ಷರವಾದುದರಿಂದ, ಇದುವರೆಗೆ ಆರು ಸಾವಿರ ಗ್ರಂಥಗಳು ಮುಗಿದು ಏಳನೆಯ ಸಹಸ್ರವು ಆರಂಭಿಸಿದುದಾಗಿ ಗ್ರಾಹ್ಯವು.

2 ಇಲ್ಲಿ "ತಂತು ಕೃಷ್ಣಾಜಿನಧರಂ ಚೀರವಲ್ಕಲವಾಸಸಂ । ದದರ್ಶ ರಾಮ ಮಾಸೀನಮಭಿತ: ಪಾವಕೋಪಮಂ ॥ " ಎಂದು ಮೂಲವು. "ತಂತು ಕೃಷ್ಣಾಜಿನಧರಂ" ಎಂಬುದರಿಂದ, ವೊದಲು ಅಮೂಲ್ಯವಾದ ವಸ್ತ್ರ ವಿಶೇಷಗಳನ್ನು ಧರಿಸುತ್ತಿದ್ದ ಆರಾಮನು ಈಗ ಕೃಷ್ಣಾಜಿನವನ್ನೂ ನಾರುಮಡಿಯನ್ನೂ ಧರಿಸಬೇಕಾಯಿತೆಂದು ಭಾವವು. (ರಾಮಂ) ಎಂಬುದರಿಂದ ಹೀಗೆ ವಲ್ಕಲಗಳನ್ನು ಧರಿಸಿದ್ದರೂ ಲೋಕಾಭಿರಾಮವಾದ ದೇಹಸೌಂದರ್ಯವುಳ್ಳವನೆಂದರ್ಥವು. " ಅಭಿತಃ ಪಾವಕೋಪಮಂ " ಎಂದರೆ ತಪೋಜ್ವಾಲೆಯಿಂದ ಅಗ್ನಿಸಮಾನನಾದವನೆಂದರ್ಥವು. ಅಥವಾ "ನೀಲತೋಯದ ಮಧ್ಯಸ್ಥಾವಿದ್ಯುಲ್ಲೇಖೇವ ಭಾಸ್ವರಾ " ಎಂಬಂತೆ ಪ್ರಕಾಶಿಸುವವನು. " ಪಾವಕೋಪಮಂ" ಎಂದರೆ ವಿರೋಧಿಗಳಿಗೆ ತಡೆಯಲಸಾಧ್ಯವಾದ ಪರಾಕ್ರಮವುಳ್ಳವನಾಗಿ, ವೊದ

ಲೆ ಕುಳಿತಿರುವ ಆ ರಾಮನನ್ನು ಚೆನ್ನಾಗಿ ನೋಡಿದನು. ಸೀತಾ ಸಮೇತನಾಗಿ, ಲಕ್ಷ್ಮಣನಿಂದ ಉಪಚರಿಸಲ್ಪಡುತ್ತ, ಶಾಶ್ವತಬ್ರಹ್ಮದಂತೆ ಒಂದಾಸನದಲ್ಲಿ ಕುಳಿತು, ಆತ್ಮಧ್ಯಾನಪರನಾಗಿ, ಅಗ್ನಿಯಂತೆ ಜಾಜ್ವಲ್ಯಮಾನವಾದ ತೇಜಸ್ಸಿನಿಂದ ಒಪ್ಪುತ್ತಿರುವ ಆ ರಾಮನನ್ನು ನೋಡಿದೊಡನೆಯೇ, ಧರ್ಮಾತ್ಮನಾದ ಭರತನಿಗೆ ಮನಸ್ಸಿನಲ್ಲಿ ಮಿತಿಮೀರಿದ ದುಃಖವುಂಟಾಯಿತು. ಆ ದುಃಖದಿಂದಲೇ ರಾಮನಿದ್ದಕಡೆಗೆ ಬಂದನು. ಆಗಲೂ ತನ್ನ ಮನಸ್ಸಿನ ದುಃಖವನ್ನು ತಡೆಯಲಾರದೆ ಪ್ರಲಾಪಿಸುತ್ತ, ಸ್ವಲ್ಪ ಹೊತ್ತಿನ ಮೇಲೆ ಧೈರ್ಯವನ್ನು ತಂದುಕೊಂಡು, ದುಃಖದಿಂದ ತಡವರಿಸುವ ಮಾತುಗಳಿಂದ "ಯಾವನನ್ನು ಸಭೆಗಳಲ್ಲಿ ರಾಜಾಧಿರಾಜರೂ, ಮಂತ್ರಿಗಳೂ ಸೇರಿ ಸುತ್ತಲೂ ಸೇವಿಸುತ್ತಿರಬೇಕೋ, ಅಂತಹ ನಮ್ಮಣ್ಣನಾದ ರಾಮನು ಈಗ ಕಾಡುಮೃಗಗಳಿಂದ ಸೇವಿಸಲ್ಪಡುವಹಾಗಾಯಿತೆ ? ಅನೇಕ ಸಹಸ್ರ ವರಹಗಳ ಬೆಲೆಯುಳ್ಳ ಸರ್ವೋತ್ತಮವಾದ ವಸ್ತ್ರಗಳನ್ನುಡುವುದಕ್ಕೆ ಯಾವನು ಅರ್ಹನೋ,ಆ ನಮ್ಮಣ್ಣನು ಈಗ ಜಿಂಕೆಯಚರ್ಮವನ್ನು ಧರಿಸಿ ಧರ್ಮಾಚರಣೆಯಲ್ಲಿರುವಂತಾಯಿತೆ? ವಿಚಿತ್ರವಿಚಿತ್ರಗಳಾದ ಅನೇಕ ಪುಷ್ಪಮಾಲಿಕೆಗಳನ್ನು ಮುಡಿಯುತಿದ್ದ ಈತನು ಈಗ ಈ ಜಟಾಭಾರವನ್ನು ಹೇಗೆ ಧರಿಸಿರುವನು ? ಶಾಸ್ತ್ರೋಕ್ತವಾಗಿ ಅನೇಕಯಜ್ಞಗಳನ್ನು ಮಾಡಿ ಧರ್ಮಗಳನ್ನು ಗಳಿಸಿಡಬೇಕಾದ ಈ ರಾಮನು, ಈಗ ವಾನಪ್ರಸ್ಥರಂತೆ ಶರೀರಕ್ಲೇಶದಿಂದ ಧರ್ಮಸಂಪಾದನೆಯನ್ನು ಮಾಡಬೇಕಾಯಿತೆ?ಯಾವನ ದೇಹವು ಮೊದಲು ಉತ್ತಮವಾದ ಚಂದನಗಳಿಂದ ಅಲಂಕರಿಸಲ್ಪಡುತಿತ್ತೋ, ಆತನ ದೇಹವು ಹೀಗೆ ಕೊಳೆಯಿಂದ ಕೂಡಿರುವುದಲ್ಲಾ ! ಸುಖಾರ್ಹನಾದ ರಾಮನು ನನ್ನಿಂದಲೇ ಇಷ್ಟುದುಃಖವನ್ನು ಅನುಭವಿಸಬೇಕಾಯಿತಲ್ಲವೆ ? ಮಹಾಕ್ರೂರನಾಗಿ ಲೋಕಾಪವಾದಕ್ಕೆ ಗುರಿಯಾದ ನನ್ನ ಈ ಜನ್ಮವನ್ನೇಸು

ಲು ಅಯೋಧ್ಯೆಯಲ್ಲಿಯೇ ಪ್ರಕಾಶಿಸುತ್ತಿದ್ದವನಾದರೂ, ಈಗಿನ ಸ್ಥಿತಿಯು ಮೊದಲಿಗಿಂತಲೂ ಅತಿಶಯವಾಯಿತೆಂದು ಭಾವವು. ಹೇಗೆಂದರೆ. ಆ ಅಯೋಧ್ಯೆಯಲ್ಲಿ ಬಹಳಸಲಿಗೆಯಿಂದ ರಾಮನ ಸಮೀಪದಲ್ಲಿಯೇ ವರ್ತಿಸುತಿದ್ದ ತಮ್ಮನಾದ ಭರತನಿಗೂ ಕೂಡ ಇಲ್ಲಿ ಸಮೀಪಕ್ಕೆಹೋಗಲು ಅಸಾಧ್ಯವಾಯಿತೆಂದೂ, ಅದರಿಂದಲೇ ಭರತನು ಮೊದಲು ಕ್ಷಣಕಾಲದವರೆಗೆ ನಿದಾನಿಸಿ ನೋಡಿ ಆ ಮೇಲೆ ಮುಂದೆ ಬಂದನೆಂದೂ ಹೇಳಲ್ಪಟ್ಟಿದೆ.



842. ಭರತಶತ್ರುಘ್ನರು ರಾಮನ ಪರ್ಣಶಾಲೆಗೆ ಬಂದು ಸೀತಾರಾಮರನ್ನು ಕಂಡು ನಮಸ್ಕರಿಸಿದುದು.

ಡಬೇಕು." ಎಂದು ಹೇಳುತ್ತ ಕಣ್ಣೀರನ್ನು ಸುರಿಸಿ ಧೈನ್ಯದಿಂದ ಪ್ರಲಾಪಿಸು ತಿದ್ದನು. ಹಾಗೆಯೇ ಮುಂದೆಹೋಗಿ ರಾಮನ ಪಾದಗಳಿಗೆ ಬೀಳಬೇಕೆಂಬ ಉದ್ದೇಶದಿಂದ ಆತನ ಹತ್ತಿರಕ್ಕೆ ಬಂದು,ಹಾಗೆಯೇದುಃಖದಿಂದ ಮೈಮರೆತನು. ಬಹಳವಾಗಿ ಕಣ್ಣೀರುತುಂಬಿಕೊಂಡಿರುವುದರಿಂದ ಕಣ್ಣುಗಳೂಕಾಣದಿರಲು, ಆ ರಾಮನ ಪಾದಗಳ ಮೇಲೆ ಬೀಳುವುದಕ್ಕೆ ಹೋಗಿ ಹಾಗೆಯೇ ನೆಲದ ಮೇಲೆಬಿದ್ದುಬಿಟ್ಟನು. ಮಹಾಬಲಾಢ್ಯನಾದ ಆ ಭರತನು ದುಃಖದಿಂದ ಬೇಯುತ್ತ, ಬಹುದೀನಸ್ವರದಿಂದ ಒಂದೇ ಆವರ್ತಿ "ಅಣ್ಣಾ!"ಎಂದುಕೂಗಿ ಬೇರೊಂದುಮಾತನ್ನೂ ಆಡಲಾರದೆ ಮೈಮರೆತಿದ್ದನು. ಹಾಗೆಯೇ ಶತ್ರುಘ್ನನೂ ಅಳುತ್ತ ಬಂದು ರಾಮನ ಎರಡುಕಾಲುಗಳನ್ನೂ ಹಿಡಿದು ನಮಸ್ಕರಿಸಿದನು. ಹೀಗೆ ದುಃಖಿತರಾಗಿ ಬಂದ ಭರತಶತ್ರುಘ್ನರಿಬ್ಬರನ್ನೂ ನೋಡಿ ರಾಮನು, ತಾನೂ ದುಃಖದಿಂದ ಕಣ್ಣೀರುಬಿಡುತ್ತ, ಅವರಿಬ್ಬರನ್ನೂ ಕ್ರಮವಾಗಿ ಆಲಿಂಗಿಸಿಕೊಂಡನು. ಆಗ ಆ ಅರಣ್ಯದಲ್ಲಿ ರಾಮಲಕ್ಷ್ಮಣರಿಬ್ಬರೂ ಗುಹಸುಮಂತ್ರರೊಡನೆ ಕೂಡಿ ಮಾತಾಡುತ್ತಿರಲು, ಸೂರ್ಯಚಂದ್ರಗ್ರಹಗಳೆರಡೂ ಆಕಾಶದಲ್ಲಿ ಶುಕ್ರಬೃಹಸ್ಪತಿಗಳೊಡನೆ ಸೇರಿದಂತೆ ಪ್ರಕಾಶಿಸಿದರು. ಹೀಗೆ ಸುಖಾತ್ಮರಾದ ಆರಾಜಕುಮಾರರೆಲ್ಲರೂ ಆನೆಯ ಸಲಗಗಳಂತೆ ಒಂದಾಗಿಸೇರಿ, ಆ ಮಹಾರಣ್ಯದಲ್ಲಿ ಪರಸ್ಪರದುಃಖಸಲ್ಲಾಪಗಳನ್ನು ಮಾಡುತ್ತಿರಲು, ಅದನ್ನುನೋಡಿ ಕಾಡಿನಲ್ಲಿದ್ದ ಋಷಿಗಳೂ ಕೂಡ ಉತ್ಸಾಹವನ್ನುಬಿಟ್ಟು ದುಃಖದಿಂದ ಕಣ್ಣೀರನ್ನು ಸುರಿಸುತಿದ್ದರು. ಇಲ್ಲಿಗೆ ತೊಂಬತ್ತೊಂಬತ್ತನೆಯ ಸರ್ಗವು.

---

{ ರಾಮನು ಭರತನನ್ನು ಕುಶಲಪ್ರಶ್ನೆಮಾಡಿ ತನ್ಮೂಲಕವಾಗಿ ಆತನಿಗೆ ರಾಜನೀತಿಗಳನ್ನುಪದೇಶಿಸಿದುದು. }

ಆಮೇಲೆ ರಾಮನಾದರೋ,ತನ್ನಂತೆಯೇ[1] ಜಡೆಯನ್ನುಧರಿಸಿ ನಾರುಬಟ್ಟೆಯನ್ನುಟ್ಟು,ಕೈಜೋಡಿಸಿ ನೆಲದಮೇಲೆ ಬಿದ್ದಿರುವ ಭರತನನ್ನುನೋಡಿದನು

1 "ಇಲ್ಲಿ" "ಜಟಿಲಂ ಚೀರವಸನಂಪ್ರಾಂಜಲಿಂ ಪತಿತಂಭುವಿ । ದದರ್ಶರಾಮೋ ದುರ್ದರ್ಶಂ ಯುಗಾಂತೇ ಭಾಸ್ಕರಂಯಥಾ" ಎಂದು ಮೂಲವು. ಇಲ್ಲಿ "ಜಟಿಲಂ" ಮುಂತಾದ ವಿಶೇಷಣಗಳಿಂದ, ಭರತನ ಪೂರ್ವಸ್ಥಿತಿಗೂ ಈಗಿನ ಸ್ಥಿತಿಗೂ ತಾರತ

ಆಗಲೂ,ಆತನು ಪ್ರಳಯಕಾಲದ ಸೂರ್ಯನಂತೆ ನೋಡುವುದಕ್ಕೆ ಅಸಾಧ್ಯನಾ

ಮ್ಯವು ಕಾಣಿಸಲ್ಪಟ್ಟಿದೆ. ಮೊದಲು ರಾಜನಾದ ದಶರಥನು ಉತ್ತಮವಾದ ಒಂದು ಪು ಷ್ಪಮಾಲಿಕೆಯನ್ನು ಕಂಡಾಗ, ''ಇದು ಭರತನಿಗಿರಲಿ"ಎಂದು ಯಾವನ ತಲೆಗೆ ತಂದು ಮುಡಿಸುತಿದ್ದನೋ,ಆತನು ಉತ್ತಮವಾದ ಒಂದು ಪೀತಾಂಬರವನ್ನು ಕಂಡಾಗ''ಇದು ಭರತನಿಗೇ ತಕ್ಕುದು"ಎಂದು ಅದನ್ನು ತಂದು ಯಾವನ ಮೈಯ್ಯನ್ನು ಅಲಂಕರಿಸುತಿದ್ದನೋ, ಸುಕುಮಾರ ದೇಹವುಳ್ಳ ಯಾವನನ್ನು ತಂದೆಯಾದ ದಶರಥನು ತೊಡೆಯಮೇಲೆ ಕುಳ್ಳಿರಿಸಿಕೊಂಡು, ಭೋಗ್ಯವಾದ ವಸ್ತುಗಳನ್ನು ತಂದು ನಾನಾವಿಧದಲ್ಲಿ ಪ್ರಾರ್ಥಿಸಿ ಕೊಡುತ್ತಿದ್ದನೋ, ಅಂತಹಭರತನು ಈಗ ಜಡೆಗಳನ್ನು ಧರಿಸಿ, ನಾರುಮಡಿಯನ್ನುಟ್ಟು, ನೆಲದಮೇಲೆ ಹೊರಳಿ ಇತರರನ್ನು ಬೇಡುವಂತಾಯಿತೆಂದುಭಾವವು. ಈ ಕಾರಣದಿಂದಲೇ ''ದುರ್ದರ್ಶಂ" ಕಣ್ಣಿನಿಂದ ನೋಡಿ ಸಹಿಸುವುದಕ್ಕೂ ಅಸಾಧ್ಯವಾದ ದುರ್ದಶೆಯುಳ್ಳವನೆಂದರ್ಥವು. ಅಥವಾ ಕಷ್ಟಪಟ್ಟು ನೋಡಿದರೂ ಗುರುತು ತಿಳಿಯದ ಹಾಗಿರುವವನೆಂದೂ ಭಾವವು. ''ಯುಗಾಂತೇ ಭಾಸ್ಕರಂ ಯಥಾ"ಪ್ರಳಯ ಕಾಲದ ಸೂರ್ಯನಂತೆ ನೋಡಿದವರೆಲ್ಲರಿಗೂ ಮಿತಿಮೀರಿದ ಸಂತಾಪವನ್ನುಂಟುಮಾಡುವವನು. ಅಥವಾ ಯುಗಾಂತದಲ್ಲಿ ಶಕ್ತಿಗುಂದಿ ನೆಲದಲ್ಲಿ ಬಿದ್ದಿರುವ ಸೂರ್ಯಬಿಂಬದಂತೆ ಬಹುದೀನದಶೆಯನ್ನು ಹೊಂದಿದವನೆಂದೂ ಹೇಳಬಹುದು. ಭರತನು. ಮೊದಲು ಗಂಗಾತೀರದಲ್ಲಿಯೇ ''ಅದ್ಯಪ್ರಭೃತಿ ಭೂಮೌತು ಶಯಿಷ್ಯೇಹಂ ತೃಣೇಷುವಾ । ಫಲಮೂಲಾಶನೋ ನಿತ್ಯಂ ಜಟಾಚೀರಾಣಿ ಧಾರಯರ್ನ ॥ " ಎಂಬುದಾಗಿ ಆಗಲೇ ಜಟಾವಲ್ಕಲಗಳನ್ನು ಧರಿಸುವುದಾಗಿ ಪ್ರತಿಜ್ಞೆಮಾಡಿರುವನು. ಅದರಿಂದಾಚೆಗೆ ಭರದ್ವಾಜದರ್ಶನ ಕಾಲದಲ್ಲಿ ''ವಸಾನೋ ವಾಸಸೀಕ್ಷೌಮೇ" ಎಂದು ದುಕೂಲವನ್ನುಟ್ಟಿದ್ದುದಾಗಿ ಹೇಳಲ್ಪಟ್ಟಿದೆ. ಈಗ ಪುನಃ ''ಜಟಿಲಂ ಚೀರವಸನಂ" ಎಂಬುದಾಗಿ ಇದಕ್ಕೆ ಮೊದಲೇ ಜಟಾವಲ್ಕಲಗಳನ್ನು ಧರಿಸಿ ಬಂದುದಾಗಿ ತಿಳಿಸಲ್ಪಟ್ಟಿದೆ. ಹೀಗೆ ಪರಸ್ಪರ ವಿರೋಧವಿರುವುದಕ್ಕೆ ಕಾರಣವೇನೆಂದು ಶಂಕೆಯುಂಟಾಗಬಹುದು. ಭರತನು ಜಟಾವಲ್ಕಲಗಳನ್ನು ಧರಿಸುವುದಾಗಿ ಗುಹನ ಪಟ್ಟಣದಲ್ಲಿ ಮೊದಲು ಪ್ರತಿಜ್ಞೆಮಾಡಿದುದು ಮಾತ್ರವೇ ಹೊರತು, ಆಗಲೇ ಅವುಗಳನ್ನು ಧರಿಸಲಿಲ್ಲ.ಮರುದಿನದಲ್ಲಿ ಭರದ್ವಾಜನನ್ನು ನೋಡಿದಮೇಲೆ ತನ್ನ ಪ್ರತಿಜ್ಞೆಯನ್ನು ಸಾಧಿಸುವುದಾಗಿ ನಿಶ್ಚಯಿಸಿಕೊಂಡು ಬಂದನು. ಅಷ್ಟರಲ್ಲಿ ಭರದ್ವಾಜನು ಆತಿಥ್ಯಕ್ಕೆ ನಿಯಮಿಸಿದುದರಿಂದ, ಆಗಲೂ ಅದನ್ನು ನಡೆಸುವುದಕ್ಕೆ ಅವಕಾಶವಿಲ್ಲದೆ ಹೋಯಿತು. ಕೊನೆಗೆ ಆ ಆಶ್ರಮವನ್ನು ಬಿಟ್ಟು ಚಿತ್ರಕೂಟಕ್ಕೆ ಹೊರಟಾಗಲೇ ಅವುಗಳನ್ನು ಧರಿಸಿ ತಾಪಸವೇಷದಿಂದ ಹೊರಟನೆಂದು ಗ್ರಹಿಸಬೇಕು. ಈ ವಿಷಯವು ಮೊದಲೇ ವ್ಯಾಖ್ಯಾನದಲ್ಲಿ ಕಾಣಿಸಲ್ಪಟ್ಟಿದೆ.

ಗಿ ಪ್ರಕಾಶಿಸುತಿದ್ದನು. ಭರತನ ಮುಖವು ದುಃಖದಿಂದ ಬಣ್ಣಗುಂದಿ ದೇಹ ವೆಲ್ಲವೂ ಕೃಶವಾಗಿದ್ದುದರಿಂದ,ನೋಡಿದಾಗಲೇ ಆತನು ತನ್ನ ತಮ್ಮನೆಂದು ತಿಳಿಯುವುದು ರಾಮನಿಗೆ ಅಸಾಧ್ಯವಾಯಿತು. ಆಮೇಲೆ ಹೇಗೋ ಗುರುತು ಹಿಡಿದು, ಸಮೀಪಕ್ಕೆ ಬಂದು ಆತನನ್ನು ತೋಳುಗಳಿಂದಪ್ಪಿ, ಆತನ ತಲೆಯನ್ನು ಆಘ್ರಾಣಿಸಿ, ಬಾರಿಬಾರಿಗೂ ಅಪ್ಪಿಕೊಂಡು ಆತನನ್ನು ಕರೆ ದು ತೊಡೆಯಮೇಲೆಕುಳ್ಳಿರಿಸಿ ಅತ್ಯಾದರದಿಂದ, ಅವನನ್ನು ನೋಡಿ “ವತ್ಸ ಭರತನೆ ಇದೇನು? ನೀನೇಕೆ ಕಾಡಿಗೆ ಬಂದೆ?ತಂದೆಯನ್ನೆಲ್ಲಿಬಿಟ್ಟುಬಂದೆ?ಆತನು ಬದುಕಿರುವಾಗ ವೃದ್ಧನಾದ ಆತನನ್ನು ಬಿಟ್ಟುಬರಬಹುದೆ ? ಆಹಾ ! ನಿನ್ನನ್ನುನೋಡಿ ಬಹುಕಾಲವಾಗಿತ್ತು. ಇಷ್ಟುಕಾಲದಮೇಲೆ ಇಷ್ಟುದೂರದ ಲ್ಲಿರುವ ಈ ಘೋರಾರಣ್ಯಕ್ಕೆ ಕೇಕಯನಗರದಿಂದ ನೀನು ಹೊರಟುಬಂ ದುದು ಬಹಳ ಅಸಾಧ್ಯಕಾರ್ಯವಲ್ಲವೆ? ಹೇಗಾದರೂ ಹೋಗಲಿ!ಬಹುಕಾಲಕ್ಕೆ ನಿನ್ನನ್ನು ನೋಡುವಹಾಗಾಯಿತು! ನನಗೆ ಬಹಳಸಂತೋಷವುಂಟಾಯಿತು. ನೀನು ಹೀಗೆ ಆಕಸ್ಮಿಕವಾಗಿ ಕಾಡಿಗೆ ಬರುವುದಕ್ಕೆಕಾರಣವೇನು?ಆಹಾ! ನಿನ್ನ ಮುಖದ ಬಣ್ಣವೇ ಮಾರಿಹೋಗಿರುವುದರಿಂದ ತಟ್ಟನೆ ಗುರುತು ಹಿಡಿ ಯುವುದೇ ಕಷ್ಟವಾಯಿತು. ವತ್ಸನೆ ! ರಾಜನು ಬದುಕಿದ್ದಪಕ್ಷದಲ್ಲಿ ನೀನು ಇಲ್ಲಿಗೆ ಹೇಗೆ ಬರುತಿದ್ದೆ ? [1] ಆತನು ಜೀವಿಸಿರುವುದದಲ್ಲಿ ಸಂದೇ ಹವೇನೂ ಇಲ್ಲವಷ್ಟೆ? ನೀನು ಬರುವಾಗ ಆತನು ಸಂಕಟಪಡದಿದ್ದನೆ? ಈಗ ಅಲ್ಲಿ ಬೇರೆ ಅತ್ಯಾಹಿತವೇನೂ ನಡೆಯಲಿಲ್ಲವಷ್ಟೆ ? ಅಥವಾ ನೀನು ಇನ್ನೂ ಚಿಕ್ಕವಯಸ್ಸಿನವನಾದುದರಿಂದ ರಾಜಕಾರ್ಯಗಳನ್ನು ನಡೆಸುವುದರಲ್ಲಿ ನಿನಗೆ ತಕ್ಕಷ್ಟುಶಕ್ತಿಯಿಲ್ಲವೆಂಬುದನ್ನು ತಿಳಿದು,ಸಮಯನಿರೀಕ್ಷಣೆಯಲ್ಲಿದ್ದ ಶತ್ರುಗ

---

1 ಇಲ್ಲಿ “ಈಗ ಆತನು ಬದುಕಿರುವನಷ್ಟೆ ?” ಎಂದು ರಾಮನು ಆಕ್ಷೇಪಿಸಿರುವು ದರಿಂದ, “ತಂದೆಯು ಬದುಕಿರುವಾಗ ಪಿತೃಶುಶ್ರೂಷೆಯನ್ನು ಮಾಡದೆ ಬಿಟ್ಟುಬರ ಬಾರದೆಂದೂ, ನಿನ್ನನ್ನು ಅಗಲಿ ಆತನು ಬದುಕಿರುವುದೇ ಕಷ್ಟವಾಗುವುದೆಂದೂ ರಾ ಮನ ಅಭಿಪ್ರಾಯವು. ಮತ್ತು “ತಂದೆಯು ಈಗ ಎಲ್ಲಿಗೆ ಹೋಗಿರುವನು ?” ಎಂದು ಕೇಳಿದಾಗಲೇ ಭರತನು ಆಗಲೇ ನಿಜಸ್ಥಿತಿಯನ್ನು ತಿಳಿಸಬೇಕಾಗಿದ್ದರೂ, ರಾಮನು ಬೇರೆ ಪ್ರಶ್ನೆಯನ್ನೆತ್ತಿದುದರಿಂದ ಭರತನು ಆಗಲೇ ಅದಕ್ಕೆ ಉತ್ತರವನ್ನು ಹೇಳುವುದ ಕ್ಕವಕಾಶವಿಲ್ಲದೆ ಹೋಯಿತೆಂದು ಗ್ರಹಿಸಬೇಕು.

ಳಾರಾದರೂ ನಿನ್ನ ರಾಜ್ಯವನ್ನು ಕಿತ್ತುಕೊಂಡು ನಿನ್ನನ್ನು ಇತ್ತಲಾಗಿ ಕಾಡಿಗೆ ಓಡಿಸಿಬಿಡಲಿಲ್ಲವಷ್ಟೆ? ಅಪ್ಪಮಗು! ಸತ್ಯಪರಾಕ್ರಮನಾದ ನಮ್ಮ ತಂದೆಗೆ ಶುಶ್ರೂಷೆಯನ್ನು ಮಾಡುತ್ತಿರುವೆಯಾ? ನಮ್ಮ ರಾಜನಾದರೋ ಬಹಳಸತ್ಯಸಂಧನು. ಅನೇಕರಾಜಸೂಯಗಳನ್ನೂ, ಅಶ್ವಮೇಧಗಳನ್ನೂ ನಡೆಸಿದವನು. ಧರ್ಮದಲ್ಲಿಯೇ ದೃಢಸಂಕಲ್ಪವುಳ್ಳವನು. ಆ ನಮ್ಮ ತಂದೆಯು ಕ್ಷೇಮದಿಂದಿರುವನೇ? * ವಿದ್ವಾಂಸನಾಗಿಯೂ, ಬ್ರಾಹ್ಮಣೋತ್ತಮನಾಗಿಯೂ, ಧರ್ಮನಿಷ್ಠನಾಗಿಯೂ, ಮಹಾತೇಜಸ್ವಿಯಾಗಿಯೂ, ಇರುವ ನಮ್ಮ ಇಕ್ಷ್ವಾಕುವಂಶದ ಕುಲಪುರೋಹಿತನಾದ ವಸಿಷ್ಠನನ್ನು ಮೊದಲಿನಂತೆಯೇ ನೀನು ಗೌರವಿಸಿ ಪೂಜಿಸುತ್ತಿರುವೆಯಷ್ಟೆ? ನಾನು ಬರುವಾಗ ಸಂಕಟವನ್ನು ತಡೆಯಲಾರದೆ ಗೋಳಿಡುತಿದ್ದ ಆ ಕೌಸಲ್ಯೆಯು ಕ್ಷೇಮದಿಂದಿರುವಳೆ? ಸುಪುತ್ರವತಿಯಾದ ಸುಮಿತ್ರೆಗೆ ಕ್ಷೇಮವೆ? ಪೂಜ್ಯಳಾದ ನಿನ್ನ ತಾಯಿಯು ಸುಖದಿಂದಿರುವಳೆ? ಅವಳಿಗೆ ಮುಖ್ಯವಾಗಿ ರಾಜ್ಯದಮೇಲೆ ಬಹಳ ಆಸೆಯಿತ್ತು ? ಈಗ ಆ ಆಸೆಯನ್ನು ತೀರಿಸಿಕೊಂಡು ಸುಖದಿಂದ ರಾಜಭೋಗಗಳನ್ನನುಭವಿಸುತ್ತ ಸಂತೋಷದಿಂದಿರುವಳೆ? ¹ ವಿನಯ ಸಂಪನ್ನನಾಗಿಯೂ, ಸತ್ಕುಲಪ್ರಸೂತನಾಗಿಯೂ, ಅನೇಕಶಾಸ್ತ್ರಾರ್ಥಗಳನ್ನು ಕೇಳಿ ತಿಳಿದವನಾಗಿಯೂ, ಅಸೂಯಾರಹಿತನಾಗಿಯೂ, ವಸಿಷ್ಠರಿಂದುಪದೇಶಿಸಲ್ಪಟ್ಟ ಶಾಸ್ತ್ರಾರ್ಥಗಳನ್ನು ಚೆನ್ನಾಗಿ ವಿಮರ್ಶಿಸತಕ್ಕವನಾಗಿಯೂ ಇರುವ ಪುರೋಹಿತನಾದ ಸುಯಜ್ಞನನ್ನು ನೀನು ತಕ್ಕಸತ್ಕಾರಗಳಿಂದ ಪೂಜಿಸುತ್ತಿರುವೆಯಾ? ಶಾಸ್ತ್ರಜ್ಞನಾಗಿಯೂ, ಬುದ್ಧಿವಂತನಾಗಿಯೂ, ಋಜುಸ್ವಭಾವವುಳ್ಳವನಾಗಿಯೂ ಇರುವ ಆ ಪುರೋಹಿತನು ಆಯಾಕಾಲಕ್ಕೆ ನಡೆಸಬೇಕಾದ ಹೋಮಕಾರ್ಯಗಳನ್ನು ನಿನಗೆ ಲೋಪವಿಲ್ಲದೆ ತಿಳಿಸಿ ನಡೆಸುತ್ತಿರುವನೆ? ವತ್ಸನೆ! ನೀನು ದೇವತೆಗಳನ್ನೂ, ತಂದೆತಾಯಿಗಳನ್ನೂ ಗುರುಜನಗಳನ್ನೂ, ತಂದೆಗೆ ಸಮಾನರಾದ ಬಂಧುಗಳನ್ನೂ, ಹಿರಿಯರನ್ನೂ, ವೈಶ್ಯರನ್ನೂ, ಬ್ರಾ

* ಇದುಮೊದಲುಗೊಂಡು ಕುಶಲ ಪ್ರಶ್ನದ ವ್ಯಾಜದಿಂದ ರಾಮನು ಭರತನಿಗೆ ರಾಜನೀತಿಗಳನ್ನು ಬೋಧಿಸುವನು.

1 ಇದರಿಂದ ರಾಜರು ಪುರೋಹಿತರನು ಯಾವಾಗಲೂ ಪೂಜಿಸಬೇಕೆಂಬನೀತಿಯು ಬೋಧಿತವಾಗುವುದು.

ಹ್ಮಣರನ್ನೂ ಚೆನ್ನಾಗಿ ಸತ್ಕರಿಸುತ್ತಿರುವೆಯಾ? ಮತ್ತು ನೀನು ಶಸ್ತ್ರಾಸ್ತ್ರಗಳಲ್ಲಿ ಪಾರಂಗತನಾಗಿಯೂ, ರಾಜನೀತಿಗಳಲ್ಲಿ ನಿಪುಣನಾಗಿಯೂ ನಮಗೆ ಧನುರ್ವಿದ್ಯಾಗುರುವಾಗಿಯೂ ಇರುವ ಸುಧನ್ವನನ್ನು ಚೆನ್ನಾಗಿ ಮನ್ನಿಸುತ್ತಿರುವೆಯಾ? ನಿನಗೆ ಸಮಾನವಯಸ್ಕರಾಗಿಯೂ, ವೀರರಾಗಿಯೂ, ವಿದ್ಯಾವಂತರಾಗಿಯೂ, ಜಿತೇಂದ್ರಿಯರಾಗಿಯೂ, ಸತ್ಕುಲದಲ್ಲಿ ಹುಟ್ಟಿದವರಾಗಿಯೂ, ಇತರರಮುಖವನ್ನು ನೋಡಿದ ಮಾತ್ರದಿಂದಲೇ ಅವರವರ ಮನೋಭಿಪ್ರಾಯಗಳನ್ನು ತಿಳಿದುಕೊಳ್ಳುವ ಇಂಗಿತಜ್ಞಾನವುಳ್ಳವರಾಗಿಯೂ, ಪ್ರಸಿದ್ಧಿ ಹೊಂದಿದವರನ್ನು ಮಂತ್ರಿತ್ವದಲ್ಲಿರಿಸಿರುವೆಯಾ? ಎಲೈ ರಘುಕುಲೋತ್ತಮನೆ! ರಾಜಪದವಿಯಲ್ಲಿರುವವರಿಗೆ ಮಂತ್ರಾಲೋಚನೆಯೆಂಬುದೇ ಜಯಕ್ಕೆ ಮೂಲಾಧಾರವಾದುದು. ಅಂತಹ ಮಂತ್ರಾಲೋಚನೆಗಳನ್ನು, ಶಾಸ್ತ್ರಜ್ಞರಾಗಿಯೂ, ಆಲೋಚಿಸಿದ ವಿಷಯಗಳನ್ನು ಧಾರಣಮಾಡತಕ್ಕವರಾಗಿಯೂ ಇರುವ ಮಂತ್ರಿಗಳೊಡನೆಯೇ ಸೇರಿ ನಡೆಸಬೇಕೆಂಬುದನ್ನು ತಿಳಿದಿರುವೆಯಾ? [1]ಯಾವಾಗಲೂ ನಿದ್ರೆಗೊಳಗಾಗಿರದೆ ಯುಕ್ತಕಾಲಗಳಲ್ಲಿ ಎಚ್ಚರಗೊಳ್ಳುವೆಯಾ? ಅರ್ಧರಾತ್ರಿಯಲ್ಲಿ ಏಕಾಂತವಾಗಿ ಆಲೋಚಿಸಬೇಕಾದ ರಹಸ್ಯಾರ್ಥಗಳನ್ನು ಆ ಕಾಲಗಳಲ್ಲಿಯೇ ಆಲೋಚಿಸಬೇಕೆಂಬ ಉಪಾಯವನ್ನು ಬಲ್ಲೆಯಾ? [2]ಆಲೋಚಿಸಬೇಕಾದ ವಿಷಯಗಳನ್ನು ತಾನೊಬ್ಬನೇ ಕುಳಿತು ಆಲೋಚಿಸಬಾರದೆಂಬುದನ್ನೂ, ಅಥವಾ ಕಂಡಕಂಡವರನ್ನೆಲ್ಲಾ ಕೂಗಿ ಕ

---

1 ಇದರಿಂದ ರಾಜನಾದವನು ಕೇವಲ ನಿದ್ರಾಪರವಶನಾಗಿರ ಕೂಡದೆಂದೂ, ಅರ್ಧರಾತ್ರಿಗಳಲ್ಲಿಯೂ ರಹಸ್ಯವಾಗಿ ರಾಜಕಾರ್ಯಗಳ ಬಲಾಬಲವನ್ನು ಆಲೋಚಿಸಬೇಕೆಂದೂ ಸೂಚಿತವಾಗುವುದು.

2 ಇದರಿಂದ ರಾಜನು ತಾನೊಬ್ಬನೇ ಕುಳಿತು ಕಾರ್ಯಾಲೋಚನೆಯನ್ನು ಮಾಡಬಾರದೆಂದೂ, ಅದರಿಂದ ಒಬ್ಬರಲ್ಲಿ ಪಕ್ಷಪಾತಬುದ್ಧಿಯು ಹುಟ್ಟಿ ಅವರಗುಣಾಗುಣಗಳನ್ನು ಸರಿಯಾಗಿ ಗ್ರಹಿಸುವುದಕ್ಕವಕಾಶವಿಲ್ಲದೆ ಹೋಗಿ, ಕಾರ್ಯವೇ ಕೆಡಬಹುದೆಂದೂ, ಬಹುಜನಗಳೊಡನೆ ಆಲೋಚಿಸಿದ ಪಕ್ಷದಲ್ಲಿಯೂ ಐಕಮತ್ಯವು ತಪ್ಪಿ, ರಹಸ್ಯವು ಹೊರಬೀಳಬಹುದಾದುದರಿಂದ ಅನೇಕರೊಡನೆಯೂ ಆಲೋಚಿಸ ಬಾರದೆಂದೂ, ಆಲೋಚಿಸಿದ ವಿಷಯವನ್ನು ಫಲಪರಿಣಾಮದವರೆಗೂ ಹೊರಬೀಳಿಸಬಾರದೆಂದೂ ಸೂಚಿತವಾಗುವುದು.

ರೆದು ಅನೇಕಜನಗಳನ್ನು ಸೇರಿಸಿಕೊಂಡು ಆಲೋಚಿಸಬಾರದೆಂಬುದನ್ನೂ ಚೆನ್ನಾಗಿ ತಿಳಿದು ಹಾಗೆಯೇ ನಡೆಸುತ್ತಿರುವೆಯಷ್ಟೆ? ನೀನು ಆಲೋಚಿಸಿದ ಮಂತ್ರವು ಹೊರಬಿದ್ದು ನಿನ್ನ ರಾಷ್ಟ್ರದೊಳಗೆಲ್ಲಾ ಹರಡದಂತೆ ಎಚ್ಚರಿಕೆಯಿಂದ ನೋಡುತ್ತಿರುವೆಯಷ್ಟೆ? ವತ್ಸನೆ! [1]ಸ್ವಲ್ಪಪ್ರಯತ್ನಗಳಿಂದಲೇ ಸಿದ್ಧಿಸತಕ್ಕದಾಗಿಯೂ, ಮಹಾಫಲವನ್ನು ಕೊಡತಕ್ಕದಾಗಿಯೂ ಇರುವ ಕಾರ್ಯವನ್ನು ಮಾತ್ರಮನಸ್ಸಿನಲ್ಲಿ ನಿರ್ಧರಿಸಿಕೊಂಡು,ಅದನ್ನು ತಾಮಸಮಾಡದೆ ಆಗಾಗಲೇ ನಡೆಸಿಬಿಡಬೇಕೆಂಬುದನ್ನು ಬಲ್ಲೆಯಾ? ನೀನು ಆಲೋಚಿಸಿದ ಸಮಸ್ತಕಾರ್ಯಗಳೂ ಚೆನ್ನಾಗಿ ಪರಿಪಕ್ವವಾದಮೇಲೆಯಾಗಲಿ, ಅಥವಾ ಫಲೋನ್ಮುಖವಾಗಬಹುದೆಂದು ಚೆನ್ನಾಗಿ ನಿಶ್ಚಯವುಂಟಾದಮೇಲೆಯಾಗಲಿ, ಹೊರಬಿದ್ದು, ಆಗ ಮಾತ್ರವೇ ನಿನ್ನ ಸಾಮಂತರಾಜರಿಗೆ ಆ ಕಾರ್ಯಾಲೋಚನೆಯು ತಿಳಿಯುವಂತೆ ಎಚ್ಚರಿಕೆಯಿಂದಿರುವೆಯಷ್ಟೆ?ನೀನು ಆಲೋಚಿಸಿ ನಡೆಸಬೇಕಾದ ಕಾರ್ಯಗಳು ಮೊದಲೇ ಎಷ್ಟುಮಾತ್ರಕ್ಕೂ ಹೊರಗೆ ಬರಬಾರದೆಂಬುದನ್ನು ಚೆನ್ನಾಗಿ ತಿಳಿದಿರುವೆಯಾ? ಎಲೆ ಭರತನೆ! ನೀನಾಗಲಿ, ನಿನ್ನಮಂತ್ರಿಗಳಾಗಲಿ ನಡೆಸಿದ ಮಂತ್ರಾಲೋಚನೆಗಳು, ಊಹೆಯಿಂದಲಾಗಲಿ, ಯುಕ್ತಿಯಿಂದಲಾಗಲಿ, ಇತರರಿಗೆ ಸ್ವಲ್ಪಮಾತ್ರವೂ ತಿಳಿಯದಂತೆಜಾಗರೂಕನಾಗಿರುವೆಯಷ್ಟೆ?[2]ಸಾವಿರಾರುಮಂದಿ ಮೂರ್ಖರು ನಿನಗೆ ಅನುಕೂಲರಾಗಿ ಬರುತಿದ್ದರೂ, ಆ ಸಾವಿರಮಂದಿಗಿಂತಲೂ, ಒಬ್ಬ

---

1 ಈ ಮುಂದಿನ ವಾಕ್ಯಗಳಿಂದ "ಸ್ವಲ್ಪವಾದ ಪ್ರಯತ್ನದಿಂದಲೇ ದೊಡ್ಡಫಲವು ಲಭಿಸುವಂತೆ ಕಾರ್ಯಗಳನ್ನಾರಂಭಿಸಬೇಕು. ಆರಂಭಿಸದ ಕಾರ್ಯವನ್ನು ಆದಷ್ಟು ಶೀಘ್ರದಲ್ಲಿ ಮುಗಿಸಬೇಕು. ಆಲಸ್ಯಮಾಡಿದಷ್ಟೂ ವಿಘ್ನಭಯವು ಹೆಚ್ಚಾಗುವುದು. ಆಲೋಚಿಸಿದ ಕಾರ್ಯಗಳನ್ನು ಪೂರ್ಣಫಲವು ಕಾಣುವವರೆಗೂ ಹೊರಕ್ಕೆ ಬಿಡಬಾರದು" ಇವೇ ಮೊದಲಾದ ರಾಜನೀತಿಗಳು ಸೂಚಿತವಾಗುವುವು.

2 ಇದರಿಂದ "ಅನೇಕಮೂರ್ಖರ ಸಹಾಯಕ್ಕಿಂತಲೂ ಒಬ್ಬಪಂಡಿತನ ಸಹಾಯವು ಮೇಲಾದುದೆಂದೂ, ಎಷ್ಟೋ ಮೂರ್ಖಜನರು ಬೆಂಬಲವಾಗಿದ್ದರೂ ತಕ್ಕ ಸಮಯಗಳಲ್ಲಿ ರಾಜನಿಗೆ ಕಾಲೋಚಿತವಾದ ಸಹಾಯವನ್ನು ಕೊಡದೆ ಕೈಬಿಡುವರೆಂದೂ ಸೂಚಿತವಾಗುವುದು.

ಪಂಡಿತನುಮಾತ್ರವಿದ್ದರೆ ಮೇಲೆಂಬುದನ್ನು ತಿಳಿದು, ಅಂತವನನ್ನೇ ಆದರಿಸುತ್ತಿರುವೆಯಾ? ಸಾವಿರಾರುಮಂದಿ ಮೂರ್ಖರು ರಾಜನ ಸುತ್ತುಮುತ್ತಲೂ ನೆರೆದು ಆಶ್ರಯವನ್ನು ಕೊಡುತಿದ್ದರೂ,ಅವರಿಂದ ಮಂತ್ರೋಪಾಯಗಳಿಗೆ ಯಾವುದೊಂದು ಸಹಾಯವೂ ಉಂಟಾಗಲಾರದು. [1]ಇತರರುಹೇಳಿದ ವಿಷಯಗಳನ್ನು ಆಯಾಕ್ಷಣವೇ ಚೆನ್ನಾಗಿ ಗ್ರಹಿಸುವನಾಗಿ, ಸ್ಥಿರಬುದ್ಧಿಯುಳ್ಳವನಾಗಿ, ಯುಕ್ತಾಯುಕ್ತ ವಿವೇಚನೆಯಲ್ಲಿ ಸಮರ್ಥನಾಗಿ, ರಾಜನೀತಿಗಳಲ್ಲಿ ಅನುಭವವುಳ್ಳ ಮಂತ್ರಿಯೊಬ್ಬನಿದ್ದರೂ, ರಾಜನಿಗಾಗಲಿ, ಇತರರಾಜ್ಯಾಧಿಕಾರಿಗಳಿಗಾಗಲಿ ಬಹಳಮೇಲಾದ ಶ್ರೇಯಸ್ಸನ್ನು ಕೂಡಿಸುವನು. ಈ ವಿಷಯಗಳೆಲ್ಲವನ್ನೂ ನೀನು ಚೆನ್ನಾಗಿ ಮನಸ್ಸಿನಲ್ಲಿಟ್ಟಿರುವೆಯಾ? ಎಲೆ ವತ್ಸನೆ![2]ಅಡಿಗೆ ಮೊದಲಾದ ಉತ್ತಮ ಕಾರ್ಯಗಳಿಗೆ ಉತ್ತಮರಾದ ಭೃತ್ಯರನ್ನೂ, ಹಾಸಿಗೆಯನ್ನು ಹಾಸುವುದು, ಆಸನವನ್ನಿಡುವುದು,ಇವೇಮೊದಲಾದ ಮಧ್ಯಮಕಾರ್ಯಗಳಿಗೆ ಮಧ್ಯಮಭೃತ್ಯರನ್ನೂ, ಕಾಲೊತ್ತುವುದೇ ಮೊದಲಾದ

---

1 ಇದರಿಂದ ಮಂತ್ರಿಗಳು ಬುದ್ಧಿವಂತರಾಗಿರಬೇಕಾದುದುಮಾತ್ರವೇ ಅಲ್ಲದೆ, ಶೂರರಾಗಿಯೂ ಸಮರ್ಥರಾಗಿಯೂ ನೀತಿಶಾಸ್ತ್ರಜ್ಞರಾಗಿಯೂ ಇರಬೇಕೆಂದು ಸೂಚಿತವಾಗುವುದು.

2 ಇದರಿಂದ ಭೃತ್ಯರನ್ನು ಅವರವರ ಜಾತಿಗುಣಾದಿಗಳಿಗೆ ಅನುರೂಪವಾದ ಕಾರ್ಯದಲ್ಲಿಯೇ ನಿಯಮಿಸಬೇಕೇ ಹೊರತು, ಹೀನಾಧಿಕಕಾರ್ಯಗಳಲ್ಲಿ ನಿಯೋಗಿಸಬಾರದೆಂದು ಸೂಚಿತವು. ಉತ್ತಮಭೃತ್ಯನನ್ನು ಮಧ್ಯಮಾಧಮ ಕಾರ್ಯಗಳಲ್ಲಿ ನಿಯಮಿಸಿದರೆ ಅವನು ಅವಮಾನದಿಂದ ಉತ್ಸಾಹ ಭಂಗವನ್ನು ಹೊಂದಿ ಕೆಲಸವನ್ನು ಕೆಡಿಸಿಬಿಡುವನು. 'ಹಾಗೆಯೇ ಮಧ್ಯಮ ಭೃತ್ಯನನ್ನು ಉತ್ತಮ ಕಾರ್ಯದಲ್ಲಿ ನಿಯೋಗಿಸಿದರೆ ಅಶಕ್ತಿಯಿಂದಲೂ, ಅಧಮಕಾರ್ಯದಲ್ಲಿ ನಿಯೋಗಿಸಿದರೆ ಅವಮಾನದಿಂದಲೂ ಕಾರ್ಯವನ್ನು ಸಾಧಿಸದೆ ಹೋಗುವನು.ಅಧಮಭೃತ್ಯನನ್ನು ಉತ್ತಮಮಧ್ಯಮ ಕಾರ್ಯಗಳಲ್ಲಿ ನಿಯೋಗಿಸಿದರೂ ಅವನು ಅವುಗಳನ್ನು ನಡೆಸಲಾರದೆ ಕಾರ್ಯಹಾನಿಯನ್ನುಂಟುಮಾಡುವನು. ಆದುದರಿಂದ ಅವರವರನ್ನು ಉಚಿತಕಾರ್ಯಗಳಲ್ಲಿಯೇ ನಿಯಮಿಸಬೇಕೆಂದು ಭಾವವು.

ನೀಚಕಾರ್ಯಗಳಿಗೆ ನೀಚಭೃತ್ಯರನ್ನೂ ನಿಯಮಿಸಿರುವೆಯಾ? ಮತ್ತು [1]ಸಾಮದಾನಾದಿಗಳಾದ ನಾಲ್ಕು ಉಪಧೆಗಳಿಂದ ಪರೀಕ್ಷಿಸಲ್ಪಟ್ಟು ಶುದ್ಧರಾಗಿಯೂ, ಉತ್ತಮರಾಗಿಯೂ, ವಂಶಪರಂಪರೆಯಿಂದ ಬಂದವರಾಗಿಯೂ, ವೃದ್ಧರಾಗಿಯೂ ಇರುವ ಮಂತ್ರಿಗಳನ್ನೇ ದೊಡ್ಡದೊಡ್ಡ ರಾಜಕಾರ್ಯಗಳಿಗೆ ನಿಯಮಿಸಿರುವೆಯಾ?ಒಂದುವೇಳೆ ನೀನು ಪ್ರಜೆಗಳಿಗೆ ಕ್ರೂರದಂಡನೆಗಳನ್ನು ವಿಧಿಸಿ ರಾಜ್ಯವನ್ನು ಪೀಡಿಸುತಿದ್ದರೂ,[2] ನಿನ್ನ ಮಂತ್ರಿಗಳು ಅದಕ್ಕೆ ಸಮ್ಮತಿಸದೆ ನಿನ್ನನ್ನು ತಡೆಯುವಷ್ಟು ಸ್ವಾತಂತ್ರ್ಯವನ್ನು ವಹಿಸಿರುವರೆ? [3]ದುರ್ದಾರ್ನಗಳಿಂದ ದ್ರವ್ಯವನ್ನಾರ್ಜಿಸಿ ಯಾಗಮಾಡುವವನನ್ನು ಋತ್ವಿಕ್ಕುಗಳೂ, ಬಲಾತ್ಕಾರದಿಂದ ತಮ್ಮನ್ನು ಸೆಳೆಯುತ್ತಿರುವ ಕಾಮಾತುರನನ್ನು ಮಾನವತಿಯರಾದ ಸ್ತ್ರೀಯರೂ ನಿಂದಿಸುವಂತೆ,ಅನ್ಯಾಯದಿಂದ ನೀನು ದ್ರವ್ಯಾರ್ಜನೆ

---

1 ಪರೀಕ್ಷಿಸಲ್ಪಟ್ಟವರೆಂದರೆ, ಅರ್ಥಕಾಮಗಳೇ ಮೊದಲಾದ ಚತುರುಪಧೆಗಳಿಂದ ಪರೀಕ್ಷಿಸಲ್ಪಟ್ಟವರೆಂದರ್ಥವು. ರಾಜನಾದವನು ತನಗೆ ಆತ್ಯಾಪ್ತರಾದ ಪುರುಷರ ಮೂಲಕವಾಗಿ ವಿಶೇಷವಾದ ದ್ರವ್ಯವನ್ನು ಕಳುಹಿಸಿ, ಶತ್ರುಗಳು ಲಂಚವನ್ನು ಕಳುಹಿಸಿರುವುದಾಗಿ ಹೇಳಿಸಿ ಅವರ ಮನೋದಾರ್ಢ್ಯವನ್ನು ಪರೀಕ್ಷಿಸುವುದುಂಟು.ಮತ್ತು ಸೌಂದರ್ಯವುಳ್ಳ ಸ್ತ್ರೀಯರನ್ನು ಕಳುಹಿಸಿ ಮೋಹಪಡಿಸಿ ಅವರಿಂದ ದುರ್ಬೋಧನೆಯನ್ನು ಮಾಡಿಸಿಯೂ ಪರೀಕ್ಷಿಸುವುದುಂಟು. ಇವೇ ಮೊದಲಾದ ಉಪಾಯಗಳಿಗೂ ವಶರಾಗದೆ,ತ್ರಿಕರಣ ಶುದ್ಧಿಯಿಂದಿರುವವರನ್ನೇ ಮಂತ್ರಿತ್ವದಲ್ಲಿಡಬೇಕೆಂದೂ, ಅವರು ತಮ್ಮ ಕುಲಪರಂಪರೆಯಾಗಿ ಬಂದ ಮಂತ್ರಿಸಂತತಿಯಲ್ಲಿಯೇ ಹುಟ್ಟಿದವರಾದರೆ ಇನ್ನೂ ಉತ್ತಮವೆಂದೂ ಸೂಚಿತವಾಗುವುದು.

2 ಇದರಿಂದ ಮಂತ್ರಿಯಾದವನು ರಾಜನ ಪ್ರೀತಿಯನ್ನು ಸಂಪಾದಿಸುವುದಕ್ಕಾಗಿ ಅವನ ಮನೋನುವರ್ತಿಯಾಗಿಯೇ ಮಾತಾಡತಕ್ಕವನಾಗಿರಬಾರದೆಂದೂ, ರಾಜನು ನ್ಯಾಯವನ್ನತಿಕ್ರಮಿಸಿ ನಡೆದಾಗ, ಧೈರ್ಯದಿಂದ ಆತನನ್ನು ನಿವಾರಿಸತಕ್ಕವನಾಗಿರಬೇಕೆಂದೂ ಸೂಚಿತವಾಗುವುದು.

3 ಇದರಿಂದ ರಾಜನು ತೀಕ್ಷ್ಣದಂಡನೆಯನ್ನು ವಿಧಿಸಿ ಆಮೂಲಕವಾಗಿ ದ್ರವ್ಯವನ್ನು ಸಂಪಾದಿಸಬಾರದೆಂದೂ, ದುರ್ದಾನದಿಂದ ಸಂಪಾದಿಸಿದ ದ್ರವ್ಯದಿಂದ ಯಾಗವನ್ನು ಮಾಡಬಾರದೆಂದೂ, ಸ್ತ್ರೀಯರನ್ನು ಬಲಾತ್ಕಾರದಿಂದ ಪರಿಗ್ರಹಿಸಬಾರದೆಂದೂ ಸೂಚಿತವು.

ಗೆಳಸಿ ಪ್ರಜೆಗಳ ನಿಂದೆಗೆ ಗುರಿಯಾಗಿಲ್ಲವಷ್ಟೆ? [1]ಸಾಮಾದ್ಯುಪಾಯಗಳಲ್ಲಿ ನಿಪುಣನಾಗಿಯೂ, ಕುಟಿಲನೀತಿಗಳನ್ನು ತಿಳಿದವನಾಗಿಯೂ, ಅಂತರಂಗ ಭೃತ್ಯರಮೇಲೆ ಇಲ್ಲದ ದೋಷಗಳನ್ನು ಹೇಳಿ ಅಂತವರನ್ನು ನೀಗಿಸುವುದಕ್ಕೆ ಪ್ರಯತ್ನಿಸುವವನಾಗಿಯೂ, ರಾಜಹಿಂಸೆಗೆ ಸ್ವಲ್ಪವೂ ಭಯಪಡದವನಾಗಿಯೂ,ಹಣದಲ್ಲಿ ದುರಾಶೆಯುಳ್ಳವನಾಗಿಯೂ,ರಾಜನ ಪ್ರಭುತ್ವವನ್ನೇ ಅಪಹರಿಸುವುದಕ್ಕೆ ಪ್ರಯತ್ನಿಸುವವನಾಗಿಯೂ ಇರುವ ಪುರುಷನು,ಎಷ್ಟೇ ಬುದ್ಧಿವಂತನಾಗಿದ್ದರೂ, ರಾಜನು ಆತನನ್ನು ಆಗಲೇ ಕೊಂದುಬಿಡಬೇಕು. ಹಾಗಿಲ್ಲದಿದ್ದರೆ ಆತನಿಂದ ರಾಜರಿಗೆ ಎಂದಾದರೂ ಮೃತ್ಯುವು ತಪ್ಪದು. ಈ ವಿಷಯವನ್ನು ನೀನು ಚೆನ್ನಾಗಿ ಬಲ್ಲೆಯಾ? ಅಂತವನನ್ನು ನೀನು ಹತ್ತಿರದಲ್ಲಿ ಸೇರಿಸಿಲ್ಲವಷ್ಟೆ? [2] ರಾಜನು ಮಾಡತಕ್ಕಸತ್ಕಾರಗಳಿಗೆ ಸಂತುಷ್ಟನಾಗಿ,

---

1 ಇದರಿಂದ ಯಾವಕಾರ್ಯಗಳಿಗಾದರೂ ಸಾಹಸದಿಂದ ಪ್ರವರ್ತಿಸತಕ್ಕ ಧೈರ್ಯವುಳ್ಳವನಾಗಿಯೂ, ಕುಟಿಲೋಪಾಯಗಳಲ್ಲಿ ನಿಪುಣನಾಗಿಯೂ, ಅಂತರಂಗಭೃತ್ಯರಲ್ಲಿ ಭೇದವನ್ನು ತಂದಿಡುವ ಕಿರುಕುಳದ ಸ್ವಭಾವವುಳ್ಳವನಾಗಿಯೂ, ರಾಜ್ಯಾಸೆಯುಳ್ಳವನಾಗಿಯೂ ಇರುವ ಪುರುಷನನ್ನು ಹತ್ತಿರಕ್ಕೆ ಸೇರಿಸದೆ, ಸಾಧ್ಯವಾದ ಮಟ್ಟಿಗೆ ಅಂತವರ ಪ್ರಾಬಲ್ಯವನ್ನು ಮುರಿದಿಡಬೇಕು. ಇಲ್ಲದಿದ್ದರೆ ರಾಜನಿಗೇ ಕೇಡುಂಟಾಗುವುದು ನಿಜವೆಂದು ಸೂಚಿತವು.

2 ಈ ಮುಂದಿನವಾಕ್ಯಗಳಿಂದ ಸೈನಿಕರ ಸ್ವರೂಪವೂ, ರಾಜನು ತನ್ನ ಸೈನಿಕರನ್ನು ಸತ್ಕರಿಸತಕ್ಕ ರೀತಿಯೂ ಸೂಚಿತವಾಗುವುದು. ಹೇಗೆಂದರೆ:—

ಇದರಿಂದ, ಸ್ವಾಮಿಭಕ್ತಿ. ಮನಸ್ತೃಪ್ತಿ, ನಂಬಿಕೆ, ಬುದ್ಧಿ, ಸಾಹಸ, ಕುಲೀನತೆ, ಮುಂತಾದ ಗುಣಗಳುಳ್ಳವನನ್ನೇ ಸೇನಾಧಿಪತ್ಯದಲ್ಲಿಡಬೇಕೆಂದು ಸೂಚಿತವು.ಮತ್ತು ರಾಜ್ಯಾಧಿಪತ್ಯವನ್ನು ಮಾಡುವವನನುಬಲವುಳ್ಳವರಾಗಿಯೂ,ಯುದ್ಧದಲ್ಲಿ ನಿಪುಣರಾಗಿಯೂ, ಪೌರುಷದಲ್ಲಿ ಪ್ರಖ್ಯಾತಿಹೊಂದಿದವರಾಗಿಯೂ, ಇರುವವರನ್ನೇ ಸೇನಾಜನವನ್ನಾಗಿ ನಿಯಮಿಸಬೇಕು.ಸೈನಿಕರಿಗೆ ಅವರವರ ಕಾರ್ಯಗೌರವಕ್ಕೆ ತಕ್ಕಂತೆ ಸಂಬಳಗಳನ್ನು ಹೆಚ್ಚಿಸಿ ಕಾಲಾತಿಕ್ರಮವಿಲ್ಲದಂತೆ ಅವರವರ ಬತ್ಯಗಳನ್ನು ಸಲ್ಲಿಸುತ್ತಿರಬೇಕು. ಅವರ ಮನಸ್ಸಿಗೆ ಅಸಮಾಧಾನವನ್ನುಂಟುಮಾಡಿದರೂ, ಅವರಿಗೆ ಸಲ್ಲಿಸಬೇಕಾದ ಬತ್ಯಗಳನ್ನು ಸಕಾಲಕ್ಕೆ ಸಲ್ಲಿಸದಿದ್ದರೂ, ಅವರನ್ನು ಅನಾದರಿಸಿದರೂ ಅವರು ಕೋಪಗೊಂಡು ಸಮಯದಲ್ಲಿ ಕೈಬಿಡುವರಲ್ಲದೆ, ಅವಕಾಶವು ಸಿಕ್ಕಿದಾಗ ರಾಜಪದವಿಗೇ ಹಾನಿಯನ್ನು ತರುವರು. ಮ

ವ್ಯವಹಾರಗಳಲ್ಲಿ ನಿಪುಣನಾಗಿ, ಶೂರನಾಗಿ, ಆಯಾಕಾಲಕ್ಕೆ ತಕ್ಕಂತೆ ತನ್ನ ಸೈನ್ಯಗಳನ್ನು ಸಿದ್ಧಪಡಿಸುವುದಕ್ಕೂ, ಶತ್ರುಸೈನ್ಯಗಳನ್ನು ಭೇದಿಸುವುದಕ್ಕೂ ತಕ್ಕಷ್ಟು ಬುದ್ಧಿಚಾತುರ್ಯವುಳ್ಳವನಾಗಿ, ಎಷ್ಟೇ ಮಹಾವಿಪತ್ತುಗಳು ಬರು ವಹಾಗಿದ್ದರೂ ಎದೆಗುಂದದವನಾಗಿ, ಬಾಹ್ಯಾಭ್ಯಂತರಗಳೆರಡರಲ್ಲಿಯೂ ಶುದ್ಧನಾಗಿ, ಸತ್ಕುಲದಲ್ಲಿ ಹುಟ್ಟಿದವನಾಗಿ, ಪ್ರಭುಭಕ್ತಿಯುಳ್ಳವನಾಗಿ, ಕಾರ್ಯಸಮರ್ಥನೆನಿಸಿಕೊಂಡಿರುವವನನ್ನೇ ಸೇನಾಪತಿಯನ್ನಾಗಿ ಮಾಡಿ ಕೊಂಡಿರುವೆಯಾ? ಅಂತಹ ಸೇನಾಪತಿಯಿರುವಾಗಲೂ ಅವನನ್ನು ಬಿಟ್ಟು ಇತರರ ದುಷ್ಪ್ರೇರಣೆಯಿಂದ ಬೇರೊಬ್ಬನು ಎಷ್ಟೇ ಸಮರ್ಥನಾಗಿದ್ದ ರೂ ಆ ಕಾರ್ಯಕ್ಕೆ ನಿಯಮಿಸಬಾರದೆಂಬುದನ್ನು ಬಲ್ಲೆಯಾ? ಬಹಳ ಬಲಾ ಢ್ಯರಾಗಿ,ಯುದ್ಧದಲ್ಲಿ ನಿಪುಣರಾಗಿ,ಅನೇಕಯುದ್ಧಗಳನ್ನು ಮಾಡಿ ಪೌರುಷ ದಿಂದ ಪ್ರಸಿದ್ಧಿಹೊಂದಿದವರಾಗಿ, ಶೂರರಾಗಿರುವ ಪ್ರಮುಖರನ್ನು ಚೆ ನ್ನಾಗಿ ಪಾರಿತೋಷಿಕಾದಿಗಳಿಂದ ಸತ್ಕರಿಸುತ್ತಿರುವೆಯಷ್ಟೆ? ಎಲೆ ವತ್ಸನೆ! ಸೈನಿಕರಿಗೆ ಆಯಾ ಕಾಲಕ್ಕೆ ಕೊಡಬೇಕಾದ ಬತ್ಯಗಳನ್ನೂ, ಸಂಬಳಗಳನ್ನೂ ತಪ್ಪದೆ ಆಗಾಗಲೇ ಸಲಿಸುತ್ತಿರುವೆಯಷ್ಟೆ? ಈ ಭಾಗದಲ್ಲಿ ಮಾತ್ರ ಸ್ವಲ್ಪ ವಾದರೂ ವಿಳಂಬಮಾಡಬಾರದೆಂಬುದನ್ನು ಬಲ್ಲೆಯಾ? ಆ ಭೃತ್ಯರು ಸಂಬಳದಿಂದಲೇ ಜೀವಿಸಬೇಕಾಗಿರುವುದರಿಂದ, ಅದನ್ನು ತಕ್ಕ ಕಾಲದಲ್ಲಿ ಕೊಡದೆ, ವಿಳಂಬಮಾಡಿದರೆ ಅವರಿಗೆ ರಾಜನಲ್ಲಿ ಕೋಪವುಂಟಾಗುವುದು. ರಾಜನನ್ನು ನಿಂದಿಸಲಾರಂಭಿಸುವರು. ಕೊನೆಗೆ ಅವರು ರಾಜನಿಗೆ ಕೇಡನ್ನೂ ಬಯಸುವರು. ಇದರಿಂದ ಬಹಳ ಅನರ್ಥಗಳಿಗೆ ಕಾರಣವುಂಟೆಂಬುದನ್ನು ಚೆನ್ನಾಗಿ ಮನಸ್ಸಿನಲ್ಲಿಟ್ಟಿರುವೆಯಾ? ಪ್ರಮುಖರಾಗಿಯೂ, ಕ್ಷತ್ರಿಯಕುಲ ದಲ್ಲಿ ಹುಟ್ಟಿದವರಾಗಿಯೂ ಇರುವ ಅನೇಕ ವೀರರು ನಿನ್ನಲ್ಲಿ ಅನುರಾಗವುಳ್ಳ ವರಾಗಿರುವರೇ? ಸಮಯಬಂದಾಗ ಅವರು ನಿನಗಾಗಿ ತಮ್ಮ ಪ್ರಾಣಗ

---

ತ್ತು ಸೈನಿಕರನ್ನು ತಕ್ಕ ರೀತಿಯಿಂದ ಪ್ರೋತ್ಸಾಹಿಸಿ, ತನ್ನಲ್ಲಿ ಅನುರಕ್ತರನ್ನಾಗಿ ಮಾಡಿ ಕೊಂಡಿದ್ದರೆ ಅವರು ಪ್ರಭುವಿಗಾಗಿ ತಮ್ಮ ಪ್ರಾಣವನ್ನಾದರೂ ಕೊಡುವುದಕ್ಕೆ ಸಿದ್ಧ ರಾಗುವರು" ಎಂಬೀ ನೀತಿಗಳೆಲ್ಲವೂ ವ್ಯಕ್ತವಾಗುವುವು.

ಳನ್ನಾದರೂ|ಕೊಡುವುದಕ್ಕೆ ಹಿಂಜರಿಯದಿರುವರೆ? [1]ಎಲೈ ಭರತನೆ ! ನಮ್ಮ ದೇಶದಲ್ಲಿಯೇ ಹುಟ್ಟಿದವನಾಗಿ, ವಿದ್ವಾಂಸನಾಗಿ, ಸಾಹಸಿಯಾಗಿ, ಸಮಯೋಚಿತವಾದ ಬುದ್ಧಿಕೌಶಲವುಳ್ಳವನಾಗಿ, ತನ್ನೊಡನೆ ಹೇಳಿದ ಸಂದೇಶಗಳಲ್ಲಿ ಸ್ವಬುದ್ಧಿಯನ್ನು ತೋರಿಸಬೇಕೆಂದು ಇದ್ದುದರಲ್ಲಿಕೆಲವನ್ನು ಬಿಟ್ಟು, ಇಲ್ಲದುದನ್ನು ಸೇರಿಸಿಕೊಂಡು,ಸ್ವಕಪೋಲಕಲ್ಪನೆಯಿಂದ ಹೇಳದೆ,ಹೇಳಿದಂತೆಯೇ ಹೇಳುವ ಸುಸ್ವಭಾವವುಳ್ಳವನನ್ನೇ ದೂತಕಾರ್ಯಕ್ಕಿರಿಸಿರುವೆಯಾ ? ನೀನು ನಿನ್ನ ಶತ್ರುಪಕ್ಷದಲ್ಲಿ ಮಂತ್ರಿಮೊದಲಾದ[2] ಹದಿನೆಂಟುತೀರ್ಥಗಳಿಗೂ, ಒಬ್ಬೊಬ್ಬರಿಗೆ ಮೂರುಮೂರು ಚಾರರಂತೆ ಕಳುಹಿಸಿ, ಆ ಚಾರರು ಆಗಾಗ

---

1 ಇದರಿಂದ ದೂತಲಕ್ಷಣವು ತಿಳಿಸಲ್ಪಡುವುದು. ದೂತ್ಯದಲ್ಲಿರಿಸಲ್ಪಡುವವನು ಸ್ವದೇಶದವನಾಗಿಯೇ ಇರಬೇಕು. ಅನ್ಯದೇಶದವನಾಗಿದ್ದರೆ, ಅವನಿಗೆ ಪಕ್ಷಪಾತಬುದ್ಧಿಯುಂಟಾಗುವುದು. ಇಂಗಿತಗಳನ್ನು ನೋಡಿದ ಮಾತ್ರದಿಂದಲೇ ಇತರರ ಮನೋಭಿಪ್ರಾಯವನ್ನು ತಿಳಿದುಕೊಳ್ಳುವ ಸಾಮರ್ಥ್ಯವುಳ್ಳವನನ್ನೇ ದೂತಕಾರ್ಯದಲ್ಲಿ ನಿಯಮಿಸಬೇಕು. ದೂತನಾಗಿ ಕಳುಹಿಸಲ್ಪಡುವ ಪುರುಷನು ಸಮಯೋಚಿತವಾದ ಬುದ್ಧಿಸ್ಫೂರ್ತಿಯುಳ್ಳವನಾಗಿರಬೇಕು. ಅವನು ಕಾರ್ಯಾರ್ಥವಾಗಿಹಲವುಮಾತುಗಳನ್ನು ಹೇಳತಕ್ಕವನಾಗಿರಬೇಕಾದರೂ, ರಾಜನು ಹೇಳಿ ಕಳುಹಿಸಿರುವ ಮಾತುಗಳನ್ನು ಮಾತ್ರ ಸ್ವಲ್ಪವೂ ಹೆಚ್ಚು ಕಡಿಮೆಯಿಲ್ಲದೆ ವ್ಯವಹರಿಸಿ ಕಾರ್ಯಗಳನ್ನು ನಿರ್ವಹಿಸತಕ್ಕವನಾಗಿರಬೇಕು. ಯುಕ್ತಾಯುಕ್ತಗಳನ್ನು ಚೆನ್ನಾಗಿ ಬಲ್ಲವನಾಗಿರಬೇಕು” ಎಂಬೀ ವಿಷಯಗಳೆಲ್ಲವೂ ಇದರಿಂದ ಬೋಧಿತವಾಗುವುವು.

2 ಹದಿನೆಂಟು ತೀರ್ಥಗಳಾವುವೆಂದರೆ:—(೧)ಮಂತ್ರಿ (೨) ಪುರೋಹಿತನು (೩) ಯುವರಾಜನು(೪)ಸೇನಾಧಿಪತಿ(೫)ಬಾಗಿಲುಕಾಯುವವರಿಗೆ ನಿರ್ವಾಹಕನಾದ ದ್ವಾರಿಕನೆಂಬವನು (೬) ಅಂತಃಪುರ ಕಾರ್ಯಗಳನ್ನು ನಿರ್ವಹಿಸತಕ್ಕ ಅಂತರ್ವಂಶಿಕನೆಂಬವನು. (೭) ಸೆರೆಮನೆಯ ಅಧಿಕಾರಿ (೮) ಬಂಡಾರದ ಅಧಿಕಾರಿ (೯) ರಾಜಾಜ್ಞೆಯನ್ನು ಪ್ರಕಟಿಸತಕ್ಕ ಕಾರ್ಯನಿಯೋಜಕನೆಂಬವನು (೧೦) ವ್ಯವಹಾರಗಳನ್ನು ವಿಚಾರಿಸತಕ್ಕ ಪ್ರಾಡ್ವಿವಾಕನೆಂಬವನು. ಇವನ ಲಕ್ಷಣವೇ ನೆಂದರೆ:—“ವಿವಾದೇ ಪೃಚ್ಛತಿಪ್ರಶ್ನಂ ಪ್ರತಿಪ್ರಶ್ನಂ ತಥೈವಚ।ಪ್ರಿಯಪೂರ್ವಂ ಪ್ರಾಗ್ವದತಿ ಪ್ರಾಡ್ವಿವಾಕಸ್ತತಸ್ಸ್ಮೃತಃ” ಯಾವುದಾದರೂ ವಿವಾದವು ಬಂದಾಗ ಕಕ್ಷಿಪ್ರತಿಕಕ್ಷಿಗಳ ವಾಙ್ಮೂಲಗಳನ್ನು ಕೇಳಿ,ಆಕ್ಷೇಪಸಮಾಧಾನಗಳನ್ನು ತೋರಿಸುತ್ತ,ಅವರ ಮನಸ್ಸೊಪ್ಪುವಂತೆ ಪ್ರಿಯವಾದ ಮಾತುಗಳ

ಒಬ್ಬರಿಗೊಬ್ಬರು ಪರಸ್ಪರರಹಸ್ಯವನ್ನು ತಿಳಿಯುಕೊಳ್ಳುವಂತೆ ಮಾಡಿ, ಆ ಶತ್ರುಗಳ ರಹಸ್ಯವನ್ನು ತಿಳಿಯುತ್ತಿರುವೆಯಾ? ಹಾಗೆಯೇ ಸ್ವಪಕ್ಷದಲ್ಲಿ

---

ನ್ನಾಡಿ, ನಿಜಸ್ಥಿತಿಯನ್ನು ತಿಳಿದು ನ್ಯಾಯವನ್ನು ತೀರ್ಮಾನಿಸುವವನು (೧೧) ಸೈನ್ಯಗಳಿಗೆ ಸಂಬಳಗಳನ್ನೂ, ಬತ್ಯಗಳನ್ನೂ ಹಂಚಿಕೊಡತಕ್ಕ ಸೇನಾನಾಯಕನು (೧೨) ರಾತ್ರಿಗಳಲ್ಲಿ ನಗರಶೋಧನೆಯನ್ನು ಮಾಡುತ್ತ, ಊರ ಹೊರಬಾಗಿಲನ್ನೂ, ಕೋಟೆ ಮೊದಲಾದವುಗಳನ್ನೂ ಎಚ್ಚರಿಕೆಯಿಂದ ರಕ್ಷಿಸುವ ಕಾರ್ಯಗಳನ್ನೂ ವಿಧಿಸತಕ್ಕ ಅಧಿಕಾರಿಯು ಇವನಿಗೆ ನಗರಾಧ್ಯಕ್ಷನೆಂದು ಹೆಸರು (೧೩) ಕಾರ್ಮಾಂತಿಕನು, ಎಂದರೆ ಸೈನಿಕರಂತಲ್ಲದೆ ತಮ್ಮತಮ್ಮ ಕೆಲಸಗಳನ್ನು ಮುಗಿಸಿಬಂದು ಆಗಾಗ ಬತ್ಯಗಳನ್ನು ತೆಗೆದುಕೊಳ್ಳುತ್ತಿರುವ ಬೇರೆ ಕೆಲಸಗಾರರಿಗೆಲ್ಲಾ ಅವರವರ ಕೆಲಸಕ್ಕೆ ತಕ್ಕ ದ್ರವ್ಯಭಾಗವನ್ನು ಹಂಚಿಕೊಡುವವನು. ಈತನು ರಾಜನಿಂದ ಮೊತ್ತವಾಗಿ ಹಣವನ್ನು ತಂದು ಅವರವರಿಗೆ ತಕ್ಕಂತೆ ಹಂಚುವನು (೧೪) ಸಭ್ಯನು. ಇವನ ಕೆಲಸಗಳೇನೆಂದರೆ, ಸಭೆಯನ್ನು ಪ್ರತಿದಿನವೂ ಅಲಂಕರಿಸಿಡುವುದು, ರಾಜನಿಗೂ ಮಂತ್ರಿಮೊದಲಾದವರಿಗೂ ಉಚಿತಾಸನಗಳನ್ನೇ ಏರ್ಪಡಿಸುವುದು. ಸಭ್ಯರನ್ನು ಕರೆತರುವುದು. ಸಭಾರ್ಹರಲ್ಲವರನ್ನು ಒಳಗೆ ಸೇರಿಸದಿರುವುದು. ಸಭಾಸ್ಥಾನವನ್ನು ಗದ್ದಲವಿಲ್ಲದಂತೆ ನೋಡಿಕೊಳ್ಳುವುದು. ಇವೇ ಮೊದಲಾದ ಕೆಲಸಗಳಿಗೆ ತಕ್ಕತಕ್ಕಪುರುಷರನ್ನು ನಿಯಮಿಸಿ ಅವರ ಮೇಲ್ವಿಚಾರಣೆಯನ್ನುನೋಡಿಕೊಳ್ಳತಕ್ಕವನೇ ಸಭ್ಯನೆನಿಸುವನು. (೧೫) ದಾಯಭಾಗಾದಿವಿವಾದಗಳು ಬಂದಾಗ ಆ ವಿವಾದಕಾರಣಗಳನ್ನು ಚೆನ್ನಾಗಿ ವಿಚಾರಿಸಿ ಪರಿಶೀಲನೆಮಾಡಿ ಧರ್ಮಯುಕ್ತವಾದ ತೀರ್ಪನ್ನು ಕೊಡತಕ್ಕ ಧರ್ಮಾಧ್ಯಕ್ಷನೆಂಬವನು. (೧೬)ಕಳವು, ಕೊಲೆ, ಮೊದಲಾದ ಅಪರಾಧಗಳನ್ನು ನಡೆಸಿದವರಿಗೆ ರಾಜಾಜ್ಞೆಯಿಂದ, ಕರಚ್ಛೇದನ, ಶಿರಶ್ಛೇದನ,ಮೊದಲಾದ ದಂಡನೆಗಳನ್ನು ಮಾಡಿಸತಕ್ಕ ಅಧಿಕಾರಿಯು. ಇವನಿಗೆ ದಂಡಪಾಲನೆಂದು ಹೆಸರು. (೧೭) ಗಿರಿದುರ್ಗ ವನದುರ್ಗ ಜಲದುರ್ಗ ಮುಂತಾದ ದುರ್ಗಗಳೆಲ್ಲವನ್ನೂ ಕಾಪಾಡುವ ದುರ್ಗಪಾಲನೆಂಬವನು. (೧೮) ರಾಷ್ಟ್ರಾಂತಪಾಲನೆಂಬವನು. ರಾಜ್ಯದ ಎಲ್ಲೆಕಟ್ಟುಗಳಲ್ಲಿ ಪರರಾಜರು ಮುಂತಾದವರು ಅತಿಕ್ರಮಿಸಿ ಬಾರದಂತೆ ನಾಲ್ಕುಕಡೆಗಳಲ್ಲಿಯೂ ಕಾವಲಿಟ್ಟು ನೋಡಿಕೊಳ್ಳತಕ್ಕ ಮುಖ್ಯಾಧಿಕಾರಿಯು. ಈ ಹದಿನೆಂಟು ಅಧಿಕಾರಿಗಳಿಗೂ ತೀರ್ಥಗಳೆಂದು ಹೆಸರು. ಶತ್ರುಪಕ್ಷದಲ್ಲಿರುವ ಈಹದಿನೆಂಟುಮಂದಿಯ ರಹಸ್ಯಗಳನ್ನೂ ಗೂಢಚಾರರ ಮೂಲಕವಾಗಿ ರಾಜನು ತಿಳಿದುಕೊಳ್ಳುತ್ತಿರಬೇಕು. ಒಬ್ಬೊಬ್ಬರಿಗೆ ಮೂರುಮೂರು ಮಂದಿಚಾರರನ್ನು ನಿಯಮಿಸಿಡಬೇಕು. ಹಾಗೆಯೇ ಸ್ವಪಕ್ಷದಲ್ಲಿಯೂ, ಮಂತ್ರಿ, ಪುರೋಹಿತನು, ಯುವರಾ

ಯೂ ನಿನ್ನ ಸಮೀಪವರ್ತಿಗಳಾದ ಮಂತ್ರಿ, ಪುರೋಹಿತನು, ಯುವರಾಜನು,ಈಮೂವರು ಹೊರತು,ಉಳಿದ ಹದಿನೈದು ತೀರ್ಥಗಳೊಳಗಿನ ಮರ್ಮಗಳನ್ನೂ ಆಗಾಗ ತಿಳಿದಕೊಳ್ಳುವುದಕ್ಕಾಗಿ ಇಲ್ಲಿಯೂ ಒಬ್ಬೊಬ್ಬರಿಗೆಮೂರು ಮೂರು ಗೂಢಚಾರರನ್ನು ಕಳುಹಿಸಿ ರಹಸ್ಯಗಳನ್ನು ತಿಳಿಯುತ್ತಿರುವೆಯಾ ? [1]ನಿನ್ನಿಂದ ನಿಗ್ರಹಿಸಲ್ಪಟ್ಟ ಶತ್ರುಗಳು ಕಾಲಾಂತರದಲ್ಲಿಯಾದರೂ ಹಿಂತಿರುಗಿ ಬಂದಾಗ, ಅವರು ಕೇವಲ ದುರ್ಬಲರೆಂದು ತಿಳಿದು ಉದಾಸೀನನಾಗಿ ಇದ್ದುಬಿಡದೆ,ಅವರ ವಿಷಯದಲ್ಲಿ ಯಾವಾಗಲೂ ಎಚ್ಚರಿಕೆಯಿಂದಿರುವೆಯಾ? ಎಲೆವತ್ಸನೆ ! ನೀನು ನಾಸ್ತಿಕರಾದ ಬ್ರಾಹ್ಮಣರನ್ನು ಸೇವಿಸುವುದಿಲ್ಲವಷ್ಟೆ? ಅಂತವರು ಏನೂತಿಳಿಯದ ಮೂಢರಾಗಿದ್ದರೂ ತಾವೇ ಪಂಡಿತರೆಂದು ಹೆಮ್ಮೆಗೊಂಡಿರುವರು. ಅವರು ವಿವೇಕಶೂನ್ಯರಾಗಿಯೂ ಇರುವರು. ಅಂತವರನ್ನು ಗೌರವಿಸಿದರೆ, ಇಲ್ಲದ ದುರ್ಬೋಧನೆಗಳನ್ನು ಮಾಡಿ ಧರ್ಮಲೋಪ, ಅಧರ್ಮಾಚರಣ ಮೊದಲಾದ ಅನೇಕ ಅನರ್ಥಗಳಿಗೆ ಗುರಿಮಾಡುವರು. ಮತ್ತು ದುರ್ಬುದ್ಧಿಯುಳ್ಳ ನಾಸ್ತಿಕರು ಮಹರ್ಷಿಪ್ರಣೀತವಾದ ಧರ್ಮಶಾಸ್ತ್ರಗಳನೇಕವಾಗಿದ್ದರೂ ಅವೆಲ್ಲವನ್ನೂ ಬಿಟ್ಟು, ಕೇವಲ ಶುಷ್ಕತರ್ಕವಾದಗಳಿಂದ ನಿರರ್ಥಕವಾದ ಮಾತುಗಳನ್ನಾಡುತ್ತಿರುವರು. ವತ್ಸಭರತನೆ ! ಈಗ ನಿನ್ನ ಕೈಗೆ ಸಿಕ್ಕಿರುವ ಅಯೋಧ್ಯೆಯು ಸಾಮಾನ್ಯವೆಂದೆಣಿಸಬೇಡ! ಮಹಾಪರಾಕ್ರಮಿಗಳಾದ ನಮ್ಮ ಹಿರಿಯರಿಗೆ ವಂಶಪರಂಪರೆಯಾಗಿ ಪಟ್ಟವನ್ನುಕಟ್ಟಿದ ಸ್ಥಳವೇ ಇದು. ಆದುದರಿಂದಲೇ ಶತ್ರುಗಳಿಗೆ

---

ಜನು; ಈಮೂವರನ್ನು ಬಿಟ್ಟು ಉಳಿದ ಹದಿನೈದು ತೀರ್ಥಗಳಿಗೂ ಒಬ್ಬೊಬ್ಬರಿಗೆ ಮೂರು ಮೂರುಮೂರುಮಂದಿ ಚಾರರನ್ನು ಬಿಟ್ಟು ಮರ್ಮಗಳನ್ನು ತಿಳಿದುಕೊಳ್ಳಬೇಕು, ಮೇಲೆ ಹೇಳಿದ ಮೂವರು ಮುಖ್ಯಾಧಿಕಾರಿಗಳು ಮಾತ್ರ ಯಾವಾಗಲೂ ರಾಜನಿಗೆ ಸಮೀಪವರ್ತಿಗಳಾಗಿಯೇ ಇರುವುದರಿಂದ, ಅವರ ನಡತೆಗಳನ್ನು ರಾಜನು ತಾನಾಗಿಯೇ ಪರಿಶೀಲಿಸುತ್ತಿರಬಹುದು.

1 ಇದರಿಂದ, ಪಲಾಯಿತರಾದ ಶತ್ರುಗಳು ನಾಚಿಕೆಯನ್ನು ಬಿಟ್ಟು ಹಿಂತಿರುಗಿ ಬಂದು ದೇಶದಲ್ಲಿ ಸೇರುವುದಾದರೆ, ಅವರು ಏನೋ ದುರಭಿಪ್ರಾಯವನ್ನಿಟ್ಟುಕೊಂಡೇ ಬಂದಿರಬೇಕಾದುದರಿಂದ, ಅವರು ಕೇವಲದುರ್ಬಲರೆಂದು ತೋರಿದರೂ, ಉಪೇಕ್ಷೆಮಾಡದೆ, ಅವರವಿಷಯದಲ್ಲಿ ಬಹಳ ಎಚ್ಚರಿಕೆಯಿಂದಿರಬೇಕೆಂದು ಸೂಚಿತವಾಗುವುದು.

ಅಸಾಧ್ಯವಾದ ಆಪಟ್ಟಣಕ್ಕೆ ಅಯೋಧ್ಯೆಯೆಂಬ ಅನ್ವರ್ಥವಾದ ಹೆಸರು ಬಂದಿರುವುದು. ಆ ಪಟ್ಟಣದ ಹೊರಬಾಗಿಲುಗಳು ಅಭೇದ್ಯವಾಗಿರುವುವು. ಇದರಲ್ಲಿ ಬ್ರಾಹ್ಮಣಕ್ಷತ್ರಿಯವೈಶ್ಯರೆಂಬ ತ್ರೈವರ್ಣಿಕರೂ ಅವರವರ ಕರ್ಮಗಳಲ್ಲಿ ನಿರತರಾಗಿ ಯಾವಾಗಲೂ ದಟ್ಟವಾಗಿ ತುಂಬಿರುವರು. ಮತ್ತು ಅವರು ಜಿತೇಂದ್ರಿಯರಾಗಿಯೂ,ಉತ್ಸಾಹವುಳ್ಳವರಾಗಿಯೂ,ಆಯಾಜಾತಿಗಳಲ್ಲಿಪೂಜ್ಯತೆಯುಳ್ಳವರಾಗಿಯೂ ಇರುವರು. ಅದರಲ್ಲಿ ವಿಚಿತ್ರವಿಚಿತ್ರಗಳಾದ ಉಪ್ಪರಿಗೆಗಳಿರುವುವು. ಆನೆಕುದರೆಗಳೂ,ರಥಗಳೂ ಅಲ್ಲಿ ಅನೇಕವಾಗಿರುವುವು. ವಿದ್ವಜ್ಜನಗಳು ಅದರಲ್ಲಿ ಕಿಕ್ಕಿರಿಸಿ ತುಂಬಿರುವರು. ಹೀಗೆ ಸಮಸ್ತ ಸೌಭಾಗ್ಯಸಮೃದ್ಧಿಯುಳ್ಳದಾಗಿ ಉಲ್ಲಾಸಗೊಂಡಿರುವ ನಮ್ಮ ಅಯೋಧ್ಯಾನಗರಿಯನ್ನು ನೀನು ಕ್ಷೇಮದಿಂದ ಪಾಲಿಸುತ್ತಿರುವೆಯಾ? ನಮ್ಮ ದೇಶವು ಅಶ್ವಮೇಧಾದಿ ಮಹಾಯಾಗಗಳನ್ನು ಮಾಡಿದ ಅನೇಕ ಪ್ರದೇಶಗಳಿಂದ ಕೂಡಿದುದು. ಮತ್ತು ನಮ್ಮದೇಶಕ್ಕೆ ಬಂದ ಪ್ರಜೆಗಳು ಯಾವಕಾರಣದಿಂದಲೂ ಅದನ್ನು ಬಿಟ್ಟು ಹೋಗದೆ ಅಲ್ಲಿನ ಸುಭಿಕ್ಷವನ್ನೂ, ಸಂಪತ್ಸಮೃದ್ಧಿಯನ್ನೂ ನೋಡಿ ಅಲ್ಲಿಯೇ ಸ್ಥಿರವಾಗಿ ನಿಂತುಬಿಡುವರು. ಇಲ್ಲಿ ದೇವಾಲಯಗಳೂ, ಅರವಟಿಗೆಗಳೂ, ಕೆರೆಕೊಳಗಳೂ ಅಪರಿಮಿತವಾಗಿರುವುವು. ನಮ್ಮ ದೇಶದಲ್ಲಿರತಕ್ಕ ಪುರುಷರಾಗಲಿ ಸ್ತ್ರೀಯರಾಗಲಿ ಪ್ರತಿಯೊಬ್ಬರೂ ನಿತ್ಯಸಂತೋಷವುಳ್ಳವರಾಗಿರುವರು. ಸಂಘಗಳು, ಉತ್ಸವಗಳು ಮೊದಲಾದ ವಿನೋದಗಳಿಗೆ ನಮ್ಮದೇಶವು ನಿತ್ಯಾಶ್ರಯವಾಗಿರುವುದು. ಅಲ್ಲಿನ ಪ್ರದೇಶವೆಲ್ಲವೂ ಕೃಷಿಯೋಗ್ಯವಾಗಿರುವುದು. ನಮ್ಮದೇಶದಲ್ಲಿರತಕ್ಕ ಪಶುಸಮೃದ್ಧಿಯು ಬೇರೆಲ್ಲಿಯೂ ಇಲ್ಲವು. ಪ್ರಾಣಿಹಿಂಸೆಯೆಂಬುದೇ ನಮ್ಮದೇಶದಲ್ಲಿಲ್ಲವು.ಅತಿವೃಷ್ಟಿಯೇ ಮೊದಲಾದ ಈತಿಬಾಧೆಗಳೊಂದೂ ನಮ್ಮದೇಶದಲ್ಲಿ ಸಂಭವಿಸಲಾರವು.ಸರಯೂನದಿಯು ಅಲ್ಲಿಪ್ರವಹಿಸುತ್ತಿರುವುದರಿಂದ ಮಳೆಯನ್ನೇ ನಂಬಿಕೊಂಡು ಬೆಳೆಸಬೇಕಾದ ಸ್ಥಳವೇ ಅಲ್ಲಿ ದುರ್ಲಭವು. ಸಮಸ್ತ ಪ್ರದೇಶವೂ ನದೀಮಾತೃಕವಾಗಿಯೇ ಇರುವುದು. ಸಮಸ್ತವಿಷಯದಲ್ಲಿಯೂ ನಮ್ಮದೇಶವು ಅತಿಮನೋಹರವಾಗಿರುವುದು. ದುಷ್ಟಮೃಗಗಳೊಂದೂ ಅಲ್ಲಿಲ್ಲವು, ನಮ್ಮದೇಶದಲ್ಲಿ ಯಾವುದೊಂದು ಭಯಕ್ಕೂ ಅವಕಾಶವಿಲ್ಲ. ಅಲ್ಲಲ್ಲಿ ನವರ

ತ್ನದಗಣಿಗಳೂ, ಚಿನ್ನದಗಣಿಗಳೂ ನೇತ್ರಾನಂದಕರವಾಗಿರುವುವು. ಅಲ್ಲಿ ಪಾಪಬುದ್ಧಿಯುಳ್ಳ ಮನುಷ್ಯರೊಬ್ಬರಾದರೂ ಇಲ್ಲವು. ನಮ್ಮಹಿರಿಯರು ಅದನ್ನು ಎಷ್ಟೋಪ್ರೇಮದಿಂದ ಕಾಪಾಡುತ್ತ ಬಂದರು. ಹೀಗೆ ಸಂಪತ್ಸಮೃದ್ಧವಾದ ನಮ್ಮ ಕೋಸಲದೇಶವು ಸುಖದಿಂದಿರುವುದೆ? ಕೃಷಿಗೋರಕ್ಷಣಾದಿಗಳಿಂದ ಜೀವಿಸುವ ವೈಶ್ಯಜಾತಿಯವರೆಲ್ಲರೂ ನಿನಗೆ ಅನುಕೂಲರಾಗಿ ವರ್ತಿಸುತ್ತಿರುವರೇ? ಮುಖ್ಯವಾಗಿ ದೇಶದ ಸೌಖ್ಯಕ್ಕೆ ವ್ಯಾಪಾರವೇ ಮೂಲಾಧಾರವು. ದೇಶದಲ್ಲಿ ವ್ಯಾಪಾರವನ್ನು ಹೆಚ್ಚಿಸುವುದರಿಂದ ಸಮಸ್ತವಿಧದಲ್ಲಿಯೂ ಕ್ಷೇಮವುಂಟು. ನೀನು ಆ ವರ್ತಕರ ಕೋರಿಕೆಗಳನ್ನು ಈಡೇರಿಸಿ ಅವರ ಕೆಡಕುಗಳನ್ನು ಬಿಡಿಸಿ ಚೆನ್ನಾಗಿ ಪೋಷಿಸುತ್ತಿರುವೆಯಾ? ರಾಜನಾದವನು ತನ್ನ ದೇಶದಲ್ಲಿರುವ ಸಮಸ್ತಪ್ರಜೆಗಳನ್ನೂ ನಿಷ್ಪಕ್ಷಪಾತವಾಗಿ ಒಂದೇ ವಿಧದಲ್ಲಿ ಧರ್ಮದಿಂದ ಪೋಷಿಸಬೇಕು. ಅವರಲ್ಲಿಯೂ ವರ್ತಕರನ್ನು ವಿಶೇಷವಾಗಿ ಆದರಿಸಿ ರಕ್ಷಿಸಬೇಕು. ವತ್ಸನೆ![1] ನಿನ್ನ ಅಂತಃಪುರಸ್ತ್ರೀಯರನ್ನು ಆದರಿಸಿ ಅವರಿಗೆ ಅನುಕೂಲವಾಗಿ ವರ್ತಿಸುತ್ತಿರುವೆಯಾ? ಅವರಿಗೆ ದುಸ್ಸಹವಾಸಗಳೊಂದೂ ಸಂಭವಿಸದಂತೆ ಎಚ್ಚರಿಕೆಯಿಂದ ನೋಡಿಕೊಳ್ಳುತ್ತಿರುವೆಯಾ? ಅವರ ಮಾತನ್ನು ಯಾವಾಗಲೂ ನಿಜವೆಂದು ನಂಬಬಾರದೆಂಬುದನ್ನು ತಿಳಿದಿರುವೆಯಾ? ಯಾವ ರಹಸ್ಯವನ್ನೂ ಅವರಲ್ಲಿ ಹೊರಪಡಿಸುವುದಿಲ್ಲವಷ್ಟೆ? ನಿನ್ನ ದೇಶದಲ್ಲಿರುವ ಆನೆಗಳ ಕಾಡನ್ನು ಚೆನ್ನಾಗಿ ಕಾಪಾಡುತ್ತಿರುವೆಯಷ್ಟೆ? ಕಾಡಾನೆಗಳನ್ನು ಸಾಧುಮಾಡಿಡುವುದಕ್ಕೆ ಬೇಕಾದಷ್ಟು ಹೆಣ್ಣಾನೆಗಳನ್ನು ಸಾಕಿಟ್ಟಿರುವೆಯಷ್ಟೆ? ಮತ್ತು [2]ಹೆಣ್ಣಾನೆಗಳನ್ನೂ, ಕುದುರೆಗಳನ್ನೂ ಸಂಗ್ರಹಿಸಿಡುವುದರಲ್ಲಿ ಯಾವಾಗ

---

1 ಇದರಿಂದ ರಾಜನು ಯಾವಾಗಲೂ ತನ್ನ ಅಂತಃಪುರಸ್ತ್ರೀಯರನ್ನು ಅನಾದರಿಸದೆ ಲಾಲಿಸಿ ಪ್ರೋತ್ಸಾಹಿಸುತ್ತಿರಬೇಕೆಂದೂ, ಅವರಿಗೆ ಪರಪುರುಷಸಂಭಾಷಣಾದಿಗಳಿಗೆ ಅವಕಾಶವಿಲ್ಲದಂತೆ ಎಚ್ಚರಿಕೆಯಿಂದ ನೋಡಿಕೊಳ್ಳುತ್ತಿರಬೇಕೆಂದೂ, ಸ್ತ್ರೀಯರ ಮಾತನ್ನು ನಂಬುವುದಾಗಲಿ, ಅವರಿಗೆ ರಾಜರಹಸ್ಯಗಳನ್ನು ಹೇಳುವುದಾಗಲಿ, ಯಾವಾಗಲೂ ಅಪಾಯಕರವೆಂದೂ ಸೂಚಿತವಾಗುವುದು.

2 ಇದರಿಂದ ರಾಜನು ಯಾವಾಗಲೂ, ಗಜತುರಗಾದಿಗಳನ್ನು ಸಂಗ್ರಹಿಸುತ್ತಲೇ ಇರಬೇಕೆಂದೂ, ಆ ವಿಷಯದಲ್ಲಿ ಎಷ್ಟಿದ್ದರೂ ತೃಪ್ತಿಹೊಂದಬಾರದೆಂದೂ, ತಾನು

ಲೂ ನೀನು ತೃಪ್ತಿಹೊಂದದಿರುವೆಯಷ್ಟೆ? ನೀನು[1] ನಿತ್ಯವೂ ಪ್ರಾತಃಕಾಲದಲ್ಲಿ ಎದ್ದು, ಚೆನ್ನಾಗಿ ಅಲಂಕರಿಸಿಕೊಂಡು, ಸಭಾಸ್ಥಾನವನ್ನು ಪ್ರವೇಶಿಸಿ, ಪ್ರಜೆಗಳಿಗೆ ದರ್ಶನವನ್ನು ಕೊಡುತ್ತಿರುವೆಯಷ್ಟೆ? [2]ನಿನ್ನ ಸೇವಕರು ನಿರ್ಭಯವಾಗಿ ನಿನ್ನಿದಿರಿಗೆ ನಿಂತು ಮಾತಾಡುವಷ್ಟು ಸ್ವಾತಂತ್ರ್ಯವನ್ನು ವಹಿಸಿಲ್ಲವಷ್ಟೆ? ಅಥವಾ ಆ ಸೇವಕರಿಗೆ ನೀನು ಸ್ವಲ್ಪವಾದರೂ ಮುಖಕೊಟ್ಟು ಮಾತಾಡದೆ ಹಿಂತಿರುಗಿಸುವುದಿಲ್ಲವಷ್ಟೆ? ಹೀಗೆ ಅವರಲ್ಲಿ ವಿಶೇಷವಾದ ಹೆಮ್ಮೆಯನ್ನಾಗಲಿ, ಬಹಳಸಲಿಗೆಯನ್ನಾಗಲಿ ತೋರಿಸದೆ, ಮಧ್ಯಮರೀತಿಯಲ್ಲಿ ವರ್ತಿಸುತ್ತಿರುವೆಯಷ್ಟೆ? ಹೀಗಿರುವುದೇ ಕಾರ್ಯಸಿದ್ಧಿಗೆ ಕಾರಣವೆಂಬುದನ್ನು ಚೆನ್ನಾಗಿಬಲ್ಲೆಯಷ್ಟೆ? [3]ದುರ್ಗಗಳೆಲ್ಲವೂ ಧನಧಾನ್ಯಗಳಿಂದಲೂ, ಜಲಸಮೃ

---

ತೃಪ್ತನಾಗಿ ಬಿಟ್ಟುಬಿಟ್ಟವುಗಳನ್ನು ಶತ್ರುಗಳು ಸಂಗ್ರಹಿಸಿಡುವರಾದುದರಿಂದ ಅವರ ಬಲವನ್ನು ಹೆಚ್ಚಿಸಿದಂತಾಗುವುದೆಂದೂ ಸೂಚಿತವು.

1 ಇದರಿಂದ ರಾಜನು ಪ್ರತಿದಿನವೂ ಬೆಳಗಾದ ಕೂಡಲೆ ಎದ್ದು ಪ್ರಜೆಗಳಿಗೆ ದರ್ಶನವನ್ನು ಕೊಡಬೇಕೆಂದೂ, ಹಾಗಿಲ್ಲದಿದ್ದರೆ ಅವರಿಗೆ ತನ್ನ ದೇಹಾರೋಗ್ಯವಿಷಯದಲ್ಲಿ ಸಂದೇಹವುಂಟಾಗಿ ಭಯಪಡುವರೆಂದೂ ಸೂಚಿತವು.

2 ಇದರಿಂದ "ರಾಜನು ತನ್ನ ಸೇವಕರಲ್ಲಿ ವಿಶೇಷವಾಗಿ ಸಲಿಗೆಯನ್ನೂ ತೋರಿಸಬಾರದು. ಅವರನ್ನು ಬಹಳ ಉದಾಸೀನವಾಗಿಕಂಡು ಕ್ರೌರ್ಯವನ್ನೂ ತೋರಿಸಬಾರದು. ಅವರಲ್ಲಿ ಬಹಳಸಲಿಗೆಯನ್ನು ತೋರಿಸಿದರೆ ಅವರಿಗೆ ತನ್ನಲ್ಲಿ ಅನಾದರವುಂಟಾಗಿ ಭಯವು ತಪ್ಪಿ ಹೋಗುವುದು. ಅವರಲ್ಲಿ ಕೇವಲ ಔದಾಸೀನ್ಯವನ್ನೂ ಕ್ರೌರ್ಯವನ್ನೂ ತೋರಿಸುತ್ತಿದ್ದರೆ, ಅವರಿಗೆ ತನ್ನಲ್ಲಿ ಪ್ರೀತಿಯು ತಪ್ಪುವುದು. ಅವರು ತಮ್ಮತಮ್ಮ ಕಷ್ಟನೈಷ್ಠುರ್ಯಗಳನು ಅರಿಕೆಮಾಡಿಕೊಳ್ಳುವುದಕ್ಕೂ ಅವಕಾಶವಿಲ್ಲದೆ ಹೋಗುವುದರಿಂದ ಕುಪಿತರಾಗಿ ರಾಜಕಾರ್ಯಕ್ಕೆ ಹಾನಿಯನ್ನು ತರುವರು. ಆದುದರಿಂದ ಅವರಲ್ಲಿ ಬಹಳ ಸಲಿಗೆಯನ್ನಾಗಲಿ, ಬಹಳ ಹೆಮ್ಮೆಯನ್ನಾಗಲಿ ತೋರಿಸದೆ ಮಧ್ಯರೀತಿಯಿಂದ ವರ್ತಿಸಬೇಕು" ಎಂಬೀನೀತಿಯು ಬೋಧಿತವಾಗುವುದು:

3 ಇದರಿಂದ ರಾಜನು ಜಲಪರ್ವತಾದಿ ದುರ್ಗಗಳೆಲ್ಲವೂ ಯಾವಾಗಲೂ ಧನಧಾನ್ಯ ಜಲಸಮೃದ್ಧವಾಗಿರುವಂತೆಯೂ, ಯಂತ್ರಗಳಿಂದಲೂ, ಆಯುಧಗಳಿಂದಲೂ ಪೂರ್ಣವಾಗಿರುವಂತೆಯೂ ನೋಡಿಕೊಳ್ಳಬೇಕು. ಅಲ್ಲಿ ವಿಶೇಷವಾಗಿ ಶಿಲ್ಪಿಗಳೂ, ಧನುರ್ಧಾರಿಗಳೂ ಸಿದ್ಧರಾಗಿರಬೇಕು" ಎಂಬ ನೀತಿಯು ಬೋಧಿತವಾಗುವುದು.

ಧ್ವಿಯಿಂದಲೂ, ಯಂತ್ರಗಳಿಂದಲೂ, ನಾನಾವಿಧವಾದ ಆಯುಧಗಳಿಂದಲೂ ತುಂಬಿ, ಅಲ್ಲಲ್ಲಿ ಶಿಲ್ಪಿಗಳೂ, ಧನುರ್ಧಾರಿಗಳೂ ನಿಯಮಿಸಲ್ಪಟ್ಟಿರುವರಷ್ಟೆ? [1]ನಿನಗೆ ಬರತಕ್ಕ ಆದಾಯವು ಹೆಚ್ಚಾಗಿಯೂ, ನೀನು ಮಾಡತಕ್ಕ ವ್ಯಯವು ಮಿತವಾಗಿಯೂ ಇರುವುದಷ್ಟೆ? ನಿನ್ನ ಬಂಡಾರದ ಹಣವು ಯಾವಾಗಲೂ ಅಪಾತ್ರದಲ್ಲಿವಿನಿಯೋಗವಾಗದೆ ಸತ್ಪಾತ್ರಗಳಲ್ಲಿಯೇ ಉಪಯೋಗಿಸಲ್ಪಡುತ್ತಿರುವುದಷ್ಟೆ? ನಿನ್ನ ವೆಚ್ಚವೆಲ್ಲವೂ ದೇವತೆಗಳಿಗಾಗಿಯೂ, ಪಿತೃಗಳಿಗಾಗಿಯೂ, ಬ್ರಾಹ್ಮಣರಿಗಾಗಿಯೂ, ಅತಿಥಿಗಳಿಗಾಗಿಯೂ, ಯೋಧರಿಗಾಗಿಯೂ, ಮಿತ್ರವರ್ಗಗಳಿಗಾಗಿಯೂ ವಿಶೇಷವಾಗಿ ಉಪಯೋಗಿಸಲ್ಪಡುತ್ತಿರುವುದಷ್ಟೆ? [2]ಪರಿಶುದ್ಧವಾದ ಮನಸ್ಸುಳ್ಳವನಾಗಿಯೂ, ಪೂಜ್ಯನಾ

1 ಇದರಿಂದ ರಾಜನು ರಾಜ್ಯದಲ್ಲಿ ಆದಾಯವು ಹೆಚ್ಚಾಗಿಯೂ, ವ್ಯಯವು ಮಿತವಾಗಿಯೂ ಇರುವಂತೆ ಆದಾಯವ್ಯಯಗಳನ್ನು ನೋಡಿಕೊಳ್ಳಬೇಕೆಂದೂ, ಬಂಡಾರದ ಹಣವನ್ನು ನಟವಿಟಗಾಯಕಾದಿಗಳಿಗೇ ಹೆಚ್ಚಾಗಿ ವಿನಿಯೋಗಿಸಬಾರದೆಂದೂ, ದೇವತೆಗಳಿಗಾಗಿಯೂ, ಪಿತೃಗಳಿಗಾಗಿಯೂ, ಯೋಗ್ಯರಾದ ಬ್ರಾಹ್ಮಣರಿಗಾಗಿಯೂ ವ್ಯಯಮಾಡುವುದರಲ್ಲಿಮಾತ್ರ ಕೂಡಿದಮಟ್ಟಿಗೆ ಔದಾರ್ಯವನ್ನೇ ತೋರಿಸುತ್ತ, ಉಳಿದವಿಷಯಗಳಲ್ಲಿ ಮಿತವ್ಯಯವನ್ನು ಮಾಡಬೇಕೆಂದೂ ಸೂಚಿತವು.

2 ಈ ಮುಂದಿನ ವಾಕ್ಯಗಳಿಂದ ರಾಜ್ಯಾಧಿಕಾರಿಯು ಅಪರಾಧಿಗಳನ್ನು ದಂಡಿಸುವುದರಲ್ಲಿ ಅನುಸರಿಸಬೇಕಾದ ಕೆಲವು ನೀತಿಗಳು ವ್ಯಕ್ತವಾಗುವುವು ಹೇಗೆಂದರೆ:- "ಪೂಜ್ಯನಾದ ಒಬ್ಬ ಪುರುಷನಮೇಲೆ ದೈವಿಕವಾಗಿ ಯಾವುದಾದರೂ ಒಂದು ಅಪರಾಧವು ಹೊರಿಸಲ್ಪಟ್ಟಾಗ, ರಾಜನು ಬಹುಜಾಗರೂಕತೆಯಿಂದ ಅದರ ಪೂರ್ವೋತ್ತರಗಳನ್ನು ವಿಚಾರಿಸಿ, ತನ್ನ ಮನಸ್ಸಿಗೆ ಸಂಪೂರ್ಣವಾದ ನಿಜಸ್ಥಿತಿಯು ಕಂಡು ಬಂದ ಹೊರತು ದಂಡನೆಯನ್ನು ವಿಧಿಸಬಾರದು. ಅಪರಾಧಿಯೆಂದು ನಿಜವಾಗಿ ಕಂಡುಬಂದಾಗ ಆತನನ್ನು ದಂಡಿಸದಿರುವುದೂ ಮಹಾದೋಷವು. ಒಬ್ಬಬಡವನಿಗೂ, ಮತ್ತೊಬ್ಬಹಣಗಾರನಿಗೂ ಪರಸ್ಪರ ವಿವಾದವು ಬಂದಾಗ, ನ್ಯಾಯಾಧಿಕಾರಿಗಳು ಲಂಚದಾಸೆಗಾಗಿ ಹಣಗಾರನಲ್ಲಿ ಪಕ್ಷಪಾತವನ್ನಿಟ್ಟು ನ್ಯಾಯವಿರುದ್ಧವಾಗಿ ವ್ಯವಹಾರಗಳನ್ನು ತೀರ್ಮಾನಿಸಿದರೆ, ಅದರಿಂದ ರಾಜನಿಗೆ ಮಹಾದೋಷವುಂಟಾಗುವುದು. ಈ ಅಕೃತ್ಯಗಳಿಗೆ ಅವಕಾಶವಿಲ್ಲದಂತೆ ಗಮನಿಸುವುದು ರಾಜನಕರ್ತವ್ಯವು. ಶಿಕ್ಷಾರ್ಹರಲ್ಲದವರನ್ನು ಶಿಕ್ಷಿಸಿದರೆ ರಾಜನ ವಂಶವೂ, ರಾಜನ ಸಂಪತ್ತುಗಳೂ ನಶಿಸುವುವು." ಎಂಬಿವೇ ಮೊದಲಾದ ನೀತಿಗಳು ಇದರಿಂದ ವ್ಯಕ್ತವಾಗುವುವು.

ಗಿಯೂ ಇರುವ ಪುರುಷನೊಬ್ಬನು ದೈವಿಕವಾಗಿ ಕಳವಿನ ತಪ್ಪಿಗೆ ಗುರಿಯಾಗಿ ನಿನ್ನ ಮುಂದೆ ನಿಲ್ಲಿಸಲ್ಪಟ್ಟರೆ, ಆತನನ್ನು ನೀನು ಶಿಕ್ಷಿಸುವ ಕಾಲದಲ್ಲಿ ನೀತಿ ಶಾಸ್ತ್ರಜ್ಞರಾದವರೊಡನೆ ಚೆನ್ನಾಗಿ ಪರ್ಯಾಲೋಚಿಸದೆ ಲೋಭಬುದ್ಧಿಯಿಂದಲೇ ಆತನನ್ನು ಕೊಲ್ಲಬಾರದೆಂಬುದನ್ನು ಬಲ್ಲೆಯಷ್ಟೆ?ಕಳವುಮಾಡಿದವನು ಒಂದುವೇಳೆ ತಲೆತಪ್ಪಿಸಿಕೊಂಡು ಹೋಗಿ, ಕಾಲಾಂತರದಲ್ಲಿ ಆತನು ತಾನು ಕದ್ದವಸ್ತುವಿನೊಡನೆ ಕೈಗೆ ಸಿಕ್ಕಿದಾಗ. ಆತನನ್ನು ನೀತಿಶಾಸ್ತ್ರಜ್ಞರಾದ ಪಂಡಿತರ ಮೂಲಕವಾಗಿ ಚೆನ್ನಾಗಿ ಪರೀಕ್ಷೆಮಾಡಿಸಿ ಆತನ ಕಾರ್ಯವು ಚೆನ್ನಾಗಿ ವ್ಯಕ್ತವಾದಮೇಲೆಯೂ. ಲಂಚದಾಸೆಗಾಗಿ ಆತನನ್ನು ಶಿಕ್ಷಿಸದೆ ಬಿಡದಿರುವೆಯಷ್ಟೆ ? ಎಲೆವತ್ಸನೆ ! ವಿಶೇಷವಿದ್ಯಾವಂತರಾದ ನಿನ್ನ ಮಂತ್ರಿಗಳು ಧನಿಕನಿಗೂ, ದರಿದ್ರನಿಗೂ ಒಂದು ವಿವಾದವು ಬಂದೊದಗಿದಾಗ, ಅವರ ವ್ಯವಹಾರವನ್ನು ತೀರಿಸುವವಿಷಯದಲ್ಲಿ ಸ್ವಲ್ಪವೂ ಹಣದಾಸೆಯನ್ನಿಡದೆ, ನಿಷ್ಪಕ್ಷಪಾತವಾಗಿ ಪರೀಕ್ಷಿಸಿ,ನ್ಯಾಯರೀತಿಯಿಂದ ಆ ವಿವಾದಗಳನ್ನು ತೀರಿಸುತ್ತಿರುವರೆ? ಒಬ್ಬರಲ್ಲಿ ಇಲ್ಲದ ದೋಷವು ಹೊರಿಸಲ್ಪಟ್ಟಾಗ, ಅವರ ವಿಷಯವಾಗಿ ನ್ಯಾಯಾನ್ಯಾಯವಿಚಾರವನ್ನೇ ಮಾಡದೆ, ಕೇವಲ ಭೋಗಾರ್ಥವಾಗಿಯೇ ರಾಜ್ಯಾಧಿಕಾರವನ್ನು ನಡೆಸುವುದಾಗಿ ತಿಳಿದುಕೊಂಡು,ಉದಾಸೀನನಾಗಿರಬಾರದು. ಹಾಗೆ ರಾಜನ ಅನ್ಯಾಯಪ್ರವರ್ತನೆಯಿಂದ ಕಷ್ಟಕ್ಕೆ ಸಿಕ್ಕಿಬಿದ್ದ ವಾದಿಗಳು, ಸಂಕಟದಿಂದ ಕಣ್ಣೀರನ್ನು ಬಿಟ್ಟರೆ, ಆ ಬಾಷ್ಪಬಿಂದುಗಳು ರಾಜನಸಂತಾನವನ್ನೂ, ಆತನ ಪಶುಸಮೃದ್ಧಿಯನ್ನೂ ಸಂಪೂರ್ಣವಾಗಿ ಕೆಡಿಸಿಬಿಡುವುದೆಂಬುದನ್ನು ಬಲ್ಲೆಯಾ? ಎಲೈ ರಘುವಂಶೋತ್ತಮನೆ [1] ವೃದ್ಧರನ್ನೂ, ಬಾಲರನ್ನೂ, ಪಂಡಿತರನ್ನೂ ದಾನದಿಂದಲೂ, ಸ್ನೇಹಭಾವದಿಂದಲೂ, ಮಾತಿನಿಂದಲೂ ಚೆನ್ನಾಗಿ ಆದರಿಸಿ, ಮನ್ನಿಸುತ್ತಿ

---

1 ಇದರಿಂದ "ರಾಜನು ವೃದ್ಧರನ್ನೂ, ಬಾಲರನ್ನೂ, ಪಂಡಿತರನ್ನೂ ಆಗಾಗೆ ದಾನಾದಿಗಳಿಂದ ಸತ್ಕರಿಸಿ ವಶಪಡಿಸಿಕೊಳ್ಳಬೇಕು. ಮತ್ತು ಗುರುಜನರನ್ನೂ, ವೃದ್ಧರನ್ನೂ, ತಪಸ್ವಿಗಳನ್ನೂ, ದೇವತೆಗಳನ್ನೂ, ಅತಿಥಿಗಳನ್ನೂ, ಚತುಷ್ಪಥವೃಕ್ಷಗಳನ್ನೂ, ಬ್ರಾಹ್ಮಣೋತ್ತಮರನ್ನೂ ಕಂಡಾಗ ನಮಸ್ಕರಿಸದೆ ಹೋಗಬಾರದು." ಎಂಬೀ ನೀತಿಯು ಬೋಧಿತವಾಗುವುದು.

ರುವೆಯಷ್ಟೆ?ಗುರುಗಳಿಗೂ, ವೃದ್ಧರಿಗೂ, ತಾಪಸರಿಗೂ, ದೇವತೆಗಳಿಗೂ, ಅತಿಥಿಗಳಿಗೂ, ಚತುಷ್ಪಥಗಳಲ್ಲಿ ದೇವತೆಗಳಿಗೆ ವಾಸಯೋಗ್ಯವಾದ ಮಹಾ ವೃಕ್ಷಗಳಿಗೂ, ಯಾಗಾದಿಕಾರ್ಯಗಳಿಂದ ಕೃತಕೃತ್ಯರಾಗಿರುವ ಬ್ರಾಹ್ಮಣರಿಗೂ ಅಲ್ಲಲ್ಲಿಕಂಡಾಗ ನಮಸ್ಕರಿಸುತ್ತಿರುವೆಯಷ್ಟೆ?[1]ಅರ್ಥಾರ್ಜನೆಯಲ್ಲಿಯೇಆಸಕ್ತನಾಗಿ ಧರ್ಮವನ್ನು ಬಿಡದಿರುವೆಯಷ್ಟೆ? ಅಥವಾ ಧರ್ಮವೊಂದನ್ನೇ ಸಂಪಾದಿಸಬೇಕೆಂದು ಅರ್ಥವನ್ನು ಬಿಡುವುದಿಲ್ಲವಷ್ಟೆ? ಸುಖಾಭಿಲಾಷೆಯಿಂದಾಗಲಿ, ಕಾಮವಶದಿಂದಲಾಗಲಿ, ಧರ್ಮಾರ್ಥಗಳೆರಡನ್ನೂ ಬಿಡದಿರುವೆಯಷ್ಟೆ! ಎಲೈಜಯಶೀಲನೆ! ನೀನು ಆಯಾಕಾಲಗತಿಗಳನ್ನು ಚೆನ್ನಾಗಿ ತಿಳಿದವನೆಂಬುದರಲ್ಲಿ ಸಂದೇಹವಿಲ್ಲ. ಈ ಧರ್ಮಾರ್ಥಕಾಮಗಳು ಮೂರನ್ನೂ ಬೇರ್ಪಡಿಸಿಕೊಂಡು,ಅವುಗಳನ್ನು ಉಚಿತಕಾಲಗಳಲ್ಲಿ ಸೇವಿಸುತ್ತಿರುವೆಯಷ್ಟೆ? ಸಕಲಶಾಸ್ತ್ರಜ್ಞರಾದ ಬ್ರಾಹ್ಮಣರೂ, ಪುರಜನರೂ, ದೇಶದಜನರೂ ಯಾವಾಗಲೂ ನಿನಗೆ ಶ್ರೇಯಸ್ಸನ್ನೇ ಕೋರುತ್ತಿರುವರಷ್ಟೆ? ಎಲೈ ಪ್ರಾಜ್ಞನೆ ಲೋಕದಲ್ಲಿ ನಾಸ್ತಿಕ್ಯ, ಸುಳ್ಳು, ಕೋಪ, ಅಜಾಗರೂಕತೆ, ಸೋಮಾರಿತನ, ಜ್ಞಾನಿಗಳಲ್ಲಿ ಅನಾದರಣೆ, ಇಂದ್ರಿಯಗಳಿಗೆ ವಶನಾಗಿರುವಿಕೆ, ಮಂತ್ರಿಗಳನ್ನು ಅನಾದರಿಸಿ ತಾನೊಬ್ಬನೇ ರಾಜಕಾರ್ಯಗಳನ್ನು ಆಲೋಚಿಸುವಿಕೆ, ಯುಕ್ತಾಯುಕ್ತವಿವೇಚನೆಯಿಲ್ಲದವರೊಡನೆಯೂ, ಅನುಭವವಿಲ್ಲದವರೊಡನೆಯೂ ಕಾರ್ಯಾಲೋಚನೆ, ನಿಶ್ಚಯಿಸಿದ ಕಾರ್ಯಗಳನ್ನು ಆರಂಭಿಸದಿರುವಿಕೆ, ಆಲೋಚಿಸಿ ಮನಸ್ಸಿನಲ್ಲಿಟ್ಟುಕೊಂಡಿರತಕ್ಕ ರಹಸ್ಯಗಳನ್ನು ಹೊರಗೆಬಿಡುವುದು, ಪ್ರಾತಃಕಾಲದಲ್ಲಿ ಎದ್ದಕೂಡಲೆ ತನ್ನ ಶ್ರೇಯಸ್ಸಿಗಾಗಿಮಾಡಬೇಕಾದ

---

1 ಈ ಮುಂದಿನ ವಾಕ್ಯಗಳಿಂದ ರಾಜನಿಗೆ ಧರ್ಮಾರ್ಥಕಾಮಗಳೆಂಬ ತ್ರಿವರ್ಗಗಳಲ್ಲಿರಬೇಕಾದ ಪ್ರವರ್ತನೆಯ ರೀತಿಯು ಬೋಧಿಸಲ್ಪಡುವುದು. ರಾಜನು ಕಾಮದಲ್ಲಿಯೇ ವಿಶೇಷಾಸಕ್ತಿಯಿಂದ, ಧರ್ಮಕ್ಕೂ ಅರ್ಥಕ್ಕೂ ಹಾನಿಯನ್ನು ತರಬಾರದು. ಹಾಗೆಯೇ ಧರ್ಮೈಕನಿರತನಾಗಿ ಕಾಮಾರ್ಥಗಳನ್ನು ಬಿಡಬಾರದು. ಅರ್ಥಪರಾಯಣನಾಗಿ ಧರ್ಮಕಾಮಗಳಿಗೂ ಲೋಪವನ್ನುಂಟುಮಾಡಬಾರದು. ಈಮೂರನ್ನೂ ಯಥೋಚಿತವಾಗಿ ಸಂಗ್ರಹಿಸುತ್ತಿರಬೇಕು. ಧರ್ಮಾರ್ಜನೆಗಾಗಿ ಪೂರ್ವಾಹ್ನವನ್ನೂ, ಅರ್ಥಾರ್ಜನೆಗಾಗಿ ಅಪರಾಹ್ಣವನ್ನೂ, ಕಾಮಾರ್ಜನೆಗಾಗಿ ಸಾಯಾಹ್ನವನ್ನೂ ವಿಭಾಗಿಸಿಕೊಂಡು,ಆಯಾಕಾಲ ಪರಿಮಾಣದಲ್ಲಿಯೇ ಅವುಗಳನ್ನು ಸೇವಿಸುತ್ತಿರಬೇಕೆಂದು ಸೂಚಿತವು.

ದರ್ಪಣದರ್ಶನವೇ ಮೊದಲಾದ ಮಂಗಳಕಾರ್ಯವನ್ನು ನಡೆಸದಿರುವಿಕೆ, (ಗೌರವಾಗೌರವಗಳನ್ನೆಣಿಸದೆ ಇದಿರಿಗೆ ಬಂದವರೆಲ್ಲರನ್ನೂ ಪ್ರತ್ಯುತ್ಥಾನ ದಿಂದ ಗೌರವಿಸುವಿಕೆ) ಒಂದೇಕಾಲದಲ್ಲಿ ನಾಲ್ಕುಕಡೆಗಳಿಗೂ ದಂಡೆತ್ತಿ ಹೋಗಿಸಮಸ್ತಶತ್ರುಗಳೊಡನೆಯೂ ಯುದ್ಧವನ್ನಾರಂಭಿಸುವಿಕೆ, ಈ ಹದಿ ನಾಲ್ಕು ರಾಜದೋಷಗಳನ್ನೂ ನೀನು ಚೆನ್ನಾಗಿ ತಿಳಿದು ಅವುಗಳನ್ನು ಸಂಪೂ ರ್ಣವಾಗಿ ಬಿಟ್ಟಿರುವೆಯಷ್ಟೆ?*ಮತ್ತು ನೀನು,[1] ದಶವರ್ಗಗಳನ್ನೂ,[2] ಪಂಚವ

---

* ಇದಕ್ಕೆ "ದಶಪಂಚ ಚತುರ್ವರ್ಗಾನ್, ಸಪ್ತವರ್ಗಂಚ ತತ್ವತಃ, ಅಷ್ಟವರ್ಗಂ ತ್ರಿವರ್ಗಂಚ ವಿದ್ಯಾಸ್ತಿಸ್ರಶ್ಚ ರಾಘವ ॥ ಇಂದ್ರಿಯಾಣಾಂಜಯಂ ಬುದ್ಧ್ವಾ ಷಾಡ್ಗುಣ್ಯಂ ದೈವಮಾನುಷಂ । ಕೃತ್ಯಂವಿಂಶತಿವರ್ಗ್ಗಂಚ ತಥಾಪ್ರಕೃತಿಮಂಡಲಂ ॥ ಯಾತ್ರಾದಂಡ ವಿಧಾನಂಚ ದ್ವಿಯೋನೀ ಸಂಧಿವಿಗ್ರಹೌ । ಕಚ್ಚಿದೇತಾನ್ ಮಹಾಪ್ರಾಜ್ಞಯಥಾವದ ನುಮನ್ಯಸೇ" ಎಂದುಮೂಲವು. ಇಲ್ಲಿವರ್ಗಗಳೆಂದರೆ ಸಮೂಹಗಳೆಂದು ಹೆಸರು. ಇವುಗಳಲ್ಲಿ ಕೆಲವು ತ್ಯಾಜ್ಯಗಳಾಗಿಯೂ, ಕೆಲವು ಪರಿಗ್ರಾಹ್ಯಗಳಾಗಿಯೂ ಇರುವುವು. ಹೇಗೆಂದರೆ:—

1 ದಶವರ್ಗಗಳು:-"ಮೃಗಾಯಾಕ್ಷೋದಿವಾಸ್ವಾಪಃ । ಪರಿವಾದಸ್ತ್ರಿಯೋ ಮದಃ। ತೌರ್ಯತ್ರಿಕಂ ವೃಥಾಟ್ಯಾಚ ಕಾಮಜೋ ದಶಕೋಗಣಃ" ಎಂದರೆ, ಬೇಟೆ, ಜೂಜು ಹಗಲು ನಿದ್ರೆಮಾಡುವುದು, ಪರನಿಂದೆ, ಸ್ತ್ರೀಮೋಹವು, ಮದವು, ನೃತ್ಯವು, ಗೀತವು, ವಾದ್ಯವು, ವ್ಯರ್ಥವಾಗಿ ತಿರುಗುತ್ತಿರುವುದು, ಎಂಬಿವು ಹತ್ತೂ ಕಾಮದಿಂದ ಹುಟ್ಟತಕ್ಕ ಗುಣಗಳು. ಇವೆಲ್ಲವೂ ತದೇಕವ್ಯಸನವನ್ನುಂಟುಮಾಡುವುದರಿಂದ ರಾಜನಿಗೆ ತ್ಯಾಜ್ಯ ಗಳು. ಅಥವಾ ಕಾಮಂದಕನೀತಿಯಲ್ಲಿ ಹೇಳಿರುವಂತೆ ಈ ದಶವರ್ಗಗಳು ಪ್ರಕಾರಾಂ ತರವಾಗಿಯೂ ಹೇಳಲ್ಪಟ್ಟಿರುವುವು. ಅವು ಯಾವುವೆಂದರೆ:– "ಲುಬ್ಧಃಕ್ರೂರೋಽಲ ಸೋಽಸತ್ಯಃ ಪ್ರಮಾದೀ ಭೀರುರಸ್ಥಿರಃ।ಮೂಢೋಽವಯೋಽವಮಂತಾಚ ಸುಖಚ್ಛೇದ್ಯೋ ರಿಪುರ್ಮತಃ।" ಎಂಬಂತೆ ಲೋಭವೂ, ಕೋಪವೂ, ಸೋಮಾರಿತನವೂ, ಅಸತ್ಯವೂ, ಅಜಾಗರೂಕತೆಯೂ, ಅಂಜಿಕೆಯೂ, ಚಂಚಲಮನಸ್ಸೂ, ಮೌಢ್ಯವೂ, ನೀತಿಯಿಲ್ಲದಿರು ವಿಕೆಯೂ, ಪರರನ್ನು ಅವಮಾನಪಡಿಸುವುದೂ ಈ ಹತ್ತುದುರ್ಗುಣಗಳೂ ದಶವರ್ಗವೆ ನಿಸುವುವು.

2 ಪಂಚವರ್ಗಗಳು:—ಐದು ವಿಧವಾದ ದುರ್ಗಗಳು ಪಂಚವರ್ಗವೆನಿಸುವುವು."ಔ ದಕಂ ಪಾರ್ವತಂ ವಾರ್ಕ್ಷಮೈರಿಣಂ ಧಾನ್ವನಂ ತಥಾ । ಶಸ್ತಂಪ್ರಶಸ್ತಮತಿಭಿಃ ದುರ್ಗಂ ದುರ್ಗೋಪಚಿಂತಕೈಃ," ಎಂಬುದಾಗಿ ಮನುವಚನವು. ಜಲದುರ್ಗ, ಪರ್ವತದುರ್ಗ,

ರ್ಗಗಳನ್ನೂ, [1]ಚತುರ್ವರ್ಗಗಳನ್ನೂ, ರಾಜ್ಯಾಂಗಾದಿ [2]ಸಪ್ತವರ್ಗಗಳನ್ನೂ

---

ವೃಕ್ಷದುರ್ಗ, ವನದುರ್ಗ, ಥಾನುಷ್ಕದುರ್ಗವೆಂದು ಐದುವಿಧವಾದ ದುರ್ಗಗಳುಂಟು. ಈ ದುರ್ಗಗಳೆಲ್ಲವನ್ನೂ ರಾಜನು ಜಾಗರೂಕತೆಯಿಂದ ಕಾಪಾಡಬೇಕೆಂದು ಭಾವವು. ಅಥವಾ ಪಂಚವರ್ಗವೆಂದರೆ: ಕಾಮಂದಕವಚನಾನುಸಾರವಾಗಿ ಪಂಚವಿಧವೈರಗ ಳೆಂದೂ ಗ್ರಹಿಸಬಹುದು. "ಸಾಪತ್ನಂ ವಸ್ತುಜಂ ಸ್ತ್ರೀಜಂ ವಾಗ್ಜಾತಮಪರಾಧಜಂ । ವೈರಪ್ರಭೇದನಿಪುಣೈಃ ವೈರಂ ಪಂಚವಿಧಂಸ್ಮೃತಂ॥" ಎಂದರೆ ಸವತಿತಾಯಿಯಿಂದುಂ ಟಾದುದು, ದ್ರವ್ಯಮೂಲವಾದುದು, ಸ್ತ್ರೀಮೂಲವಾದುದು, ವಾಙ್ಮೂಲಕವಾದುದು, ತಪ್ಪಿತಗಳಿಂದುಂಟಾದುದು, ಎಂಬ ಈ ಐದುವಿಧವಾದ ವೈರಕಾರಣಗಳುಂಟು. ರಾಜ ನು ಇವುಗಳನ್ನು ಎಚ್ಚರಿಕೆಯಿಂದ ನೋಡಿಕೊಳ್ಳಬೇಕು.

1 ಚತುರ್ವರ್ಗಗಳು:- ಸಾಮದಾನಭೇದದಂಡಗಳೆಂಬ ಚತುರುಪಾಯಗಳಿಗೂ ಚತುರ್ವರ್ಗಗಳೆಂದು ಹೆಸರು. ಅಥವಾ ಚತುರ್ವರ್ಗವೆಂದರೆ ಕಾಮಂದಕನೀತಿಯ ನ್ನನುಸರಿಸಿ ಚತುರ್ವಿಧ ಮಿತ್ರರೆಂದೂ ಹೇಳಬಹುದು. ಅವು ಯಾವುವೆಂದರೆ "ಔರ ಸಂ ತಂತುಸಂಬಂಧಂ ತಥಾ ವಂಶಕ್ರಮಾಗತಂ । ರಕ್ಷಿತಂ ವ್ಯಸನೇಭ್ಯಶ್ಚ ಮಿತ್ರಂಜ್ಞೇ ಯಂ ಚತುರ್ವಿಧಂ" ಸ್ವಭಾರ್ಯೆಯಲ್ಲಿ ಹುಟ್ಟಿದವನು, ಬಂಧುತ್ವಸಂಬಂಧವುಳ್ಳವನು, ವಂಶಕ್ರಮವಾಗಿ ಬಂದವನು- ಆಪತ್ತಿನಿಂದ ರಕ್ಷಿಸಲ್ಪಟ್ಟು ಸ್ನೇಹವನ್ನು ಬೆಳಸಿದವನು. ಈನಾಲ್ಕುಬಗೆಯಾದ ಮಿತ್ರರೂ ಚತುರ್ವರ್ಗವೆನಿಸುವುದುಂಟು. ಅಥವಾ "ನ್ಯಾಯೇ ನಾರ್ಜನಮರ್ಥಸ್ಯರಕ್ಷಣಂ ವರ್ಧನಂತಥಾ।ಸತ್ಪಾತ್ರೇ ಪ್ರತಿಪತ್ತಿಶ್ಚ ರಾಜವೃತ್ತಂ ಚತು ರ್ವಿಧಂ" ಎಂಬ ಕಾಮಂದಕವಚನಾನುಸಾರವಾಗಿ ನ್ಯಾಯದಿಂದ ಧನವನ್ನು ಸಂಪಾ ದಿಸುವುದೂ, ಆ ಧನವನ್ನು ಕಾಪಾಡುವುದೂ, ಅದನ್ನು ವೃದ್ಧಿಹೊಂದಿಸುವುದೂ,ಅದ ನ್ನು ಸತ್ಪಾತ್ರದಲ್ಲಿ ವಿನಿಯೋಗಿಸುವುದೂ ಇವು ನಾಲ್ಕೂ ರಾಜನು ನಡೆಸಬೇಕಾದ ಚತುರ್ವರ್ಗವೆನಿಸುವುದು. ರಾಜನಾದವನು ಇವೆಲ್ಲವನ್ನೂ ಗಮನವಿಟ್ಟು ನೋಡಬೇ ಕೆಂದು ಭಾವವು.

2 ಸಪ್ತವರ್ಗಗಳು:- "ಸ್ವಾಮ್ಯಮಾತ್ಯಾಶ್ಚರಾಷ್ಟ್ರಂಚ ದುರ್ಗಂ ಕೋಶೋ ಬ ಲಂಸುಹೃತ್ । ಪರಸ್ಪರೋಪಕಾರೀದಂ ರಾಜ್ಯಂಸಪ್ತಾಂಗಮುಚ್ಯತೆ ॥" ಎಂಬಂತೆ ರಾಜನು, ಮಂತ್ರಿಗಳು, ರಾಷ್ಟ್ರವು, ದುರ್ಗವು, ಕೋಶವು, ಸೇನೆಗಳು, ಮಿತ್ರರು ಎಂಬಿವೇಳೂ ಪರಸ್ಪರೋಪಕಾರಕವಾಗಿ ರಾಜ್ಯಾಂಗಗಳೆನಿಸುವುವು. ಇವುಗಳನ್ನು ರಾ ಜನು ಎಚ್ಚರಿಕೆಯಿಂದ ಕಾಪಾಡಬೇಕು. ಅಥವಾ ಸಪ್ತವರ್ಗಗಳೆಂದರೆ ಏಳು ಬಗೆ ಯಾದ ಸ್ವಪಕ್ಷದವರೆಂದೂ ಹೇಳಬಹುದು. "ನಿಜೋಽಥಮೈತ್ರಶ್ಚ ಸಮಾಶ್ರಿತಶ್ಚ ಸು

[1]ಅಷ್ಟವರ್ಗಗಳನ್ನೂ ಧರ್ಮಾರ್ಥಕಾಮಾದಿಗಳಾದ [2]ತ್ರಿ ವರ್ಗಗಳನ್ನೂ,

---

ಬಂಧುಜಃ ಕಾರ್ಯಸಮುದ್ಭವಶ್ಚ । ಭೃತ್ಯೋಗೃಹೀತೋ ವಿವಿಧೋಪಚಾರೈಃ ಪಕ್ಷಂಬುಧಾ ಸ್ಸಪ್ತವಿಧಂವದಂತಿ ॥ " ಎಂಬಂತೆ ತನ್ನಕಡೆಯವರು, ತನ್ನಮಿತ್ರರಕಡೆಯವರು, ತನ್ನ ಆಶ್ರಿತರು, ತನ್ನನೆಂಟರ ಕಡೆಯವರು, ತನ್ನಲ್ಲಿ ಕಾರ್ಯಾರ್ಥವಾಗಿ ಬಂದವರು, ಅನೇಕ ಸತ್ಕಾರಗಳಿಂದ ವಶೀಕರಿಸಲ್ಪಟ್ಟವರು, ತನ್ನಭೃತ್ಯರು, ಎಂಬೀಏಳುಜನರೂ ಸ್ವಪಕ್ಷದ ವರು. ರಾಜನು ಇಂತವರನ್ನು ಪ್ರೋತ್ಸಾಹಪಡಿಸಿ ತನಗೆ ಅನುಕೂಲರನ್ನಾಗಿ ಇಟ್ಟು ಕೊಂಡಿರಬೇಕು. ಅಥವಾ ಸಪ್ತವರ್ಗವೆಂದರೆ ಏಳುಬಗೆಯಾದ ವ್ಯೂಹಗಳೆಂದೂ ಹೇಳ ಬಹುದು. "ಶ್ಯೇನ ಸ್ಸೂಚೀಚ ವಜ್ರಶ್ಚ ಶಕಟೋಮಕರಸ್ತಥಾ । ದಂಡಾಖ್ಯಃ ಪದ್ಮ ನಾಮಾಚ ವ್ಯೂಹಾಸ್ಸಪ್ತಪ್ರಧಾನತಃ ॥ " ಎಂಬಂತೆ ಗಿಡುಗ, ಸೂಜಿ, ವಜ್ರ, ಬಂಡಿ, ಮೊಸಳೆ, ದಂಡ, ಪದ್ಮ,ಎಂಬ ಈ ಏಳುವ್ಯೂಹಗಳಿಗೆ ಹೆಸರು. ರಾಜನು ತನ್ನ ಸೇನಾ ಸನ್ನಿವೇಶದಲ್ಲಿ ಈ ವ್ಯೂಹಗಳಕ್ರಮವನ್ನು ಚೆನ್ನಾಗಿ ತಿಳಿದಿರಬೇಕೆಂದು ಭಾವವು,

1 ಅಷ್ಟವರ್ಗಗಳು:-"ಕೃಷಿರ್ವಾಣಿಜ್ಯ ದುರ್ಗಾಣಿಸೇತುಃ ಕುಂಜರಬಂಧನಂ। ಖನ್ಯಾಕರಃ ಕರಾದಾನಂ ಶೂನ್ಯಾನಾಂಚ ನಿವೇಶನಂ। ಅಷ್ಟವರ್ಗಮಿಮಂಸಾಧುಃ ಸ್ವಸ್ಥವೃತ್ತೋನ ಲೋಪಯೇತ್ ॥" ಎಂಬ ಕಾಮಂದಕವಚನಾನುಸಾರವಾಗಿ ಕೃಷಿ,ವಾಣಿಜ್ಯ,ದುರ್ಗ, ಸೇತುವೆ, ಆನೆಗಳಸಂಗ್ರಹ, ಗಣಿಗಳಸಂಗ್ರಹ, ಕಪ್ಪವನ್ನು ತೆಗೆಯುವುದು, ಶೂನ್ಯ ಪ್ರದೇಶಗಳನ್ನು ವಾಸಯೋಗ್ಯವಾಗಿ ಮಾಡುವುದು. ಎಂಬಿವೆಂಟೂ ರಾಜನು ಗಮನಿಸಿ ನೋಡಬೇಕಾದ ಅಷ್ಟವರ್ಗಗಳೆನಿಸುವುವು. ಅಥವಾ "ಪೈಶುನ್ಯಂ ಸಾಹಸಂ ದ್ರೋಹ ಈರ್ಷ್ಯಾಸೂಯಾರ್ಥದೂಷಣಂ । ವಾಗ್ದಂಡಯೋಶ್ಚ ಪಾರುಷ್ಯಂಕ್ರೋಧ ಜೋಪಿಗುಣೋಷ್ಟಕಃ॥" ಎಂಬಂತೆ ಕಿರುಕುಳತನ, ಸಾಹಸ, ದ್ರೋಹಚಿಂತೆ, ತಾಳ್ಮೆಯಿಲ್ಲದಿರುವಿಕೆ, ಅಸೂಯೆ, ಕ್ರೂರವಾಕ್ಯಗಳು, ಹಣವನ್ನು ದುರ್ವಿನಯೋಗಪ ಡಿಸುವುದು, ಕಠಿನದಂಡನೆ, ಎಂಬಿವೆಂಟೂ ಕ್ರೋಧದಿಂದ ಹುಟ್ಟತಕ್ಕ ದುರ್ಗುಣಗ ಳು. ರಾಜನು ಇವುಗಳನ್ನು ತ್ಯಜಿಸಬೇಕೆಂದು ಭಾವವು.

2 ತ್ರಿವರ್ಗಗಳು— ಧರ್ಮಾರ್ಥಕಾಮಮೋಕ್ಷಗಳೆಂಬ ಮೂರುಪುರುಷಾರ್ಥಗ ಳಿಗೆ ತ್ರಿವರ್ಗಗಳೆಂದು ಹೆಸರು. ಅಥವಾ ಪ್ರಭುಶಕ್ತಿ, ಉತ್ಸಾಹಶಕ್ತಿ, ಮಂತ್ರಶಕ್ತಿ ಗಳೆಂಬ ಶಕ್ತಿತ್ರಯಕ್ಕೂ ತ್ರಿವರ್ಗವೆಂದು ಹೆಸರುಂಟು. ಅಥವಾ "ಕ್ಷಯಸ್ಥಾನಂಚ ವೃದ್ಧಿಶ್ಚ ತ್ರಿವರ್ಗೋ ನೀತಿವೇದಿನಾಂ" ಎಂಬಂತೆ, ಶತ್ರುಗಳ ಕ್ಷೀಣದಶೆ, ಶತ್ರುಗಳಸಮ ಸ್ಥಿತಿ, ಶತ್ರುಗಳಪುರೋವೃದ್ಧಿ ಎಂಬಿವು ಮೂರೂ ತ್ರಿವರ್ಗವೆನಿಸುವುದು. ರಾಜನು ಇ ವೆಲ್ಲವನ್ನೂ ಚೆನ್ನಾಗಿ ಗಮನಿಸಬೇಕೆಂದು ಭಾವವು. ಅಥವಾ "ವಸ್ತುಷ್ವಶಕ್ಯೇಷು

[1] ಮೂರುವಿದ್ಯೆಗಳನ್ನೂ, ಇಂದ್ರಿಯಜಯವನ್ನೂ, [2] ಷಡ್ಗುಣಗಳನ್ನೂ, [3] ದೈವ

ಸಮುದ್ಯಮಶ್ಚ ಶಕ್ಯೇಷು ಮೋಹಾದಸಮುದ್ಯಮಶ್ಚ । ಶಕ್ಯೇಷ್ವಕಾಲೇಷು ಸಮುದ್ಯಮಶ್ಚ ತ್ರಿಧೈವಕಾರ್ಯವ್ಯಸನಂವದಂತಿ॥" ಎಂಬ ಕಾಮಂದಕವಚನಾನುಸಾರವಾಗಿ, ಆಗದ ಕೆಲಸಕ್ಕೆಪ್ರಯತ್ನಿಸುವುದು, ಸಾಧ್ಯವಾದ ಕೆಲಸಗಳನ್ನು ಅಜ್ಞಾನದಿಂದ ಮಾಡದೆ ಬಿಡುವುದು, ಕಾರ್ಯವು ಸಾಧ್ಯವೆಂದು ತೋರಿದಾಗಲೂ ಅಕಾಲದಲ್ಲಿ ಆ ಕಾರ್ಯಗಳಿಗೆ ಪ್ರಯತ್ನಿಸುವುದು. ಇವು ಮೂರೂ ಕಾರ್ಯವ್ಯಸನವೆನಿಸುವುದು. ಇದಕ್ಕೂ ತ್ರಿವರ್ಗವೆಂದು ವ್ಯವಹಾರವುಂಟು. ರಾಜನು ಇಂಥವುಗಳನ್ನು ತ್ಯಜಿಸಬೇಕೆಂದು ಭಾವವು.

1 ಮೂರುವಿದ್ಯೆಗಳು:— "ತ್ರಯೀವಾರ್ತಾದಂಡನೀತಿರಿತಿ ವಿದ್ಯಾಹಿಮಾನವಾ:" ಎಂಬ ಕಾಮಂದಕವಚನವನ್ನನುಸರಿಸಿ, ತ್ರಯಿ, ವಾರ್ತೆ, ದಂಡನೀತಿ ಇವು ಮೂರೂವಿದ್ಯಾತ್ರಯವೆನಿಸುವುದು. ತ್ರಯಿಯೆಂದರೆ ವೇದವು, ವಾರ್ತೆಯೆಂದರೆ ಕೃಷಿಗೋರಕ್ಷಣವಾಣಿಜ್ಯಗಳು, ದಂಡನೀತಿಯೆಂದರೆ ನೀತಿಶಾಸ್ತ್ರವು. ರಾಜನ ಪುರೋವೃದ್ಧಿಗೆ ಇವು ಮೂರೂ ಸಹಾಯಕಗಳೆಂದು ಭಾವವು. ಇಂದ್ರಿಯಜಯವೆಂದರೆ ಇಂದ್ರಿಯಗಳನ್ನು ಜಯಿಸುವ ಉಪಾಯವು.

2 ಷಾಡ್ಗುಣ್ಯಗಳು:—ಸಂಧಿ, ವಿಗ್ರಹ, ಯಾನ, ಆಸನ, ದ್ವೈಧೀಭಾವ, ಸಮಾಶ್ರಯ ಗಳೆಂಬ ಆರುಗುಣಗಳಿಗೆ ಷಾಡ್ಗುಣ್ಯವೆಂದುಹೆಸರು, ಶತ್ರುಗಳೊಡನೆ ಸಂಧಿಮಾಡಿಕೊಳ್ಳುವುದು, ಯುದ್ಧವನ್ನಾರಂಭಿಸುವುದು, ಶತ್ರುಜಯಕ್ಕಾಗಿ ಹೊರಡುವುದು, ಉಭಯಪಕ್ಷದವರೂ ಒಬ್ಬರಿಗೊಬ್ಬರು ತಡೆಯಲ್ಪಟ್ಟವರಾಗಿ ಯುಕ್ತಕಾಲವನ್ನು ನಿರೀಕ್ಷಿಸಿಕೊಂಡು ಸುಮ್ಮನಿರುವುದು, ಪ್ರಬಲರಾದ ಉಭಯಪಕ್ಷದವರೂ ಒಬ್ಬರಿಗೊಬ್ಬರು ತಮ್ಮಪ್ರತಿಪಕ್ಷದವರಲ್ಲಿ ಪರಸ್ಪರಕಲಹವನ್ನೆಬ್ಬಿಸಿ ಅವರ ಒಗ್ಗಟ್ಟನ್ನು ಮುರಿಯುವುದು, ತಮ್ಮ ಬೆಂಬಲಕ್ಕಾಗಿ ಶತ್ರುಗಳ ಇತರ ವೈರಿಗಳನ್ನು ಆಶ್ರಯಿಸುವುದು. ಎಂಬಿವಾರೂ ಷಡ್ಗುಣಗಳು. ರಾಜನು ಇವುಗಳನ್ನು ಕಾಲಾನುಸಾರವಾಗಿ ನಡೆಸಬೇಕು.

3 ದೈವಮಾನುಷವೆಂದರೆ, ದೇವತೆಗಳಿಂದಲೂ, ಮನುಷ್ಯರಿಂದಲೂ ಉಂಟಾಗತಕ್ಕ ಎರಡುವಿಧವಾದವ್ಯಸನಗಳು. "ಹುತಾಶನೋಜಲಂ ವ್ಯಾಧಿರ್ದುರ್ಭಿಕ್ಷಂಮರಣಂತಥಾ" ಎಂಬಂತೆ, ಬೆಂಕಿ, ನೀರು, ವ್ಯಾಧಿ, ಕ್ಷಾಮ, ಮರಣ ಎಂಬಿವೈದೂ ದೈವವ್ಯಸನಗಳೆನಿಸುವುವು: ಹಾಗೆಯೇ "ಆಯುಕ್ತಕೇಭ್ಯ ಶ್ಚೋರೇಭ್ಯ: ಪರೇಭ್ಯೋರಾಜವಲ್ಲಭಾತ್। ಪೃಥಿವೀಪತಿಲೋಭಾಚ್ಚ ವ್ಯಸನಂಪಂಚಧಾಭವೇತ್" ಎಂಬಂತೆ ಅಧಿಕಾರಿಗಳಿಂದಲೂ, ಕಳ್ಳರಿಂದಲೂ, ಶತ್ರುಗಳಿಂದಲೂ, ಇಷ್ಟಜನದಿಂದಲೂ, ರಾಜನ ಲೋಭ್ಯದಿಂದಲೂ ರಾಷ್ಟ್ರಕ್ಕೆ ಉಂಟಾಗತಕ್ಕ ಐದುವಿಧವಾದ ವ್ಯಸನಗಳು ಮಾನುಷವ್ಯಸನಗಳೆನಿಸುವುವು.

ಮಾನುಷಗಳೆಂಬ ವ್ಯಸನಗಳನ್ನೂ, [1]ಭೇದಕೃತ್ಯಗಳನ್ನೂ, [2]ವಿಂಶತಿ

---

1 ಕೃತ್ಯವೆಂದರೆ ಭೇದಕಾರ್ಯವು, ಇವಾವುವೆಂದರೆ- ಅಲಬ್ಧವೇತನೋಲುಬ್ಧೋಮಾನೀಚಾಪ್ಯವಮಾನಿತಃ । ಕ್ರುದ್ಧಶ್ಚ ಕೋಪಿತೋಽಕಸ್ಮಾತ್ತಥಾ ಭೀತಶ್ಚ ಭೀಷಿತಃ । ಯಥಾಭಿಲಷಿತೈಃ ಕಾಮೈರ್ಭಿಂದ್ಯಾದೇತಾಂಶ್ಚ ತರ್ವಿರ್ಥಾ॥"ಎಂಬಂತೆ, ತನ್ನ ಶತ್ರುಗಳ ಕಡೆಯಲ್ಲಿಸಂಬಳವನ್ನು ಪಡೆಯದ ಲುಬ್ಧನನ್ನೂ, ಅಲ್ಲಿಂದ ಅವಮಾನಿತನಾದ ಮಾನವಂತನನ್ನೂ, ಕುಪಿತನಾಗಿ ಮಾಡಲ್ಪಟ್ಟ ಕೋಪಸ್ವಭಾವವುಳ್ಳವನನ್ನೂ, ಭಯಪಡಿಸಲ್ಪಟ್ಟ ಭೀರುಸ್ವಭಾವವುಳ್ಳವನನ್ನೂ, ಕಂಡುಹಿಡಿದು, ಅವರವರ ಕೋರಿಕೆಗಳನ್ನು ತಾನು ಈಡೇರಿಸಿಕೊಟ್ಟು ವಶಪಡಿಸಿಕೊಳ್ಳಬೇಕೆಂದು ಭಾವವು.

2 ವಿಂಶತಿವರ್ಗಗಳು: - "ಬಾಲೋವೃದ್ಧೋ ದೀರ್ಘರೋಗೀ ತಥಾ ಜ್ಞಾತಿಬಹಿಷ್ಕೃತಃ । ಭೀರುಕೋಭೀರುಜನಕೋ ಲುಬ್ಧೋಲುಬ್ಧ ಜನಸ್ತಥಾ॥ವಿರಕ್ತಪ್ರಕೃತಿಶ್ಚೈವ ವಿಷಯೇಷ್ವತಿಸಕ್ತಿಮಾರ್ । ಅನೇಕಚಿತ್ತಮಂತ್ರಶ್ಚ ದೇವಬ್ರಾಹ್ಮಣನಿನ್ದಕಃ ॥ ದೈವೋಪಹತಕಶ್ಚೈವ ದೈವಚಿನ್ತಕಏವಚ। ದುರ್ಭಿಕ್ಷವ್ಯಸನೋಪೇತೋ ಬಲವ್ಯಸನಸಂಕುಲಃ ॥ ಅದೇಶಸ್ಥೋಬಹುರಿಪು ರ್ಯುಕ್ತೋಽಕಾಲೇನಯಶ್ಚಸಃ। ಸತ್ಯಧರ್ಮವ್ಯಪೇತಶ್ಚ ವಿಂಶತಿಃ ಪುರುಷಾ ಅಮೀ । ಏತೈಸ್ಸಂಧಿಂನಕುರ್ವೀತ ನಿಗೃಹ್ಣೀಯಾತ್ತು ಕೇವಲಂ ॥ " ಎಂಬಂತೆ, ಬಾಲನು, ವೃದ್ಧನು, ದೀರ್ಘರೋಗವುಳ್ಳವನು, ನಂಟರಿಂದ ಹೊರಗುಹಾಕಲ್ಪಟ್ಟಿರುವವನು, ಬಹಳ ಭಯಸ್ವಭಾವವುಳ್ಳವನು, ಭೀರುಜನಗಳನ್ನೇ ತನ್ನ ಪರಿವಾರವಾಗಿಟ್ಟುಕೊಂಡಿರುವವನು, ಲೋಭಿಯು, ಲೋಭಿಗಳನ್ನು ತನ್ನಾಶ್ರಯದಲ್ಲಿರಿಸಿಕೊಂಡಿರುವವನು, ಕೇವಲವೈರಾಗ್ಯ ಪ್ರಕೃತಿಯುಳ್ಳವನು, ವಿಶೇಷವಾದ ವಿಷಯಾಭಿಲಾಷೆಯುಳ್ಳವನು, ಸ್ಥಿರಮನಸ್ಸಿಲ್ಲದವನು,ದೇವಬ್ರಾಹ್ಮಣರನ್ನು ನಿಂದಿಸುವ ಸ್ವಭಾವವುಳ್ಳವನು, ದುರದೃಷ್ಟಕ್ಕೀಡಾಗಿರುವವನು, ದೈವವನ್ನೇ ನಂಬಿಕೊಂಡು ಪುರುಷಪ್ರಯತ್ನವನ್ನು ಬಿಟ್ಟಿರುವವನು, ದುರ್ಭಿಕ್ಷ ದುಃಖದಿಂದ ಪೀಡಿತನಾದವನು, ಸೈನ್ಯವಿನಾಶದಿಂದ ಕೊರಗಿದವನು, ದೇಶಾಂತರದಲ್ಲಿರುವವನು, ಅನೇಕಶತ್ರುಗಳುಳ್ಳವನು, ದುಷ್ಕಾಲವಶದಿಂದ ನೊಂದವನು, ಸತ್ಯಧರ್ಮಗಳಿಲ್ಲದವನು, ಈ ಇಪ್ಪತ್ತುಮಂದಿ ಪುರುಷರೊಡನೆ ರಾಜನು ಸಂಧಿಯನ್ನು ನಡೆಸಬಾರದು. ಇಂತಹ ಶತ್ರುಗಳನ್ನು ಸಮಯವಿದ್ದಾಗ ಯುದ್ಧದಲ್ಲಿ ಅಡಗಿಸಿಬಿಡಬೇಕು. ಈ ಇಪ್ಪತ್ತುಮಂದಿಯೂ ದುರ್ಬಲಶತ್ರುಗಳೆನಿಸುವರು. ಅಥವಾ ವಿಂಶತಿವರ್ಗವೆಂದರೆ—(ರಾಜ್ಯಸ್ತ್ರೀಸ್ಥಾನದೇಶಾನಾಂ ಜ್ಞಾತೀನಾಂಚಧನಸ್ಯಚ। ಅಪಹಾರೋಮದೋಮಾನಃ ಪೀಡಾವೈಷಯಿಕೀತಥಾ।ಜ್ಞಾನಾರ್ಥಶಕ್ತಿಧರ್ಮಾಣಾಂ ವಿಘಾತೋ ದೈವಮೇವಚ । ಮಿತ್ರಾರ್ಥಯೋಶ್ಚಾವಮಾನಸ್ತಥಾ ಬಂಧುವಿನಾಶನಂ । ಭೂತಾನುಗ್ರ

ವರ್ಗಗಳನ್ನೂ, [1] ಪಂಚ ಪ್ರಕೃತಿಗಳನ್ನೂ, [2]ದ್ವಾದಶ ಮಂಡಲವನ್ನೂ,

ಹವಿಚ್ಛೇದ ಸ್ಥಾನಮಂಡಲದೂಷಣಂ|ಏಕಾರ್ಥಾಭಿನಿವೇಶಿತ್ವ ಮಿತಿವಿಗ್ರಹಯೋನಯಃ||" ಎಂಬಂತೆ ಇತರರರಾಜ್ಯವನ್ನಾಗಲಿ, ಸ್ತ್ರೀಯರನ್ನಾಗಲಿ,ಸ್ಥಾನವನ್ನಾಗಲಿ,ದೇಶವನ್ನಾಗಲಿ, ಧನವನ್ನಾಗಲಿ, ಜ್ಞಾತಿಗಳನ್ನಾಗಲಿ ಅಪಹರಿಸುವುದು, ಮದವು, ವಿಷಯತತ್ಪರತೆ, ಅಜ್ಞಾನವು, ಧನಸಮೃದ್ಧಿಯಿಲ್ಲದಿರುವಿಕೆ, ಇಂದ್ರಾದಿದೇವತೆಗಳಿಗೆ ವಿರೋಧಿಯಾಗಿರುವಿಕೆ,ಮಿತ್ರರನ್ನು ಅವಮಾನಪಡಿಸುವುದು,ಅವರ ಧನವನ್ನಪಹರಿಸುವುದು,ನಂಟರನ್ನು ಕೆಡಿಸುವುದು, ಭೂತದಯೆಯಿಲ್ಲದಿರುವುದು, ತನ್ನಮಂತ್ರಿಗಳು, ಸೇನಾಧಿಪತಿಗಳು,ಮಿತ್ರರು ಮುಂತಾದವರನ್ನು ಹೀಗಳೆಯುವುದು, ತನಗೆ ಇಷ್ಟವಾದ ವಿಷಯಕ್ಕಾಗಿ ಹಟಹಿಡಿಯುವುದು, ಇವು ಇಪ್ಪತ್ತು ರಾಜದೋಷಗಳು ; ಇವು ಯುದ್ಧಕ್ಕೆ ಕಾರಣಗಳಾಗುವುವು.

1 ಪಂಚಪ್ರಕೃತಿಗಳು: - "ಅಮಾತ್ಯರಾಷ್ಟ್ರದುರ್ಗಾಣಿ ಕೋಶೋದಂಡಸ್ತುಪಂಚಮಃ । ಏತಾಃಪ್ರಕೃತಯಸ್ತದ್ಜ್ಞೈ ರ್ವಿಜಿಗೀಷೋರುದಾಹೃತಾಃ ||" ಎಂಬಂತೆ, ಮಂತ್ರಿ, ರಾಷ್ಟ್ರ, ದುರ್ಗ, ಬೊಕ್ಕಸ, ಸೇನೆಗಳೆಂಬ ಐದುಪ್ರಕೃತಿಗಳುಂಟು. ಇವೈದನ್ನೂ ರಾಜನು ಸರಿಯಾದ ಸ್ಥಿತಿಯಲ್ಲಿಟ್ಟಿರಬೇಕೆಂದು ಭಾವವು.

2 ದ್ವಾದಶಮಂಡಲಗಳು: — ವಿಜಿಗೀಷುವಾದವನಿಗೆ ಎಂದರೆ, ಶತ್ರುಜಯಕ್ಕಾಗಿ ಹೋಗುವ ರಾಜನಿಗೆ ಹಿಂದೆಯೂ, ಮುಂದೆಯೂ, ಪಕ್ಕಗಳಲ್ಲಿಯೂ ಸಹಾಯಾರ್ಥವಾಗಿ ಸೇನಾಸಮೇತರಾದ ಕೆಲವು ರಾಜರಿರಬೇಕು. ಇವರನ್ನು ನಿಲ್ಲಿಸಿಡತಕ್ಕ ವಿನ್ಯಾಸಕ್ರಮವು ಕಾಮಂದಕನೀತಿಯಲ್ಲಿ ವಿವರಿಸಲ್ಪಟ್ಟಿರುವುದು. ಹೇಗೆಂದರೆ "ಸಂಪನ್ನಸ್ತು ಪ್ರಕೃತಿಭಿರ್ಮಹೋತ್ಸಾಹಃ ಕೃತಶ್ರಮಃ | ಜೇತುಮೀಷಣಶೀಲಶ್ಚ ವಿಜಿಗೀಷುರಿತಿಸ್ಮೃತಃ|| ಅರಿರ್ಮಿತ್ರಮರೇರ್ಮಿತ್ರಂ ಮಿತ್ರಮಿತ್ರಮತಃಪರಂ । ತಥಾರಿಮಿತ್ರಮಿತ್ರಂಚ ವಿಜಿಗೀಷೋಃಪುರಸ್ಸರಾಃ । ಪಾರ್ಷ್ಣಿಗ್ರಾಹಸ್ತತಃ ಪಶ್ಚಾದಾಕ್ರಂದಸ್ತದನಂತರಂ । ಆಸಾರಾವನಯೋಶ್ಚೈವ ವಿಜಿಗೀಷೋಸ್ತುಪೃಷ್ಠತಃ । ಅರೇಶ್ಚ ವಿಜಿಗೀಷೋಶ್ಚ ಮಧ್ಯಮೋಭೂಮ್ಯನಂತರಃ । ಅನುಗ್ರಹೇ ಸಂಹತಯೋರ್ವ್ಯಸ್ತಯೋರ್ನಿಗ್ರಹೇಪ್ರಭುಃ । ಮಂಡಲಾದ್ಬಹಿರೇತೇಷಾ ಮುದಾಸೀನೋಬಲಾಧಿಕಃ । ಅನುಗ್ರಹೇಸಂಹತಾನಾಂ ವ್ಯಸ್ತಾನಾಂ ಚವಧೇಪ್ರಭುಃ"ಎಂಬಿವೆಲ್ಲವೂ ಆಮಂಡಲವಿನ್ಯಾಸದ ಲಕ್ಷಣಗಳು. ಹಿಂದೆ ಹೇಳಿದ ಪಂಚಪ್ರಕೃತಿಗಳ ಬಲದಿಂದ ಕೂಡಿದವನಾಗಿ, ಜಯೋತ್ಸಾಹದಿಂದ ಹೊರಡತಕ್ಕ ರಾಜನ ಮುಂಭಾಗದಲ್ಲಿ, ಅರಿ, ಮಿತ್ರನು, ಅರಿಮಿತ್ರನು, ಮಿತ್ರಮಿತ್ರನು, ಅರಿಮಿತ್ರಮಿತ್ರನೆಂದು ಕರೆಯಲ್ಪಡುವ ಐದು ಬಗೆಯ ರಾಜರೂ ಕ್ರಮವಾಗಿ ಒಬ್ಬರ ಮುಂದೊಬ್ಬರು ನಿಲ್ಲಬೇಕು. ಹಾಗೆಯೇ ಜಯಪ್ರಯಾಣಮಾಡುವ ರಾಜನ ಹಿಂಭಾಗದಲ್ಲಿ, ಮೊದಲು ಪಾ

[1]ದಂಡಯಾತ್ರಾವಿಧಿಗಳನ್ನೂ, [2]ಯಾನಾದಿಗಳೆಂಬ [3]ಎರಡೆರಡು ಕಾರಣಗ

---

ಷ್ಣಿರ್ಗ್ರಾಹನೆಂಬವನೂ, ಇವನಹಿಂದೆ ಆಕ್ರಂದನೆಂಬವನೂ, ಇವನಹಿಂದೆ ಪಾರ್ಷ್ಣಿಗ್ರಾಹಾಸಾರನೆಂದು ಕರೆಯಲ್ಪಡುವ ಅವನ ಸ್ನೇಹಿತನೂ, ಇವನಹಿಂದೆ ಆಕ್ರಂದಾಸಾರನೆಂಬ ಆಕ್ರಂದನ ಮಿತ್ರನೂ, ಹೀಗೆ ನಾಲ್ಕುಮಂದಿ ರಾಜರಿರಬೇಕು. ವಿಜಿಗೀಷುವಾದರಾಜನ ಪಾರ್ಶ್ವಭಾಗದಲ್ಲಿ ಮಧ್ಯಮನೆಂಬವನೊಬ್ಬನಿರಬೇಕು. ಈತನು ವಿಜಿಗೀಷುವೂ ಶತ್ರುಗಳೂ ಕಲೆತಿರುವಾಗ ಅವರಿಗೆ ಅನುಕೂಲನಾಗಿ ಅನುಗ್ರಹಿಸುವುದಕ್ಕೂ, ಅವರು ಬೇರ್ಪಟ್ಟಾಗ ಪ್ರತಿಕೂಲನಾಗಿ ನಿಗ್ರಹಿಸುವುದಕ್ಕೂ ತಕ್ಕ ಸಾಮರ್ಥ್ಯವುಳ್ಳವನಾಗಿರುವನು. ಇವರೆಲ್ಲರಿಗೂ ಹಿಂದೆ ಉದಾಸೀನನೆಂದು ವ್ಯವಹರಿಸಲ್ಪಡುವ ಬೇರೊಬ್ಬರಾಜನಿರುವನು. ಈತನೂ, ಅವರೆಲ್ಲರೂ ಒಂದಾಗಿ ಕಲೆತಿರುವಾಗ ಅನುಗ್ರಹಿಸುವುದಕ್ಕೂ, ಒಬ್ಬರೊಬ್ಬರಿಗೆ ಭೇದಿಸಿ ಹೋದಾಗ ನಿಗ್ರಹಿಸುವುದಕ್ಕೂ ತಕ್ಕ ಸಾಮರ್ಥ್ಯವುಳ್ಳವನಾಗಿರುವನು. ಮುಖ್ಯನಾದ ವಿಜಿಗೀಷುವೂ ಸೇರಿ, ಈ ಹನ್ನೆರಡುಮಂದಿ ರಾಜರ ಸಮುದಾಯಕ್ಕೆ ಮಂಡಲವೆಂದು ಹೆಸರು.

1 ದಂಡವಿಧಾನವು:—ದಂಡವಿಧಾನವೆಂದರೆ ಸೈನ್ಯದ ವಿಧಾನವು. ಸೈನ್ಯದ ನಾನಾವಿಧವಾದ ವ್ಯೂಹಗಳೆಂದರ್ಥವು. ಅಥವಾ ದಂಡವೆಂದರೆ ಶತ್ರುನಿರಸನವೆಂದೂ ಅರ್ಥವಾಗುವುದರಿಂದ ದಂಡವಿಧಾನವೆಂದರೆ ಶತ್ರುನಿರಸನಕ್ರಮವೆಂದೂ ಹೇಳಬಹುದು.

2 ಯಾನವಿಧಿ-"ವಿಗೃಹ್ಯಸಂಧಾಯತಥಾ ಸಂಭೂಯಾಥಪ್ರಸಂಗತಃ। ಉಪೇಕ್ಷ್ಯಚೇತಿನಿಪುಣೈರ್ಯಾನಂಪಂಚವಿಧಂಸ್ಮೃತಂ॥ ಎಂಬಂತೆ ಯಾನವೆಂಬುದು ಐದು ವಿಧವಾಗಿರುವುದು. ಅತಿಶಯವಾದ ಬಲದಿಂದ ಪಾರ್ಷ್ಣಿಗ್ರಹಾದಿಗಳೊಡನೆ ಯುದ್ಧಮಾಡಿ ಶತ್ರುವಿನಮೇಲೆ ಬೀಳುವುದು ವಿಗ್ರಹಯಾನವೆನಿಸುವುದು. ಆ ಪಾರ್ಷ್ಣಿಗ್ರಹಾದಿಗಳೊಡನೆಯೇ ಉಪಾಯದಿಂದ ಸಂಧಿಮಾಡಿಕೊಂಡು ಶತ್ರುವಿನಮೇಲೆ ಬೀಳುವುದು ಸಂಧಿಯಾನವೆನಿಸುವುದು. ತನ್ನ ಸಾಮಂತರಾಜರೊಡನೆ ಒಟ್ಟುಗೂಡಿ ಮುಂದುವರಿಸುವುದು ಸಂಭೂಯಯಾನವೆನಿಸುವುದು. ಬೇರೊಬ್ಬನನ್ನುದ್ದೇಶಿಸಿ ದಂಡೆತ್ತಿ ಹೋಗುವ ಹಾಗೆ ನಟಿಸುತ್ತಾ, ತನಗೆ ಉದ್ದೇಶ್ಯನಾದ ಶತ್ರುವಿನ ಮೇಲೆ ಬೀಳುವುದು ಪ್ರಸಂಗಯಾನವೆನಿಸುವುದು. ಒಬ್ಬನಮೇಲೆ ದಂಡೆತ್ತುವುದಾಗಿ ಉದ್ದೇಶಿಸಿ ಆತನು ಬಲಾಢ್ಯನೆಂದು ತಿಳಿದಮೇಲೆ ಅವನನ್ನು ಬಿಟ್ಟು, ಆತನ ಮಿತ್ರನಮೇಲೆ ಬೀಳುವುದು ಉಪೇಕ್ಷಾಯಾನವೆನಿಸುವುದು. ಈ ಐದುವಿಧವಾದ ಯಾನರೀತಿಯನ್ನು ರಾಜನು ಚೆನ್ನಾಗಿ ತಿಳಿದಿರಬೇಕೆಂದು ಭಾವವು.

3 ಎರಡೆರಡು ಕಾರಣಗಳುಳ್ಳ ಸಂಧಿವಿಗ್ರಹವೆಂದರೆ:—ಹಿಂದೆ ಸಂಧಿ, ವಿಗ್ರಹ, ಯಾನ, ಆಸನ, ದ್ವೈಧೀಭಾವ, ಸಮಾಶ್ರಯಗಳೆಂಬ ಷಡ್ಗುಣಗಳನ್ನೂ ಸಂಧಿವಿ

ಳುಳ್ಳ ಸಂಧಿವಿಗ್ರಹಗಳನ್ನೂ ಶಾಸ್ತ್ರಾನುಸಾರವಾಗಿ ಪರಿಶೀಲಿಸಿ, ಅವುಗಳಲ್ಲಿ ಬಿಡಬೇಕಾದುದನ್ನು ಬಿಟ್ಟು, ಅಂಗೀಕರಿಸಬೇಕಾದುದನ್ನಂಗೀಕರಿಸಿ ವರ್ತಿಸುತ್ತಿರುವೆಯಷ್ಟೆ? ಎಲೆವತ್ಸನೆ! ನೀನು ಶಾಸ್ತ್ರೋಕ್ತವಾದ ಲಕ್ಷಣಗಳಿಂದ ಪರೀಕ್ಷಿಸಲ್ಪಟ್ಟ ಮಂತ್ರಿಗಳಲ್ಲಿ[1] ನಾಲ್ವರನ್ನೋ ಅಥವಾ ಮೂವರನ್ನೋ ಇಟ್ಟುಕೊಂಡು, ರಹಸ್ಯಾರ್ಥಗಳನ್ನು ಅವರೆಲ್ಲರೊಡನೆ ಕಲೆತಾಗಲಿ,ಅಥವಾ ಪ್ರತ್ಯೇಕವಾಗಿ ಒಬ್ಬೊಬ್ಬರನ್ನೇ ಇಟ್ಟುಕೊಂಡಾಗಲಿ, ಪರ್ಯಾಲೋಚಿಸಿ, ಅವರ ಅಭಿಪ್ರಾಯಗಳನ್ನು ತಿಳಿದುಕೊಳ್ಳುತ್ತಿರುವೆಯಷ್ಟೆ?ಎಲೆವತ್ಸನೆ! [2]ನೀನು ಹಿಂದೆ ಅಧ್ಯಯನಮಾಡಿದ ವೇದಗಳೆಲ್ಲವನ್ನೂ ಅನುಷ್ಠಾನದಿಂದ ಸಫಲಗೊಳಿಸುತ್ತಿರುವೆಯಷ್ಟೆ? ನೀನು ಗಳಿಸಿದ ಹಣವನ್ನು ದಾನಭೋಗಗಳಿಂದಲೂ, ನಿನ್ನ ಶಾಸ್ತ್ರಜ್ಞಾನವನ್ನು ಶೀಲ

---

ಗ್ರಹಗಳೆಂಬ ಮುಖ್ಯವಾದ ಎರಡುಭೇದವುಳ್ಳವುಗಳನ್ನಾಗಿಯೇ ನಿರೂಪಿಸಿ, ಉಳಿದ ನಾಲ್ಕುವಿಭಾಗಗಳನ್ನೂ ಈ ಸಂಧಿವಿಗ್ರಹಗಳೆರಡರಲ್ಲಿಯೇ ಅಂತರ್ಗತವಾಗಿ ಮಾಡಿ ಹೇಳುವುದಾಗಿ ಗ್ರಹಿಸಬೇಕು. ಹೇಗೆಂದರೆ, ಯಾನಾಸನಗಳೆರಡೂ ಸಂಧಿಯಲ್ಲಿಯೂ, ದ್ವೈಧೀಭಾವ ಸಮಾಶ್ರಯಗಳೆರಡೂ ವಿಗ್ರಹದಲ್ಲಿಯೂ ಸೇರುವುವು. ಹೀಗೆ ಷಾಡ್ಗುಣ್ಯವೇ ದ್ವೈಗುಣ್ಯರೂಪವಾಗಿ ನಿರೂಪಿಸಲ್ಪಟ್ಟಿರುವುದು. ಇದಕ್ಕಾಗಿಯೇ ಕಾಮಂದಕ ನೀತಿಯಲ್ಲಿ "ಯಾನಾಸನೇ ವಿಗ್ರಹಸ್ಯ ರೂಪಂಸದ್ಭಿರಿತಿಸ್ಮೃತಂ । ಸಂಧೇಶ್ಚ ಸಂಧಿಮಾರ್ಗಜ್ಞೈಃ ದ್ವೈಧೀಭಾವಸಮಾಶ್ರಯೌ" ಎಂದು ಎರಡುವಿಧವಾಗಿಯೇ ವಿಭಾಗಿಸಲ್ಪಟ್ಟಿರುವುದು. ಈ ಮೇಲೆ ಹೇಳಿದ ದಶವರ್ಗಾದಿಗಳಲ್ಲಿ ಬಿಡಬೇಕಾದುದನ್ನು ಬಿಟ್ಟು ಪರಿಗ್ರಹಿಸಬೇಕಾದುದನ್ನು ಗ್ರಹಿಸಿ ರಾಜ್ಯಭಾರವನ್ನು ನಿರ್ವಹಿಸುವುದೇ ರಾಜನಲಕ್ಷಣವೆಂದು ರಾಜನೀತಿಯು ವ್ಯಕ್ತವಾಗುವುದು.

1 ಇದರಿಂದ ರಾಜನು ಮೂವರು ಅಥವಾ ನಾಲ್ವರುಮಂತ್ರಿಗಳನ್ನು ಮುಂದಿಟ್ಟುಕೊಂಡು ಮಂತ್ರಾಲೋಚನೆಯನ್ನು ನಡೆಸಿ, ಆಮೇಲೆ ಪುನ. ಅವರಲ್ಲಿ ಒಬ್ಬೊಬ್ಬರನ್ನೂ ಬೇರೆಬೇರೆಯಾಗಿ ಕರೆದು ಅವರವರ ಅಭಿಪ್ರಾಯಗಳನ್ನು ತಿಳಿದುಕೊಳ್ಳಬೇಕೆಂದು ಭಾವವು.

2 ಇದಕ್ಕೆ ಮಹಾಭಾರತದ ಪ್ರಮಾಣವೂ ಉಂಟು ಹೇಗೆಂದರೆ,—"ಅಗ್ನಿಹೋತ್ರಫಲಾವೇದಾಃ ದತ್ತಭುಕ್ತಫಲಂಧನಂ। ರತಿಪುತ್ರ ಫಲಾದಾರಾ ಶ್ಶೀಲವೃತ್ತಫಲಂಶ್ರುತಂ॥ ಎಂದು ಹೇಳಲ್ಪಟ್ಟಿರುವುದು.

ವೃತ್ತಿಗಳಿಂದಲೂ, ನಿನ್ನ ಪತ್ನಿಯರನ್ನು ರತಿಸಂತಾನಗಳಿಂದಲೂ ಸಫಲಗೊಳಿಸುತ್ತಿರುವೆಯಷ್ಟೆ?[1]ಆಯುರ್ವೃದ್ಧಿಕರವಾಗಿಯೂ,ಕೀರ್ತಿಕರವಾಗಿಯೂ, ಧರ್ಮಾರ್ಥಕಾಮಗಳಿಗೆ ಸಾಧಕವಾಗಿಯೂ ಇರುವ,ಈ ವಿವೇಚನೆಗಳೆಲ್ಲವೂ ನನಗಿರುವಂತೆಯೇ ನಿನ್ನಲ್ಲಿಯೂ ತುಂಬಿರುವುವಷ್ಟೆ.[2]ನಮ್ಮ ತಂದೆಯಾದ ದಶರಥನು ಈಗಲೂ ಯಾವವೃತ್ತಿಯನ್ನವಲಂಬಿಸಿರುವನೋ, ಈಗಸ್ವರ್ಗಸ್ಥರಾಗಿರುವ ನಮ್ಮ ಹಿರಿಯರು ಯಾವವೃತ್ತಿಯನ್ನವಲಂಬಿಸಿದ್ದರೋ,ಯಾವಸದ್ವೃತ್ತಿಯು, ಸಜ್ಜನಸಮ್ಮತವಾಗಿಯೂ, ನಾಶರಹಿತವಾಗಿಯೂ ಇರುವುದೋ ಆವೃತ್ತಿಯನ್ನೇ ನೀನೂ ಅವಲಂಬಿಸಿರುವೆಯಷ್ಟೆ?ಎಲೆವತ್ಸನೆ![3]ಮಧುರವಾದ ಆಹಾರಗಳು ನಿನಗೆ ಸಿಕ್ಕಿದಾಗ ಅವುಗಳನ್ನು ನೀನೊಬ್ಬನೇ ರಹಸ್ಯವಾಗಿ ಭುಜಿಸುವುದಿಲ್ಲವಷ್ಟೆ? ನಿನ್ನ ಮಿತ್ರರು ನಿನ್ನನ್ನು ಪ್ರಾರ್ಥಿಸಿಕೇಳಿದಾಗ ಅವರಿಗೆ ಅಭಿಮತವಾದ ವಸ್ತುಗಳನ್ನುಪ್ರೀತಿಯಿಂದ ಕೊಡುತ್ತಿರುವೆಯಷ್ಟೆ? ಎಲೈ ದೀರ್ಘಾಯುಷ್ಮಂತನೆ! [4]ರಾಜ್ಯಾಧಿಕಾರವನ್ನು ವಹಿಸಿದವನುಈಗಹೇಳಿದ ನೀತಿಧರ್ಮಗಳಲ್ಲಿ ಚೆನ್ನಾಗಿಮನಸ್ಸಿಟ್ಟುಬುದ್ಧಿವಂತನಾಗಿ ಉಚಿತದಂಡವನ್ನುಧರಿಸಿ ಧರ್ಮದಿಂದ ಪ್ರಜೆಗಳನ್ನು ಪಾಲಿಸುತಿದ್ದರೆ, ಅಂತವನು ಈಲೋಕದಲ್ಲಿ ಸಮ

---

1 ಇದರಿಂದ ಈ ರಾಜಧರ್ಮಗಳನ್ನಾಚರಿಸಿದರೆ ರಾಜನಿಗೆ ಆಯುಸ್ಸು, ಕೀರ್ತಿ, ಪುರುಷಾರ್ಥಸಿದ್ಧಿ, ಇವೆಲ್ಲವೂ ಸಿದ್ಧಿಸುವುವೆಂದು ಭಾವವು.

2 ಇದರಿಂದ ಪುತ್ರನಾದವನು ತನ್ನ ತಂದೆತಾಯಿಗಳು ಅವಲಂಬಿಸಿದ ವೃತ್ತಿಯನ್ನು ಬಿಡಕೂಡದೆಂದೂ,[ಅವರು ಅನುಷ್ಠಿಸದಿದ್ದರೂ ಯುಕ್ತವಾದುವುಗಳನ್ನು ತಾನೇ ಅನುಷ್ಠಿಸಬೇಕೆಂದೂ ಸೂಚಿತವು.

3 ಇದರಿಂದ ಮಧುರವಾದ ಆಹಾರವು ಸಿಕ್ಕಿದಾಗ ತಾನೊಬ್ಬನೇ ಭುಜಿಸಬಾರದೆಂದೂ, ತನ್ನ ಮಿತ್ರರಿಗೆ ಕೈಲಾದಮಟ್ಟಿಗಾದರೂ ಉಪಕಾರಮಾಡುತ್ತಿರಬೇಕೆಂದೂ ಸೂಚಿತವು.

4 ಇದರಿಂದ ರಾಜನು ನ್ಯಾಯರೀತಿಯಿಂದಲೂ, ಉಚಿತದಂಡನೆಗಳಿಂದಲೂ ರಾಜ್ಯವನ್ನು ನಡೆಸುತಿದ್ದರೆ, ಅವನಿಗೆ ಐಹಿಕಾಮುಷ್ಮಿಕಸುಖಗಳೆರಡೂ ಸಿದ್ಧಿಸುವುವೆಂದೂ "ರಾಜ್ಯಾಂತೇನರಕಂಧ್ರುವಂ" ಎಂಬ ವಾಕ್ಯವು ಅಧಾರ್ಮಿಕನಾದ ರಾಜನ ವಿಷಯವಾದುದೆಂದೂ ಸೂಚಿತವು.

ಸ್ತ್ರಭೂಮಂಡಲಾಧಿಪತ್ಯವನ್ನನುಭವಿಸಿ, ಶರೀರಾತ್ಮಜ್ಞಾನವನ್ನು ಪಡೆದು, ಕೊನೆಗೆ ಈ ಲೋಕವನ್ನು ಬಿಟ್ಟಮೇಲೆಯೂ ನಮ್ಮ ಪೂರ್ವರಾಜರಂತೆ ಸ್ವರ್ಗದಲ್ಲಿ ಸೇರಿ ಸುಖಿಸುವನು"ಎಂದನು. ಇಲ್ಲಿಗೆ ನೂರನೆಯಸರ್ಗವು.

---

{ ಭರತನು ರಾಮನಿಗೆ ದಶರಥನ ಮರಣವಾರ್ತೆಯನ್ನು ತಿಳಿಸಿದುದು. }

ರಾಮನು ಹೇಳಿದ ಈ ಮಾತುಗಳನ್ನು ಕೇಳಿ ಭರತನು “ಅಣ್ಣಾ! ಮೊದಲೇ ಧರ್ಮಭ್ರಷ್ಟನಾಗಿರುವ ನನಗೆ ಈ ರಾಜಧರ್ಮಗಳಿಂದೇನು? ಎಲೈ ಪುರುಷಶ್ರೇಷ್ಠನೆ! ಹಿರಿಯಮಗನಿರುವಾಗ ಕಿರಿಯನು ರಾಜ್ಯಾಧಿಕಾರಕ್ಕರ್ಹನಲ್ಲವೆಂಬುದು ನಮ್ಮ ಇಕ್ಷ್ವಾಕುವಂಶಕ್ಕೆ ಕುಲಕ್ರಮಾಗತವಾಗಿ ಬಂದ ಶಾಶ್ವತಧರ್ಮವಲ್ಲವೆ? ಆದುದರಿಂದ ನಮಗೆ ಜ್ಯೇಷ್ಠನಾದ ನೀನೇ ಈಗ ನನ್ನೊಡನೆ ಅಯೋಧ್ಯೆಗೆ ಬಂದು, ಸರ್ವಸಂಪತ್ಸಮೃದ್ಧವಾದ ನಮ್ಮನಗರಿಯಲ್ಲಿ ನಮ್ಮ ವಂಶಾಭ್ಯುದಯಕ್ಕಾಗಿ ಪಟ್ಟಾಭಿಷೇಕವನ್ನು ವಹಿಸು! ಎಲೈ ಆರ್ಯನೆ! ರಾಜ್ಯಭಾರವನ್ನು ವಹಿಸುವುದು ಸಾಮಾನ್ಯವಲ್ಲ. [1]ಕೇವಲ ಪ್ರಾಕೃತಜನರು ಮಾತ್ರರಾಜನನ್ನು ಸಾಮಾನ್ಯಮನುಷ್ಯನೆಂದು ಹೇಳುವರೇ ಹೊರತು, ಬಲ್ಲವರು ಎಂದಿಗೂ ಹಾಗೆ ಹೇಳಲಾರರು! ಧರ್ಮಾರ್ಥಸಂಪಾದಕವಾದ ರಾಜವೃತ್ತಿಯೆಂಬುದು, ಅತಿಮಾನುಷವೆಂದು ಅನೇಕಪ್ರಾಜ್ಞರು ಹೇಳಿರುವುದನ್ನು ಕೇಳಿರುವೆನು. ಆದುದರಿಂದ ರಾಜನು ದೇವರೆಂದೇ ನನಗೆ ನಿಜವಾದ ಭಾವವು. ಅಣ್ಣಾ! ಆ ವಿಷಯವು ಹಾಗಿರಲಿ! ನೀನು ಇಲ್ಲಿರುವಾಗಲೇ ನಾನು ಕೇಕಯದೇಶಕ್ಕೆ ಹೊರಟು ಹೋಗಿದ್ದೆನಷ್ಟೆ? ನೀನೂ ಇತ್ತಲಾಗಿ ಅರಣ್ಯಕ್ಕೆ ಹೊ

---

1 ದೇವತ್ವವನ್ನುಂಟುಮಾಡುವ ತಪಸ್ಸನ್ನು ಬಿಟ್ಟು ರಾಜ್ಯದಿಂದೇನೆಂದುರಾಮನು ಆಕ್ಷೇಪಿಸುವನೆಂದು,ಅದಕ್ಕೆ ಪ್ರತ್ಯುತ್ತರವಾಗಿ ಭರತನು ಈವಾಕ್ಯವನ್ನು ಹೇಳಿರುವನು. ಸಾಮಾನ್ಯಜನರು ರಾಜನನ್ನು ಮನುಷ್ಯಮಾತ್ರನೆಂದು ತಿಳಿದಿದ್ದರೂ,ನಾನು ರಾಜನನ್ನು ದೈವವೆಂದೇ ಭಾವಿಸುವೆನೆಂದೂ, ತಪಸ್ಸು ಮೊದಲಾದ ದೇಹದಂಡನೆಯಿಂದ ದೇವತ್ವವನ್ನು ಸಂಪಾದಿಸುವುದಕ್ಕಿಂತಲೂ ರಾಜ್ಯಪಾಲನದಲ್ಲಿ ದೇವತ್ವವೆಂಬುದು ಭೋಗಮೂಲಕವಾಗಿಯೇ ಪ್ರತ್ಯಕ್ಷಾನುಭವಸಿದ್ಧವಾಗಿರುವುದರಿಂದ ಇದೇ ಉತ್ತಮವೆಂದೂ ಭರತನ ಭಾವವು (ಮಹೇಶ್ವರ ತೀರ್ಥರು.)

ರಟು ಬಂದುಬಿಟ್ಟಮೇಲೆ, ನಾವಿಬ್ಬರೂ ಇಲ್ಲದಿದ್ದಾಗ, ಯಾಗಶೀಲನಾಗಿಯೂ, ಸಜ್ಜನಶಿರೋಮಣಿಯಾಗಿಯೂ, ಪೂಜ್ಯನಾಗಿಯೂ ಇರುವ ನಮ್ಮ ತಂದೆಯು ಸ್ವರ್ಗವನ್ನುಸೇರಿಬಿಟ್ಟನು. ನೀನು ಸೀತಾಲಕ್ಷ್ಮಣರೊಡನೆ ಇತ್ತಲಾಗಿ ಹೊರಟಕೂಡಲೆ, ನಿನ್ನಗಲಿಕೆಯಿಂದುಂಟಾದ ಮಹಾಸಂಕಟದಿಂದಲೇ ಆತನು ಪ್ರಾಣವನ್ನು ಬಿಟ್ಟುಬಿಟ್ಟನು. ಇನ್ನು ಚಿಂತಿಸಿ ಫಲವೇನು ? ಆರ್ಯನೆ ! ಏಳು ! ತಂದೆಗೆ ಜಲತರ್ಪಣಾದಿಗಳನ್ನು ನಡೆಸು ! ನಾನೂ ಈ ಶತ್ರುಘ್ನನೂ ಆಗಲೇ ಆತನಿಗೆ ಜಲಕ್ರಿಯೆಗಳನ್ನುಮಾಡಿ ಮುಗಿಸಿರುವೆವು. ಮುಖ್ಯವಾಗಿ ತಾಯಿತಂದೆಗಳಿಗೆ ಅತ್ಯಂತಪ್ರೇಮಪಾತ್ರರಾದ ಮಕ್ಕಳು ಕೊಟ್ಟ ಜಲತರ್ಪಣವೇ ಪಿತೃಲೋಕದಲ್ಲಿ ಅವರಿಗೆ ಅಕ್ಷಯವಾದ ಫಲವನ್ನು ಕೊಡುವುದೆಂದು ಹಿರಿಯರು ಹೇಳುವರು. ನಮ್ಮತಂದೆಗೆ ನೀನೇ ವಿಶೇಷಪ್ರಿಯನಾದುದರಿಂದ, ನಿನ್ನಕೈಯಿಂದ ನೀನು ಆತನಿಗೆ ಅಪರಕ್ರಿಯೆಗಳನ್ನುಮಾಡಿ ಆತನನ್ನುದ್ಧರಿಸು ! ಆರ್ಯನೆ ! ನಮ್ಮತಂದೆಯು ತನ್ನಪ್ರಾಣೋತ್ಕ್ರಮಣಕಾಲದಲ್ಲಿಯೂ ನಿನಗಾಗಿಯೇ ದುಃಖಿಸುತ್ತ, ನಿನ್ನನ್ನೇ ನೋಡಬೇಕೆಂದು ಬಾರಿಬಾರಿಗೂ ಹಂಬಲಿಸುತ್ತ, ನಿನ್ನಲ್ಲಿಯೇ ಮನಸ್ಸಿಟ್ಟು, ನಿನ್ನವಿರಹದುಃಖದಿಂದಲೇ ಪೀಡಿತನಾಗಿ, ನಿನ್ನನ್ನೇ ಸ್ಮರಿಸಿಕೊಂಡು ಈ ಲೋಕವನ್ನು ಬಿಟ್ಟನು" ಎಂದನು. ಇಲ್ಲಿಗೆ ನೂರೊಂದನೆಯ ಸರ್ಗವು.

---

{ ರಾಮನ ಪ್ರಲಾಪವು. ಮಂದಾಕಿನಿಯಲ್ಲಿ ಜಲತರ್ಪಣವನ್ನು ನಡೆಸಿದುದು. ಅಲ್ಲಿಂದ ಆಶ್ರಮಕ್ಕೆ ಹಿಂತಿರುಗಿಬಂದು ಪುನಃ ಪ್ರಲಾಪಿಸಿದುದು. ಅಯೋಧ್ಯಾವಾಸಿಗಳಿಗೆ ರಾಮನೊಡನೆ ಸಮಾಗಮವು. }

ಹೀಗೆ ಪಿತೃಮರಣವೆಂಬ ಮಹಾದುಃಖವಾರ್ತೆಯು ಭರತನ ಬಾಯಿಯಿಂದ ಹೊರಟಕೂಡಲೆ ರಾಮನಿಗೆ ಪ್ರಜ್ಞೆತಪ್ಪಿತು. ಇಂದ್ರನಿಂದ ಪ್ರಯೋಗಿಸಲ್ಪಟ್ಟ ವಜ್ರಾಯುಧದಂತೆ ಅತಿದುಸ್ಸಹವಾಗಿ ಕರ್ಣಕಠೋರವಾದ ಆ ವಾಗ್ವಜ್ರವು ಬಂದು ತಾಗಿದಾಗಲೇ ರಾಮನು ಮಿತಿಮೀರಿದ ಸಂಕಟದಿಂದ ಕೈಗಳನ್ನು ಹಿಸುಕುತ್ತ, ಕಾಡಿನಲ್ಲಿ ಕೊಡಲಿಯಿಂದ ಕಡಿಯಲ್ಪಟ್ಟ

ಪುಷ್ಪಿತವಾದ ಮರದಂತೆ ನೆಲದಮೇಲೆ ಬಿದ್ದುಬಿಟ್ಟನು. ಕಾಡಾನೆಯು ತನ್ನ ಮೈನವೆಯನ್ನಾರಿಸಿಕೊಳ್ಳುವುದಕ್ಕಾಗಿ ನದೀತೀರದಲ್ಲಿರುವ ಮರಳುದಿಣ್ಣೆಗಳಲ್ಲಿ ವಪ್ರಾಘಾತಲೀಲೆಯನ್ನು ಮಾಡಿ, ಅದರಿಂದ ಬಳಲಿ, ಮಲಗಿರುವಂತೆ, ರಾಮನು ಮೂರ್ಛಿತನಾಗಿ ನೆಲದಮೇಲೆ ಮಲಗಿರುವುದನ್ನು ನೋಡಿ ಭರತನೂ, ಲಕ್ಷ್ಮಣನೂ, ಶತ್ರುಘ್ನನೂ, ಸೀತೆಯೂ ವ್ಯಸನದಿಂದ ಪ್ರಲಾಪಿಸತೊಡಗಿದರು. ಹೀಗೆ ದುಃಖದಿಂದ ಕಂದಿ ಮಲಗಿದ್ದ ಆತನಿಗೆ ಮೂರ್ಛೆತಿಳಿಸುವುದಕ್ಕಾಗಿ ಆತನ ಮೈಮೇಲೆ ತಣ್ಣೀರನ್ನು ಚೆಲ್ಲಿದರು. ಸ್ವಲ್ಪ ಹೊತ್ತಿನಮೇಲೆ ರಾಮನು ಮೆಲ್ಲನೆ ಮೂರ್ಛೆತಿಳಿದೆದ್ದು, ಕಣ್ಣೀರುಸುರಿಸುತ್ತ, ಬಹುದೀನಸ್ವರದಿಂದ ಮಾತಾಡತೊಡಗಿದನು. ತಂದೆಯ ಮರಣವನ್ನು ನೆನೆಸಿಕೊಂಡು ವ್ಯಸನಪೀಡಿತನಾದ ಆತನು, ಧರ್ಮಯುಕ್ತವಾದ ಮಾತುಗಳಿಂದ ಭರತನನ್ನು ನೋಡಿ “ಹಾ! ವತ್ಸನೆ! ನಮ್ಮ ತಂದೆಯು ಕಾಲಗತಿಯನ್ನು ಹೊಂದಿದನೆ? ಇನ್ನು ಗತಿಯೇನು? ಅಯೋಧ್ಯೆಯಿಂದ ಇನ್ನು ನಮಗಾಗಬೇಕಾದುದೇನು? ರಾಜಶ್ರೇಷ್ಠನಾದ ಆತನನ್ನಗಲಿದಮೇಲೆ ಆ ಅಯೋಧ್ಯೆಯನ್ನು ಪಾಲಿಸುವ ಸಮರ್ಥನಾರು? ಅಯ್ಯೋ! ನನ್ನ ದುಃಖದಿಂದಲೇ ಆತನು ಮೃತಿಹೊಂದಿದನೆ? ಆತನಿಗೆ ಅಪರಸಂಸ್ಕಾರಗಳನ್ನು ನಡೆಸುವುದಕ್ಕೂ ನಾನು ಅರ್ಹನಾಗದೇಹೋದೆನೆ! ಅಂತಹ ಮಹಾತ್ಮನಿಗೆ ದುರ್ಜಾತನಾದ ಈ ನನ್ನಿಂದ ಏನುಪಯೋಗವಾಯಿತು? ಆತನಿಗೆ ನಾನು ಮಗನಾಗಿ ಹುಟ್ಟಿಯೂ ನಿರರ್ಥಕವಾಯಿತು. ಆತನನ್ನು ಕೊಲ್ಲುವುದಕ್ಕಾಗಿಯೇ ನಾನು ಹುಟ್ಟಿದಂತಾಯಿತಲ್ಲವೆ? ವತ್ಸ ಭರತನೆ! ನೀನೇ ಧನ್ಯನು. ಶತ್ರುಘ್ನನೊಡಗೂಡಿ ಸಕಾಲದಲ್ಲಿ ರಾಜನಿಗೆ ಸಮಸ್ತ ಪ್ರೇತಕೃತ್ಯಗಳನ್ನೂ ನಡೆಸಿ, ಆತನನ್ನು ಸತ್ಕರಿಸಿ ದೋಷರಹಿತನಾದೆಯಲ್ಲವೆ? ಮಹಾರಾಜನು ಮೃತಿಹೊಂದಿದಮೇಲೆ ಇನ್ನು ಆ ಅಯೋಧ್ಯೆಗೆ ಕಳೆಯೆಲ್ಲಿರುವುದು? ಪ್ರಧಾನಪುರುಷನಿಲ್ಲದ ಆ ಪುರಕ್ಕೆ ಇನ್ನು ನೆಮ್ಮದಿಯೆಲ್ಲಿಯದು? ರಾಜನಿಲ್ಲದೆ ಅನಾಯಕವಾಗಿರುವ ಆ ಅಯೋಧ್ಯೆಗೆ ನನ್ನ ವನವಾಸವು ತೀರಿದಮೇಲೆಯೂ ನಾನು ಪ್ರವೇಶಿಸಲಾರೆನು? ನಮ್ಮ ತಂದೆಯು ಸತ್ತಮೇಲೆ ವನವಾಸವನ್ನು ಮುಗಿಸಿಕೊಂಡು ನಾನು ಹಿಂತಿರುಗಿ ಅಯೋಧ್ಯೆಗೆ ಹೋದರೂ ನನ್ನನ್ನು ಅಲ್ಲಿ ಶಿಕ್ಷಿಸಿ ಸನ್ಮಾರ್ಗಕ್ಕೆ ತರುವವರಾರು? ಮೊದಲು ನನ್ನ ತಂದೆಯು, ನಾನು ಆತನ

ಆಜ್ಞೆಯನ್ನನುಸರಿಸಿಕೊಳ್ಳುತಿದ್ದುದಕ್ಕೆ ಎಷ್ಟೋ ಸಂತೋಷಿಸಿ,ನನ್ನನ್ನು ಕಿವಿಗಿಂಪಾದ ಮಾತುಗಳಿಂದ ಮನ್ನಿಸುತಿದ್ದನಲ್ಲವೆ?ಇನ್ನು ನಾನು ಅಂತಹ ಮಾತುಗಳನ್ನು ಕೇಳುವುದೆಲ್ಲಿ?" ಎಂದನು. ಹೀಗೆ ಭರತನನ್ನುನೋಡಿ ದೀನವಾಕ್ಯಗಳಿಂದ ಪ್ರಲಾಪಿಸಿದಮೇಲೆ,ಚಂದ್ರಮುಖಿಯಾದ ಸೀತೆಯಕಡೆಗೆ ತಿರುಗಿ, ಸಂಕಟದಿಂದ ತಪಿಸುತ್ತ "ಎಲೆ ಸೀತೆ! ನಿನ್ನ ಮಾವನು ಮೃತನಾದನು. ಲಕ್ಷ್ಮಣಾ! ನೀನೂ ತಂದೆಯಿಲ್ಲದ ತಬ್ಬಲಿಯಾದೆಯಲ್ಲಾ !ನಮ್ಮ ರಾಜಾಧಿರಾಜನು ಸ್ವರ್ಗಸ್ಥನಾದನೆಂಬ ದುಃಖವಾರ್ತೆಯನ್ನು ಭರತನು ಹೇಳುತ್ತಿರುವನು"ಎಂದನು. ರಾಮನು ಈ ಮಾತುಗಳನ್ನಾಡುತ್ತಿರುವಾಗಲೇ ಅಲ್ಲಿದ್ದವರೆಲ್ಲರ ಕಣ್ಣುಗಳಲ್ಲಿಯೂ ಪಳಪಳನೆ ನೀರು ಸುರಿಯುತಿತ್ತು. ಆಗ ಆ ಅಣ್ಣತಮ್ಮಂದಿರೆಲ್ಲರೂ ಅನೇಕವಿಧದಲ್ಲಿ ರಾಮನನ್ನು ಸಮಾಧಾನಪಡಿಸಿ, "ಅಣ್ಣಾ !ಏಳು!ತಂದೆಗೆ ಉದಕಕ್ರಿಯೆಗಳನ್ನು ನಡೆಸಬೇಕಲ್ಲವೆ?"ಎಂದು ಪ್ರಾರ್ಥಿಸುತಿದ್ದರು. ಆಗ ತನ್ನ ಮಾವನಾದ ದಶರಥನು ಸ್ವರ್ಗಸ್ಥನಾದುದನ್ನು ಕೇಳಿ, ಸೀತೆಯೂ ಎಡೆಬಿಡದೆ ಕಣ್ಣೀರುಬಿಡುತ್ತ, ಆ ಬಾಷ್ಪಪ್ರವಾಹದಲ್ಲಿ ತನ್ನ ಪತಿಯನ್ನೇ ನೋಡಲಾರದೆಹೋದಳು. ಹೀಗೆ ಮಿತಿಮೀರಿ ಪ್ರಲಾಪಿಸುತ್ತಿರುವ ಜನಕಪುತ್ರಿಯಾದ ಸೀತೆಗೆ ರಾಮನು ತಾನೇ ಸಮಾಧಾನವಾಕ್ಯಗಳನ್ನು ಹೇಳಿ, ಆಮೇಲೆ ದುಃಖಿತನಾದ ಲಕ್ಷ್ಮಣನನ್ನೂ ನೋಡಿ "ಎಲೆ ವತ್ಸನೆ! ಇನ್ನೇನು!ತಪಸ್ವಿಜನಗಳಿಗೆ ಭೋಜ್ಯವಾದ ಇಂಗಳದ ಹಿಂಡಿಯನ್ನು ತಂದಿಡು? ನನಗೆ ಉಡುವುದಕ್ಕೂ ಹೊದ್ದುಕೊಳ್ಳುವುದಕ್ಕೂ ನಾರುಮಡಿಗಳೆರಡನ್ನು ತಂದುಕೊಡು. ಮಹಾತ್ಮನಾದ ನಮ್ಮ ತಂದೆಗೆ ಜಲಕ್ರಿಯೆಯನ್ನು ಮಾಡುವುದಕ್ಕಾಗಿ ಹೋಗುವೆನು. ಸೀತೆಯನ್ನು ಮುಂದಿಟ್ಟುಕೊಂಡು ನೀನೂ ಹೊರಡು. ನಾನು ನಿನ್ನಹಿಂದೆ ಬರುವೆನು. ಇಂತಹ ಸಹಿಸಬಾರದ ದುಃಖಕಾರ್ಯಗಳಿಗೆ ಹೋಗುವಾಗ, ಸ್ತ್ರೀಯರನ್ನೂ ಬಾಲಕರನ್ನೂ ಮುಂದೆಬಿಟ್ಟುಕೊಂಡುಹೋಗಬೇಕಾದುದೇ ಶಾಸ್ತ್ರವಿಧಿಯು " ಎಂದನು. ಆಗ ಇಕ್ಷ್ವಾಕುವಂಶದವರನ್ನು ಕುಲಕ್ರಮವಾಗಿ ಅನುಸರಿಸಿ ಬಂದವನಾಗಿಯೂ, ಆತ್ಮಜ್ಞಾನವುಳ್ಳವನಾಗಿಯೂ, ಮಹಾಬುದ್ಧಿಮಂತನಾಗಿಯೂ, ಮೃದುಸ್ವಭಾವವುಳ್ಳವನಾಗಿಯೂ, ಅಂತರ್ಬಹಿರಿಂದ್ರಿಯಗಳನ್ನು ನಿಗ್ರಹಿಸಿದವನಾಗಿಯೂ, ಮುಖ್ಯವಾಗಿ ರಾಮನಲ್ಲಿ ವಿಶೇಷಭಕ್ತಿಯುಳ್ಳವನಾಗಿಯೂ



874. ರಾಮಲಕ್ಷ್ಮಣರು ಮಂದಾಕಿನೀನದಿಯಲ್ಲಿ ತಂದೆಗೆ ಜಲತರ್ಪಣವನ್ನು ಬಿಟ್ಟದ್ದು.

ಇರುವ ಸುಮಂತ್ರನನ್ನು, ರಾಮನನ್ನೂ ಇತರ ರಾಜಕುಮಾರರನ್ನೂ ಅನೇಕ ವಿಧದಲ್ಲಿ ಸಮಾಧಾನಪಡಿಸಿ, ಅವರನ್ನು ಕೈಹಿಡಿದು ಕರೆದುಕೊಂಡು ಹೋಗಿ, ಮೆಲ್ಲಗೆ ಮಂದಾಕಿನೀನದಿಗೆ ಇಳಿಸಿದನು. ಮಹಾಯಶಸ್ವಿಗಳಾದ ಆ ಸೀತಾರಾಮಲಕ್ಷ್ಮಣರು ಸುಂದರವಾದ ಘಟ್ಟಗಳುಳ್ಳುದಾಗಿಯೂ, ಪುಷ್ಪಿತವಾದ ತೀರವನಗಳುಳ್ಳುದಾಗಿಯೂ, ಶೀಘ್ರಗಾಮಿನಿಯಾಗಿಯೂ ಪ್ರವಹಿಸುತ್ತಿರುವ ಆ ಮಂದಾಕಿನಿಯಲ್ಲಿ ದುಃಖದಿಂದಿಳಿದು ಸ್ನಾನವನ್ನುಮಾಡಿ, ಅಲ್ಲಿಂದ ಮುಂದೆ ಕೆಸರಿಲ್ಲದ ಒಂದು ಘಟ್ಟವನ್ನು ನೋಡಿ ಅಲ್ಲಿ ಜಲಕ್ರಿಯೆಯನ್ನು ಮಾಡಲಾರಂಭಿಸಿದರು. ಆಗ ಅವರೆಲ್ಲರೂ ದುಃಖದಿಂದ "ಎಲೆ ತಾತನೆ! ಇದೋ ! ಈ ಜಲವು ನಿನಗೆ" ಎಂದು. ಹೇಳುತ್ತ ತರ್ಪಣವನ್ನು ಬಿಡಲಾರಂಭಿಸಿದರು. ಆಗ ರಾಮನೂ ತನ್ನ ಬೊಗಸೆಯಲ್ಲಿ ನೀರನ್ನು ತುಂಬಿಕೊಂಡು, ದಕ್ಷಿಣಾಭಿಮುಖವಾಗಿ ಕುಳಿತು, ದುಃಖವನ್ನು ತಡೆಯಲಾರದೆ ಗೋಳಿಡುತ್ತ "ಎಲೆ ರಾಜಸಿಂಹನೆ! ನಾನು ಈಗ ಕೊಡತಕ್ಕ ಈ ಶುದ್ಧೋದಕವು ಪಿತೃಲೋಕವನ್ನು ಹೊಂದಿದ ನಿನಗೆ ಅಕ್ಷಯವಾಗಿರಲಿ." ಎಂದು ಹೇಳಿ ತರ್ಪಣವನ್ನು ಬಿಟ್ಟನು. ಆ ಮೇಲೆ ತೇಜಸ್ವಿಯಾದ ರಾಮನು ಆ ಸ್ಥಳವನ್ನು ಬಿಟ್ಟು ಮೇಲೆ ಬಂದು, ತನ್ನ ತಮ್ಮಂದಿರೊಡಗೂಡಿ ತಂದೆಗೆ ಪಿಂಡಪ್ರದಾನವನ್ನೂ ಮಾಡಿದನು. ಆಗ ಆತನು ಬದರೀಫಲ (ಎಗಚಿಹಣ್ಣು) ಮಿಶ್ರವಾದ ಇಂಗಳದ ಹಿಂಡಿಯನ್ನು ದರ್ಭಾಸ್ತರಣದಮೇಲಿಟ್ಟು, ಅದನ್ನು ನೋಡಿ ವ್ಯಸನಪೀಡಿತನಾಗಿ, ಗಟ್ಟಿಯಾಗಿ ಅಳುತ್ತಾ "ಎಲೈ ರಾಜಾಧಿರಾಜನೆ! ಇದೋ! ನಿನಗೆ ಪ್ರೀತ್ಯರ್ಥವಾಗಿ ಈ ಆಹಾರವನ್ನು ಸಮರ್ಪಿಸಿರುವೆನು. ಇಲ್ಲಿ ನಮಗೆ ಈ ವಿಧವಾದ ಹಿಂಡಿಯೇ ಆಹಾರವಾಗಿರುವುದರಿಂದ ನಿನಗೂ ಇದನ್ನೇ ಅರ್ಪಿಸಬೇಕಾಯಿತು. ಪ್ರೀತಿಯಿಂದ ಸ್ವೀಕರಿಸಬೇಕು. ಲೋಕದಲ್ಲಿ ಮನುಷ್ಯರು ತಾವು ಭುಜಿಸತಕ್ಕ ಆಹಾರವನ್ನೇ ತಮ್ಮತಮ್ಮ ಇಷ್ಟದೇವತೆಗಳಿಗೆ ಮೊದಲು ನಿವೇದನಮಾಡಬೇಕಲ್ಲವೆ?" ಎಂದು ಹೇಳಿ ಪ್ರಲಾಪಿಸುತ್ತ ಪಿಂಡಪ್ರದಾನವನ್ನು ಮಾಡಿ, ಆ ಸ್ಥಳದಿಂದ ಎದ್ದು ಮೇಲೆಬಂದು, ಅಂದವಾದ ತಪ್ಪಲುಗಳುಳ್ಳ ಚಿತ್ರಕೂಟಪರ್ವತವನ್ನೇರಿದನು. ಲೋಕನಾಥನಾದ ಆ ರಾಮನು ತನ್ನ ಪರ್ಣಶಾಲೆಯ ಬಾಗಿಲಿಗೆ ಬಂದು ನಿಂತೊಡನೆಯೇ ಭರತಲಕ್ಷ್ಮಣರಿಬ್ಬರನ್ನೂ ಎರಡುತೋಳುಗಳಿಂದಲೂ ಬಿಗಿಯಾಗಿ ಅಪ್ಪಿ

ಕೊಂಡು ರೋದಿಸುತಿದ್ದನು. ಅದನ್ನು ನೋಡಿ ಸೀತಾಲಕ್ಷ್ಮಣಭರತಶ ತ್ರುಘ್ನಾದಿಗಳೆಲ್ಲರೂ ದುಃಖವನ್ನು ತಡೆಯಲಾರದೆ ಗಟ್ಟಿಯಾಗಿ ಅಳುವುದ ಕ್ಕಾರಂಭಿಸಿದರು. ಈ ರೋದನಧ್ವನಿಯು ಸಿಂಹಗಳ ಕೂಗಿನಂತೆ ಅತಿಪ್ರಬ ಲವಾಗಿ ಆ ಪರ್ವತದ ನಾಲ್ಕುಕಡೆಗಳಲ್ಲಿಯೂ ಪ್ರತಿಧ್ವನಿಯನ್ನು ಹೊರಡಿ ಸಿತು. ಮಹಾಬಲಾಢ್ಯರಾದ ಈ ಅಣ್ಣ ತಮ್ಮಂದಿರೆಲ್ಲರೂ ತಂದೆಗೆ ಜಲತ ರ್ಪಣವನ್ನು ಬಿಡುವಾಗ, ರೋದಿಸುತಿದ್ದುದರಿಂದುಂಟಾದ ದೊಡ್ಡ ದೀನ ಧ್ವನಿಯನ್ನು ಕೇಳಿ ಸೈನಿಕರೆಲ್ಲರಿಗೂ ಭಯವುಂಟಾಯಿತು. ಆಗ ಅವರು ಒ ಬ್ಬೊಬ್ಬರಿಗೊಬ್ಬರು "ಓಹೋ ! ಭರತನು ರಾಮನನ್ನು ಸೇರಿದಹಾಗಿದೆ. ಅವ ರೆಲ್ಲರೂ ಒಂದಾಗಿ ಸೇರಿ ತಂದೆಯ ಮರಣವನ್ನು ಕುರಿತು ದುಃಖದಿಂದ ಗೋಳಿಡುತ್ತಿರುವರು. ಈ ಮಹಾಧ್ವನಿಯು ಅಲ್ಲಿಂದಲೇ ಹೊರಟುಬರು ವುದು. ಇದಕ್ಕೆ ಸಂದೇಹವಿಲ್ಲ."ಎಂದರು. ಆಗಲೇ ಅವರೆಲ್ಲರೂ ತಮ್ಮತಮ್ಮ ಬಿಡಾರಗಳನ್ನು ಬಿಟ್ಟು ಎಲ್ಲರೂ ಒಟ್ಟಾಗಿ ಸೇರಿ,! ಆ ದೀನಧ್ವನಿಯು ಹೊರ ಟುಬಂದ ಕಡೆಗಿದಿರಾಗಿ ಬಹುವೇಗದಿಂದ ಬರುತಿದ್ದರು. ರಾಮನ ಬಳಿಗೆ ಹೋಗುವಾಗ ವಾಹನಾದಿಗಳನ್ನು ಬಿಟ್ಟು ಕಾಲುನಡೆಯಿಂದಲೇ ಹೋಗ ಬೇಕೆಂದೆಣಿಸಿ ಕೆಲವರು ನಡೆದೇ ಹೋಗುತಿದ್ದರು. ನಡೆಯುವುದಕ್ಕೆ ಶಕ್ತಿ ಯಿಲ್ಲದ ಮತ್ತೆ ಕೆಲವರು ವಾಹನಗಳನ್ನೇರಿ ಹೊರಟರು. ಕೆಲವರು ಕುದು ರೆಗಳನ್ನೂ, ಕೆಲವರು ಆನೆಗಳನ್ನೂ, ಕೆಲವರು ಅಲಂಕೃತವಾದ ರಥಗಳ ನ್ನೂ ಏರಿ ಹೊರಟರು. ರಾಮನು ಕಾಡಿಗೆ ಹೋಗಿ ಬಹುಸ್ವಲ್ಪಕಾಲವಾಗಿ ದ್ದರೂ, ಆ ಜನರಿಗೆ ರಾಮನನ್ನು ನೋಡಬೇಕೆಂಬ ಆತುರವು ಆತನನ್ನಗಲಿ ಎಷ್ಟೋ ದಿವಸಗಳಾದಂತೆ ಕಾಣಿಸುತಿತ್ತು. ಎಲ್ಲರೂ ಅತ್ಯಾತುರದಿಂದ ಆ ಶ್ರಮದಕಡೆಗೆ ಹೊರಟರು. ಆ ಆಶ್ರಮದಲ್ಲಿ ಅಣ್ಣತಮ್ಮಂದಿರೆಲ್ಲರೂ ಒಂ ದಾಗಿ ಕಲೆತ ಈ ಮಹಾಸಂಭ್ರಮವನ್ನು ನೋಡಬೇಕೆಂಬ ಕುತೂಹಲವು ಒಬ್ಬೊಬ್ಬರ ಮನಸ್ಸಿನಲ್ಲಿಯೂ ಮಿತಿಮೀರಿ ಉಕ್ಕಿಬರುತಿತ್ತು.ಇವರು ಹೋ ಗುತಿದ್ದಾಗ ಕುದುರೆಯ ಗೊರಸಲಿನ ಧ್ವನಿಗಳೂ,ಚಕ್ರನೇಮಿಸ್ವನಗಳೂ, ದಿಕ್ಕುಗಳೆಲ್ಲವನ್ನೂ ವ್ಯಾಪಿಸಿತು. ಆಗ ಆ ಬೆಟ್ಟದ ತಪ್ಪಲುಗಳಲ್ಲಿ ನಡೆಯು ತಿದ್ದ ಆನೆ ಕುದುರೆ ಮೊದಲಾದುವುಗಳ ಪದಹತಿಗಳಿಂದಲೂ,ರಥ ಚಕ್ರಗಳ ಬಳೆಗಳು ನೆಲದಮೇಲೆ ಉಜ್ಜುವುದರಿಂದಲೂ ಉಂಟಾದ ಮಹಾಧ್ವನಿಯು,

ವರ್ಷಾಕಾಲದಲ್ಲಿ ಮೇಘಪರಂಪರೆಗಳು ಆಕಾಶದಲ್ಲಿ ಬಂದು ಸೇರುವುದ ರಿಂದ ಹೊರಡುವ ಮಹಾಧ್ವನಿಯಂತೆ ಸುತ್ತಲೂ ಮೊಳಗುತಿತ್ತು. ಇದನ್ನು ಕೇಳಿ ಆ ಬೆಟ್ಟದಮೇಲಿದ್ದ ಆನೆಗಳೆಲ್ಲವೂ ಭಯಪಟ್ಟು ತಮ್ಮತಮ್ಮ ಹೆಣ್ಣಾ ನೆಗಳೊಡನೆ ಕೂಡಿ ದಿಕ್ಕುದಿಕ್ಕಿಗೆ ಓಡಿ ಆ ಪ್ರದೇಶವನ್ನೇ ಬಿಟ್ಟುಬೇರೆಬೇರೆ ಕಾಡುಗಳಲ್ಲಿ ಸೇರಿಕೊಂಡುವು. ಆ ಆನೆಗಳು ಹೀಗೆ ಭಯದಿಂದ ಮೈಮರೆತು. ಓಡುತಿದ್ದರೂ, ರಾಮದರ್ಶನದಿಂದುಂಟಾದ ಹರ್ಷವು ಅವುಗಳಿಗೆ ಮದವು ಡುಗದಂತೆ ಮಾಡಿದ್ದುದರಿಂದ, ಅವುಗಳ ಮದದ ವಾಸನೆಯು, ಆ ವನದಸು ತ್ತಲೂ ವ್ಯಾಪಿಸಿಕೊಂಡಿತ್ತು. ಹಂದಿಗಳು, ತೋಳಗಳು, ಕಾಡೆಮ್ಮೆಗಳು, ಕಪಿಗಳು, ಹಾವುಗಳು, ಹುಲಿಕರಡಿಗಳು, ಜಿಂಕೆಗಳು, ಕಡವೆಗಳು, ಗೋಕ ರ್ಣಗಳು ಮೊದಲಾದ ವನಮೃಗಗಳೆಲ್ಲವೂ ಬೆದರಿ ದಿಕ್ಕುದಿಕ್ಕಾಗಿ ಓಡುತಿ ದ್ದುವು. ಹಾಗೆಯೇ ಚಕ್ರವಾಕಗಳು, ನೀರುಕೋಳಿಗಳು, ಹಂಸಗಳು, ಕಾ ರಂಡವಗಳು, ದೊಡ್ಡಕೊಕ್ಕರೆಗಳು, ಗಂಡುಗೋಗಿಲೆಗಳು, ಕ್ರೌಂಚಗಳು, ಇವೇ ಮೊದಲಾದ ಜಂತುಗಳೆಲ್ಲವೂ ಈ ಕೋಲಾಹಲಕ್ಕೆ ಬೆದರಿ ಮೈಮರೆ ತು ಪ್ರಜ್ಞೆತಪ್ಪಿ ಅಲ್ಲಲ್ಲಿ ಹುದುಗಿಕೊಳ್ಳುತಿದ್ದುವು. ಹೀಗೆ ಭಯದಿಂದ ತತ್ತ ಳಿಸುತ್ತಿರುವ ಪಕ್ಷಿಗಳಿಂದ ಆಕಾಶವೆಲ್ಲವೂ ತುಂಬಿಹೋಯಿತು. ಅಲ್ಲಿನ ಭೂ ಭಾಗವೆಲ್ಲವೂ ಭರತನ ಸೈನಿಕರಿಂದ ತುಂಬಿತ್ತು. ಹೀಗೆ ಭೂಮ್ಯಾಕಾಶ ಳೆರಡೂ ಮುಚ್ಚಿಹೋಗಿ ವಿಚಿತ್ರವಾಗಿ ಕಾಣುತಿತ್ತು.ಕೊನೆಗೆ ಈ ಸೈನಿಕರೆಲ್ಲ ರೂ ಬಹುಸಂಭ್ರಮದಿಂದ ರಾಮನ ಪರ್ಣಶಾಲೆಯನ್ನು ಸೇರಿದರು. ಅಲ್ಲಿ ಮಹಾಯಶಸ್ವಿಯಾಗಿ, ಯಾವ ಶತ್ರುಗಳನ್ನಾದರೂ ನಿಮಿಷಮಾತ್ರದಲ್ಲಿ ನಿಗ್ರಹಿಸತಕ್ಕ ಅದ್ಭುತಪರಾಕ್ರಮವುಳ್ಳ ಪುರುಷಶ್ರೇಷ್ಠನಾದ ರಾಮನು ಬರೀನೆಲದಮೇಲೆ ಕುಳಿತಿರುವುದನ್ನು ಕಂಡರು. ಆಗ ಅವರೆಲ್ಲರಿಗೂ ಮನಸ್ಸಿ ನಲ್ಲಿ ಮಹಾಸಂಕಟವುಂಟಾಗಲು,ಒಬ್ಬರಿಗೊಬ್ಬರು ಕೈಕೇಯಿಯನ್ನೂ, ಮಂ ಥರೆಯನ್ನೂ ಬಾಯಿಗೆ ಬಂದಹಾಗೆ ಬೈಯುತ್ತ, ಹಾಗೆಯೇ ಮುಂದೆಹೋಗಿ ರಾಮನ ಸಮೀಪವನ್ನು ಸೇರಿದರು. ಎಲ್ಲರ ಕಣ್ಣುಗಳಲ್ಲಿಯೂ ನೀರು ಸುರ ಯಲಾರಂಭಿಸಿತು. ಹೀಗೆ ದುಃಖಿತರಾಗಿ ಕಣ್ಣೀರುಬಿಡುತ್ತಿರುವ ಆ ಜನರ ವ್ಯಸನವನ್ನು ನೋಡಿ, ಧರ್ಮಾತ್ಮನಾದ ರಾಮನು ಅವರೆಲ್ಲರ ಸಮೀಪಕ್ಕೂ ಬಂದು,ತಂದೆತಾಯಿಗಳು ತಮ್ಮ ಮಕ್ಕಳನ್ನು ಹೇಗೋ ಹಾಗೆ ಒಬ್ಬೊಬ್ಬರ

ನ್ನೂ ಬಹುಪ್ರೀತಿಯಿಂದಪ್ಪಿಕೊಂಡು ಸಮಾಧಾನಪಡಿಸಿದನು. ಆಲಿಂಗನಾರ್ಹರಲ್ಲದ ಮತ್ತೆ ಕೆಲವುಸೇವಕರು ಮುಂದೆ ಬಂದು ರಾಮನಿಗೆ ಸಾಷ್ಟಾಂಗಪ್ರಣಾಮವನ್ನು ಮಾಡಿದರು. ರಾಮನು ಅವರೆಲ್ಲರನ್ನೂ ಅವರವರ ಸ್ಥಿತಿಗೆ ತಕ್ಕಂತೆ ಮನ್ನಿಸಿದನು. ಆಗಾಗ ಆ ನಾಲ್ಕುಮಂದಿ ಅಣ್ಣತಮ್ಮಂದಿರೂ, ಸೀತೆಯೂ, ತಮಗುಂಟಾದ ಪರಸ್ಪರವಿಯೋಗವನ್ನೂ, ತಂದೆಯ ಮರಣವನ್ನೂ ನೆನೆಸಿಕೊಂಡು ದುಃಖದಿಂದ ಗೋಳಿಡುತ್ತಿರಲು, ಆ ಪ್ರಲಾಪಧ್ವನಿಯು ಭೂಮ್ಯಾಕಾಶಗಳಲ್ಲಿಯೂ, ಬೆಟ್ಟದ ಗವಿಗಳಲ್ಲಿಯೂ, ನಾನಾದಿಕ್ಕುಗಳಲ್ಲಿಯೂ ಪ್ರತಿಧ್ವನಿಯನ್ನುಂಟುಮಾಡುತ್ತ ಮೃದಂಗಧ್ವನಿಯಂತೆ ಗಂಭೀರವಾಗಿ ಸುತ್ತಲೂ ವ್ಯಾಪಿಸಿತು. ಇಲ್ಲಿಗೆ ನೂರೆರಡನೆಯಸರ್ಗವು.

---

{ರಾಮನು ತನ್ನ ಮಾತೃಜನವನ್ನೂ, ವಸಿಷ್ಠನನ್ನೂ, ಇತರಮಂತ್ರಿಗಳೇ ಮೊದಲಾದವರನ್ನೂ ನೋಡಿ ಮಾತಾಡಿಸಿದುದು.}

ಇತ್ತಲಾಗಿ ವಸಿಷ್ಠನು ಕೌಸಲ್ಯೆಯೇ ಮೊದಲಾದ ದಶರಥನ ಪತ್ನಿಯರನ್ನು ಮುಂದಿಟ್ಟುಕೊಂಡು, ರಾಮನನ್ನು ನೋಡಬೇಕೆಂಬ ಆತುರದಿಂದ ಬರುತಿದ್ದನು. ಈತನೊಡನೆ ರಾಜಪತ್ನಿಯರು ಮಂದಗಮನದಿಂದ ನಡೆದುಬರ ುತ್ತ, ದಾರಿಯಲ್ಲಿ ಮಂದಾಕಿನೀನದಿಯನ್ನು ಕಂಡು ಅಲ್ಲಿ ರಾಮಾದಿಗಳು ಬಂದಿಳಿಯುತಿದ್ದ ಘಟ್ಟವನ್ನೂ ಕಂಡರು. ಅದನ್ನು ನೋಡಿದೊಡನೆಯೇ ಕೌಸಲ್ಯೆಯ ಕಣ್ಣುಗಳಲ್ಲಿ ದುಃಖಬಾಷ್ಪವು ಉಕ್ಕಿಬಂದಿತು. ಆಗ ಆಕೆಯು ಸಮೀಪದಲ್ಲಿದ್ದ ಸುಮಿತ್ರೆಯನ್ನೂ, ಇತರ ರಾಜಸ್ತ್ರೀಯರನ್ನೂ ನೋಡಿ “ಎಲೆ ಸುಮಿತ್ರೆ! ರಾಜ್ಯದಿಂದ ಹೊರಡಿಸಲ್ಪಟ್ಟು ಈಗ ಕಾಡಿನಲ್ಲಿ ದಿಕ್ಕಿಲ್ಲದವರಂತೆ ಅಲೆಯುತ್ತಿರುವ ನಮ್ಮ ಸೀತಾರಾಮಲಕ್ಷ್ಮಣರು ಪ್ರತಿದಿನವೂ ಬಂದು ಸ್ನಾನಮಾಡಿ ಹೋಗುವ ತೀರ್ಥಘಟ್ಟವನ್ನು ನೋಡಿದೆಯಾ? ಇತರರಿಗೆ ದುಃಖಕರವಾದ ಕಾರ್ಯವನ್ನು ಮನಸ್ಸಿನಿಂದಲೂ ಸ್ಮರಿಸಲಾರದ ಆ ಮಹಾತ್ಮರಿಗೇ ಎಂತಹ ಮಹಾಕಷ್ಟವು ಬಂದೊದಗಿರುವುದು ನೋಡು? ಎಲೆ ಸುಮಿತ್ರೆ! ಭಾಗ್ಯಹೀನೆಯಾದ ನನ್ನ ಹೊಟ್ಟೆಯಲ್ಲಿ ಹುಟ್ಟಿದ ರಾಮನ

ಸ್ಥಿತಿಯು ಹಾಗಿರಲಿ! ಅವನಿಗಾಗಿ ನಿನ್ನಮಗನಾದ ಲಕ್ಷ್ಮಣನೂ ಕೂಡ ಅ ಹೋರಾತ್ರಿಯಲ್ಲಿಯೂ ಬೇಸರವಿಲ್ಲದೆ, ತಾನೇ ಬಂದು ಇಲ್ಲಿಂದ ನೀರನ್ನು ಸಾಗಿಸಿಕೊಂಡು ಹೋಗುವನು! ನಿನ್ನ ಮಗನು ಈ ಹೀನಕೃತ್ಯವನ್ನು ಮಾ ಡುತಿದ್ದರೂ ಇದರಿಂದ ಆತನಿಗೆ ಕೀರ್ತಿಯೇ ಹೊರತು ನಿಂದ್ಯನಾಗಲಾರ ನು. ಹಿರಿಯಣ್ಣನು ತಂದೆಗೆ ಸಮಾನನೆಂದು ಹೇಳಲ್ಪಡುವುದರಿಂದ, ಆತನಿ ಗಾಗಿ ಯಾವ ಕೆಲಸವನ್ನು ಮಾಡಿದರೂ ಕೀರ್ತಿಕರವಾಗಿಯೇ ಇರುವುದು. ಹಿಂದುವೇಳೆ ಭರತನ ಪ್ರಾರ್ಥನೆಯನ್ನಂಗೀಕರಿಸಿ ರಾಮನು ಹಿಂತಿರುಗಿ ಬಂ ದು ರಾಜ್ಯದಲ್ಲಿ ನೆಲಸಿದರೆ, ಆ ಮೇಲೆ ನಿನ್ನ ಮಗನಿಗೆ ಈ ಕಷ್ಟವು ತಪ್ಪಬ ಹುದು. ಇಂತಹ ಕಷ್ಟಕಾರ್ಯಗಳಿಗೆ ಅರ್ಹನಲ್ಲದ ನಿನ್ನ ಮಗನು, ಹಾಗೆ ಸುಖವಾಗಿರತಕ್ಕ ಕಾಲವು ಬರುವುದೇ? ಅದನ್ನು ನೋಡುವ ಭಾಗ್ಯವು ನಮ ಗುಂಟಾಗುವುದೇ? ಇದುವರೆಗೆ ಅನುಭವಿಸಿದುದು ಹೋಗಲಿ! ಇನ್ನು ಮೇ ಲಾದರೂ ಈ ಕಷ್ಟವು ತಪ್ಪಲಿ !" ಎಂದು ಹೇಳಿ ದುಃಖಿಸುತಿದ್ದಳು. ಆಮೇಲೆ ಮತ್ತೊಂದುಕಡೆಗೆ ತಿರುಗಿ ನೋಡಿದಾಗ, ಅಲ್ಲಿ ನೆಲದಮೇಲೆ ದಕ್ಷಿಣಾಗ್ರವಾಗಿ ಇಡಲ್ಪಟ್ಟಿದ್ದ ದರ್ಭಕೂರ್ಚಗಳನ್ನೂ, ಅದರಮೇ ಲಿದ್ದ ಪಿಂಡವನ್ನೂ ನೋಡಿ, ತಂದೆಯ ಪ್ರೀತ್ಯರ್ಥವಾಗಿ ರಾಮನು ಭಕ್ತಿ ಯಿಂದಿಟ್ಟ ಪಿಂಡವೇ ಅದಾಗಿರಬಹುದೆಂದು ತಿಳಿದು, ಸಮೀಪದಲ್ಲಿ ದ್ದರಾಜಪತ್ನಿಯರನ್ನು ನೋಡಿ "ಇದೋ ! ಇಲ್ಲಿ ನೋಡಿರಿ ! ಇಕ್ಷ್ವಾಕು ವಂಶಕ್ಕೆ ಪ್ರಭುವಾಗಿಯೂ, ಮಹಾತ್ಮನಾಗಿಯೂ ಇರುವ ದಶರಥನಿ ಗಾಗಿ ರಾಮನು ಭಕ್ತಿಯಿಂದ ಇಟ್ಟ ಪಿಂಡವು ಕಾಣುತ್ತಿರುವುದು. ಅ ಯ್ಯೋ! ದೇವೇಂದ್ರನಿಗೆ ಸಮಾನನಾಗಿ, ಸಮಸ್ತಲೋಕ ಪ್ರಭುವಾಗಿ, ಮಹಾತ್ಮನೆನಿಸಿಕೊಂಡು, ಲೋಕದಲ್ಲಿ ಅನುಭವಿಸಬಹುದಾದ ಸಮಸ್ತ ಭೋಗಗಳನ್ನೂ ಅನುಭವಿಸಿದ ದಶರಥ ಮಹಾರಾಜನಿಗೆ, ಈಗ ಈ ಇಂಗಳ ದ ಹಿಂಡಿಯು ಭೋಜ್ಯವಸ್ತುವಾಯಿತೇ! ಆ ರಾಜಾಧಿರಾಜನಿಗೆ ಎಂದಿಗೂ ಇ ದು ಉಚಿತವಾದ ಆಹಾರವೆಂದು ನನಗೆ ತೋರಲಿಲ್ಲ! ಆತನು ಚತುಸ್ಸಮು ದ್ರಾಂತವಾದ ಈ ಸಮಸ್ತಭೂಮಿಯನ್ನೂ ಏಕಾಧಿಪತ್ಯದಿಂದಾಳಿದವನಲ್ಲ ವೆ? ಆತನು ದೇವೇಂದ್ರನಿಗಿಂತಲೂ ಅಧಿಕವಾದ ಭೋಗಗಳನ್ನು ಅನುಭವಿ ಸಿದವನಲ್ಲವೆ? ಇಂತಹ ಮಹಾಪ್ರಭುವು ಈ ಪಿಂಡವನ್ನು ಹೇಗೆತಾನೇ ಭು

ಜಿಸಬಲ್ಲನು? ಅಯ್ಯೋ! ಲೋಕದಲ್ಲಿ ಇದಕ್ಕಿಂತಲೂ ಇನ್ನು ದುಃಖವೇ ನುಂಟು? ರಾಜಪುತ್ರನಾಗಿ, ಆ ಗರ್ಭಶ್ರೀಮಂತನಾಗಿ ಹುಟ್ಟಿದ ರಾಮನು, ತನ್ನ ತಂದೆಗೆ ಪಿಂಡವನ್ನು ಹಾಕುವುದಕ್ಕೂ ಗತಿಯಿಲ್ಲದೆ, ಈಗ ಪಿತೃಪ್ರೀತ್ಯರ್ಥವಾಗಿ ಈ ಇಂಗಳದ ಹಿಂಡಿಯನ್ನು ಕಲೆಸಿ ಪಿಂಡವನ್ನಿಡಬೇಕಾಗಿ ಬಂದಿತಲ್ಲವೆ? ರಾಮನು ತಂದೆಯ ಶ್ರಾದ್ಧಕ್ಕಾಗಿ ಈ ವಿಧವಾದ ಪಿಂಡವಿಟ್ಟಿರುವುದನ್ನು ನೋಡಿಯೂ ನನ್ನ ಎದೆಯು ಸಹಸ್ರಭಾಗವಾಗಿ ಸೀಳಿ ಹೋಗದಿರುವುದಲ್ಲಾ! ನಾವು ಸುಮ್ಮನೆ ಚಿಂತಿಸಿದುದರಿಂದೇನು? ಕಾಲಗತಿಯಿಂದ ಇದೂ ನ್ಯಾಯವಾಗಿಯೇ ಇರುವುದು. ಲೋಕದಲ್ಲಿ ಮನುಷ್ಯನು ತಾನು ಯಾವ ಆಹಾರವನ್ನು ಭುಜಿಸುವನೋ ಅದೇ ಆಹಾರವನ್ನು ತನ್ನ ಇಷ್ಟದೇವತೆಗಳಿಗೂ ಸಲ್ಲಿಸುವನೆಂಬ ಲೋಕಪ್ರಸಿದ್ಧವಾದ ಈ ಶ್ರುತಿವಾಕ್ಯವು ಈಗ ನನಗೆ ಚೆನ್ನಾಗಿ ಪ್ರತ್ಯಕ್ಷಸಿದ್ಧವಾಯಿತು" ಎಂದಳು. ಹೀಗೆ ನಾನಾವಿಧದಲ್ಲಿ ಪ್ರಲಾಪಿಸುತಿದ್ದ ಕೌಸಲ್ಯೆಯನ್ನು, ಇತರರಾಜಪತ್ನಿಯರೆಲ್ಲರೂ ಸಮಾಧಾನಪಡಿಸಿ, ಮುಂದೆಕರೆದುಕೊಂಡು ಹೋದರು. ಆಶ್ರಮಸಮೀಪವನ್ನು ಸೇರಿದೊಡನೆಯೇ ಅಲ್ಲಿ ಸ್ವರ್ಗದಿಂದ ಜಾರಿಬಿದ್ದ ದೇವತೆಯಂತೆ ತೋರುತಿದ್ದ ರಾಮನನ್ನು ನೋಡಿದರು. ಸಮಸ್ತ ರಾಜಭೋಗಗಳನ್ನೂ ಬಿಟ್ಟು ಕಾಡಿನಲ್ಲಿ ಅಲೆಯುತ್ತಿರುವ ಆತನ ಅವಸ್ಥೆಯನ್ನು ನೋಡಿ ರಾಜಮಾತೆಯರೆಲ್ಲರೂ ಅಳುವುದಕ್ಕಾರಂಭಿಸಿದರು. ಎಲ್ಲರ ಕಣ್ಣುಗಳಿಂದಲೂ ನೀರು ಸುರಿಯುತಿತ್ತು. ಉಚ್ಚಸ್ವರದಿಂದ ಪ್ರಲಾಪಿಸುವುದಕ್ಕಾರಂಭಿಸಿದರು. ಆಗ ರಾಮನು ತಟ್ಟನೆ ಎದ್ದುಬಂದು, ಆ ಮಾತೆಯರೆಲ್ಲರ ಕಾಲುಗಳನ್ನೂ ಹಿಡಿದು ನಮಸ್ಕರಿಸಿದನು. ಸತ್ಯಸಂಧನಾಗಿಯೂ, ಪುರುಷಶ್ರೇಷ್ಠನಾಗಿಯೂ ಇರುವ ರಾಮನು ಹೀಗೆ ವಿನಯದಿಂದ ಬಂದು,ಕಾಲ ಮೇಲೆ ಬಿದ್ದು ಸಾಷ್ಟಾಂಗಪ್ರಣಾಮವನ್ನುಮಾಡಿದುದನ್ನು ನೋಡಿ, ಕೌಸಲ್ಯಾದಿಗಳೆಲ್ಲರೂ ಕೋಮಲವಾದ ಬೆರಳುಗಳುಳ್ಳ ತಮ್ಮ ಮೃದುವಾದ ಕೈಯಿಂದ ರಾಮನ ಬೆನ್ನಮೇಲಿನ ಧೂಳಿಗಳನ್ನೊರಸಿದರು. ಹಾಗೆಯೇ ಲಕ್ಷ್ಮಣನೂ ದುಃಖದಿಂದ ಮುಂದೆಬಂದು ಸಮಸ್ತಮಾತೆಯರಿಗೂ ನಮಸ್ಕರಿಸಿದನು. ರಾಜಸ್ತ್ರೀಯರೆಲ್ಲರೂ ಶುಭಲಕ್ಷಣವುಳ್ಳ ಆ ಲಕ್ಷ್ಮಣನನ್ನೂ, ರಾಮನಲ್ಲಿ ಹೇಗೋಹಾಗೆಯೇ ಪ್ರೀತಿಯಿಂದ ಮನ್ನಿಸಿದರು. ಆಮೇಲೆ ಸೀತೆಯೂ

ದುಃಖಿತಳಾಗಿ ಕಣ್ಣೀರುಬಿಡುತ್ತ ಮುಂದೆ ಬಂದು ಮಾತೆಯರೆಲ್ಲರಿಗೂ ನಮ ಸ್ಕರಿಸಿ ನಿಂತಿದ್ದಳು. ವನವಾಸದಿಂದ ಕಂದಿದ ಸೀತೆಯ ದೇಹವನ್ನು ಕೌಸ ಲ್ಯೆಯು ಪುತ್ರವಾತ್ಸಲ್ಯದಿಂದ ಅಪ್ಪಿಕೊಂಡು “ಹಾ! ಏನುಕಷ್ಟವು ಬಂ ದೊದಗಿತು! ಜನಕರಾಜನ ಹೊಟ್ಟೆಯಲ್ಲಿ ಹುಟ್ಟಿ, ದಶರಥರಾಜನಿಗೆ ಸೊಸೆ ಯಾಗಿ, ವೀರಾಗ್ರೇಸರನಾದ ರಾಮನಿಗೆ ಪ್ರಿಯಪತ್ನಿಯಾದ ನಿನಗೂ ಈ ಕಷ್ಟವು ಬಂದೊದಗಿತೆ? ಅಯ್ಯೋ! ಸೀತೆ! ನೀನು ಈ ನಿರ್ಜನವಾದ ವನದ ಲ್ಲಿ ಹೇಗೆ ವಾಸಮಾಡುವೆ? ಬಿಸಿಲಿನಿಂದ ಕಂದಿದ ಕಮಲದಂತೆಯೂ, ನ ಲುಗಿದ ನೈದಿಲೆಯಂತೆಯೂ, ಕೊಳೆಹಿಡಿದ ಚಿನ್ನದಂತೆಯೂ, ಮೋಡದಿಂದ ಮರೆಸಲ್ಪಟ್ಟ ಚಂದ್ರಕಳೆಯಂತೆಯೂ ಕಾಂತಿಗುಂದಿದ ನಿನ್ನಮುಖವನ್ನು ನೋಡಿದರೆ, ಅಗ್ನಿಯು ತನಗಾಶ್ರಯವಾದ ಮರವನ್ನೇ ಸುಡುವಂತೆ,ವ್ಯಸನ ವೆಂಬ ಅರಣಿಯಿಂದ ನನ್ನ ದೇಹದಲ್ಲಿಹುಟ್ಟಿದ ಈ ದುಃಖಾಗ್ನಿಯು ಮನಸ್ಸಿ ನಲ್ಲಿ ವ್ಯಾಪಿಸಿ ದೇಹವೆಲ್ಲವನ್ನೂದಹಿಸುತ್ತಿರುವುದು.” ಎಂದಳು. ಇತ್ತ ಲಾಗಿ ಕೌಸಲ್ಯೆಯು ಹೀಗೆ ದುಃಖದಿಂದ ಪ್ರಲಾಪಿಸುತ್ತಿರುವಾಗಲೇ ರಾ ಮನು ಮುಂದೆಬಂದು ಆಕೆಗೂ ವಸಿಷ್ಠನಿಗೂ ಪಾದಗಳನ್ನು ಹಿಡಿದು ನ ಮಸ್ಕರಿಸಿದನು. ಅಗ್ನಿಯಂತೆ ಮಹಾತೇಜಸ್ವಿಯಾಗಿ ಜ್ವಲಿಸುತ್ತಿರುವ ಕುಲ ಪುರೋಹಿತನಾದ ಆ ವಸಿಷ್ಠನಿಗೆ ಇಂದ್ರನು ಬೃಹಸ್ಪತಿಗೆ ನಮಸ್ಕರಿಸುವಂ ತೆ ರಾಮನು ವಿನಯದಿಂದ ನಮಸ್ಕರಿಸಿ, ಆತನ ಸಮೀಪದಲ್ಲಿಯೇ ಕುಳಿತಿದ್ದ ನು. ಇವರಿಬ್ಬರೂ ಕುಳಿತಮೇಲೆ ಭರತನೂ, ಇತರಮಂತ್ರಿಗಳೂ, ಪುರವಾ ಸಿಗಳಲ್ಲಿ ಪ್ರಮುಖರಾದವರೂ, ಸೈನಿಕರೂ, ಧಾರ್ಮಿಕರಾದ ಇತರಜನರೂ, ಒಬ್ಬೊಬ್ಬರಾಗಿ ಸುತ್ತಲೂ ಕುಳಿತರು. ಆಗ ಭರತನು ರಾಮನ ಸಮೀಪದ ಲ್ಲಿಕುಳಿತು, ತಾಪಸವೇಷದಿಂದ ಜ್ವಲಿಸುತ್ತಿರುವ ಆ ರಾಮನನ್ನುನೋಡಿ, ಬ್ರಹ್ಮನಮುಂದೆ ದೇವೇಂದ್ರನು ಹೇಗೋ ವಿನಯದಿಂದ ಕೈಮುಗಿದು ಹಾಗೆ ಕುಳಿತಿದ್ದನು. ಆಗ ಅಲ್ಲಿನೆರೆದಿದ್ದ ಸಾಧುಸಮೂಹವೆಲ್ಲವೂ,ತಮ್ಮ ತಮ್ಮ ಮನಸ್ಸಿನಲ್ಲಿ ಕುತೂಹಲದಿಂದ “ಈಗ ಭರತನು ರಾಮನನ್ನು ಪ್ರಸ ನ್ನನನ್ನಾಗಿಮಾಡಿ ಹಿಂತಿರುಗಿಸುವುದಕ್ಕೆ ಏನುಪಾಯವನ್ನು ಮಾಡುವನೋ! ಯಾವಮಾತುಗಳನ್ನಾಡುವನೋ! ಯಾವಚಾತುರ್ಯದಿಂದ ಆತನ ಮನಸ್ಸ ನ್ನು ಆಕರ್ಷಿಸುವನೋ!” ಎಂದು ಏಕಾಗ್ರಚಿತ್ತರಾಗಿ ಆತುರದಿಂದ ನಿರೀಕ್ಷಿ

ಸುತಿದ್ದರು. ಅಮೋಘಧೈರ್ಯವುಳ್ಳ ರಾಮನೂ, ಮಹಾನುಭಾವನಾದ ಲಕ್ಷ್ಮಣನೂ, ಧಾರ್ಮಿಕನಾದ ಭರತನೂ ಈ ಮೂವರೂ ಮಿತ್ರರಿಂದ ಪರಿವೃತರಾಗಿ ತಾವುನಡುವೆ ಕುಳಿತಿರಲು,ಯಾಗದಲ್ಲಿ ಶ್ರೋತ್ರಿಯರಾದ ಅನೇಕ ಸದಸ್ಯರಿಂದ ಪರಿವೇಷ್ಟಿತವಾದ ತ್ರೇತಾಗ್ನಿಯಂತೆ, ಕಾಂತಿ ವಿಶೇಷದಿಂದ ಕಂಗೊಳಿಸುತಿದ್ದರು ಇಲ್ಲಿಗೆ ನೂರಮೂರನೆಯಸರ್ಗವು.

---

{ ಭರತನು ರಾಜ್ಯವನ್ನು ಕೈಕೊಳ್ಳಬೇಕೆಂದು ರಾಮನನ್ನು ಪ್ರಾರ್ಥಿಸಿದುದು. ರಾಮನು ಸಮಾಧಾನವನ್ನು ಹೇಳಿದುದು. }

ಕೈಗೆ ಸಿಕ್ಕಿದ ರಾಜ್ಯವನ್ನೂ ಬಿಟ್ಟು, ಜಟಾವಲ್ಕಲಗಳನ್ನು ಧರಿಸಿ, ಭರತನು ಹೀಗೆ ತನ್ನನ್ನು ಹುಡುಕಿಕೊಂಡು ಬಂದಿರುವುದನ್ನು ನೋಡಿ, ಆಗ ರಾಮನು ತನ್ನಲ್ಲಿ ಆತನಿಗಿರುವ ಭಕ್ತಿವಿಶ್ವಾಸಗಳನ್ನು ನೋಡಿ ಮನಸ್ಸಿನಲ್ಲಿಯೇ ಹಿಗ್ಗುತ್ತ, ಲಕ್ಷ್ಮಣನೊಡಗೂಡಿ ಭರತನನ್ನು ಮಾತಾಡಿಸುವುದಕ್ಕೆ ತೊಡಗಿದನು. ‹‹ವತ್ಸಭರತನೆ ! ಇದೇನು ? ನಿನಗೆ ಈ ನಾರುಮಡಿಯೇನು ? ಈ ಜಟೆಗಳೇನು? ಈ ಕೃಷ್ಣಾಜಿನವೇನು? ಈ ಕಾಡಿಗೇಕೆಬಂದೆ ? ಇದಕ್ಕೆ ಕಾರಣವನ್ನು ತಿಳಿಯಬೇಕೆಂದು ನನಗೆ ಬಹಳಕುತೂಹಲವಿರುವುದು.ರಾಜ್ಯವನ್ನು ಬಿಟ್ಟು ಬರಬಹುದೆ?"ಎಂದು ಮೃದುವಾಕ್ಯಗಳಿಂದಲೇ ಕೇಳುತಿದ್ದನು. ಎಷ್ಟು ಕೇಳಿದರೂ ಆ ಭರತನು ದುಃಖೋದ್ರೇಕದಿಂದ ಮಾತಾಡಲಾರದೆ ಸುಮ್ಮಗಿರಲು,ಪುನಃ ರಾಮನು ಆ ಭರತನನ್ನು ಕೈನೀಡಿ ಅಪ್ಪಿಕೊಂಡು ‹‹ವತ್ಸನೆ ! ಇದೇಕೆ ಮಾತಾಡದಿರುವೆ?ರಾಜ್ಯವನ್ನು ಬಿಟ್ಟು ಈತಾಪಸವೇಷವನ್ನು ಧರಿಸಿ ಈ ಕಾಡಿಗೇಕೆಬಂದೆ? ಬೇಗಹೇಳು." ಎಂದು ಬಾರಿಬಾರಿಗೂ ನಿರ್ಬಂಧಿಸುತಿದ್ದನು. ಆಗ ಭರತನು ರಾಮನಮುಂದೆ ಕೈಮುಗಿದು ನಿಂತು ‹‹ಅಣ್ಣಾ ! ನಮ್ಮತಂದೆಯು ಕೋಸಲರಾಜ್ಯಕ್ಕೆ ನ್ಯಾಯವಾಗಿ ಬಾಧ್ಯನಾದ ನಿನ್ನನ್ನು ಬಿಟ್ಟು ರಾಜ್ಯಾರ್ಹನಲ್ಲದ ನನಗೆ ರಾಜ್ಯವನ್ನು ಕೊಡಿಸಬೇಕೆಂದು ಮಾಡಬಾರದ ಕಾರ್ಯವನ್ನು ಮಾಡಿಬಿಟ್ಟನು. ಇದರಿಂದ ತಾನೂ ಪುತ್ರಶೋಕಪೀಡಿತನಾಗಿ ಸ್ವರ್ಗವನ್ನು ಹೊಂದಿದನು. ಎಲೈ ಆರ್ಯನೆ ! ಕೇವಲಸ್ತ್ರೀಮಾತ್ರಳಾದ ನನ್ನ ತಾಯಿಯಾದ ಕೈಕೇಯಿಯ ಮಾತಿಗೆ ಮರುಳಾಗಿ, ಈ

ಮಹಾಪಾಪಕಾರ್ಯವನ್ನು ಮಾಡಿ ನಮ್ಮ ತಂದೆಯು ಲೋಕಾಪವಾದಕ್ಕೂ ಒಳಗಾದನು.ನನ್ನತಾಯಿಯಾದ ಕೈಕೇಯಿಯು ಇಷ್ಟುತಂತ್ರಗಳನ್ನು ಮಾಡಿ ದರೂ;ಅವುಗಳಿಂದ ತಾನು ಗಂಡನಿಲ್ಲದ ಮುಂಡೆಯಾಗಿ ಕುಳಿತುಕೊಳ್ಳಬೇ ಕಾಯಿತೇ ಹೊರತು ಅವಳೂ ರಾಜ್ಯಸುಖವನ್ನನುಭವಿಸಲಿಲ್ಲ. ಸಾಯುವವ ರೆಗೂ ದುಃಖದಿಂದ ನರಳಬೇಕಾದ ಅವಸ್ಥೆಯು ಅವಳಿಗೆ ಬಂದಿತೇ ಹೊರತು ಬೇರೊಂದೂ ಇಲ್ಲವು. ಈ ಪಾಪಕೃತ್ಯವನ್ನು ನಡೆಸಿದುದಕ್ಕೆ ತಕ್ಕಫಲವನ್ನು ಆಕೆಯು ಅನುಭವಿಸದಿರಲಾರಳು. ಇದರಿಂದ ಅವಳು ಮಹಾಘೋರವಾದ ನರಕದಲ್ಲಿ ಬೀಳದಿರಳು. ಅಣ್ಣಾ! ಅದು ಹೇಗಾದರೂ ಹೋಗಲಿ! ಅಂತವಳ ಹೊಟ್ಟೆಯಲ್ಲಿ ಹುಟ್ಟಿ ಹೀಗೆ ಲೋಕಾಪವಾದಕ್ಕೆ ಗುರಿಯಾದ ನನ್ನನ್ನು ಅನು ಗ್ರಹಿಸಬೇಕು. ನಾನು ನಿನಗೆ ದಾಸಭೂತನಾಗಿರುವೆನು. ನಿನ್ನಲ್ಲಿಯೇ ನಾನು ಶರಣಾಗತಿಯನ್ನು ಮಾಡಿರುವೆನು ದಾಸಜನವನ್ನು ಅನುಗ್ರಹಿಸುವಂತೆ ನನ್ನನ್ನೂ ಅನುಗ್ರಹಿಸಬೇಕು. ನನ್ನ ಮಾತನ್ನು ಲಾಲಿಸಬೇಕು. ಇದೊಂದೇ ನನ್ನ ಪ್ರಾರ್ಥನೆಯು. ನೀನು ಈಗಲೇ ಅಯೋಧ್ಯೆಗೆ ಹಿಂತಿರುಗಿಬಂದು ದೇ ವೇಂದ್ರನಂತೆ ಪಟ್ಟಾಭಿಷೇಕವನ್ನು ಕೈಕೊಳ್ಳಬೇಕು. ಇದೋ! ಈ ಪ್ರಜೆ ಗಳೂ, ವಿಧವೆಯರಾದ ಈ ಮಾತೆಯರೂ, ಈ ಉದ್ದೇಶದಿಂದಲೇ ನಿನ್ನ ಲ್ಲಿಗೆ ಬಂದಿರುವರು. ನಮ್ಮೆಲ್ಲರನ್ನೂ ಅನುಗ್ರಹಿಸಬೇಕು. ಎಲೈ ಆರ್ಯನೇ ! ನಮ್ಮ ಇಕ್ಷ್ವಾಕುವಂಶದ ಮಾನವನ್ನು ಕಾಪಾಡಿಡುವ ಭಾರವು ನಿನಗೆ ಸೇರಿ ದುದಲ್ಲವೆ? ನಮ್ಮ ವಂಶದಲ್ಲಿ ಜ್ಯೇಷ್ಠಾನುಕ್ರಮವಾಗಿ ಬಂದ ಈ ರಾಜ್ಯ ವನ್ನು ಕನಿಷ್ಠನಾದ ನಾನು ಸ್ವೀಕರಿಸಿದರೆ ನಮ್ಮ ವಂಶಮರ್ಯಾದೆಯನ್ನು ಕೆಡಿಸಿದಂತಾಗುವುದಿಲ್ಲವೆ? ಆದುದರಿಂದ ನಿನಗೆ ಯೋಗ್ಯವಾದ ರಾಜ್ಯವನ್ನು ನೀನೇ ಸ್ವೀಕರಿಸು. ನಮ್ಮ ವಂಶಮರ್ಯಾದೆಯನ್ನೂ ಪಾಲಿಸು. ನಿನ್ನ ಮಿತ್ರರ ಕೋರಿಕೆಗಳನ್ನೂ ಈಡೇರಿಸು. ಈಗ ವಿಧವೆಯಂತೆ ಕಳೆಗುಂದಿರುವ ಈ ಭೂ ದೇವಿಯು ಪತಿಯಾದ ನಿನ್ನಿಂದ ಶರತ್ಕಾಲದ ರಾತ್ರಿಯು ಚಂದ್ರನಿಂದ ಹೇಗೋ ಹಾಗೆ ಪ್ರಕಾಶಿಸಲಿ. ಎಲೈಆರ್ಯನೇ! ಇದೋ! ಈ [1] ಸಮಸ್ತಮಂ

---

1 ಇದಕ್ಕೆ "ಏಭಿಶ್ಚ ಸಚಿವೈಸ್ಸಾರ್ಧಂ ಶಿರಸಾಯಾಚಿತೋಮಯಾ । ಭ್ರಾತುಶ್ಶಿಷ್ಯ ಸ್ಯದಾಸಸ್ಯ ಪ್ರಸಾದಂಕರ್ತುಮರ್ಹಸಿ" ॥ ಎಂದು ಮೂಲವು. ಇದರವಿಶೇಷಾ ರ

ತ್ರಿಗಳೊಡಗೂಡಿ ನಾನು ಪ್ರಣಾಮಮಾಡಿ ಯಾಚಿಸುವೆನು. ನಾನು ನಿನಗೆ ಒಡಹುಟ್ಟಿದ ತಮ್ಮನೆಂದು ಮಾತ್ರವೇ ಎಣಿಸಬೇಡ. ನಿನಗೆ ನಾನು ಶಿಷ್ಯನು. ನಾನು ನಿನಗೆ ದಾಸಾನುದಾಸನು. ನನ್ನಲ್ಲಿ ಪ್ರಸನ್ನನಾಗಿ ಅನುಗ್ರಹಿಸಬೇಕು. ಎಲೈಪುರುಷಶ್ರೇಷ್ಠನೇ! ಇದೋ! ಇಲ್ಲಿ ಸನ್ನಿಧಿಗೆ ಬಂದು ನಿಂತಿರುವವರನ್ನು ನೋಡು. ನಮ್ಮ ಪಟ್ಟಣದಲ್ಲಿ ಕುಲಪರಂಪರೆಯಿಂದ ಬಂ

---

ನೆಂದರೆ: -(ಏಭಿಶ್ಚ ಸಚಿವೈಃ) ನಾನೊಬ್ಬನು ಕಣ್ಣೀರುಬಿಟ್ಟ ಮಾತ್ರಕ್ಕೆ ನೋಡಿ ಸಹಿಸಲಾರದ ನೀನು ಇಷ್ಟು ಜನರಸಂಕಟವನ್ನು ಹೇಗೆ ಸಹಿಸಬಲ್ಲೆ? ಎಂದು ಭಾವವು. (ಸಚಿವೈಃ) ನಾನು ಮಾತ್ರ ಬಂದುಬೇಳಿ ಯಾಚಿಸಿದರೆ ಬಡಹುಟ್ಟಿದ ತಮ್ಮನೆಂಬ ಸಲಿಗೆಯಿಂದ ನೀನು ನನ್ನಮಾತನ್ನು ಉಪೇಕ್ಷಿಸಿದರೂ ಉಪೇಕ್ಷಿಸಬಹುದು. ನಮ್ಮ ರಾಜ್ಯವನ್ನು ನಿರ್ವಹಿಸತಕ್ಕವರಾಗಿಯೂ, ಪೂಜ್ಯರಾಗಿಯೂ ಇರುವ ಈಮಂತ್ರಿಗಳೇ ಬಂದು ಯಾಚಿಸುವಾಗ ನೀನು ಈ ಪ್ರಾರ್ಥನೆಯನ್ನು ಎಂದಿಗೂ ನಿರಾಕರಿಸಬಾರದೆಂದುಭಾವವು. (ಯಾಚಿತಃ) ನಾನು ನಿನ್ನಮುಂದೆ ದೈನ್ಯದಿಂದ ನಿಂತಮಾತ್ರಕ್ಕೆ ನೀನು ನನ್ನ ಕೋರಿಕೆಗಳನ್ನು ಈಡೇರಿಸಿಕೊಡುವಷ್ಟು ವಾತ್ಸಲ್ಯವುಳ್ಳವನು. ಹೀಗಿರುವಾಗ ನಾನು ಹೀಗೆ ಯಾಚಿಸುತ್ತಿರುವಲ್ಲಿ ನಿನಗೆ ಕರುಣೆಯುಂಟಾಗುವುದನ್ನು ಹೇಳಬೇಕಾದುದೇನು? (ಮಯಾ) ನಾನೇ ಬಂದುಯಾಚಿಸುವೆ ನೆಂದರ್ಥವು. ಇದುವರೆಗೆ ನೀನೇ ನನ್ನಬಳಿಗೆ ಬಂದುಯಾಚಿಸಿ ನನ್ನಮನೋರಥಗಳನ್ನು ತಿಳಿದುಕೊಂಡು ಅವುಗಳನ್ನು ಈಡೇರಿಸಿ ಕೊಡುತಿದ್ದವನಲ್ಲವೆ? ಈಗ ನಾನೇ ಬಂದು ನಿನ್ನಲ್ಲಿ ಯಾಚಿಸುವಾಗ ನೀನು ಹೇಗೆ ತಾನೇ ಅದನ್ನು ನಿರಾಕರಿಸಬಲ್ಲೆ ?

(ಭ್ರಾತುಃ)ನಿನಗೆ ನಾನೇನೂ ಅನ್ಯನಲ್ಲ. ಸಾಕ್ಷಾತ್ತಾಗಿ ನಿನಗೆ ಒಡಹುಟ್ಟಿದ ತಮ್ಮನಾದ್ದರಿಂದ ಈ ಬಂಧುತ್ವವನ್ನಾದರೂ ನೋಡಿ ನೀನು ನನ್ನ ಕೋರಿಕೆಯನ್ನು ಈಡೇರಿಸಿ ಕೊಡಬೇಕಲ್ಲವೆ? (ಶಿಷ್ಯಸ್ಯ) ನಾನು ಕೇವಲ ಸಹೋದರನಾಗಿಯೇ ಇದ್ದು ನಿನ್ನ ದಾಯಭಾಗವನ್ನು ಹಂಚಿಕೊಳ್ಳುವುದಕ್ಕಾಗಿಯೇ ಕಾದಿರುವೆನೆಂದೆಣಿಸಬೇಡ, ನಿನ್ನಿಂದ ಅನೇಕ ವಿಧದಲ್ಲಿ ಉಪದೇಶವನ್ನು ಹೊಂದಿದ ಶಿಷ್ಯನೆಂಬುದನ್ನು ಸ್ಮರಿಸಿಕೊಳ್ಳುವನಾಗೆಂದುಭಾವವು. (ದಾಸಸ್ಯ) ನಾನು ಶಿಷ್ಯನು ಮಾತ್ರವಾಗಿಯೇ ಇದ್ದು ನಿನ್ನಿಂದ ಬೇಕಾದ ಉಪದೇಶಗಳನ್ನು ಹೊಂದಿ ಕೊನೆಗೆ ಸ್ವತಂತ್ರನಾಗಿರುವವನೆಂದೆಣಿಸಬೇಡ. ನನ್ನಲ್ಲಿ ನಿನಗೆ ಕ್ರಯವಿಕ್ರಯಾದಿಗಳನ್ನು ಮಾಡುವಷ್ಟು ಸ್ವಾತಂತ್ರ್ಯವೂ ಉಂಟೆಂದು ತಿಳಿ ಆದುದರಿಂದ (ಪ್ರಸಾದಂಕರ್ತುಮರ್ಹಸಿ) ನನ್ನನ್ನು ಅನುಗ್ರಹಿಸಬೇಕಾದುದೇ ನಿನ್ನ ಅವಶ್ಯಕರ್ತವ್ಯವೆಂದುಭಾವವು.

ದವರಾಗಿ, ಪೂಜ್ಯರಾಗಿ, ನಮ್ಮ ತಂದೆತಾಯಿಗಳ ಕಡೆಯವರಾಗಿರುವ ಅನೇಕ ಮಹನೀಯರೂ,ಮಂತ್ರಿಮೊದಲಾದವರೂ ಬಂದಿರುವುದನ್ನು ನೋಡಲಿಲ್ಲವೆ? ಇವರೆಲ್ಲರೂ ಏಕವಾಕ್ಯದಿಂದ ಕೇಳುವ ಕೋರಿಕೆಯನ್ನು ಅತಿಕ್ರಮಿಸಬಾರದು" ಎಂದು ಹೇಳಿ ಕಣ್ಣೀರುಬಿಡುತ್ತ, ಪುನಃ! ರಾಮನ ಕಾಲುಗಳನ್ನು ಹಿಡಿದು ಸಾಷ್ಟಾಂಗವಾಗಿ ನಮಸ್ಕರಿಸಿದನು. ಮದಿಸಿದ ಆನೆಯಂತೆ ಬಾರಿಬಾರಿಗೂ ನಿಟ್ಟುಸಿರನ್ನು ಬಿಡುತ್ತ ವ್ಯಸನದಿಂದಲೂ, ದೈನ್ಯದಿಂದಲೂ, ಕೊರಗುತ್ತಿರುವ ಭರತನನ್ನು ಎತ್ತಿ, ರಾಮನು! ಆತನನ್ನು ಎರಡು ತೋಳುಗಳಿಂದಲೂ ಅಪ್ಪಿಕೊಂಡು "ಎಲೆವತ್ಸನೆ! ಸತ್ಕುಲದಲ್ಲಿ ಹುಟ್ಟಿ, ಸತ್ವಗುಣಸಂಪನ್ನನಾಗಿ, ಮಹಾತೇಜಸ್ವಿಯೆನಿಸಿಕೊಂಡು, ಅನೇಕ ವ್ರತಗಳನ್ನು ನಡೆಸಿರುವ ನಿನ್ನಂತವನಿಗೆ, ಈ ತುಚ್ಛವಾದ ರಾಜ್ಯಕ್ಕೋಸ್ಕರವಾಗಿ ಅಂತಹ ಪಾಪಕಾರ್ಯದಲ್ಲಿ ಮನಸ್ಸು ಪ್ರವರ್ತಿಸುವುದೇ ? ಎಂದಿಗೂ ಇಲ್ಲ. ನಾನು ನಿನ್ನಲ್ಲಿ ಎಳ್ಳಷ್ಟಾದರೂ ದೋಷವನ್ನೆಣಿಸತಕ್ಕವನಲ್ಲ! ಇದನ್ನು ನಾನು ಚೆನ್ನಾಗಿ ಬಲ್ಲೆನು. ಆದರೆ ನೀನು ಬಾಲ್ಯವಯಸ್ಸಿನಿಂದುಂಟಾದ ಅಜ್ಞಾನದಿಂದ, ನಿನ್ನ ತಾಯಿಯನ್ನು ನಿಂದಿಸುತ್ತಿರುವುದು ಮಾತ್ರ ನನಗೆ ಉಚಿತವಾಗಿ ತೋರಲಿಲ್ಲ. [1]ಹಿರಿಯರು ಯಾವಾಗಲೂ ತನಗೆ ಸೇರಿದ ಶಿಷ್ಯರನ್ನೂ, ಪರಿಜನಗಳನ್ನೂ, ಪತ್ನಿಯರನ್ನೂ, ಮಕ್ಕಳನ್ನೂ ತನ್ನ ಇಷ್ಟಬಂದಂತೆ ನಿಯಮಿಸುವುದಕ್ಕೆ ಸ್ವತಂತ್ರರಾಗಿರುವರು. ಇದು ಶಾಸ್ತ್ರವಿಹಿತವಾದುದೇ ಹೊರತು ಬೇರೆಯಲ್ಲ. ಲೋಕದಲ್ಲಿ ಹೆಂಡಿರು ಮಕ್ಕಳೂ, ಶಿಷ್ಯರೂ, ಯಾವಾಗಲೂ ನಿಯಾಮ್ಯರೇ ಹೊರತು ಸ್ವತಂತ್ರರಲ್ಲವು. ನಾವೂ ದಶರಥನ ಆಜ್ಞೆಗೆ ಅಧೀನರಾಗಿಯೇ ನಡೆದುಕೊಳ್ಳಬೇಕೆಂಬುದನ್ನು ನೀನು ಚೆನ್ನಾಗಿ ತಿಳಿ. ಎಲೆ ಸೌಮ್ಯನೆ! ಮಹಾರಾಜನಾದ ದಶರಥನು ನಮಗೆ ನಾರುಮಡಿಯನ್ನೂ, ಕೃಷ್ಣಾಜಿನವನ್ನೂ ಉಡಿಸಿ ಕಾಡಿನಲ್ಲಿರಿಸುವುದಕ್ಕಾಗಲಿ, ರಾಜ್ಯಾಧಿಕಾರದಲ್ಲಿರಿಸುವುದಕ್ಕಾಗಲಿ ಸ್ವಾತಂತ್ರ್ಯವುಳ್ಳವನಾಗಿರುವನು. ಎಲೆವತ್ಸನೆ! ನಿನಗೂ ಈ ಧರ್ಮಗಳು ತಿಳಿಯದುದಲ್ಲ. ನಾವು ತಂದೆಯಲ್ಲಿ ಗೌರವವ

---

1 ಹಿರಿಯರೂಕೂಡ ತಮಗೆ ಇಷ್ಟರಾದ ದಾರ ಪುತ್ರಾದಿಗಳಲ್ಲಿ ತಮಗೆ ಇಷ್ಟಬಂದಂತೆ ಸ್ನೇಹವನ್ನು ತೋರಿಸುವರೆಂದುಭಾವವು.

ನ್ನು ತೋರಿಸುವಂತೆಯೇ ತಾಯಿಯನ್ನೂ ಗೌರವಿಸಬೇಕು. ಧರ್ಮಶೀಲರಾದ ತಂದೆತಾಯಿಗಳಿಬ್ಬರೂ ನನ್ನನ್ನು ಕರೆದು ಕಾಡಿನಲ್ಲಿರುವಂತೆ ನಿಯಮಿಸಿರುವಾಗ, ನಾನು ಅದನ್ನು ಬಿಟ್ಟು ಹೇಗೆ ತಾನೇ ತಪ್ಪಿನಡೆಯಲಿ? ಅಯೋಧ್ಯೆಯಲ್ಲಿದ್ದು ಲೋಕಪೂಜ್ಯವಾದ ನಮ್ಮ ರಾಜ್ಯವನ್ನು ಪಾಲಿಸುತ್ತಿರುವುದೇ ನಿನಗೆ ನ್ಯಾಯವು. ನಾರುಮಡಿಯನ್ನುಟ್ಟು ಕಾಡಿನಲ್ಲಿರಬೇಕಾದುದೇ ನನ್ನ ಕೃತ್ಯವು. ತೇಜಸ್ವಿಯಾದ ದಶರಥಮಹಾರಾಜನು ಅನೇಕಪ್ರಜೆಗಳ ಮುಂದೆ ಹೀಗೆಯೇ ಕಾರ್ಯವಿಭಾಗವನ್ನು ಮಾಡಿ ಕೊಟ್ಟು ಸ್ವರ್ಗಸ್ಥನಾಗಿರುವನು. ಆತನ ವಾಕ್ಯವೇ ನಮಗೆ ಮುಖ್ಯಪ್ರಮಾಣವು. ಧರ್ಮಾತ್ಮನಾಗಿಯೂ,ಲೋಕಗುರುವಾಗಿಯೂ ಇರುವ ನಮ್ಮ ಮಹಾರಾಜನು,ನಿನ್ನ ಭಾಗಕ್ಕೆ ಒಪ್ಪಿಸಿರುವ ರಾಜ್ಯವನ್ನು ಲೋಪವಿಲ್ಲದೆ ನಡೆಸುತ್ತಿರುವುದೇ ನಿನ್ನ ಧರ್ಮವು. ಹದಿನಾಲ್ಕು ವರ್ಷಗಳವರೆಗೆ ದಂಡಕಾರಣ್ಯದಲ್ಲಿದ್ದು ಬರಬೇಕೆಂದು ತಂದೆಯು ನನಗೆ ಅನುಗ್ರಹಿಸಿಕೊಟ್ಟಿರುವ ಭಾಗವನ್ನು ಲೋಪವಿಲ್ಲದೆ ನಿರ್ವಹಿಸುವುದೇ ನನ್ನ ಕರ್ತವ್ಯವು. ವತ್ಸ ಭರತನೆ! ಹೆಚ್ಚಾಗಿ ಹೇಳಿದುದರಿಂದೇನು? ಲೋಕಪೂಜ್ಯನಾಗಿ, ಮಹಾತ್ಮನಾಗಿ,ದೇವೇಂದ್ರನಿಗೆ ಸಮಾನವಾಗಿರುವ ನಮ್ಮ ತಂದೆಯು ನನಗೆ ಯಾವುದನ್ನು ನಿಯಮಿಸಿರುವನೋ ಅದನ್ನೇ ನಾನು ಪರಮಶ್ರೇಯಸ್ಸೆಂದು ಎಣಿಸುವೆನೇಹೊರತು, ಆತನ ಇಷ್ಟಕ್ಕೆ ವಿರೋಧವಾಗಿ ನನಗೆ ಸರ್ವಲೋಕಸಾಮ್ರಾಜ್ಯವು ಬರುವುದಾದರೂ ಅದನ್ನು ನಾನು ಹಿತವೆಂದೆಣಿಸಲಾರೆನು" ಎಂದನು. ಇಲ್ಲಿಗೆ ನೂರನಾಲ್ಕನೆಯಸರ್ಗವು.

---

{ ಭರತನು ರಾಮನನ್ನು ಪುನಃ ರಾಜ್ಯವನ್ನು ಕೈಕೊಳ್ಳಬೇಕೆಂದು ನಿರ್ಬಂಧಿಸಿದುದು. ರಾಮನು ತತ್ತ್ವಾರ್ಥಗಳನ್ನು ನಿರೂಪಿಸಿ ಸಮಾಧಾನಪಡಿಸಿದುದು. }

ಪುರುಷಶ್ರೇಷ್ಠರಾದ ಆರಾಮಾದಿಗಳು, ಮಿತ್ರರೊಡಗೂಡಿ ದುಃಖಿಸುತ್ತಿರುವಾಗಲೇ, ಆರಾತ್ರಿಯು ಎಷ್ಟೋಪ್ರಯಾಸದಿಂದ ಕಳೆಯಿತು. ಬೆಳಗಾದಕೂಡಲೆ ಆಸಹೋದರರೆಲ್ಲರೂ ತಮ್ಮ ಮಿತ್ರಮಂಡಲದಿಂದ ಪರಿವೃತರಾಗಿ ಬಂದು, ಮಂದಾಕಿನೀನದಿಯಲ್ಲಿ ಪ್ರಾತಃಕಾಲದಲ್ಲಿ ಮಾಡಬೇಕಾದ ಜಪಹೋಮಾದಿಗಳನ್ನೂ, ಆಹ್ನಿಕಗಳನ್ನೂ ತೀರಿಸಿಕೊಂಡು, ರಾಮನ ಬಳಿ

ಗೆ ಹೋದರು. ಆಗ ಅವರೆಲ್ಲರೂ ಸುಮ್ಮನೆ ಕುಳಿತಿದ್ದರೇ ಹೊರತು ಒಬ್ಬ ರೂ ಒಂದುಮಾತನ್ನಾದರೂ ಆಡಲಿಲ್ಲ. ಆಗ ಭರತನುಮಾತ್ರ ಮಿತ್ರರಿಂದ ಪರಿವೃತನಾದ ರಾಮನನ್ನು ನೋಡಿ "ಆರ್ಯನೆ! ನಮ್ಮ ತಂದೆಯಂತೂ ನನ್ನ ತಾಯಿಯ ಮನಸ್ಸಮಾಧಾನಾರ್ಥವಾಗಿ ಅವಳ ಕೋರಿಕೆಯಂತೆ ನನಗೆ ರಾ ಜ್ಯವನ್ನು ಕೊಟ್ಟು ಬಿಟ್ಟನು. ಈಗ ರಾಜ್ಯವು ನನ್ನದಾಗಿಯೇಇರುವುದರಿಂದ ನಾನು ಇದನ್ನೇನು ಮಾಡುವುದಕ್ಕೂ ಸ್ವತಂತ್ರನಾಗಿರುವೆನಲ್ಲವೆ? ಆದುದ ರಿಂದ ನನ್ನಭಾಗಕ್ಕೆ ಬಂದ ನಿಷ್ಕಂಟಕವಾದ ಈ ರಾಜ್ಯವನ್ನು ನಾನೇ ನಿನಗೆ ಕೊಡುವೆನು. ನೀನು ಯಥೇಚ್ಛವಾಗಿ ಅನುಭವಿಸು. ಇದರಿಂದ ಒಂದು ವೇಳೆ ನನ್ನ ತಾಯಿಯು ಅಸಮಾಧಾನಪಡುವಳೆಂದು ನೀನು ಶಂಕಿಸಬಹುದು. ಅವಳನ್ನೂ ನಾನು ಒಡಂಬಡಿಸಿರುವೆನು. ಮತ್ತು ಎಲೈ ಆರ್ಯನೆ?ಮಳೆ ಗಾಲದಲ್ಲಿ ದೊಡ್ಡಪ್ರವಾಹವೇಗದಿಂದ ಒಡೆದುಹೋಗುತ್ತಿರುವ ಸೇತು ವನ್ನು ತಡೆದಿಡುವುದಕ್ಕೆ ಯಾರಿಂದ ತಾನೇ ಸಾಧ್ಯವು ? ಅದರಂತೆಯೇ ಈ ದೊಡ್ಡರಾಜ್ಯವನ್ನು ಸ್ಥಿರವಾಗಿ ನಿಲ್ಲಿಸುವುದಕ್ಕೆ ಲೋಕದಲ್ಲಿ ನೀನೊಬ್ಬ ನುಹೊರತು ಬೇರೆ ಯಾರಿಂದ ಸಾಧ್ಯವು? ಎಲೈರಾಜನೆ ! ಕುದುರೆಯ ನ ಡೆಗೆ ಕತ್ತೆಯೂ,ಗರುಡನ ಗಮನವೇಗಕ್ಕೆ ಇತರಪಕ್ಷಿಗಳೂ ಆಸೆಪಟ್ಟು ಹೋ ದರೆ ಅವುಗಳಿಗೆ ಸಾಧ್ಯವೆ ? ಅದರಂತೆಯೇ ನೀನು ಮಾಡುವ ಕೆಲಸವನ್ನು ನಾನು ಮಾಡಬೇಕೆಂದರೆ ಹೇಗೆತಾನೇ ಶಕ್ಯವು? ಮತ್ತು ಯಾರಿಂದ ಅನೇಕ ಪ್ರಾಣಿಗಳು ಬದುಕುತ್ತಿರುವುವೋ ಆತನ ಜೀವನವೇ ಉತ್ತಮವಾದುದು. ಬೇರೆಯವರನ್ನಾಶ್ರಯಿಸಿ ಜೀವಿಸುವವನ ಬದುಕು ಕೇವಲ ನೀಚವೆನಿಸು ವುದು. [1]ಲೋಕದಲ್ಲಿ ಒಬ್ಬಮನುಷ್ಯನು ಬೀಜವನ್ನು ನಟ್ಟು ನೀರುಹಾಕಿ ಕ

---

1 ಇಲ್ಲಿ ದಶರಥನನ್ನು ಬೀಜಹಾಕಿದವನಿಗೂ,ರಾಮನನ್ನು ಬೆಳೆಸಿದ ವೃಕ್ಷಕ್ಕೂ ಅಭಿ ಷೇಕ ಪ್ರಯತ್ನವನ್ನು ಪುಷ್ಪದರ್ಶನಕ್ಕೂ, ರಾಮನು ರಾಜ್ಯವನ್ನು ಕೈಕೊಳ್ಳದಿದ್ದುದು ಫಲವುಂಟಾಗದುದಕ್ಕೂ, ದಶರಥನು ರಾಮನಿಗೆ ರಾಜ್ಯವನ್ನು ಕೊಟ್ಟುತಾನು ಸಂತೋ ಷವನ್ನನುಭವಿಸದೆ ಮೃತನಾದುದನ್ನು ಬೀಜಬಿತ್ತಿದವನಿಗೆ ಫಲಾನುಭವವಿಲ್ಲದೆ ಇದ್ದು ದಕ್ಕೂ ಹೋಲಿಸಿರುವುದೆಂದು ಗ್ರಹಿಸಬೇಕು. ಮತ್ತು ಇಲ್ಲಿ ಭರತನು ರಾಮನನ್ನು ಕುರಿ ತು"ಈಗ ನೀನು ನನ್ನನ್ನೂ ಪಾಲಿಸದಿದ್ದಾಗಲೇ,ನಮ್ಮ ತಂದೆಯಾದ ದಶರಥನು ನಿನ್ನ ನ್ನು ಕಷ್ಟಪಟ್ಟುಬೆಳೆಸಿ ಪಟ್ಟಾಭಿಷಿಕ್ತನನ್ನಾಗಿ ಮಾಡಿ,ನೀನು ರಾಜ್ಯಪರಿಪಾಲನೆ ಮಾಡು

ಷ್ಟಪಟ್ಟು ಬಳೆಸಿದ ಗಿಡವು,ಸ್ವಲ್ಪಕಾಲದಮೇಲೆ ದೊಡ್ಡದಾಗಿ ಬಳೆದು, ಏರುವುದಕ್ಕಸಾಧ್ಯವಾಗಿ, ವಿಸ್ತಾರವಾದ ಶಾಖೆಗಳನ್ನುಹರಡಿಸಿ, ಬಹಳದೊಡ್ಡದಾಗಿ, ವಿಶೇಷವಾಗಿ ಪುಷ್ಪಗಳನ್ನೂ ತೋರಿಸಿ, ಕೊನೆಗೆ ಫಲಕಾಲದಲ್ಲಿ ಫಲವನ್ನು ಕೊಡದಿದ್ದರೆ, ಆಗಿಡವನ್ನು ಕಷ್ಟಪಟ್ಟು ಬಳೆಸಿದವನಿಗೆ ಹೇಗೆತಾನೇ ತೃಪ್ತಿಯುಂಟಾಗುವುದು? ಇದನ್ನೇ, ನಮ್ಮ ರಾಜ್ಯದಸ್ಥಿತಿಗೆ ಹೋಲಿಸಿನೋಡು ! ನಮ್ಮೆಲ್ಲರಿಗೂ ಪೋಷಕನಾಗಿ, ಪುರುಷಶ್ರೇಷ್ಠನೆನಿಸಿಕೊಂಡಿರುವ ನೀನು, ನಿನಗೆ ದಾಸಭೂತರಾದ ನಮ್ಮೆಲ್ಲರನ್ನೂ ಪಾಲಿಸದಿದ್ದರೆ ನಾನು ಈಗ ಹೇಳಿದ ಉಪಮಾನಕ್ಕೆ ಅನುಗುಣವಾದ ಅರ್ಥಗಳೆಲ್ಲವೂ ನಿನಗೇ ಚೆನ್ನಾಗಿ ತಿಳಿದುಬರುವುದು. ಎಲೈ ಮಹಾರಾಜನೆ! ಶತ್ರುನಿಗ್ರಾಹಕನಾದ ನೀನು ರಾಜ್ಯದಲ್ಲಿ ಪಟ್ಟಾಭಿಷಿಕ್ತನಾಗಿ ಸೂರ್ಯನಂತೆ ಪ್ರಕಾಶಿಸುತ್ತಿರು! ಪ್ರಮುಖರಾದ ಪುರಜನರೆಲ್ಲರೂ ನಿನ್ನನ್ನು ನೋಡಿ ಸಂತೋಷಪಡಲಿ! ಮದಿಸಿದ ಆನೆಗಳೆಲ್ಲವೂ ಪಟ್ಟಣಕ್ಕೆಹೋಗುವ ನಿನ್ನನ್ನು ಹಿಂಬಾಲಿಸುತ್ತ ಅತ್ಯಾನಂದದಿಂದ ಗರ್ಜಿಸಲಿ. ಅಂತಃಪುರಸ್ತ್ರೀಯರೆಲ್ಲರೂ ತಮ್ಮತಮ್ಮ ಮನಸ್ಸಿನ ವ್ಯಾಕುಲತೆಯನ್ನು ಬಿಟ್ಟು ಸಂತೋಷಿಸಲಿ! ನೀನು ಹಿಂತಿರುಗಿ ಅಯೋಧ್ಯೆಗೆ ಹೊರಡಬೇಕು" ಎಂದನು. ಹೀಗೆ ಭರತನು ರಾಮನನ್ನು ಪ್ರಾರ್ಥಿಸಿ ಹೇಳಿದ ಮಾತನ್ನು ಕೇಳಿ, ಅಲ್ಲಿದ್ದ ಪ್ರಜಾಸಮುದಾಯವೆಲ್ಲವೂ. ‹‹ಭಲೆ! ಭಲೆ?" ಎಂದು ಕೊಂಡಾಡುತಿದ್ದರು. ಆಗ ಭರತನು ತನ್ನ ಪ್ರಾರ್ಥನೆಯನ್ನು ರಾಮನು ಅಂಗೀಕರಿಸುವನೋ,ಇಲ್ಲವೋ ಎಂದು ಶಂಕಿಸಿ ದುಃಖದಿಂದ ಬಿಡದೆ ಪ್ರಲಾಪಿಸುತ್ತಲೇ ಇದ್ದನು. ಹೀಗೆ ದುಃಖಿಸುತ್ತಿರುವ ಯಶಸ್ವಿಯಾದ ಭರತನನ್ನು ನೋಡಿ ಧೀಮಂತನಾಗಿಯೂ, ಮಹಾಧೀರನಾಗಿಯೂ ಇರುವ ರಾಮನು ಮೃದುವಾಕ್ಯಗಳಿಂದ ಸಮಾಧಾನಪಡಿಸುತ್ತ. ‹‹ ಎಲೆವತ್ಸನೆ! ಲೋಕದಲ್ಲಿ ಮನುಷ್ಯನಿಗೆ ಸ್ವಾತಂತ್ರ್ಯವೆಂಬುದು ಸ್ವಲ್ಪವಾದರೂ ಇಲ್ಲವು. ಮನುಷ್ಯನು ಸ್ವತಂತ್ರನೆ ಯಾವ

---

ವೃದನ್ನು ನೋಡಿ ಆನಂದಿಸಬೇಕೆಂದು ಕೋರುತಿದ್ದ ಕೋರಿಕೆಯೆಲ್ಲವೂ ನಿಷ್ಫಲ್ರಯೋಜನವಾಗಿ ಹೋಗುವುವು" ಎಂದು ಹೇಳಿದುದಾಗಿ ಗ್ರಹಿಸಬೇಕು.

ಕಾರ್ಯವನ್ನೂ ಮಾಡಲಾರನು. ಆತನು ಒಂದುಕಡೆಯಿಂದ ಮತ್ತೊಂದುಕಡೆ
ಗೆ ಹೋಗಬೇಕಾದರೂ ದೈವಪ್ರೇರಣೆಯಿಲ್ಲದೆ ಹೋಗಲಾರನು. ದೈವವೇ
ಪುರುಷನನ್ನು ಆಕರ್ಷಿಸುವುದು. ಆದುದರಿಂದ ನನ್ನನ್ನು ಕೈಕೇಯಿಯು ಕಾ
ಡಿಗೆ ಕಳುಹಿಸಿಬಿಟ್ಟಳೆಂಬ ಭ್ರಾಂತಿಯನ್ನು ಬಿಟ್ಟು ಬಿಡು! ಮತ್ತು ತಂದೆಯು
ಸ್ವರ್ಗಸ್ಥನಾದುದಕ್ಕಾಗಿಯೂ ನಾವು ದುಃಖಿಸುವುದುಚಿತವಲ್ಲ. ಲೋಕದ
ಲ್ಲಿ ಮನುಷ್ಯನು ಅನೇಕವಿಧದಿಂದ ಎಷ್ಟೋಹಣವನ್ನು ಸಂಪಾದಿಸಿಟ್ಟರೂ
ಕೊನೆಗೆ ಆ ಧನವೆಲ್ಲವೂ ಯಾವುದೋ ಒಂದುವಿಧದಲ್ಲಿ ನಾಶಹೊಂದಿಯೇತೀ
ರಬೇಕು. ಎಷ್ಟೋ ಉತ್ತಮಸ್ಥಿತಿಗೆ ಬಂದವನಾದರೂ ನೀಚಸ್ಥಿತಿಗೆ ಬರಬೇ
ಕಾಗುವುದು. ಕೂಡಾಟದ ಸಂಭ್ರಮಗಳೆಲ್ಲವೂ ಕೊನೆಗೆ ಅಗಲಿಕೆಯಲ್ಲಿ
ಯೇ ಪರ್ಯವಸಾನವನ್ನು ಹೊಂದುವುವು. ಎಷ್ಟೋ ಉತ್ತಮಜೀವನವಾಗಿ
ದ್ದರೂ ಮರಣದಲ್ಲಿಯೇ ಮುಗಿಯಬೇಕು. ಲೋಕಸ್ವಭಾವವೇ ಹೀಗಿರುವುದ
ರಿಂದ ನಮ್ಮ ತಂದೆಯು ಮರಣಹೊಂದಿದುದಕ್ಕಾಗಿ ನಾವು ಚಿಂತಿಸಿ ಫಲ
ವೇನು? ಚೆನ್ನಾಗಿ ಮಾಗಿದಮೇಲೆ ಹಣ್ಣುಗಳು ಮರದಿಂದ ಉದಿರಿಬೀಳಬೇಕಾ
ದುದೊಂದೇ ಕಾರ್ಯವಲ್ಲವೆ ? ಅದರಂತೆಯೇ ಈ ಪ್ರಪಂಚದಲ್ಲಿ ಹುಟ್ಟಿ
ದವನಿಗೆ ಮರಣಕ್ಕಿಂತಲೂ ಬೇರೆ ಭಯವೆ ಬುದೇ ಇಲ್ಲವು. ಬಲವಾದ ಕಂ
ಬಗಳುಳ್ಳಮನೆಯೂ ಕೂಡ ಕಾಲಕ್ರಮದಿಂದ ಶಿಥಿಲವಾಗಿ ಹಾಳುಬೀಳು
ವಂತೆ, ಮನುಷ್ಯರೂ ಜರಾಮರಣಗಳಿಗೆ ಈಡಾಗಿ ನಾಶವನ್ನು ಹೊಂದು
ವರು. ಕಳೆದುಹೋದ ರಾತ್ರಿಯು ಎಂದಿಗೂ ಹಿಂತಿರುಗಿಬರಲಾರದು. ಯ
ಮುನಾಪ್ರವಾಹವೂ ಕೂಡ ಜಲಸಮೃದ್ಧವಾದ ಸಮುದ್ರಕ್ಕೆ ಹೋಗಿಸೇ
ರುವುದೇ ಹೊರತು ಅಲ್ಲಿಂದ ಸ್ವಲ್ಪದೂರವಾದರೂ ಹಿಂತಿರುಗಿ ಬರಲಾರ
ದು. ಬೇಸಗೆಯಲ್ಲಿ ಸೂರ್ಯಕಿರಣವು ಎಡೆಬಿಡದೆ ನೆಲದಮೇಲಿನ ನೀರನ್ನು
ಹೀರುತ್ತಿರುವಂತೆ, ಕಳೆದುಹೋಗುತ್ತಿರುವ ಹಗಲು ರಾತ್ರಿಗಳೆರಡೂ ಅವಿ
ಚ್ಛಿನ್ನವಾಗಿ ಮನುಷ್ಯನ ಆಯುಃಪ್ರಮಾಣವನ್ನು ಹೀರುತ್ತಿರುವುವು. ನೀನು
ನಡೆಯುವಾಗಲೂ, ನಿಂತಿರುವಾಗಲೂ, ಕ್ಷಣಕ್ಷಣಕ್ಕೂ ನಿನ್ನ ಆಯುಸ್ಸು
ಕ್ಷೀಣಿಸುತ್ತಿರುವುದಲ್ಲವೆ. ಹೀಗಿರುವಾಗ ಒಬ್ಬೊಬ್ಬರೂ ತಮ್ಮ ತಮ್ಮ ಅವ
ಸ್ಥೆಗಾಗಿಯೇ ದುಃಖಿಸಬೇಕಾಗಿರುವುದಲ್ಲವೇ! ಇನ್ನು ಇತರರಿಗಾಗಿ ನೀನು ಚಿಂ
ತಿಸುವುದು ನ್ಯಾಯವೆ? ನಿನ್ನ ಗತಿಯೇ ಹೀಗಿರುವಾಗ ಮತ್ತೊಬ್ಬರ ಚಿಂ

ತೆಯು ನಿನಗೇಕೆ? ಎಲೆ ವತ್ಸನೆ! ಮೃತ್ಯುವೆಂಬುದು ಮನುಷ್ಯನನ್ನು ಯಾವಾಗಲೂ ಬಿಟ್ಟುಹೋಗತಕ್ಕುದಲ್ಲ. ನಡೆಯುವವರೊಡನೆ ಅದೂ ನಡೆದು ಬರುವುದು.ಕುಳಿತಿರುವಾಗ ಸಂಗಡಲೇ ಅದೂ ಕುಳಿತುಕೊಳ್ಳುವುದು.ಬಹು ದೂರಪ್ರಯಾಣಮಾಡಿ ಹೋದರೂ ಮೃತ್ಯುವು ಸಂಗಡಲೇ ಸುತ್ತಿಬರುವುದು. ಮನುಷ್ಯನಿಗೆ ನಿಮಿಷಮಾತ್ರವಾದರೂ ಮೃತ್ಯುವನ್ನು ತಪ್ಪಿಸಿಕೊಂಡು ಹೋಗುವುದು ಸಾಧ್ಯವಲ್ಲ. ಎಲೆ ವತ್ಸನೆ! "ಯಾವಾಗಲೋ ಬಂದೊದಗುವ ಮೃತ್ಯುವಿನ ಚಿಂತೆಯಿಂದ ಈಗಲೇ ಕಳವಳಿಸುವುದೇಕೆ?" ಎಂದು ನೀನು ಶಂಕಿಸಬಹುದು. ಮನುಷ್ಯನಿಗೆ ದೇಹವೆಲ್ಲವೂ ಸುಕ್ಕುಬಿದ್ದು, ತಲೆಯ ಕೂದಲುಗಳೆಲ್ಲವೂ ನರೆತು,ಮುಪ್ಪಿನಿಂದ ಮೈಯ್ಯೆಲ್ಲವೂ ಜೀರ್ಣವಾದ ಮೇಲೆ ಯಾವ ಉಪಾಯದಿಂದ ತಾನೇ ಆ ಜರೆಯನ್ನು ಪರಿಹರಿಸಕೊಳ್ಳಬಲ್ಲನು? ಅದನ್ನು ನೀಗಿಸುವುದು ಯಾರಿಗೂ ಸಾಧ್ಯವಲ್ಲ. ಆದುದರಿಂದ ಶಕ್ತಿಯಿರುವಾಗಲೇ ಆತ್ಮಜ್ಞಾನಕ್ಕೆ ಒಬ್ಬೊಬ್ಬನೂ ಪ್ರಯತ್ನಿಸಬೇಕು.ಲೋಕದಲ್ಲಿ ಮನುಷ್ಯನು ಹಣವನ್ನು ಸಂಪಾದಿಸಬೇಕೆಂಬ ಆಶೋತ್ತರದಿಂದ ಎಷ್ಟುಹೊತ್ತಿಗೆ ಸೂರ್ಯೋದಯವಾಗುವುದೆಂದು ನಿರೀಕ್ಷಿಸುತಿದ್ದು ಬೆಳಗಾದುದನ್ನು ನೋಡಿ ಸಂತೋಷಪಡುವನು. ಹಾಗೆಯೇ ಕಾಮೋಪಭೋಗಗಳನ್ನನುಭವಿಸುವ ಆತ್ಯಾತುರದಿಂದ ರಾತ್ರಿಯಾಗುವುದನ್ನೇ ಕಾದುಕೊಂಡಿದ್ದು, ಸೂರ್ಯನು ಅಸ್ತಮಿಸಿದುದನ್ನು ನೋಡಿ ಆಗಲೂ ಸಂತೋಷದಿಂದುಬ್ಬುವನು. ಈ ಉದಯಾಸ್ತಮಯಕಾಲಗಳೇ ತಮ್ಮ ತಮ್ಮ ಆಯುಸ್ಸನ್ನು ಕ್ಷೀಣಿಸುತ್ತಿರುವುದೆಂಬುದನ್ನು ಲೋಕದಲ್ಲಿ ಯಾರೂ ಎಣಿಸಲಾರರು. ಹೀಗೆಯೇ ಒಂದೊಂದು ಋತುಗಳು ತಲೆದೋರುವಾಗಲೂ, ಮನುಷ್ಯನು ಆಯಾಭೋಗಕಾಲವು ಬಂತೆಂದು ಸಂತೋಷದಿಂದ ಉಬ್ಬುವನೇ ಹೊರತು, ಈ ಋತುಗಳು ಸುತ್ತಿಸುತ್ತಿ ಬಂದಷ್ಟೂ ತಮ್ಮ ಆಯುಃಪ್ರಮಾಣವು ತಗ್ಗುತ್ತಾ ಬರುವುದೆಂಬ ಪರ್ಯಾಲೋಚನೆಯು ಯಾರಿಗೂ ಇರುವುದಿಲ್ಲ.ಮಹಾಸಮುದ್ರದಲ್ಲಿ ಎಷ್ಟೋಮರದ ತುಂಡುಗಳು ಪ್ರವಾಹವೇಗದಿಂದ ಬಂದು ಬೀಳುವುವು. ಈ ತುಂಡುಗಳು ಆ ಸಮುದ್ರಮಧ್ಯದ ಅಲೆಗಳ ವೇಗಕ್ಕೆಸಿಕ್ಕಿ ಕ್ಷಣಕಾಲದವರೆಗೆ ಒಂದಕ್ಕೊಂದುಸೇರಿದ್ದು ಹಾಗೆಯೇ ಚದರಿಹೋಗುವುವು. ಇದರಂತೆಯೇ ಹೆಂಡಿರಾಗಲಿ, ಮಕ್ಕಳಾಗಲಿ, ಬಂಧುಗ

ಳಾಗಲಿ, ಹಣವಾಗಲಿ, ಈ ಪ್ರಪಂಚವೆಂಬ ಮಹಾಸಮುದ್ರದಲ್ಲಿ, ಕಾಲ ಗತಿಯೆಂಬ ಅಲೆಗಳಿಂದ, ಅಲ್ಲಲ್ಲಿ ಒಂದಾಗಿ ಕ್ಷಣಕಾಲದವರೆಗೆ ಸೇರಿಸ ಲ್ಪಟ್ಟಿದ್ದು, ಇದಕ್ಕಿದ್ದಹಾಗೆ ಅಗಲಿ ಪರಸ್ಪರಸಂಬಂಧವೇ ಇಲ್ಲದಂತೆ ಹೋಗುವುವು. ಆದುದರಿಂದ ಈ ಬಂಧುತ್ವದ ಸಂಬಂಧವೆಂಬುದು ಎಂದಿ ಗೂ ಸ್ಥಿರವಾದುದಲ್ಲ.ಎಂದಿದ್ದರೂ ಕೊನೆಗೆ ಪರಸ್ಪರವಿಯೋಗವೆಂಬುದು ನಿ ಜವು. ಈ ಲೋಕದಲ್ಲಿ ಯಾವಪ್ರಾಣಿಯಾದರೂ ತನ್ನ ಇಷ್ಟಪಂತೆ ನಡೆ ಯುವುದಕ್ಕೆ ಸಾಧ್ಯವಲ್ಲ. ಆದುದರಿಂದ ಸತ್ತವರಿಗಾಗಿ ನಾವು ಎಷ್ಟುದುಃ ಖಿಸಿದರೂ ಅವರನ್ನು ಬದುಕಿಸುವುದಕ್ಕಾದೀತೆ ! ಎಂದಿಗೂ ಸಾಧ್ಯವಲ್ಲ. ಇನ್ನೂ ಒಂದು ದೃಷ್ಟಾಂತವನ್ನು ಹೇಳುವೆನು ಕೇಳು. ಒಬ್ಬಮನುಷ್ಯನು ದಾರಿಯಲ್ಲಿ ಬರುತ್ತಿರುವ ಕೆಲವುಮಾರ್ಗಸ್ಥರಗುಂಪನ್ನು ನೋಡಿ "ನಾನೂ ನಿಮ್ಮ ಸಂಗಡಲೇಬರುವೆನು"ಎಂದು ಹೇಳಿ, ಅವರನ್ನು ಹಿಂಬಾಲಿಸುವಂತೆ, ಇ ದಕ್ಕೆವೊದಲು ತಮ್ಮ ತಮ್ಮ ಹಿರಿಯರು ಅವಲಂಬಿಸಿದದಾರಿಯನ್ನು ಹಿಡಿದು ಹೋಗುವುದೇ ಮುಂದಿನವರ ಕೆಲಸವೆಂಬುದು ನಿಜವು ಎಷ್ಟುಮಾತ್ರಕ್ಕೂ ಆ ಮಾರ್ಗವನ್ನು ಬಿಡಬಾರದು. ಆ ದಾರಿಯಲ್ಲಿ ಹೋದವರಿಗೆ ಎಂದಿಗೂ ಅಪಾಯವಿಲ್ಲವು. ಪ್ರತಿಯೊಬ್ಬರೂ ಆದಾರಿಯನ್ನೇ ಹಿಡಿದು ಹೋ ಗಬೇಕಾಗಿರುವಾಗ ಅದಕ್ಕಾಗಿ ದುಃಖಿಸುವುದೇಕೆ ? ಪ್ರವಾಹದಂತೆ ವಯ ಸ್ಸೆಂಬುದು ಮುಂದೆಮುಂದೆ ಹೋಗುತ್ತಿರುವುದೇ ಹೊರತು ಹಿಂತಿರುಗಿ ಬರ ಲಾರದು. ಹೀಗಿರಲು, ತಾನು ಬದುಕಿರುವಷ್ಟರಲ್ಲಿ ಪರಲೋಕಶ್ರೇಯಸ್ಸಿ ಗೆ ಬೇಕಾದ ಉಪಾಯವನ್ನು ತಾನು ಸಿದ್ಧಪಡಿಸಿಕೊಳ್ಳಬೇಕಲ್ಲವೆ? ಹೀ ಗೆ ಸುಖಹೇತುವಾದ ಧರ್ಮವನ್ನುಗಳಿಸತಕ್ಕವರೇ ಮನುಷ್ಯರೆನಿಸುವರು. ಇತರರೆಲ್ಲರೂ ಮೃಗಗಳು. ಧರ್ಮಾತ್ಮನಾದ ನಮ್ಮತಂದೆಯು, ಶ್ರೇಯಸ್ಕರ ವಾದ ಅನೇಕಯಾಗಗಳನ್ನು ನಡೆಸಿ, ಉಚಿತ ದಕ್ಷಿಣೆಗಳನ್ನುಕೊಟ್ಟು, ಆ ಪು ಣ್ಯಾತಿಶಯದಿಂದ ಸ್ವರ್ಗವನ್ನು ಸೇರಿರುವನು. ಭೃತ್ಯರನ್ನು ಪ್ರೀತಿಯಿಂದ ಪೋಷಿಸಿದುದರಿಂದಲೂ,ಪ್ರಜೆಗಳನ್ನು ಧರ್ಮದಿಂದ ಪಾಲಿಸಿದುದರಿಂದಲೂ, ಧರ್ಮದಿಂದ ಅರ್ಥಾರ್ಜನೆಯನ್ನು ಮಾಡುತಿದ್ದುದರಿಂದಲೂ ನಮ್ಮ ತಂದೆ ಯು ಸ್ವರ್ಗಸ್ಥನಾಗಿರುವನು. ಮತ್ತು ಇಷ್ಟಾಪೂರ್ತಗಳೆಂಬ ಸತ್ಕರ್ಮಗಳಿಂ ದಲೂ ನಮ್ಮತಂದೆಗೆ ಸ್ವರ್ಗಲೋಕವು ಲಭಿಸಿರುವುದು. ಆತನು ಮಾಡದ

ಯಾಗಗಳಿಲ್ಲ. ಆತನು ಅನುಭವಿಸದ ಭೋಗಗಳಿಲ್ಲ. ಇದರ ಮೇಲೆ ಬಹುಕಾಲದವರೆಗೂ ಜೀವಿಸಿಯೂಇದ್ದನು.ಎಲೆ ವತ್ಸನೆ!ನಮ್ಮ ವಂಶದ ಹಿರಿಯರೆಲ್ಲಗಿಂತಲೂ ಹೆಚ್ಚು ಕಾಲದವರೆಗೆ ಬದುಕಿದ್ದು, ಅನೇಕಭೋಗಗಳನ್ನನುಭವಿಸಿ, ಸಜ್ಜನರಿಗೆಲ್ಲಾ ಮೇಲೆನಿಸಿಕೊಂಡಿದ್ದು, ಕೊನೆಗೆಸ್ವರ್ಗಸ್ಥನಾದ ನಮ್ಮ ತಂದೆಗೋಸ್ಕರ ನಾವು ದುಃಖಿಸಬಹುದೆ? ಜೀರ್ಣವಾದ ಈ ಮನುಷ್ಯದೇಹವನ್ನು ಬಿಟ್ಟು, ಆತನು ದಿವ್ಯದೇಹದಿಂದಕೂಡಿ ಈಗ ಬ್ರಹ್ಮಲೋಕದಲ್ಲಿ ವಿಹರಿಸುತ್ತಿರುವನಲ್ಲವೆ? ಆತನಿಗಾಗಿ ನಾವು ದುಃಖಿಸುವುದೇಕೆ? ಇಷ್ಟು ಸರ್ವೋತ್ತಮವಾದ ಪದವಿಯಲ್ಲಿರುವ ಆ ತಂದೆಗಾಗಿ ಬುದ್ಧಿವಂತನಾಗಿಯೂ, ಪ್ರಾಜ್ಞನಾಗಿಯೂ, ಇರುವ ನಿನ್ನಂತವನು ದುಃಖಿಸಬಹುದೆ? ಎಲೆ ವತ್ಸನೆ! ಯಾವುದಕ್ಕಾದರೇನು? ಪ್ರಾಜ್ಞನಾಗಿಯೂ, ಧೀರನಾಗಿಯೂ ಇರುವ ಪುರುಷನು ಯಾವ ಅವಸ್ಥೆಗಳಲ್ಲಿಯೂ ಹೀಗೆ ದುಃಖಿಸಬಾರದು. ಹೀಗಿರುವಾಗ ಧೀರನಾದ ನಿನ್ನಂತವನು ಕಣ್ಣೀರುಬಿಟ್ಟು ಅಳುವುದೆಂದರೇನು? ದುಃಖಿಸಬೇಡ! ಸಮಾಧಾನವನ್ನು ಹೊಂದು!ಪಟ್ಟಣಕ್ಕೆ ಹಿಂತಿರುಗಿ ಹೋಗಿ ನಮ್ಮ ಪ್ರಜೆಗಳನ್ನು ಕ್ಷೇಮದಿಂದ ಪಾಲಿಸುತ್ತಿರು! ಜಿತೇಂದ್ರಿಯನಾದ ನಮ್ಮ ತಂದೆಯು ಹೇಳಿದಮಾತನ್ನು ನೀನು ನಡೆಸಬೇಡವೆ? ನನ್ನಂತೆಯೇ ನೀನೂ ಆತನಿಗೆ ಪುತ್ರನಲ್ಲವೆ? ಪುಣ್ಯಾತ್ಮನಾದ ಆತನ ಆಜ್ಞಾನುಸಾರವಾಗಿಯೇ ನಾನು ಈ ಕಾಡಿನಲ್ಲಿರುವೆನೆಂಬುದನ್ನರಿಯೆಯಾ ? ತಂದೆಯಾಜ್ಞೆಯನ್ನು ಮೀರಿ ನಡೆಯುವುದು ನಮ್ಮಿಬ್ಬರಿಗೂ ನ್ಯಾಯವಲ್ಲ! ಆತನೇ ನಮಗೆ ಸರ್ವವಿಧಬಂಧುವು. ಪಿತೃವಚನಪರಿಪಾಲನಾರ್ಥವಾಗಿಯೇ ನಾನು ಈ ವನವಾಸವೆಂಬ ಸತ್ಕರ್ಮವನ್ನು ನಡೆಸುತ್ತಿರುವೆನು. ಪರಲೋಕಾಪೇಕ್ಷೆಯುಳ್ಳವನು ಧಾರ್ಮಿಕನಾಗಿಯೂ, ಮೃದುಸ್ವಭಾವವುಳ್ಳವನಾಗಿಯೂ ಇರುವ ತಂದೆಯ ಆಜ್ಞೆಯನ್ನು ತಪ್ಪದೆ ನಡೆಸಬೇಕೆಂಬುದನ್ನರಿಯೆಯಾ? ಎಲೈ ಪುರುಷಶ್ರೇಷ್ಠನೆ! ನಮ್ಮ ತಂದೆಯು ತನ್ನ ಗುರುಜನಗಳಲ್ಲಿ ಹೇಗೆ ನಡೆಯುತಿದ್ದನೆಂಬುದನ್ನು ಮನಸ್ಸಿನಲ್ಲಿ ಪರ್ಯಾಲೋಚಿಸು. ಆದರಂತೆಯೇ ನೀನು ತಂದೆಯಾಜ್ಞೆಯನ್ನು ಗೌರವಿಸಿ ಅದನ್ನನುಸರಿಸಿ ನಡೆಯುವವನಾಗು " ಎಂದನು. ಮಹಾತ್ಮನಾಗಿಯೂ, ಧೀರನಾಗಿಯೂ ಇರುವ ರಾಮನು ತಮ್ಮನಾದ ಭರತನಿಗೆ ಹೀಗೆ

ಪಿತೃವಾಕ್ಯಪರಿಪಾಲನವನ್ನು ಮಾಡಬೇಕೆಂಬ ಬುದ್ಧಿವಾದಗಳನ್ನು ಹೇಳಿ, ಒಂದು ಕ್ಷಣಕಾಲದವರೆಗೆ ಸುಮ್ಮನಿದ್ದನು. ಇಲ್ಲಿಗೆ ನೂರೈದನೆಯಸರ್ಗವು.

---

{ ಭರತನು ರಾಮನನ್ನು ಪುನಃ ಪ್ರಾರ್ಥಿಸಿದುದು. ವಸಿಷ್ಠನೂ, ಕೌಸಲ್ಯಾದಿಗಳೂ, ಮಂತ್ರಿ ಮೊದಲಾದವರೂ ರಾಮನನ್ನು ಪ್ರಾರ್ಥಿಸಿದುದು. }

ಹೀಗೆ ರಾಮನು ಯುಕ್ತಿಯುಕ್ತವಾದ ಮಾತಿನಿಂದ ಸಮಾಧಾನವನ್ನು ಹೇಳಿ ಸುಮ್ಮನಿರಲು, ಭರತನು ಪುನಃ ರಾಮನನ್ನು ನೋಡಿ, ಧರ್ಮಯುಕ್ತವಾದ ಬೇರೊಂದು ದಾರಿಯನ್ನು ಹಿಡಿದು ಮೃದುವಾಕ್ಯಗಳಿಂದ "ಎಲೆ ಆರ್ಯನೆ ! ಲೋಕದಲ್ಲಿ ನಿನ್ನಂತವನು ಬೇರೆ ಯಾವನುಂಟು ? ದುಃಖದಿಂದ ನೀನು ಕೊರಗತಕ್ಕವನಲ್ಲ ! ಸಂತೋಷದಿಂದ ನೀನು ಉಬ್ಬತಕ್ಕವನೂ ಅಲ್ಲ ! ದುಃಖಸುಖಗಳೆರಡೂ ನಿನ್ನಮೇಲೆ ತಮ್ಮ ಶಕ್ತಿಯನ್ನು ತೋರಿಸಲಾರವು. ನಿನ್ನನ್ನು ಸರ್ವಜ್ಞನೆಂದು ಮಹಾತ್ಮರೂ ಪೂಜಿಸುವರು. ಹೀಗಿದ್ದರೂ ನೀನು ಹಿರಿಯರನ್ನು ಗೌರವಿಸುವುದಕ್ಕಾಗಿ ಒಂದೊಂದು ವಿಷಯವನ್ನೂ ಅವರನ್ನೇ ಕೇಳಿ ಸಂದೇಹವನ್ನು ತೀರಿಸಿಕೊಳ್ಳುವಂತೆ ನಟಿಸುತ್ತಿರುವೆ. ಸತ್ತವನಮೇಲೆ ದ್ವೇಷಬುದ್ಧಿಯನ್ನು ಬಿಟ್ಟು ಬಿಡುವ ಹಾಗೆಯೇ ಬದುಕಿರುವವನ ಮೇಲೆಯೂ ದ್ವೇಷವಿಲ್ಲದಿರುವುದು, ಇಲ್ಲದ ವಸ್ತುವಿನಲ್ಲಿ ಆಸೆಯನ್ನಿಡದಂತೆ ಇರುವ ವಸ್ತುವಿನಲ್ಲಿಯೂ ಆಸೆಯನ್ನಿಡದಿರುವುದು, ಈ ಎರಡು ವಿಧವಾದ ಮನೋಧಾರ್ಢ್ಯವು ಭೂಮಿಯಲ್ಲಿ ಯಾವನಿಗುಂಟೋ ಆತನು ಯಾವುದಕ್ಕೂ ಸ್ವಲ್ಪವಾದರೂ ಪರಿತಪಿಸಲಾರನು. ಆದರಿಂದ ನೀನು ಹೇಳಿದಂತೆ ನನಗೆ ದುಃಖಲೇಶವೂ ಇಲ್ಲವು. "ಹಾಗಿದ್ದರೆ ಹೀಗೆ ಸಂಕಟಪಡುವುದೇಕೆ" ? ಎಂದು ನೀನು ಕೇಳಬಹುದು. ಎಲೈ ಪುರುಷಶ್ರೇಷ್ಠನೆ ! ಯಾವನು ತ್ರಿಕಾಲಜ್ಞನಾಗಿರುವನೋ, ಅಥವಾ ಯಾವನು ಜೀವಾತ್ಮಪರಮಾತ್ಮ ಸ್ವರೂಪಗಳನ್ನು ಚೆನ್ನಾಗಿ ಬಲ್ಲನೋ, ಅಂತವನು ಇಂತಹ ವ್ಯಸನಕಾಲಗಳಲ್ಲಿಯೂ ದುಃಖಿಸಲಾರನೆಂಬುದೇನೋ ನಿಜವು. ಹಾಗೆಯೇ ನೀನು ಯಾವಭಾಗಕ್ಕೂ ದುಃಖಿಸದಿರುವುದೇ ನ್ಯಾಯವು. ಆದರೆ ನೀನು ದುಃಖಿಸದಿದ್ದಮಾತ್ರಕ್ಕೆ

ನಿನ್ನ ಕಷ್ಟವನ್ನು ನೋಡಿ ನಾನು ಹೇಗೆ ಸಹಿಸಲಿ? ಎಲೈ ಮಹಾತ್ಮನೆ! ನೀನಾದರೋ ದೇವಸಮಾನನು. ಸತ್ವಗುಣಸಂಪನ್ನನು. ಮಹಾಮಹಿಮೆಯುಳ್ಳವನು. ಸತ್ಯಪ್ರತಿಜ್ಞೆಯುಳ್ಳವನು. ಲೋಕದಲ್ಲಿ ನಿನಗೆ ತಿಳಿಯದುದೊಂದೂ ಇಲ್ಲವು. ಎಲ್ಲವನ್ನೂ ಚೆನ್ನಾಗಿ ವಿಮರ್ಶಿಸತಕ್ಕವನು. ಬಹಳ ಧೀಮಂತನು. ಈಸದ್ಗುಣಜಾತಿಗಳೆಲ್ಲವೂ ನಿನ್ನಲ್ಲಿ ತುಂಬಿರುವುವು. ಈ ಭೂಲೋಕದ ಉತ್ಪತ್ತಿವಿನಾಶಗಳೆಲ್ಲವನ್ನೂ ತಿಳಿದ ಇಂತಹ ನೀನು, ನನ್ನಂತವರಿಗೆ ಸಹಿಸಬಾರದ ಈ ಮಹಾದುಃಖವನ್ನು ಂಪುಮಾಡಬಹುದೇ! ನೀಚಳಾದ ನನ್ನ ತಾಯಿಯು ನಾನಿಲ್ಲದ ಕಾಲದಲ್ಲಿ ನನಗೋಸ್ಕರವಾಗಿ ಈ ಪಾಪಕೃತ್ಯವನ್ನು ನಡೆಸಿಬಿಟ್ಟಳು. ಇದು ನನಗೆ ಎಂದಿಗೂ ಸಮ್ಮತವಲ್ಲ. ನೀನು ಕೋಪವನ್ನು ಬಿಟ್ಟು ನನ್ನಲ್ಲಿ ಪ್ರಸನ್ನನಾಗಬೇಕು. ನಾನಾದರೋ ಈಗ ಧರ್ಮಪಾಶಕ್ಕೆ ಕಟ್ಟುಬಿದ್ದಿರುವೆನು. ಆದುದರಿಂದಲೇ ಮಹಾಪಾಪಿನಿಯಾದ ಈ ನನ್ನ ತಾಯಿಯು ಶಿಕ್ಷಾರ್ಹಳಾಗಿದ್ದರೂ ಆಕೆಯನ್ನು ತೀವ್ರವಾದ ದಂಡನೆಯಿಂದ ಕೊಲ್ಲದೆ ಬಿಟ್ಟಿರುವೆನು. ಲೋಕಪವಿತ್ರವಾದ ವಂಶದಲ್ಲಿ ಹುಟ್ಟಿ, ಶುದ್ಧಾಚಾರವುಳ್ಳ ದಶರಥನಿಗೆ ಮಗನಾಗಿ ಜನಿಸಿ, ಧರ್ಮಗಳೆಲ್ಲವನ್ನೂ ತಿಳಿದಿರುವ ನಾನು ಲೋಕನಿಂದಿತವಾದ ಅಧರ್ಮಕಾರ್ಯಕ್ಕೆ ಹೇಗೆ ಪ್ರವರ್ತಿಸಲಿ? ಇಷ್ಟೇ ಅಲ್ಲದೆ ನಮ್ಮ ತಂದೆಯಾದ ದಶರಥನೇ ನನಗೆ ಪರಮಗುರುವು. ಆತನು ಯಾಗಾದಿಕ್ರಿಯೆಗಳನ್ನು ನಡೆಸಿದವನು. ಇದರಮೇಲೆ ವಯೋವೃದ್ಧನು. ಮತ್ತು ನಮ್ಮೆಲ್ಲರಿಗೂ ಆತನೇ ರಾಜನು. ಅವನು ಲೋಕಾಂತರವನ್ನು ಸೇರಿಬಿಟ್ಟಿರುವನು. ತಂದೆಯಾದ ಆತನು ನಮಗೆ ದೈವಸಮಾನನೆಂದು ತಿಳಿದೇ ಆತನನ್ನು ಈ ಸಭೆಯಲ್ಲಿ ನಿಂದಿಸುವುದಕ್ಕೆ ನನ್ನ ಮನಸ್ಸು ಹಿಂತೆಗೆಯುತ್ತಿರುವುದು. ಲೋಕದಲ್ಲಿ ಧರ್ಮಜ್ಞನಾದ ಯಾವನು ತಾನೇ ಒಬ್ಬ ಹೆಂಗಸಿನ ಸಂತೋಷಕ್ಕಾಗಿ ಧರ್ಮಾರ್ಥಗಳೆರಡಕ್ಕೂ ಹಾನಿಯನ್ನು ತರುವ ಈ ಪಾಪಕಾರ್ಯಕ್ಕೆ ಪ್ರಯತ್ನಿಸುವನು? ಕೊನೆಗಾಲಕ್ಕೆ ತಕ್ಕಂತೆ ಮನುಷ್ಯನ ಬುದ್ಧಿಯು ಕೆಟ್ಟುಹೋಗುವುದೆಂಬ ಲೋಕವಾರ್ತೆಯು ಈ ನಮ್ಮ ತಂದೆಯ ದುಷ್ಕೃತ್ಯದಿಂದ ಚೆನ್ನಾಗಿ ನಿದರ್ಶನಕ್ಕೆ ಬಂದಂತಾಯಿತು. ಎಲೈ ರಾಮನೆ! ಕೈಕೇಯಿಯ ಕೋಪವನ್ನು ನೋಡಿ ಭಯದಿಂದಲೋ, ಆಕೆಯಲ್ಲಿ ಮೋಹದಿಂದಲೋ, ಸಾಹಸಬುದ್ಧಿಯಿಂದಲೋ ನಮ್ಮ ತಂದೆಯು ನಡೆಸಿಬಿಟ್ಟ ಈ

ಧರ್ಮಾತಿಕ್ರಮವನ್ನು ನೀನು ಚೆನ್ನಾಗಿ ಪರ್ಯಾಲೋಚಿಸಿ ಅದನ್ನು ತಪ್ಪಿಸಬೇಕು.ಆತನ ದುರ್ಮಾರ್ಗವನ್ನು ಸನ್ಮಾರ್ಗಕ್ಕೆ ತರವುದು ನಿನಗೆ ಸೇರಿದುದಲ್ಲವೆ? ತಂದೆಯುಮಾಡಿದ ಧರ್ಮಾತಿಕ್ರಮವನ್ನು ಯಾವ ಪುತ್ರನು ತಿದ್ದುವುದಕ್ಕೆ ಯತ್ನಿಸುವನೋ ಆತನೇ ಸತ್ಪುತ್ರನೆನಿಸುವನು. ಹಾಗಿಲ್ಲದವನು ಪುತ್ರನೆನಿಸುವುವೇ ಇಲ್ಲವು. ನಿನಗೆ ಆ ಅಪವಾದವು ಬರಬಾರದಲ್ಲವೆ? ತಂದೆಯು ಸಜ್ಜನರಿಗೆ ನಿಂದಿತವಾದ ಯಾವುದೋ ಒಂದು ಪಾಪಕಾರ್ಯವನ್ನು ಮಾಡಿದ ಮಾತ್ರಕ್ಕೆ ಆ ಅಪವಾದಕ್ಕೆ ನೀನೂ ಭಾಗಿಯಾಗಬಾರದಲ್ಲವೆ? ಮುಖ್ಯವಾಗಿ ಕೈಕೇಯಿಯನ್ನೂ ನನ್ನನ್ನೂ, ನಮ್ಮ ತಂದೆಯನ್ನೂ ನಮ್ಮ ಇಷ್ಟಮಿತ್ರಬಂಧುಗಳೆಲ್ಲರನ್ನೂ, ನಮ್ಮ ದೇಶದ ಸಮಸ್ತಪ್ರಜೆಗಳನ್ನೂ ಅಪಾಯವಿಲ್ಲದೆ ಕಾಪಾಡಬೇಕಾದುದು ನಿನ್ನ ಭಾರವಾಗಿರಲಿಲ್ಲವೆ! ಅಣ್ಣಾ! ಈ ಅರಣ್ಯವಾಸವೆಲ್ಲಿ? ಕ್ಷತ್ರಿಯ ಧರ್ಮವೆಲ್ಲಿ? ಈ ಜಡೆಗಳೆಲ್ಲಿ? ರಾಜ್ಯರಕ್ಷಣೆಯೆಲ್ಲಿ? ಹೀಗೆ ಕುಲಕ್ಕೂ ಸ್ವರೂಪಕ್ಕೂ ವಿರುದ್ಧವಾದ ಕಾರ್ಯವನ್ನು ನಡೆಸುವುದು ನಿನಗೆ ಉಚಿತವೆ? ಎಂದಿಗೂ ನಿನಗುಚಿತವಲ್ಲ! ಕ್ಷತ್ರಿಯನಾಗಿ ಹುಟ್ಟಿದಮೇಲೆ ಆತನಿಗೆ ಪಟ್ಟಾಭಿಷೇಕವೆಂಬುದು ಮೊದಲನೆಯ ಧರ್ಮವು ಇದರಿಂದಲೇ ಕ್ಷತ್ರಿಯನು ಪ್ರಜಾಪರಿಪಾಲನಕ್ಕೆ ಯೋಗ್ಯತೆಯನ್ನು ಪಡೆಯುವನು. ಹೀಗಿರುವಾಗ ಕ್ಷತ್ರಿಯನಾಗಿ ಹುಟ್ಟಿದವನು ಯಾವನುತಾನೇ, ತ್ಯಾಗಭೋಗಗಳಿಂದ ಕೂಡಿ,ಪ್ರತ್ಯಕ್ಷಫಲವನ್ನು ತೋರಿಸತಕ್ಕ ಪ್ರಜಾಪಾಲನವೆಂಬ ಪರಲೋಕಶ್ರೇಯಸ್ಸಾಧನಭೂತವಾದ ಸ್ವಧರ್ಮವನ್ನು ಬಿಟ್ಟು ಅಪ್ರತ್ಯಕ್ಷವಾಗಿ, ಅಂಗಲೋಪಾದಿಗಳುಂಟಾಗಬಹುದಾದುದರಿಂದ ಸಂದೇಹಾಸ್ಪದವಾದ ಫಲಸಿದ್ಧಿಯುಳ್ಳುದಾಗಿ, ಲಕ್ಷಣಗಳಿಲ್ಲದುದರಿಂದ ನಿರೂಪಿಸಲಸಾಧ್ಯವಾಗಿ, ಕಾಲಾಂತರಫಲಪ್ರದವಾದ ತಾಪಸಧರ್ಮವನ್ನಾಚರಿಸುವನು? ಕ್ಷತ್ರಿಯನಿಗೆ ಈ ಧರ್ಮವು ಯಾವ ಪ್ರಮಾಣದಿಂದಲೂ ವಿಹಿತವಾದುದಲ್ಲ. ಒಂದುವೇಳೆ ನೀನು ವಿಶೇಷಕ್ಲೇಶಕರವಾದ ಧರ್ಮವನ್ನೇ ಆಚರಿಸಬೇಕೆಂಬ ಉತ್ಸಾಹವುಳ್ಳವನಾಗಿರುವಪಕ್ಷದಲ್ಲಿ, ರಾಜ್ಯಭಾರವನ್ನು ವಹಿಸಿ, ಚತುರ್ವರ್ಣದವರೂ ಅವರವರ ಸ್ವಧರ್ಮವನ್ನು ಬಿಡದೆ ನಡೆಯುವಂತೆ ನಿಯಮಿಸಿ ಧರ್ಮದಿಂದ ರಾಜ್ಯವನ್ನು ಪಾಲಿಸು. ಇದೂ ಕ್ಲೇಶಕರವಾದುದೇ ಹೊರತು ಸುಲಭವಲ್ಲ. ಧರ್ಮಜ್ಞರು ನಾಲ್ಕುವಿಧವಾದ ಆಶ್ರಮಗಳಲ್ಲಿಯೂ ಗೃಹ

ಸ್ಥಾಶ್ರಮವೇ ಶ್ರೇಷ್ಠವೆಂದು ಹೇಳುವರಲ್ಲವೆ? ಆ ಗೃಹಸ್ಥಾಶ್ರಮವನ್ನು ನೀನು ಹೇಗೆ ಬಿಡಬಹುದು? ವಿದ್ಯೆಯಲ್ಲಿಯಾಗಲಿ, ವಯಸ್ಸಿನಲ್ಲಿಯಾಗಲಿ, ಕ್ರಮದಲ್ಲಿಯಾಗಲಿ ನಿನಗಿಂತಲೂ ನಾನು ಹಿಂದಾಗಿರುವೆನು. ಎಲ್ಲಾ ಭಾಗಗಳಲ್ಲಿಯೂ ನನಗಿಂತಲೂ ಹಿರಿಯನಾದ ನೀನಿರುವಾಗ ನಾನು ಹೇಗೆ ರಾಜ್ಯವನ್ನು ಪಾಲಿಸಬಲ್ಲೆನು? ಒಂದುವೇಳೆ ನೀನು "ನಿನ್ನಂತೆಯೇ ನಾನೂ ಚಿಕ್ಕವನಲ್ಲವೆ?" ಎಂದು ಕೇಳಬಹುದು. ನಾನು ವಯಸ್ಸಿನಲ್ಲಿ ' ಮಾತ್ರವೇ ಚಿಕ್ಕವನಲ್ಲ. ಗುಣದಲ್ಲಿಯೂ ಬುದ್ಧಿಯಲ್ಲಿಯೂ ನಿನಗಿಂತಲೂ ನಾನು ಬಹಳ ಕೀಳಾದವನು. ನನ್ನ ಸ್ಥಿತಿಯೂ ಬಹಳ ಹೀನವಾದುದು. ಇದರಮೇಲೆ ನಿನ್ನನ್ನು ಬಿಟ್ಟು ನಾನು ಬದುಕಿರುವುದೇ ಸಾಧ್ಯವೆಂದು ನನಗೆ ತೋರಿಲ್ಲ. ಇನ್ನು ರಾಜ್ಯವನ್ನು ಹೇಗೆ ನಡೆಸಬಲ್ಲೆನು? ಎಲೈ ಧರ್ಮಜ್ಞನೆ! ನೀನು ನಿಜಧರ್ಮವನ್ನವಲಂಬಿಸಿ, 'ಬಂಧುಗಳೊಡಗೂಡಿ, ನಿಷ್ಕಂಟಕವಾದ ನಿನ್ನ ತಂದೆಯ ರಾಜ್ಯವನ್ನು ಎಚ್ಚರಿಕೆಯಿಂದ ಚೆನ್ನಾಗಿ ಪರಿಪಾಲಿಸುತ್ತಿರು! ಪ್ರಜೆಗಳೆಲ್ಲರೂ ಮಂತ್ರಜ್ಞರಾದ ವಸಿಷ್ಠಾದಿಗಳೊಡನೆಯೂ ಋತ್ವಿಕ್ಕುಗಳೊಡನೆಯೂ ಸೇರಿ ನಿನಗೆ ಇಲ್ಲಿಯೇ ಸಮಂತ್ರಕವಾಗಿ ಪಟ್ಟಾಭಿಷೇಕವನ್ನು ನಡೆಸಲಿ? ದೇವೇಂದ್ರನು ಲೋಕಗಳೆಲ್ಲವನ್ನೂ ಜಯಿಸಿದಮೇಲೆ ದೇವತೆಗಳಿಂದ ಅಭಿಷಿಕ್ತನಾದಂತೆ, ನೀನೂ ನಮ್ಮಿಂದ ಅಭಿಷಿಕ್ತನಾಗಿ ಪ್ರಜಾಪಾಲನಾರ್ಥವಾಗಿ ಅಯೋಧ್ಯೆಗೆ ಪ್ರಯಾಣಮಾಡು! ದೇವರ್ಷಿಪಿತೃಋಣಗಳೆಂಬ ಮೂರು ಋಣವನ್ನೂ ತೀರಿಸಿಕೊಂಡು, ಶತ್ರುಗಳೆಲ್ಲರನ್ನೂ ಹುಟ್ಟಡಗಿಸಿ,ಇಷ್ಟಬಂಧುಗಳ ಕೋರಿಕೆಗಳೆಲ್ಲವನ್ನೂ ಕೈಗೂಡಿಸಿಕೊಟ್ಟು, ನಮ್ಮ ರಾಜ್ಯವನ್ನೂ ನನ್ನನ್ನೂ ರಕ್ಷಿಸುತ್ತಿರು! ಈಗಲೇ ನಿನ್ನ ಅಭಿಷೇಕೋತ್ಸವವನ್ನು ನೋಡಿ ನಿನ್ನ ಮಿತ್ರರೆಲ್ಲರೂ ಆನಂದಿಸಲಿ! ಈಗಲೇ ನಿನ್ನ ಅಭಿಷೇಕವೃತ್ತಾಂತವನ್ನು ಕೇಳಿ ನಿನ್ನ ಶತ್ರುಗಳೆಲ್ಲರೂ ಭಯದಿಂದ ದಿಕ್ಕುದಿಕ್ಕಿಗೆ ಓಡಿ ಹೋಗಲಿ! ಎಲೈ ಆರ್ಯನೆ! ನನ್ನ ತಾಯಿಗುಂಟಾಗಿರುವ ಲೋಕನಿಂದೆಯನ್ನೂ ತಪ್ಪಿಸಿ, ನಮ್ಮ ತಂದೆಯನ್ನೂ ದೋಷರಹಿತನನ್ನಾಗಿ ಮಾಡು. ಇದೋ? ನಾನು ತಲೆಯನ್ನು ತಗ್ಗಿಸಿ ಪ್ರಣಾಮಮಾಡಿ ಬೇಡುವೆನು. ಲೋಕರಕ್ಷಕನಾದ ಪರಮಾತ್ಮನು ಪ್ರಾಣಿವರ್ಗದಲ್ಲಿ 'ಹೇಗೋ ಹಾಗೆ,' ನೀನು ನನ್ನಲ್ಲಿಯೂ ಬಂಧುಗಳಲ್ಲಿಯೂ, ಇನ್ನೂ ಇಲ್ಲಿರುವ ಸಮಸ್ತಜನರಲ್ಲಿಯೂ ಅನು

ಗೃಹವನ್ನು ತೋರಿಸು! ನಾನು ಇಷ್ಟುಪ್ರಾರ್ಥಿಸಿಕೊಂಡರೂ ಕೇಳದೆ ನೀನು ಕಾಡಿನಲ್ಲಿಯೇ ಇರುವುದಾದರೆ ನಾನೂ ನಿನ್ನೊಡನೆಯೇ ಬರುವೆನು" ಎಂದನು. ಹೀಗೆ ಭರತನು ಸಾಂತ್ವವಾಕ್ಯಗಳನ್ನು ಹೇಳಿ ತಲೆಯನ್ನು ತಗ್ಗಿಸಿ ಪ್ರಾರ್ಥಿಸುತಿದ್ದರೂ, ಧೀರನಾದ ರಾಮನು ಪಿತೃವಾಕ್ಯಪರಿಪಾಲನವ್ರತದಲ್ಲಿಯೇ ದೃಢಸಂಕಲ್ಪವುಳ್ಳವನಾಗಿ ಅಯೋಧ್ಯೆಗೆ ಹಿಂತಿರುಗಲು ಇಷ್ಟಪಡಲೇ ಇಲ್ಲವು. ಅಲ್ಲಿದ್ದ ಜನರೆಲ್ಲರೂ ಆ ರಾಮನ ಅದ್ಭುತವಾದ ಮನಸ್ಥೈರ್ಯವನ್ನು ನೋಡಿ ಸಂತೋಷದಲ್ಲಿಯೂ, ದುಃಖದಲ್ಲಿಯೂ ತೂಗಾಡುತಿದ್ದರು. ಆಗ ರಾಮನನ್ನು ಪ್ರಾರ್ಥಿಸುತ್ತಿರುವ ಭರತನನ್ನು ನೋಡಿ ಅಲ್ಲಿದ್ದ ಋತ್ವಿಕ್ಕುಗಳೂ, ಪುರಜನರೂ,ಸಂಕಟದಿಂದ ಗೋಳಿಡುತ್ತಿರುವ ಮಾತೆಯರೂ ಭರತನನ್ನು ಕೊಂಡಾಡುತ್ತ, ತಾವೂ ರಾಮನನ್ನು ಬಾರಿಬಾರಿಗೂ ಪ್ರಾರ್ಥಿಸುತಿದ್ದರು. ಇಲ್ಲಿಗೆ ನೂರಾರನೆಯ ಸರ್ಗವು

---

{ ಭರತನು ದಶರಥನಲ್ಲಿ ದೋಷಾರೋಪಣಮಾಡಲು, ರಾಮನು ಅದನ್ನುಖಂಡಿಸಿ ತಂದೆಯು ಧರ್ಮವನ್ನೇ ಆಚರಿಸಿದನೆಂದು ಉಪಪಾದಿಸಿದುದು. }

ಹೀಗೆ ಭರತನು ರಾಮನನ್ನು ಗೌರವಿಸಿ ಸಮಾಧಾನವಾಕ್ಯಗಳನ್ನು ಹೇಳುತ್ತ ಆತನನ್ನು ನಿರ್ಬಂಧಿಸುತ್ತಿರಲು,ಆ ಮಾತುಗಳನ್ನು ಕೇಳಿ ರಾಮನು ತನ್ನ ಬಂಧುಗಳಮುಂದೆಯೇ ಆತನನ್ನು ಕುರಿತು"ವತ್ಸ ಭರತನೆ!ನೀನು ನನಗೆ ಹೇಳಿದ ಮಾತುಗಳೇನೋ ಯುಕ್ತವಾಗಿಯೇ. ಇರುವುದು. ರಾಜಶ್ರೇಷ್ಠನಾದ ದಶರಥನಿಗೆ ಕೈಕೇಯಿಯಲ್ಲಿ ಹುಟ್ಟಿದ ನೀನು ಈ ಮಾತುಗಳನ್ನಾಡಿ ನನ್ನಲ್ಲಿ ವಿನಯವನ್ನು ತೋರಿಸುವುದು ಯುಕ್ತವೇಸರಿ! ಅದುಹಾಗಿರಲಿ!ಎಲೆ ವತ್ಸನೆ!ಇನ್ನೊಂದು ವಿಷಯವನ್ನು ಹೇಳುವೆನು ಕೇಳು. [1]ಪೂರ್ವದಲ್ಲಿ ನಮ್ಮ ತಂದೆ

---

1 ಇಲ್ಲಿ ಕೆಲವು ಆಕ್ಷೇಪಣೆಗಳು ಕಂಡುಬರುವುವು. ಏನೆಂದರೆ:- ಕೈಕೇಯಿಯು ತನ್ನ ವಿವಾಹಕಾಲದಲ್ಲಿ ತನ್ನಮಗನಿಗಾಗಿ ಕನ್ಯಾಶುಲ್ಕವಾಗಿಯೇ ಶಪಥಮಾಡಿಕೊಡಲ್ಪಟ್ಟಿರುವ ರಾಜ್ಯವನ್ನು, ಈಗ ಭರತನಿಗೆ ಕೊಡಿಸುವುದಕ್ಕಾಗಿ, ವರರೂಪದಿಂದ ನಿರ್ಬಂಧಿಸಿದುದೇಕೆ? ಎಂದರೆ, ಆವೃತ್ತಾಂತವು ನಡೆದು ಬಹುಕಾಲವಾದುದರಿಂದಲೂ, ಆಗ ತನಗೆ

ಯು ನಿನ್ನ ತಾಯಿಯನ್ನು ಮದುವೆಯಾದ ಕಾಲದಲ್ಲಿಯೇ ನಿನ್ನ ಮಾತಾಮಹನಾದ ಕೇಕಯರಾಜನಿಗೆ, ಅವನ ಮಗಳ ಹೊಟ್ಟೆಯಲ್ಲಿ ಹುಟ್ಟಿದ ಮಗನಿಗೇ ತನ್ನ ರಾಜ್ಯವನ್ನು ಕೊಡುವುದಾಗಿ ಪ್ರತಿಜ್ಞೆಮಾಡಿ ಕೊಟ್ಟಿರುವನು.ಇ

---

ಬಾಲ್ಯವಾಗಿದ್ದುದರಿಂದಲೂ, ಅದರ ಗಮನವಿಲ್ಲದೆ, ಈಗ ಸ್ವಲ್ಪಕಾಲದಲ್ಲಿ ನಡೆದ ವರಪ್ರದಾನವನ್ನೇ ವ್ಯಾಜವಾಗಿಟ್ಟುಕೊಂಡು ಕೇಳಿದುದಾಗಿ ಗ್ರಹಿಸಬೇಕು. ಇದಲ್ಲದೆ ಕೈಕೇಯಿಗೆ ಈಗ ಸ್ವಲ್ಪಕಾಲದ ಹಿಂದೆ ನಡೆದ ಈ ವರದಾನ ವೃತ್ತಾಂತವೂ ಮರೆತು ಹೊಗಿದ್ದುದರಿಂದಲೇ ಮಂಥರೆಯು ಇವಳಿಗೆ ದುರ್ಬೋಧನೆಯನ್ನು ಮಾಡುವಾಗ "ಕಿಂನಸ್ಮರಸಿ ಕೈಕೇಯಿ" ಎಂದು ಈ ವರಗಳನ್ನು ಜ್ಞಾಪಿಸಿರುವಳು. ಹೀಗೆ ಸಮೀಪದಲ್ಲಿ ನಡೆದ ವಿಷಯವನ್ನೇ ಮರೆತು ಬಿಟ್ಟಿರುವ ಕೈಕೇಯಿಗೆ ಬಹುಕಾಲದ ವೃತ್ತಾಂತವು ಮರೆತು ಹೋಗುವುದೇನೂ ಆಶ್ಚರ್ಯವಲ್ಲ. ಮತ್ತು ಇಲ್ಲಿ "ದಶರಥನು ಮೊದಲೇ ತನ್ನ ವಿವಾಹಕಾಲದಲ್ಲಿ ಕನ್ಯಾಶುಲ್ಕಕ್ಕಾಗಿ ಕೈಕೇಯಿಯ ಮಗನಿಗೆ ಕೊಡುವುದಾಗಿ ಒಪ್ಪಿದ್ದ ರಾಜ್ಯವನ್ನು ರಾಮನಿಗೆ ಕೊಡಬೇಕೆಂದು ಪ್ರಯತ್ನಿಸಿದುದು ತಪ್ಪಿತವಲ್ಲವೆ? ಇದರಿಂದ ದಶರಥನು ಅಸತ್ಯವನ್ನು ಹೇಳಿದಂತಾಗಲಿಲ್ಲವೆ?" ಎಂದು ಆಕ್ಷೇಪಣೆಯುಂಟಾಗಬಹುದು. ಆದರೆ "ಉದ್ವಾಹಕಾಲೇ ರತಿಸಂಪ್ರಯೋಗೇ ಪ್ರಾಣಾತ್ಯಯೇ ಸರ್ವಧನಾಪಹಾರೇ । ವಿಪ್ರಸ್ಯಚಾರ್ಥೇಪ್ಯನೃತಂವದೇಯುಃ ಪಂಚಾನೃತಾನ್ಯಾಹುರಪಾತಕಾನಿ" ಎಂಬ ನೀತಿವಾಕ್ಯವನ್ನನುಸರಿಸಿ, ವಿವಾಹಕಾಲದಲ್ಲಿಯೂ, ರತಿಕಾಲದಲ್ಲಿಯೂ, ಪ್ರಾಣಕ್ಕೆ ಅಪಾಯವುಂಟಾದಾಗಲೂ, ತನ್ನ ಸಮಸ್ತಧನವೂ ಕಳವು ಹೋಗುವ ಸಂದರ್ಭಗಳಲ್ಲಿಯೂ, ಬ್ರಾಹ್ಮಣರಿಗೆ ಉಪಕಾರವನ್ನು ಮಾಡಬೇಕಾದ ಸಂದರ್ಭಗಳಲ್ಲಿಯೂ, ಸುಳ್ಳುಹೇಳಿದರೂ ದೋಷವಿಲ್ಲವೆಂದು ಸಿದ್ಧವಾಗುವುದು.

ಆದುದರಿಂದ ದಶರಥನು ತನ್ನ ವಿವಾಹಕಾಲದಲ್ಲಿ ಸುಳ್ಳಾಡಿದುದು ದೋಷವಲ್ಲವೆಂಬ ಭಾವದಿಂದಲೇ, ಹೀಗೆ ನ್ಯಾಯವಾಗಿ ರಾಮನಿಗೆ ಸೇರಿಸಬೇಕಾದ ರಾಜ್ಯವನ್ನು ಅವನಿಗೇ ಕೊಡುವುದಾಗಿ ಪ್ರಯತ್ನಿಸಿದನು. "ಆದರೆ ಕೇಕಯರಾಜನಾದರೂ ದಶರಥನನ್ನು ನಿರ್ಬಂಧಿಸಬೇಕಾಗಿತ್ತಲ್ಲವೆ?" ಎಂದರೆ ಆ ಕೇಕಯರಾಜನೂ ರಾಮನ ಗುಣಗಳನ್ನು ನೋಡಿ, ಆತನೇ ಕೋಸಲರಾಜ್ಯಾಧಿಪತ್ಯಕ್ಕರ್ಹನೆಂಬ ಭಾವವನ್ನಿಟ್ಟು, ತನ್ನ ಮುಮ್ಮಗನಾದ ಭರತನಿಗೆ ರಾಜ್ಯವನ್ನು ಕೊಡಿಸಬೇಕೆಂದು ಪ್ರಯತ್ನಿಸಲಿಲ್ಲವೆಂದು ಗ್ರಹಿಸಬೇಕು.ಸುಮಂತ್ರಾದಿ ಮಂತ್ರಿಗಳೂ ಇವೆಲ್ಲವನ್ನೂ ಚೆನ್ನಾಗಿ ಬಲ್ಲವರಾದುದರಿಂದ ದಶರಥನ ಪ್ರಯತ್ನಕ್ಕೆ ಅನುಮತಿಸಿ ಸುಮ್ಮನಿದ್ದರೆಂದೂ ಗ್ರಹಿಸಬೇಕು.

ದಲ್ಲದೆ ಹಿಂದೆ ದೇವಾಸುರಯುದ್ಧದಲ್ಲಿ ನಮ್ಮ ತಂದೆಯು ನಿನ್ನ ತಾಯಿಯ ಸಾಹಸಕ್ಕೆ ಮೆಚ್ಚಿ ಕೆಲವುವರಗಳನ್ನು ಕೊಡುವುದಾಗಿಯೂ ವಾಗ್ದಾನಮಾಡಿರುವನು. ಇದೆಲ್ಲವನ್ನೂ ಮನಸ್ಸಿನಲ್ಲಿಟ್ಟುಕೊಂಡೇ ಯಶಸ್ವಿನಿಯಾದ ನಿನ್ನತಾಯಿಯು ತನಗೆ ಪ್ರತಿಜ್ಞೆಮಾಡಿಕೊಟ್ಟ ಆ ಎರಡುವರಗಳನ್ನು ಕೊಡಬೇಕೆಂದು ಕೇಳಿರುವಳು. ಈ ವರಗಳನ್ನು ಕೇಳುವುದಕ್ಕೆಮೊದಲೇ ಆಕೆಯು ತಾನು ಕೇಳಿದುದನ್ನು ತಪ್ಪದೇ ನಡೆಸಿಕೊಡುವುದಾಗಿ ನಮ್ಮತಂದೆಯಿಂದ ಶಪಥಮಾಡಿಸಿಯೂ ಇರುವಳು. ಆ ಎರಡುವರಗಳಲ್ಲಿ ಒಂದಕ್ಕೆ ನಿನಗೆ ರಾಜ್ಯವನ್ನು ಕೊಡಬೇಕೆಂದೂ, ಮತ್ತೊಂದಕ್ಕೆ ನನ್ನನ್ನು ಕಾಡಿಗೆ ಕಳುಹಿಸಬೇಕೆಂದೂ ಕೇಳಿರುವಳು. ನಮ್ಮತಂದೆಯುಕೊಟ್ಟಮಾತಿಗೆ ಕಟ್ಟುಬಿದ್ದು, ಅವಳಿಗೆ ಸಲ್ಲಿಸಬೇಕಾದ ಎರಡು ವರಗಳ ಸಾಲಗಳನ್ನು ತೀರಿಸಿಕೊಂಡಿರುವನು. ಈ ಕಾರಣದಿಂದಲೇ ನನ್ನನ್ನು ಹದಿನಾಲ್ಕುವರ್ಷಗಳವರೆಗೆ ಕಾಡಿನಲ್ಲಿದ್ದುಬರಬೇಕೆಂದು ನಿಯಮಿಸಿರುವನು.ಇದೆಲ್ಲವೂ ವರದಾನದಿಂದ ಸಂಭವಿಸಿದುದೇ ಹೊರತು, ನಮ್ಮತಂದೆಯು ಕಾಮವಶದಿಂದಮಾಡಿದ ಕೆಲಸವೆಂದೆಣಿಸಬೇಡ ! ಆತನ ಮಾತಿನಂತೆಯೇ ನಾನು ಸೀತಾಲಕ್ಷ್ಮಣರೊಡನೆ? ಈ ನಿರ್ಜನವಾದ ಕಾಡಿಗೆ ಬಂದು ವಾಸಮಾಡುತ್ತಿರುವೆನು. ಈಗ ಇದನ್ನು ತಪ್ಪಿಸುವುದಕ್ಕೆ ಯಾರಿಂದ ತಾನೇ ಸಾಧ್ಯವು?ತಂದೆಯ ಸತ್ಯವನ್ನು ಕಾಪಾಡಿಡಬೇಕಾದುದು ಮಕ್ಕಳಾದ ನಮಗೆ ಅವಶ್ಯಕರ್ತವ್ಯವಲ್ಲವೆ? ಆದುದರಿಂದ ಎಲೆ ವತ್ಸನೆ ! ನೀನೂ ತಂದೆಯ ಸತ್ಯವನ್ನು ಕಾಪಾಡುವುದಕ್ಕೆ ಪ್ರಯತ್ನಿಸು. ಆತನ ಮಾತಿಗೆ ವಿರೋಧವಾಗಿ ನಡೆಯಬೇಡ! ಅಯೋಧ್ಯೆಗೆ ಹೋಗಿ ಈಗಲೇ ರಾಜ್ಯಾಭಿಷೇಕವನ್ನುವಹಿಸು. ಈ ಭೂಮಂಡಲಕ್ಕೆ ಪ್ರಭುವಾಗಿ, ಧರ್ಮಜ್ಞನಾಗಿ ರಾಜಾಧಿರಾಜನೆನಿಸಿಕೊಂಡಿದ್ದ ನಮ್ಮ ತಂದೆಯ ಸಾಲವನ್ನು ತೀರಿಸಿ ಆತನನ್ನು ಋಣಮುಕ್ತನನ್ನಾಗಿಮಾಡು. ಒಂದುವೇಳೆ ಆತನಲ್ಲಿ ನಿನಗೆ ಕೋಪವಿದ್ದರೂ ನನಗಾಗಿ ನೀನು ರಾಜ್ಯವನ್ನು ವಹಿಸು! ನಿನ್ನತಾಯಿಯನ್ನೂ ಸಂತೋಷಪಡಿಸು. ಎಲೆ ವತ್ಸನೆ! ಪೂರ್ವದಲ್ಲಿ ಗಯವೆಂಬ ಕ್ಷೇತ್ರದಲ್ಲಿ ಯಾಗಮಾಡುತಿದ್ದ ಮಹಾಯಶಸ್ವಿಯಾದ ಗಯನೆಂಬವನು ಹೇಳಿದ ನೀತಿವಾಕ್ಯವನ್ನು ನೀನು ಕೇಳಿಲ್ಲವೆ?ಆತನು ತಂದೆತಾಯಿಗಳ ವಿಷಯದಲ್ಲಿ ಹೇಗೆ ನಡೆದುಕೊಳ್ಳಬೇಕೆಂಬುದನ್ನು ವ್ಯಕ್ತವಾಗಿ ಹೇಳಿರುವನಲ್ಲವೆ? ಪುನ್ನಾಮವಾದ ನರ

ಕದಿಂದ ತಂದೆತಾಯಿಗಳನ್ನು ತಪ್ಪಿಸಿ ಕಾಪಾಡುವವನೇ ಪುತ್ರನೆನಿಸುವನು. ಅವರ ಹೆಸರನಲ್ಲಿ ಇಷ್ಟಾಪೂರ್ತಗಳೆಂಬ ಸತ್ಕಾರ್ಯಗಳನ್ನು ನಡೆಸಿ ಆ ಪಿತೃಗಳನ್ನು ಪುಣ್ಯಲೋಕಕ್ಕೆ ಸೇರಿಸುವವನೇ ಪುತ್ರನೆನಿಸುವನು. ಲೋಕದಲ್ಲಿ ತಂದೆತಾಯಿಗಳು ಮಕ್ಕಳಾಗಬೇಕೆಂದು ಅಪೇಕ್ಷಿಸುವುದೇಕೆ? ಆ ಮಕ್ಕಳೆಲ್ಲರೂ ಗುಣಶಾಲಿಗಳಾಗಿಯೂ, ವಿದ್ಯಾವಂತರಾಗಿಯೂ, ಇರಬೇಕೆಂಬುದಲ್ಲದೆ ಅನೇಕಪುತ್ರರಲ್ಲಿ ಒಬ್ಬನಾದರೂ ಗಯೆಗೆ ಹೋಗಿ ಪಿತೃಗಳಿಗೆ ತೃಪ್ತಿಯನ್ನುಂಟುಮಾಡಬೇಕೆಂಬುದೇ ಅವರ ಮುಖ್ಯೋದ್ದೇಶವು. ಇದಕ್ಕಾಗಿಯೇ ತಂದೆತಾಯಿಗಳು ಹೆಚ್ಚಾಗಿ ಸಂತಾನವನ್ನಪೇಕ್ಷಿಸುವರು. ಸಮಸ್ತರಾಜರ್ಷಿಗಳೂ ಹೀಗೆಯೇ ನಿಶ್ಚಯಿಸಿರುವರು ಆದುದರಿಂದ ಎಲೈ ಪುರುಷಶ್ರೇಷ್ಠನಾದ ಭರತನೆ! ನಮ್ಮ ತಂದೆಯನ್ನು ನರಕದಿಂದ ತಪ್ಪಿಸಿ ರಕ್ಷಿಸು! ಈಗಲೇ ನೀನು ಅಯೋಧ್ಯೆಗೆ ಹೊರಟು, ಶತ್ರುಘ್ನನೊಡನೆಯೂ, ಇತರಬ್ರಾಹ್ಮಣರೊಡನೆಯೂ ಸೇರಿ ಧರ್ಮಪರಿಪಾಲನದಿಂದ ದೇಶದ ಪ್ರಜೆಗಳನ್ನು ಸಂತೋಷಪಡಿಸು. ಇತ್ತಲಾಗಿ ನಾನೂ ಈ ಸೀತೆಯೊಡನೆಯೂ ಈ ಲಕ್ಷ್ಮಣನೊಡನೆಯೂ ಕೂಡಿ ದಂಡಕಾರಣ್ಯಕ್ಕೆ ಹೋಗುವೆನು. ವತ್ಸ ಭರತನೆ! ನೀನು ಅತ್ತಲಾಗಿ ಅಯೋಧ್ಯೆಯಲ್ಲಿ ಪ್ರಭುವಾಗಿದ್ದು ಧರ್ಮಪರಿಪಾಲನದಿಂದ ಪ್ರಜೆಗಳನ್ನು ಸಂತೋಷಪಡಿಸು! ನಾನೂ ಇತ್ತಲಾಗಿ ಕಾಡಿನಲ್ಲಿರುವ ಮೃಗಗಳನ್ನು ರಂಜಿಸುತ್ತ ಕ್ರೂರಮೃಗಗಳನ್ನು ಶಿಕ್ಷಿಸಿ ಇಲ್ಲಿನ ಪ್ರಭುತ್ವವನ್ನು ನಡೆಸುತ್ತಿರುವೆನು. ಮನಸ್ಸಿನಲ್ಲಿ ಸ್ವಲ್ಪವೂ ಚಿಂತೆಯನ್ನಿಟ್ಟುಕೊಳ್ಳದೆ ಸಂತೋಷದಿಂದ ಈಗಲೇ ನೀನು ಅಯೋಧ್ಯೆಗೆ ಹೋಗು! ನಾನೂ ಸಂತೋಷದಿಂದಲೇ ದಂಡಕಾರಣ್ಯದಲ್ಲಿದ್ದು ಬರುವೆನು. ಎಲೆ ವತ್ಸನೆ! ಅತ್ತಲಾಗಿ ನಿನ್ನ ತಲೆಯಮೇಲೆ ನಮ್ಮ ರಾಜ್ಯಚಿಹ್ನವಾದ ಶ್ವೇತಚ್ಛತ್ರವು ನಿನಗೆ ಬಿಸಿಲಿನ ತಾಪವನ್ನು ನೀಗಿಸಿ ತಂಪಾದ ನೆರಳನ್ನುಂಟುಮಾಡಲಿ! ನಾನೂ ಇತ್ತಲಾಗಿ ಅದಕ್ಕಿಂತಲೂ ಅತಿಶಯವಾದ ಈ ಕಾಡುಮರಗಳ ತಂಪಾದ ನೆರಳಿನಲ್ಲಿ ನಿನಗಿಂತಲೂ ಮೇಲೆ ಸುಖದಿಂದಿರುವೆನು. ಅಲ್ಲಿ ನಿನಗೆ ಮಹಾಧೀಮಂತನಾದ ಶತ್ರುಘ್ನನು ಸಹಾಯಕನಾಗಿರುವನು. ಇಲ್ಲಿ ನನಗೆ ಪ್ರಾಣಸ್ನೇಹಿತನಂತಿರುವ ಲಕ್ಷ್ಮಣನು ಬೇಕಾದ ಸಹಾಯಗಳನ್ನು ಮಾಡುತ್ತಿರುವನು. ಎಲೆ ವತ್ಸನೆ! ಒಂದು ವಿಷಯವನ್ನು ಮಾತ್ರ ಮುಖ್ಯವಾಗಿ ಮನಸ್ಸಿನಲ್ಲಿಡು! ದಶರಥನಿಗೆ

ನಾವು ನಾಲ್ಕುಮಂದಿಯೂ ಮಕ್ಕಳಾಗಿ ಹುಟ್ಟಿರುವೆವು. ಲೋಕವೆಲ್ಲವೂ ನಮ್ಮನ್ನು ಸತ್ಪುತ್ರರೆಂದು ಕೊಂಡಾಡುತ್ತಿರುವುದು. ನಾವೆಲ್ಲರೂ ಯಾವಕಾರ್ಯವನ್ನಾದರೂ ಸಾಧಿಸುವುದಕ್ಕೆ ಸಮರ್ಥರಾಗಿರುವೆವು. ಹೀಗಿರುವಾಗಲೂ ನಮ್ಮತಂದೆಯ ಸತ್ಯವನ್ನು ನಾವು ಕಾಪಾಡಬೇಡವೇ? ಇದು ನಮ್ಮ ಅವಶ್ಯಕರ್ತವ್ಯವಲ್ಲವೆ? ಆದುದರಿಂದ ಎಲೆ ಭರತನೆ! ನಾವಿಬ್ಬರೂ ನಮನಮಗೆ ನಿರ್ಣೀತವಾದ ಕಾರ್ಯವನ್ನು ಸಂತೋಷದಿಂದ ನಡೆಸಿಬಿಡುವೆವು"ಎಂದನು. ಇಲ್ಲಿಗೆ ನೂರೇಳನೆಯಸರ್ಗವು.

---

{ರಾಮನು ಭರತನನ್ನುವಾದದಿಂದ ಮಾತಾಡದ ಹಾಗೆ ಮಾಡಿದುದನ್ನು ನೋಡಿ. ಜಾಬಾಲಿಮುನಿಯು ನಾಸ್ತಿಕ್ಯವಾದದಿಂದ ರಾಮನಮನಸ್ಸನ್ನು ಹಿಂತಿರುಗಿಸುವುದಕ್ಕೆ ಪ್ರಯತ್ನಿಸಿದುದು.}

ಹೀಗೆ ರಾಮನು ಭರತನಿಗೆ ಪಿತೃವಾಕ್ಯಪರಿಪಾಲನವೆಂಬ ಧರ್ಮವನ್ನು ಬೋಧಿಸಿ ಸಮಾಧಾನಪಡಿಸುತ್ತಿರುವುದನ್ನು ನೋಡಿ, ಅಲ್ಲಿದ್ದ ಜಾಬಾಲಿಯೆಂಬ ಬ್ರಾಹ್ಮಣೋತ್ತಮನೊಬ್ಬನು, ಹೇಗಾದರೂ ರಾಮನನ್ನು ಹಿಂತಿರುಗಿಸಿ ಕರೆದುಕೊಂಡು ಹೋಗಬೇಕೆಂಬುದಕ್ಕಾಗಿ,ಧರ್ಮಜ್ಞನಾದ ಆರಾಮನಿಗೆ ಧರ್ಮವಿರುದ್ಧವಾದ ನಾಸ್ತಿಕವಾದಗಳನ್ನು ಹೇಳಲಾರಂಭಿಸಿ, "ರಾಮಾ! ಇದೀಗ ಬಹಳಚೆನ್ನಾಯಿತು! ನಿನಗೂ ಹೀಗೆ ನಿರರ್ಥಕವಾದ ಬುದ್ಧಿಯುಂಟಾಗಬಹುದೆ? ವಿವೇಕಿಯಾಗಿ ಬುದ್ಧಿಶಾಲಿಯೆನಿಸಿಕೊಂಡ ನೀನೂ ಹೀಗೆ ಏನೂತಿಳಿಯದ ಸಾಮಾನ್ಯಮನುಷ್ಯನಂತೆ ಮರುಳಾಗಬಹುದೆ? ಈ ಹುಚ್ಚುತನವನ್ನು ಬಿಟ್ಟುಬಿಡು! ಯಾವನಿಗೆ ಯಾವನು ನಂಟನು? ಯಾರಿಂದ ಯಾರಿಗೇನಾಗಬೇಕು? ಮನುಷ್ಯನು ಹುಟ್ಟುವಾಗಲೂ ಒಬ್ಬನೇ ಹುಟ್ಟುವನು, ಸಾಯುವಾಗಲೂ ಒಬ್ಬನೇಸಾಯುವನು! ಹೀಗಿರುವಾಗ "ನನ್ನತಂದೆ, ನನ್ನತಾಯಿ" ಎಂಬ ದುರಭಿಮಾನದಿಂದ ಹಿಗ್ಗುವವನು ಹುಚ್ಚನಲ್ಲವೆ? ಲೋಕದಲ್ಲಿ ಯಾರಿಗೆಯಾರಾಗುವವರು? ಒಬ್ಬರಿಗೊಬ್ಬರಿಗೆ ಸಂಬಂಧವೇನು? ಊರಿಂದೂರಿಗೆ ಪ್ರಯಾಣಮಾಡುವವನು ದಾರಿಯಲ್ಲಿ ಯಾವುದಾದರೂ ಒಂದು ಸತ್ರದಲ್ಲಿಯಾಗಲಿ,ಗ್ರಾಮದಲ್ಲಿಯಾಗಲಿ ವಿಶ್ರಾಂತಿಗಾಗಿ ಇಳಿಯು

ವನು. ಅಲ್ಲಿಯೇ ಆರಾತ್ರಿಯಲ್ಲಿ ಮಲಗಿರುವುದೂ ಉಂಟು. ಬೆಳಗಾದ ಕೂಡಲೆ ಆತನು ಅವೆಲ್ಲವನ್ನೂ ಬಿಟ್ಟು ತನ್ನದಾರಿಯನ್ನು ಹಿಡಿದು ತಾನು ಹೊರಟು ಹೋಗುವನಲ್ಲವೆ? ಅಲ್ಲಿಂದ ಬಿಟ್ಟು ಹೋದಮೇಲೆ ಅವನಿಗೆ ಆಸತ್ರದ ಚಿಂತೆಯೇತಕೆ? ಆದರಂತೆಯೇ ಮನುಷ್ಯರಿಗೆ ತಂದೆ, ತಾಯಿ, ಬಂಧು, ಬಳಗ, ಮನೆ,ಮಠವೆಂಬುದೆಲ್ಲವೂ ಸ್ವಲ್ಪಕಾಲದಕೂಡಾಟಕ್ಕೇ ಹೊರತು ಬೇರೆಯಲ್ಲ. ವಿವೇಕಿಗಳಾದವರು ಇದಕ್ಕಾಗಿ ಹಿಗ್ಗುವುದೂ ಇಲ್ಲ. ಆದುದರಿಂದ ಎಲೈ ರಾಮನೆ! ನಿನಗೆ ತಂದೆಯಿಂದ ಬಂದ ರಾಜ್ಯವನ್ನು ಬಿಟ್ಟು ಕಾಡಿಗೆ ಹೋಗಿ ಕಷ್ಟಪಡುವುದು ಸರ್ವಥಾ ಉಚಿತವಲ್ಲ. ನಿನ್ನವಯಸ್ಸೇನು? ನಿನ್ನ ಕುಲವೇನು? ನಿನ್ನ ಸಾಮರ್ಥ್ಯವೇನು? ಇವೆಲ್ಲವನ್ನೂ ಪರ್ಯಾಲೋಚಿಸಿ ನೋಡು! ನಿನಗೆ ವನವಾಸವೆಂಬುದು ಎಂದಿಗೂ ಉಚಿತವಲ್ಲ. ಈ ಪ್ರಯತ್ನವನ್ನು ಬಿಟ್ಟುಬಿಡು! ಭಾಗ್ಯಸಮೃದ್ಧವಾದ ಅಯೋಧ್ಯೆಗೆ ಹೋಗಿ ಪಟ್ಟಾಭಿಷೇಕವನ್ನು ವಹಿಸು! ಆ ಪುರದೇವತೆಯೇ ನಿನ್ನನ್ನು ಇದಿರುನೋಡುತ್ತ ವ್ರತವನ್ನು ಹಿಡಿದು ಕಾದಿರುವಳು. ರಾಮಾ! ನೀನು ರಾಜಕುಮಾರನಲ್ಲವೆ? ಇದು ನಿನಗೆ ಸಮಸ್ತ ರಾಜಭೋಗಗಳನ್ನೂ ಸ್ವೇಚ್ಛೆಯಾಗಿ ಅನುಭವಿಸತಕ್ಕ ಯೌವನಕಾಲವಲ್ಲವೆ? ಬಹಳಚೆನ್ನಾಯಿತು! ಅಯೋಧ್ಯೆಗೆ ಹಿಂತಿರುಗು! ಸ್ವರ್ಗದಲ್ಲಿ ದೇವೇಂದ್ರನು ಹೇಗೋಹಾಗೆ ಬೇಕಾದ ಭೋಗಗಳನ್ನನುಭವಿಸುತ್ತ ಸಂತೋಷದಿಂದಿರು! ದಶರಥನಾರು? ನೀನಾರು? ಅವನೊಬ್ಬ ರಾಜನು. ನೀನೊಬ್ಬ ರಾಜನು. ಇಷ್ಟುಮಾತ್ರವಲ್ಲದೆ ಅವನಿಗೂ ನಿನಗೂ ಸಂಬಂಧವೇನು? ಅವನೇ ಬೇರೆ! ನೀನೇಬೇರೆ! ನಿಮ್ಮಿಬ್ಬರಿಗೂ ಏನೂ ಸಂಬಂಧವಿಲ್ಲ. ಆದುದರಿಂದ ನಾನು ಹೇಳಿದಂತೆ ಕೇಳು. ಪುತ್ರೋತ್ಪತ್ತಿಗೆ ತಂದೆಯೆಂಬವನು ಕೇವಲ ಸಾಧನಮಾತ್ರವೇ ಹೊರತು ಬೇರೆಯಲ್ಲ. ಋತುಮತಿಯಾದತಾಯಿಯಿಂದ ಧರಿಸಲ್ಪಟ್ಟ ಬಿಳೀರಕ್ತಬಿಂದುವುಮಾತ್ರವೇ ಮನುಷ್ಯನ ಉತ್ಪತ್ತಿಗೆ ಮುಖ್ಯಕಾರಣವು. ಮನುಷ್ಯನಾಗಿ ಹುಟ್ಟಿದವನು ಕೊನೆಗಾಲಕ್ಕೆ ಎಲ್ಲಿ ಹೋಗಿಸೇರಬೇಕೋ ಆ ಪಂಚಭೂತಗಳಲ್ಲಿಯೇ ನಿನ್ನ ತಂದೆಯು ಹೋಗಿ ಸೇರಿಬಿಟ್ಟಿರುವನು. ಪ್ರಪಂಚದ ನಡೆವಳಿಕೆಯೇ ಹೀಗಿರುವುದು. ಅಯ್ಯೋ! ನೀನು ಕೇವಲ ಭ್ರಾಂತಿಯಿಂದ ಮರುಳಾಗಿರುವೆ! ಭಾಗ್ಯವಿದ್ದಾಗ ಭೋಗಗಳನ್ನನುಭವಿಸಬೇಕು! ಹಾಗಿಲ್ಲದೆ ಕೇವಲಧರ್ಮಾರ್ಜನೆಗಾಗಿಯೂ, ದ್ರವ್ಯಾರ್ಜನೆಗಾಗಿ

ಯೂ ಕಷ್ಟಪಡುವವರನ್ನು ನೋಡಿದರೆ ನನಗೆ ಬಹಳಪರಿತಾಪವುಂಟಾಗು
ವುದು. ಅಂತವರಿಗೆ ಇಲ್ಲಿಯೂ ಸುಖವಿಲ್ಲ. ಪರಲೋಕದಲ್ಲಿಯೂ ಸುಖವಿಲ್ಲ.
ಲೋಕದಲ್ಲಿ ಜನಗಳ ಅಜ್ಞಾನವನ್ನು ನಾನೇನೆಂದು ಹೇಳಲಿ! ಅಷ್ಟಕಾ
ಶ್ರಾದ್ಧಗಳೆಂದೂ, ಆಬ್ದಿಕಶ್ರಾದ್ಧಗಳೆಂದೂ ನಿರರ್ಥಕವಾಗಿ ವೆಚ್ಚಮಾಡು
ವರು. ಆದರಿಂದ ತಾವೂ ತಿಂದಹಾಗಲ್ಲ. ಸತ್ತವರ ಹೆಸರನ್ನು ಹೇಳಿ ಅನ್ನ
ಹಾಕುವರು. ಸತ್ತವನು ತಿನ್ನುವುದು ಹೇಗೆ? ಪಿಂಡವನ್ನು ಹಾಕಿದುದರಿಂದ
ಪ್ರಯೋಜನವೇನು? ಅಥವಾ ಸತ್ತವನ ಹೆಸರನ್ನು ಹೇಳಿ ಮತ್ತೊಬ್ಬನಿಗೆ
ಅನ್ನವನ್ನು ಹಾಕಿಬಿಟ್ಟಮಾತ್ರಕ್ಕೆ ಏನಾದ ಹಾಗಾಯಿತು? ಒಬ್ಬನ ಹೊ
ಟ್ಟೆಯನ್ನು ತುಂಬಿಸುವುವುದಕ್ಕಾಗಿ ಮತ್ತೊಬ್ಬನಿಗೆ ಅನ್ನವನ್ನು ಹಾಕುವು
ದುಂಟೆ? ಆದರಿಂದ ಅವನಿಗೆ ತೃಪ್ತಿಯುಂಟುಮಾಡಿದಂತಾಗುವುದೆ? ಹಾಗಿ
ದ್ದರೆ ಊರುಬಿಟ್ಟು ಹೋಗಿರುವ ನಮ್ಮ ಇಷ್ಟಬಂಧುಮಿತ್ರರ ಹೊಟ್ಟೆಯ
ನ್ನು ತುಂಬುವುದಕ್ಕಾಗಿ ಕಣ್ಣಿಗೆ ಸಿಕ್ಕಿದ ಬೇರೆಯಾರನ್ನಾದರೂ ಕರೆದು ಏಕೆ
ಅನ್ನವನ್ನು ಹಾಕಬಾರದು? ರಾಮಾ! ಆದುದರಿಂದ ಈ ಶ್ರಾದ್ಧಾದಿಗಳಿಂ
ದೇನೂ ಪ್ರಯೋಜನವಿಲ್ಲ. ಇದಕ್ಕಾಗಿ ವಿಧಿಸಲ್ಪಟ್ಟಿರುವ ಶಾಸ್ತ್ರಗಳನ್ನೂ
ನೀನು ನಂಬಬೇಡ! ಉಪಾಯಶಾಲಿಗಳಾದ ಕೆಲವು ವೈದಿಕರು ಇತರರಿಂದ
ಹಣವನ್ನು ಕಿತ್ತುಕೊಳ್ಳುವುದಕ್ಕಾಗಿಯೇ ಹೀಗೆ “ ಯಾಗಮಾಡಬೇಕು !
ದಾನಮಾಡಬೇಕು! ದೀಕ್ಷೆಯಲ್ಲಿರಬೇಕು! ತಪಸ್ಸುಮಾಡಬೇಕು! ಯಾವುದ
ರಲ್ಲಿಯೂ ಆಸೆಯನ್ನಿಡಬಾರದು!”ಎಂಬಿವೇ! ಮೊದಲಾದ ವಿಧಿಗಳನ್ನು ಕಾಣಿ
ಸಿ, ದೊಡ್ಡದೊಡ್ಡಗ್ರಂಥಗಳನ್ನು ಬರೆದಿಟ್ಟಿರುವರು. ಆದುದರಿಂದ,ರಾಮಾ!
ಪರಲೋಕವೆಂಬ ಭ್ರಾಂತಿಯನ್ನೇ ಬಿಟ್ಟುಬಿಡು! ಇದಿರಿಗೆ ಕಾಣುವುದನ್ನು
ಮಾತ್ರನಂಬು! ಪರೋಕ್ಷವಿಷಯಗಳನ್ನು ನಂಬಬೇಡ! ಸರ್ವಜನ ಸಮ್ಮತ
ವಾದ ಈ ಬುದ್ಧಿಯನ್ನೇ ಮುಂದಿಟ್ಟುಕೊಂಡು ಭರತನ ಕೋರಿಕೆಯಂತೆ
ರಾಜ್ಯವನ್ನಂಗೀಕರಿಸಿ ಬೇಕಾದ ಭೋಗಗಳನ್ನನುಭವಿಸುತ್ತ ಸುಖದಿಂದಿರು”
ಎಂದನು. ಇಲ್ಲಿಗೆ ನೂರೆಂಟನೆಯ ಸರ್ಗವು.

---

{ರಾಮನು ಜಾಬಾಲಿಯ ಮತವನ್ನು ನಿರಾಕರಿಸಿ, ವೈದಿಕಮತವನ್ನು ಸ್ಥಾಪಿಸಿದುದು.}

ದೃಢಮನಸ್ಸುಳ್ಳವರಿಗೆಲ್ಲಾ ಮೇಲೆನಿಸಿಕೊಂಡ ರಾಮನಾದರೋ ಜಾಬಾಲಿಯು ಹೇಳಿದ ಈ ಮಾತುಗಳೆಲ್ಲವನ್ನೂ ಕೇಳಿ, ಆತನಲ್ಲಿ ಭಕ್ತಿಯನ್ನೂ, ತನ್ನ ದೃಢಬುದ್ಧಿಯನ್ನೂ ಬಿಡದೆ, ಆತನನ್ನು ಕುರಿತು, "ಎಲೈ ಬ್ರಾಹ್ಮಣೋತ್ತಮನೆ! ನೀನು ನನಗೆ ಕ್ಷೇಮಚಿಂತಕನಾಗಿ, ನನಗೆ ಪ್ರಿಯವನ್ನುಂಟುಮಾಡಬೇಕೆಂದು ಅಕಾರ್ಯವನ್ನು ಕಾರ್ಯದಂತೆಯೂ, ಅಪಥ್ಯವಾದ ವಿಷಯಗಳನ್ನೇ ಪಥ್ಯದಂತೆಯೂ ನಿರೂಪಿಸಿ ಹೇಳಿರುವೆಯೇ ಹೊರತು ಬೇರೆಯಲ್ಲ. ಪಾಪಕಾರ್ಯಗಳಲ್ಲಿಬಿದ್ದು, ಮರ್ಯಾದೆಯನ್ನು ಮೀರಿ, ಕೆಟ್ಟನಡತೆಯುಳ್ಳಿರುವವನಿಗೆ ಸಜ್ಜನರಗೋಷ್ಠಿಯಲ್ಲಿ ಎಂದಿಗೂ ಮಾನವುಂಟಾಗಲಾರದು. ಮನುಷ್ಯನು ಉತ್ತಮಕುಲದವನೇ! ಅಥವಾ ನೀಚಕುಲದವನೇ;ನಿಜವಾದ ವೀರ್ಯವುಳ್ಳವನೆ, ಅಥವಾ ಕೇವಲ ಗರ್ವವುಳ್ಳವನೆ; ಶುಚಿಯೇ ಅಥವಾ ಅಶುಚಿಯೆ; ಎಂಬುದನ್ನು ಅವನವನ ನಡತೆಯೇ ತೋರಿಸಿಕೊಡುವುದು. ನಾನು ಅನಾರ್ಯನಾಗಿ ಆರ್ಯನಂತೆಯೂ, ಅಶುಚಿಯಾಗಿ ಶುಚಿಯಂತೆಯೂ, ಸಾಧುಲಕ್ಷಣಗಳೊಂದೂ ಇಲ್ಲದವನಾಗಿ ಸಾಧುವಿನಂತೆಯೂ, ದುಶ್ಶೀಲನಾಗಿ ಸುಶೀಲನಂತೆಯೂ ನಟಿಸುತ್ತ, ಧರ್ಮವ್ಯಾಜದಿಂದ ಲೋಕನಿಂದಿತವಾದ ಅಧರ್ಮಕ್ಕೆ ಪ್ರವರ್ತಿಸಬೇಕೆಂದು ಹೇಳುವೆಯಾ! ಲೋಕದ ನಡತೆಗೂ ಶಾಸ್ತ್ರವಿಧಿಗೂ ವಿರುದ್ಧವಾಗಿ ಶ್ರೇಯಸ್ಕರವಲ್ಲದ ಈ ಮಾರ್ಗವನ್ನು ನಾನು ಹಿಡಿದರೆ, ಯುಕ್ತಾಯುಕ್ತ ವಿವೇಕವುಳ್ಳ ಯಾವ ಪುರುಷನು ತಾನೇ ನನ್ನನ್ನು ಗೌರವಿಸುವನು? ಆಗ ಲೋಕವೆಲ್ಲವೂ ನನ್ನನ್ನು ದುರ್ವೃತ್ತನೆಂದೂ, ಲೋಕನಿಂದಿತನೆಂದೂ ಹೀಗಳೆಯದಿರುವುದೆ! ನಾನು ಆಡಿದ ಮಾತಿಗೆ ತಪ್ಪಿ, ಈ ಹೀನವೃತ್ತಿಯನ್ನವಲಂಬಿಸಿದರೆ, ಆಮೇಲೆ ನಾನು ಯಾರನ್ನು ತಾನೇ ಸರಿಯಾದ ನಡತೆಯಲ್ಲಿರಿಸಬಲ್ಲೆನು? ನನಗೂ ಬೇರೆಯಾವರೀತಿಯಿಂದ ಸ್ವರ್ಗಾದಿ ಪುಣ್ಯಲೋಕಗಳು ಸಿದ್ಧಿಸುವುವು? ರಾಜನಾದ ನನ್ನನ್ನು ನೋಡಿ ಈ ಸಮಸ್ತಲೋಕವೂ ತಮ್ಮ ತಮ್ಮ ಸ್ವೇಚ್ಛಾನುಸಾರವಾಗಿ ನಡೆಯಲಾರಂಭಿಸಿ ಬಿಡುವುದಲ್ಲವೆ? "ರಾಜನಂತೆಯೇ ಪ್ರಜೆಗಳು" ಎಂಬ ಲೋಕವಾರ್ತೆಯನ್ನು ನೀನು ಕೇಳಿಲ್ಲವೆ? ಸತ್ಯ ಮತ್ತು ಅಹಿಂಸೆಯೆಂಬುದೆರಡೇ ಪುರಾತನವಾದ ರಾಜಧರ್ಮ

ವು. ರಾಜ್ಯವೆಂಬುದು ಸತ್ಯದಲ್ಲಿಯೇ ಅಡಗಿರುವುದು. ಲೋಕವೆಲ್ಲವೂ ಸತ್ಯದಿಂದಲೇ ನಿಂತಿರುವುದು. ದೇವತೆಗಳಾಗಲಿ, ಋಷಿಗಳಾಗಲಿ ಸತ್ಯವೊಂದನ್ನೇ ಮೇಲಾದ ಧರ್ಮವೆಂದೆಣಿಸಿರುವರು. ಸತ್ಯವಾದಿಯಾದವನಿಗೆ ಯಾವಾಗಲೂ ಉತ್ತಮಗತಿಯು ತಪ್ಪದು. ಸುಳ್ಳಾಡುವವನನ್ನು ಕಂಡಾಗ ಸರ್ಪವನ್ನು ಕಂಡಂತೆ ಜನರು ನಡುಗುವರು. ಸತ್ಯವೇ ಲೋಕದಲ್ಲಿ ಉತ್ತಮವಾದ ಧರ್ಮವು. ಸತ್ಯವೆಂಬುದೇ ಸ್ವರ್ಗಕ್ಕೆ ಮೂಲವು. ಲೋಕದಲ್ಲಿ ಸತ್ಯವೆಂಬುದೇ ಪರದೈವವು. ಭಾಗ್ಯಲಕ್ಷ್ಮಿಯೂ ಸತ್ಯವನ್ನೇ ಆಶ್ರಯಿಸಿರುವುದು. ಸಮಸ್ತಕ್ಕೂ ಸತ್ಯವೇ ಮೂಲವು. ಸತ್ಯಕ್ಕಿಂತಲೂ ಮೇಲಾದ ಪದವಿಯೊಂದೂ ಇಲ್ಲವು. ದಾನವಾಗಲಿ, ಧರ್ಮಕಾರ್ಯಗಳಾಗಲಿ, ಯಜ್ಞಯಾಗಾದಿಗಳಾಗಲಿ, ತಪಸ್ಸಾಗಲಿ, ವೇದಗಳಾಗಲಿ, ಸಮಸ್ತವೂ ಸತ್ಯದಲ್ಲಿಯೇ ಅಡಗಿರುವುವು. ಆದುದರಿಂದ ಸತ್ಯವನ್ನು ಎಂದಿಗೂ ಬಿಡಬಾರದು. ಪ್ರಪಂಚದಲ್ಲಿ ಈ ಸತ್ಯದ ಬಲದಿಂದ ಲೋಕವನ್ನಾಳುವವನೊಬ್ಬನು, ಕುಲವನ್ನಾಳುವವನೊಬ್ಬನು, ಸ್ವರ್ಗಪದವಿಯಲ್ಲಿರುವವನೊಬ್ಬನು; ಹೀಗಿರುವಾಗ ನಾನು ನಮ್ಮ ತಂದೆಯ ಸತ್ಯವನ್ನು ಕಾಪಾಡುವುದಕ್ಕೂ ಹಿಂಜರಿಯಬಹುದೆ? ಸತ್ಯವೆಂಬುದೇ ನನ್ನ ಮುಖ್ಯವಾದ ಪ್ರತಿಜ್ಞೆಯು. ಸತ್ಯದಿಂದಲೇ ನಾನು ಕಟ್ಟಲ್ಪಟ್ಟಿರುವೆನು. ಆದುದರಿಂದ ಲೋಭದಿಂದಾಗಲಿ, ಮೋಹದಿಂದಾಗಲಿ, ಅಜ್ಞಾನದಿಂದಾಗಲಿ ನಾನು ಎಂದಿಗೂ ನನ್ನ ತಂದೆಯ ಸತ್ಯದ ಕಟ್ಟನ್ನು ಮುರಿಯಲಾರೆನು. ಇದು ನಿಜವು. ಅಸತ್ಯಸಂಧನಾಗಿ ಸ್ಥಿರಮನಸ್ಸಿಲ್ಲದೆ ಚಪಲಬುದ್ಧಿಯುಳ್ಳವನನ್ನು ದೇವತೆಗಳಾಗಲಿ, ಪಿತೃಗಳಾಗಲಿ, ಆದರಿಸಲಾರರೆಂದು ನಾನು ಕೇಳಿರುವೆನು. ಸತ್ಯರೂಪವಾದ ಧರ್ಮವೇ ಆತ್ಮನನ್ನು ಎಡೆಬಿಡದೆ ಅನುವರ್ತಿಸುತ್ತಿರುವುದೆಂದು ನನಗೆ ತೋರಿರುವುದು. ಸತ್ಪುರುಷರು ಬಹುಕಾಲದಿಂದ ಆಚರಿಸಿಕೊಂಡು ಬಂದ ಈ ಜಟಾವಲ್ಕಲಾದಿ ಭಾರಗಳೆಲ್ಲವೂ ಸತ್ಯರೂಪವಾದ ಧರ್ಮಕ್ಕಾಗಿಯೇ ಅಂಗೀಕರಿಸಲ್ಪಟ್ಟಿರುವುದೇ ಹೊರತು ಬೇರೆಯಲ್ಲ. ಕ್ಷತ್ರಿಯಧರ್ಮದಲ್ಲಿ ಅಧರ್ಮವೇ ಹೆಚ್ಚಾಗಿಯೂ, ಧರ್ಮವು ಸ್ವಲ್ಪವಾಗಿಯೂ ಇರುವುದು. ಆ ಕ್ಷತ್ರಿಯಧರ್ಮವನ್ನು ಅಲ್ಪಬುದ್ಧಿಯುಳ್ಳವರೂ, ಕ್ರೂರಸ್ವಭಾವವುಳ್ಳವರೂ, ಲೋಭಿಗಳೂ, ಪಾಪಕರ್ಮಿಗಳೂ, ಅಪೇಕ್ಷಿಸುವರೇ ಹೊರತು, ಈ ದುರ್ಗುಣಗಳೊಂದೂ ಇಲ್ಲದವರು ಎಂದಿಗೂ ಆಸಕ್ತಾ

ಸೆಪಡಲಾರರು. ಆದುದರಿಂದ ನಾನು ಸತ್ಯವನ್ನು ಬಿಟ್ಟಾದರೂ ರಾಜ್ಯವನ್ನು ಕೈಕೊಳ್ಳಬೇಕೆಂದು ಆಸೆಪಡುವವನಲ್ಲ. ಲೋಕದಲ್ಲಿ ಮನುಷ್ಯನು ಮೊದಲು ಪಾಪಕಾರ್ಯವನ್ನು ಮನಸ್ಸಿನಲ್ಲಿ ನಿಶ್ಚಯಿಸುವನು. ಅದನ್ನೇ ಕೈಯ್ಯಿಂದಮಾಡುವನು.ಆದಕ್ಕಾಗಿ ನಾಲಗೆಯಿಂದ ಸುಳ್ಳಾಡುವನು.ಹೀಗೆತ್ರಿಕರಣಗಳೂ ಪಾಪಕ್ಕೆ ಆಶ್ರಯವಾಗಿರುವುವು. ಭೂಸಂಪತ್ತಾಗಲಿ, ಕೀರ್ತಿಸಂಪತ್ತಾಗಲಿ,ಪೌರುಷವಾಗಲಿ,ಲಕ್ಷ್ಮಿಯಾಗಲಿ ಯಾವಶ್ರೇಯಸ್ಸಾದರೂ ತ್ರಿಕರಣಶುದ್ಧಿಯಿಂದಸತ್ಯವನ್ನು ಬಿಡದಿರುವ ಪುರುಷನಲ್ಲಿಯೇ ಸೇರುವುದು. ಅಂತಹ ಪುರುಷನು ಸ್ವರ್ಗಸ್ಥನಾದರೂಸತ್ಯವುಅವನನ್ನು ಹಿಂಬಾಲಿಸಿಹೋಗುವುದು. ಆದುದರಿಂದ ಸತ್ಯವನ್ನು ಪ್ರತಿಯೊಬ್ಬನೂ ಅವಲಂಬಿಸಬೇಕು.ಎಲೈಬ್ರಾಹ್ಮಣನೆ! ನೀನು ನನಗೆ ಯಾವುದು ಹಿತಕರವಾದಕಾರ್ಯವೆಂದುಯುಕ್ತಿಯುಕ್ತವಾಗಿ ಹೇಳಿದೆಯೋ, ಅದು ಯಾರಿಗೂ ಆದರಣೀಯವಲ್ಲವು. ಈ ನಿನ್ನ ಮಾತನ್ನು ಯಾರೂ ಗೌರವಿಸಲಾರರು. ಆದುದರಿಂದ ಪರೋಕ್ಷವಾದ ಫಲವನ್ನು ನಂಬದೆ ಪ್ರತ್ಯಕ್ಷಫಲಕ್ಕೆ ಪ್ರಯತ್ನಿಸಬೇಕೆಂದು ನೀನು ಹೇಳಿದ ಉಪದೇಶವು ಎಂದಿಗೂ ಉಚಿತವಲ್ಲವು.ಮತ್ತುಭರತನ ಪ್ರಾರ್ಥನೆಯಂತೆ ನಾನು ರಾಜ್ಯವನ್ನಂಗೀಕರಿಸಬೇಕೆಂದು ಹೇಳಿದೆಯಲ್ಲವೆ? ಹಿಂದೆ ತಂದೆಯಸಮೀಪದಲ್ಲಿ ನಾನು ಕಾಡಿನಲ್ಲಿರುವುದಾಗಿ ಪ್ರತಿಜ್ಞೆಮಾಡಿಬಂದಿರುವೆನು. ಈಗ ಆ ತಂದೆಯಾಜ್ಞೆಯನ್ನೂ ತಿರಸ್ಕರಿಸಿ, ಮಾತಿಗೂ ತಪ್ಪಿದವನಾಗಿ, ಈ ಭರತನಮಾತನ್ನು ನಡೆಸಬೇಕೆಂಬುದೆ ಹೇಗೆ ತಾನೇ ಉಚಿತವು. ನನ್ನತಂದೆಯ ಮುಂದೆ ನಾನು ಸ್ಥಿರಪ್ರತಿಜ್ಞೆಯನ್ನುಮಾಡಿ ಬಂದಿರುವೆನು. ಕೈಕೇಯಿಯೂ ಅದನ್ನು ಕೇಳಿದಾಗ ಎಷ್ಟೋ ಸಂತೋಷಪಟ್ಟಿರುವಳು. ಹೀಗೆ ತಂದೆತಾಯಿಗಳಿಬ್ಬರಿಗೂ ಸಂತೋಷಕರವಾದ ಈ ಪ್ರತಿಜ್ಞೆಯನ್ನು ತಪ್ಪಿ ನಡೆಯುವುದು ಎಂದಿಗೂ ಉಚಿತವಲ್ಲ. ನಾನು ಕಾರ್ಯಾಕಾರ್ಯಗಳನ್ನು ಸ್ವಲ್ಪಮಟ್ಟಿಗಾದರೂ ವಿಮರ್ಶಿಸಬೇಕಲ್ಲವೆ? ಆದುದರಿಂದ ಕೃತ್ರಿಮಬುದ್ಧಿಯನ್ನು ಬಿಟ್ಟು,ಶ್ರದ್ಧೆಯಿಂದ,ಶುದ್ಧಸ್ವಭಾವವುಳ್ಳವನಾಗಿ, ವನವಾಸದಲ್ಲಿದ್ದು,ವನ್ಯಾಹಾರಗಳನ್ನೇ ಭುಜಿಸುತ್ತ, ಅದರಿಂದಲೇ ಪಂಚೇಂದ್ರಿಯಗಳಿಗೂ ತೃಪ್ತಿಯನ್ನುಂಟುಮಾಡುತ್ತಿರುವೆನು. ಪವಿತ್ರವಾದ ಆ ಕಂದಮೂಲಫಲಪುಷ್ಪಾದಿಗಳಿಂದಲೇ ಪಿತೃದೇವತೆಗಳಿಗೂ ದೇವತೆಗಳಿಗೂ ತೃಪ್ತಿಯನ್ನುಂಟುಮಾಡಿ,

ಅವರ ಅನುಗ್ರಹವನ್ನೂ ಸಂಪಾದಿಸುವೆನು. ಅದರಿಂದ ಪಿತೃವಚನಪರಿಪಾಲನವೆಂಬ ಮಹಾವ್ರತವನ್ನೂ ನಡೆಸಿದಂತಾಗುವುದು. ದೇಹಯಾತ್ರೆಯನ್ನು ಮಾಡುವುದಕ್ಕೆ ಇದಕ್ಕಿಂತ ಉತ್ತಮವಾದದಾರಿಯು ನನಗೆಬೇರೆಯಾವುದೂ ತೋರಲಿಲ್ಲ.ಅಷ್ಟಕಾದಿಶ್ರಾದ್ಧಗಳನ್ನುದಾಹರಿಸಿ ನೀನುಕರ್ಮಗಳೆಲ್ಲವೂ ನಿಷ್ಫಲವೆಂದು ಹೇಳಿದೆಯಲ್ಲವೆ? ಮನುಷ್ಯನು ಈ ಕರ್ಮಭೂಮಿಯಲ್ಲಿರುವವರೆಗೂ, ವೇದವಿಹಿತವಾದ [1] ಶುಭಕರ್ಮಗಳನ್ನುಅವಶ್ಯವಾಗಿ ಮಾಡಿಯೇ ತೀರಬೇಕು. ಅಗ್ನಿ,ವಾಯು,ಚಂದ್ರ, ಈ ಮೂವರೂ,ಈ ಕರ್ಮಭೂಮಿಯಲ್ಲಿ ನಡೆಸಿದ ಸತ್ಕರ್ಮಗಳಫಲದಿಂದಲೇ ಈಗಿನ ತಮ್ಮ ಪದವಿಯನ್ನು ಪಡೆದಿರುವರು.ಆದುದರಿಂದ ಕರ್ಮವು ಎಂದಿಗೂ ನಿಷ್ಫಲವಾಗತಕ್ಕದಲ್ಲ.ದೇವೇಂದ್ರನೂ ನೂರುಯಾಗಗಳನ್ನುಮಾಡಿಯೇ ಸ್ವರ್ಗಾಧಿಪತ್ಯವನ್ನು ಪಡೆದಿರುವನು.ಮಹರ್ಷಿಗಳೂ ಉಗ್ರತಪಸ್ಸಿನಿಂದಲೇ ಸ್ವರ್ಗಾದಿಪುಣ್ಯಲೋಕಗಳನ್ನುಪಡೆದಿರುವರು"ಎಂದನು. ಹೀಗೆ ತೇಜಸ್ವಿಯಾದ ಆ ರಾಜಕುಮಾರನು ಜಾಬಾಲಿಯೊಡನೆ ತರ್ಕಿಸುತ್ತ, ಆತನ ನಾಸ್ತಿಕ್ಯವಾದಗಳನ್ನು ಕೇಳಿ ಸಹಿಸಲಾರದೆ, ಪುನಃ ಇದ್ದಕ್ಕಿದ್ದಹಾಗೆ ಮಿತಿಮೀರಿಕೋಪಗೊಂಡು,ಆತನ ಮಾತುಗಳನ್ನು ಖಂಡಿಸುತ್ತ, ಅವನನ್ನುಕುರಿತು, "ಎಲೈ ಬ್ರಾಹ್ಮಣನೆ! ಇದೀಗ ಚೆನ್ನಾಯಿತು. ಸತ್ಯ, ಧರ್ಮ, ಪರಾಕ್ರಮ, ಭೂತದಯೆ, ಪಿತೃವಾಕ್ಯ, ಬ್ರಾಹ್ಮಣಪೂಜೆ, ದೇವತಾರ್ಚನೆ, ಅತಿಥಿಸತ್ಕಾರಗಳು, ಇವೆಲ್ಲವೂ ಸ್ವರ್ಗಪ್ರಾಪ್ತಿಗೆ ಮಾರ್ಗವೆಂಬುದಾಗಿ ಸತ್ಪುರುಷರು ಹೇಳುವರು. ಆದುದರಿಂದಲೇ ಬ್ರಾಹ್ಮಣರು ಈ ಅರ್ಥವನ್ನು ಯಥಾವತ್ತಾಗಿ ತಿಳಿದು, ಐಕಮತ್ಯದಿಂದಲೂ, ಎಚ್ಚರಿಕೆಯಿಂದಲೂ, ಶಾಸ್ತ್ರಮರ್ಯಾದೆಯಿಂದಲೂ, ತಮ್ಮ ತಮ್ಮ ಆಶ್ರಮಧರ್ಮಗಳಿಗೆ ತಕ್ಕಂತೆ ಸತ್ಕಾರ್ಯಗಳನ್ನು ನಡೆಸುತ್ತ ಸ್ವರ್ಗಾದಿಲೋಕಗಳಿಗೆ ಮಾರ್ಗವನ್ನು ಹುಡುಕುವರು. ಆ ಬ್ರಾಹ್ಮಣಜಾತಿಯಲ್ಲಿ ಹುಟ್ಟಿದ ನಿನಗೆ ವೇದವಿರುದ್ಧವಾದ ಈ ದುರ್ಬುದ್ಧಿಯೇಕೆ ಬಂದಿತು? ಹೊರಗೆ ವೈದಿಕನಂತೆ ನಟಿಸುತ್ತ, ಅಂತರಂಗ

---

1 ಇದರಿಂದ ಶಾಸ್ತ್ರವಿಹಿತಕರ್ಮಗಳಿಗೆ ತಪ್ಪದೆ ಫಲವುಲಭಿಸುವುದೆಂದೂ,ದೇಶಾಂತರಗತನಾದವನಿಗೆ ಶ್ರಾದ್ಧದಿಂದ ತೃಪ್ತಿಯನ್ನುಮಾಡಬೇಕೆಂಬುದು ಶಾಸ್ತ್ರಸಿದ್ಧವಲ್ಲದುದರಿಂದ, ಅದಕ್ಕೆ ಫಲವು ಲಭಿಸಲಾರದೆಂದೂ ಭಾವವು.

ದಲ್ಲಿ ಮಹಾನಾಸ್ತಿಕನಾಗಿ, ಚಾರ್ವಾಕಮತವನ್ನವಲಂಬಿಸಿರುವ ನೀನು, ನಿನ್ನ ಈ ನಾಸ್ತಿಕಬುದ್ಧಿಯನ್ನು ಇತರರಿಗೂ ಉಪದೇಶಿಸುವುದಕ್ಕಾಗಿ ಊರೂರು ತಿರುಗುತ್ತಿರುವಹಾಗಿದೆ. ಧರ್ಮದಿಂದ ಬಹಿಷ್ಕೃತನಾದ ನಿನ್ನನ್ನು ನನ್ನ ತಂದೆಯಾದ ದಶರಥನು ಹತ್ತಿರದಲ್ಲಿರಿಸಿಕೊಂಡಿದ್ದುದೇ ಮಹಾದೋಷಾಸ್ಪದವೆಂದು ನನಗೆ ತೋರಿರುವುದು. ಕಳ್ಳನನ್ನು ಹೇಗೋಹಾಗೆ ವೇದಬಾಹ್ಯನಾದ ಬುದ್ಧನನ್ನು ನಿರಾಕರಿಸಿಡಬೇಕಾದುದೇ ನ್ಯಾಯವಲ್ಲವೆ? ನಾಸ್ತಿಕನನ್ನೂ ಆ ಬುದ್ಧನಂತೆಯೇ ತಿಳಿಯಬೇಕು. ನಾಸ್ತಿಕನಾದವನನ್ನು 'ವೇದಬಾಹ್ಯನೆಂದೇ ಹೇಳಬೇಕು. ಪಂಡಿತರು ಅಂತವನ ಮುಖವನ್ನೂ ನೋಡಬಾರದು. [1] ನಿನಗಿಂತಲೂ ಪೂರ್ವಿಕರಾದ ಆರ್ಯರೂ, ನಿನಗಿಂತಲೂ ಉತ್ತಮರಾದವರೂ, ಅನೇಕ ಶುಭಕರ್ಮಗಳನ್ನುಮಾಡಿ, ಇಹಪರಲೋಕಗಳೆರಡನ್ನೂ ಜಯಿಸಿ, ಈಗಲೂ ಆಕಾಶದಲ್ಲಿ [2]ಗ್ರಹನಕ್ಷತ್ರಾದಿರೂಪಗಳಿಂದ ಪ್ರಕಾಶಿಸುತ್ತಿರುವರಲ್ಲವೆ? ಆದುದರಿಂದಲೇ ಬ್ರಾಹ್ಮಣರು ಶುಭಕರ್ಮಗಳನ್ನೂ, ಯಜ್ಞಯಾಗಾದಿಗಳನ್ನೂ, ತಪೋದಾನಾದಿಗಳನ್ನೂ ಅಕ್ಕರೆಯಿಂದ ನಡೆಸುವರು. ಧರ್ಮಪರಾಯಣರಾಗಿ, ಸತ್ಪುರುಷಸಹವಾಸವುಳ್ಳವರಾಗಿ, ತೇಜಸ್ವಿಗಳಾಗಿ, ಉದಾರಿಗಳಾಗಿ, ಅಹಿಂಸೆ, ಶುಚಿತ್ವ ಮುಂತಾದ ಸದ್ಗು

---

1 ಇದರಿಂದ ಪ್ರತ್ಯಕ್ಷವುಮಾತ್ರವೇ ಪ್ರಮಾಣವಲ್ಲವೆಂದೂ, ಮಹಾಜನಪರಿಗ್ರಹೀತವಾಗಿರುವುದರಿಂದ ಅಪೌರುಷೇಯವಾಗಿ ಪ್ರತ್ಯಕ್ಷವ್ಯತಿರಿಕ್ತಗಳಾದ ವೇದಾರ್ಥಗಳಿಗೂ ಪ್ರಾಮಾಣ್ಯವುಂಟೆಂದೂ ಸಿದ್ಧವಾಗುವುದು. ಆದರೆ ವೇದಗಳು ಅಪೌರುಷೇಯವೆಂದು ಹೇಗೆ ನಿರ್ಧರಿಸಬಹುದು? ಎಂದರೆ, ವೇದವಿಹಿತಧರ್ಮಗಳು ಬಹುಕಾಲದಿಂದ ಎಡೆಬಿಡದೆ ಸಂಪ್ರದಾಯಸಿದ್ಧವಾಗಿ ಬಂದಿರುವುದರಿಂದಲೂ, ಈ ವೇದಕರ್ತರು ಯಾರೆಂಬುದನ್ನು ಊಹಿಸುವುದಕ್ಕೂ ಅಸಾಧ್ಯವಾಗಿರುವುದರಿಂದಲೂ, ಅವುಗಳನ್ನು ಅಪೌರುಷೇಯವೆಂದೇ ನಿರ್ಧರಿಸಬೇಕು. ಸೂರ್ಯಾಗ್ನಿ ಚಂದ್ರ ನಕ್ಷತ್ರಾದಿಗಳ ಫಲಭೋಗವು ಪ್ರತ್ಯಕ್ಷಸಿದ್ಧವಾಗಿಯೇ ಇರುವುದರಿಂದ ವೈದಿಕಕರ್ಮಗಳು ಫಲವನ್ನು ಕೊಡುವುವೆಂದೇ ಸಿದ್ಧವಾಗುವುದೆಂದು ಭಾವವು.

2 ಇಲ್ಲಿ "ಸುಕೃತಾಂ ವಾ ಏತಾನಿ ಜ್ಯೋತೀಂಷಿ ಯನ್ನಕ್ಷತ್ರಾಣಿ" ಎಂಬ ಶ್ರುತಿಪ್ರಮಾಣದಿಂದ ಈ ಗ್ರಹನಕ್ಷತ್ರಾದಿಗಳೆಲ್ಲವೂ ತಮ್ಮ ತಮ್ಮ ಕರ್ಮಫಲದಿಂದಲೇ ಈಪದವಿಯನ್ನು ಅನುಭವಿಸುತ್ತಿರುವರೆಂದು ಸಿದ್ಧವಾಗುವುದು.

ಣಗಳಿಂದ ಭರಿತರಾದ ಮಹರ್ಷಿಗಳೇ ತ್ರಿಲೋಕಗಳಲ್ಲಿಯೂ ಪೂಜ್ಯರೆನಿಸುವರು." ಎಂದನು. ಹೀಗೆ ಅತ್ಯಂತಕೋಪಾವೇಶದಿಂದ ನುಡಿಯುತ್ತಿರುವ ಮಹಾತ್ಮನಾದ ರಾಮನನ್ನು ನೋಡಿ, ಜಾಬಾಲಿಯು ವಿನಯದಿಂದ ಸಮಾಧಾನಪಡಿಸುತ್ತ, ಯಥಾರ್ಥವಾಗಿಯೂ, ಆಸ್ತಿಕಮತಪ್ರತಿಪಾದಕವಾಗಿಯೂ, ಸತ್ಪುರುಷರಿಗೆ ಹಿತವಾಗಿಯೂ ಇರುವ ಮಾತುಗಳಿಂದ, ‹‹ಎಲೆ ರಾಮನೆ! ನಾನು ಹೇಳಿದಮಾತುಗಳು ನಾಸ್ತಿಕವಾದಗಳೆಂದೆಣಿಸಬೇಡ! ನನ್ನನ್ನು ನಾಸ್ತಿಕನೆಂದೂ ತಿಳಿಯಬೇಡ. ಪರಲೋಕವಿಲ್ಲವೆಂಬುದು ನಿಜವಾಗಿಯೂ ನನ್ನ ಮತವಲ್ಲವು. ಇಷ್ಟೇ ಅಲ್ಲ! ಬೇರೆ ಯಾರಾದರೂ ನಾಸ್ತಿಕವನ್ನು ಮಾಡುತ್ತಿದ್ದರೆ ಅದನ್ನು ನಾನು ಕೇಳಿಯೂ ಸಹಿಸಲಾರೆನು. ಆಗಲೇ ಆಸ್ತಿಕವಾದಗಳಿಂದ ಅವರ ಬಾಯನ್ನು ಅಡಗಿಸುವೆನು. ಆದರೆ ಈಗ ನಾನು ನಿನಗೆ ಹೇಳಿದುದಕ್ಕೆ ಕಾರಣವೇ ಬೇರೆ! ಧರ್ಮಸಂಕಟಕಾಲವು ಬಂದಾಗ ಮಾತ್ರವೇ ಕಾರ್ಯಸಿದ್ಧಿಗಾಗಿ ಈನಾಸ್ತಿಕವಾದವನ್ನು ಮಾಡುವೆನೇ ಹೊರತು, ನಿಜವಾಗಿ ನಾನು ಅಂತವನಲ್ಲವು. ಎಲೈ ರಾಮನೆ! ಈಗ ನಮ್ಮ ಅಯೋಧ್ಯೆಗೆ ಮಹಾಸಂಕಟಕಾಲವು ಪ್ರಾಪ್ತವಾದುದರಿಂದಲೇ, ಹೇಗಾದರೂ ನಿನ್ನನ್ನು ಹಿಂತಿರುಗಿಸಿ ಅಲ್ಲಿಗೆ ಕರೆದುಕೊಂಡುಹೋಗಬೇಕೆಂಬುದಕ್ಕಾಗಿ ಈ ನಾಸ್ತಿಕವಾದಗಳನ್ನು ಆರಂಭಿಸಿದನೇ ಹೊರತು ಬೇರೆಯಲ್ಲ" ಎಂದನು. ಇಲ್ಲಿಗೆ ನೂರೊಂಬತ್ತನೆಯಸರ್ಗವು.

---

{ ವಸಿಷ್ಠನು ರಾಮನಿಗೆ ಕೋಪಸಮಾಧಾನಮಾಡಿ, ಮನುವಂಶದ ರಾಜರ ಪೂರ್ವಾಚಾರವನ್ನು ನಿದರ್ಶಿಸಿ, ಜ್ಯೇಷ್ಠನೇ ರಾಜ್ಯಾರ್ಹನೆಂದು ಬೋಧಿಸಿ, ರಾಮನನ್ನು ಹಿಂತಿರುಗಿಸುವುದಕ್ಕೆ ಪ್ರಯತ್ನಿಸಿದುದು. }

ರಾಮನು ಜಾಬಾಲಿಯ ಮಾತಿಗೆ ಕೋಪಗೊಂಡಿರುವುದನ್ನು ನೋಡಿ ವಸಿಷ್ಠನು ಆತನನ್ನು ಕುರಿತು ‹‹ವತ್ಸರಾಮನೆ! ಈ ಜಾಬಾಲಿಯು ನಾಸ್ತಿಕನೆಂದೆಣಿಸಬೇಡ! ಮನುಷ್ಯನಿಗೆ ಪರಲೋಕವುಂಟೆಂಬುದೂ, ಅವನವನ ಕರ್ಮಫಲವು ಮುಗಿದೊಡನೆಯೇ ಅಲ್ಲಿಂದ ಹಿಂತಿರುಗಿ ಭೂಮಿಯಲ್ಲಿ ಹುಟ್ಟುವನೆಂಬುದೂ ಈತನಿಗೆ ತಿಳಿಯದ ವಿಷಯವಲ್ಲ. ನಿನ್ನನ್ನು ಹೇಗಾದರೂ

ಹಿಂತಿರುಗಿಸಿ ಅಯೋಧ್ಯೆಗೆ ಕರೆದುಕೊಂಡುಹೋಗಬೇಕೆಂಬುದಕ್ಕಾಗಿಯೇ ಈತನು ಈಮಾತನ್ನಾಡಿರುವನು. ಎಲೆ ರಾಜಕುಮಾರನೆ! ಈಗ ನಾನು ಲೋಕೋತ್ಪತ್ತಿಯ ಕ್ರಮವನ್ನು ಹೇಳುವೆನು ಕೇಳು. ಮೊದಲು ಈ ಪ್ರಪಂಚವೆಲ್ಲವೂ ಜಲಮಯವಾಗಿದ್ದಿತು. ಆಮೇಲೆ ಭೂಮಿಯು ಸೃಷ್ಟಿಸಲ್ಪಟ್ಟಿತು. ಆದರಲ್ಲಿ ಮೊದಲು ಸ್ವಯಂಭುವಾದ ಬ್ರಹ್ಮನೂ ದೇವತೆಗಳೂ ಅವತರಿಸಿದರು. ಆಗ ಶ್ರೀಮನ್ನಾರಾಯಣನು ವರಾಹರೂಪವನ್ನೆತ್ತಿ ಆ ಜಲದಿಂದ ಭೂಮಿಯನ್ನುದ್ಧರಿಸಿದನು. ಆಮೇಲೆ ಬ್ರಹ್ಮನು ಮರೀಚಿ ಮೊದಲಾದ ತನ್ನ ಪುತ್ರರೊಡಗೂಡಿ ಈ ಪ್ರಪಂಚವನ್ನು ಸೃಷ್ಟಿಸಿದನು. ಆ ಬ್ರಹ್ಮನು ಪರಬ್ರಹ್ಮನಿಂದ ಹುಟ್ಟಿದವನು. ಆಪರಬ್ರಹ್ಮನಾದರೋ ಪ್ರವಾಹರೂಪದಿಂದ ನಿತ್ಯನಾಗಿರುವನು. ಇತರರಿಗಿಂತಲೂ ಚಿರಸ್ಥಾಯಿಯಾಗಿರುವನು. ತನ್ನ ಸ್ಥಾನದಿಂದಲೇ ಮೋಕ್ಷವನ್ನು ಹೊಂದುವನಾದುದರಿಂದ ನಾಶರಹಿತನೆನಿಸಿಕೊಂಡಿರುವನು. ಆತನಿಂದ ಮರೀಚಿಯು ಹುಟ್ಟಿದನು. ಮರೀಚಿಯಿಂದ ಕಶ್ಯಪನೂ, ಕಶ್ಯಪನಿಂದ ಸೂರ್ಯನೂ, ಸೂರ್ಯನಿಂದ ವೈವಸ್ವತಮನುವೂ ಕ್ರಮವಾಗಿ ಜನಿಸಿದರು. ಆ ವೈವಸ್ವತನೇ ಮೊದಲು ರಾಜನಾಗಿದ್ದನು. ಆತನಿಗೆ ಇಕ್ಷ್ವಾಕುವೆಂಬ ಪುತ್ರನು ಹುಟ್ಟಿದನು. ಆ ವೈವಸ್ವತಮನುವು ಮೊದಲು ಸಂಪತ್ಸಮೃದ್ಧವಾದ ಈ ಭೂಮಿಯನ್ನು ಇಕ್ಷ್ವಾಕುವಿಗೆ ಕೊಟ್ಟನು. ಆ ಇಕ್ಷ್ವಾಕುವೇ ಅಯೋಧ್ಯೆಯಲ್ಲಿ ಆಳಿದಮೊದಲನೆಯ ರಾಜನೆಂದು ತಿಳಿ! ಆ ಇಕ್ಷ್ವಾಕುವಿನ ಹೊಟ್ಟೆಯಲ್ಲಿ ಶ್ರೀಮಂತನಾದ ಕುಕ್ಷಿಯೆಂಬವನು ಜನಿಸಿ ಲೋಕವಿಖ್ಯಾತನಾದನು. ಆ ಕುಕ್ಷಿಗೆ ವೀರನಾದ ವಿಕುಕ್ಷಿಯು ಮಗನಾದನು. ಆ ವಿಕುಕ್ಷಿಯಿಂದ ತೇಜಸ್ವಿಯಾಗಿಯೂ, ಪರಾಕ್ರಮಶಾಲಿಯಾಗಿಯೂ ಇರುವ ಬಾಣನು ಜನಿಸಿದನು. ಆಬಾಣನಿಂದ ಯಶಸ್ವಿಯಾದ ಅನರಣ್ಯನೆಂಬುವನು ಹುಟ್ಟಿ, ಸತ್ಪುರುಷರಿಗೆಲ್ಲಾ ಮೇಲೆನಿಸಿಕೊಂಡು ರಾಜ್ಯವನ್ನು ಪಾಲಿಸುತಿದ್ದನು. ಈತನ ಧರ್ಮಪ್ರಭುತ್ವದಲ್ಲಿ ಅನಾವೃಷ್ಟಿ ಮೊದಲಾದ ಈತಿಬಾಧೆಗಳೊಂದೂ ಇಲ್ಲದೆ ಕಾಲಕಾಲಕ್ಕೆ ಮಳೆಯುಸುರಿಯುತ್ತಿತ್ತು. ದುರ್ಭಿಕ್ಷವೆಂಬ ಮಾತೇ ಇರಲಿಲ್ಲವು. ಆಗ ಚೋರರಭಯವೆಂಬುದೂ ಇಲ್ಲವು. ಆ ಅನರಣ್ಯನಿಂದ ಪೃಥುವೆಂಬುವನೂ, ಆತನಿಂದ ತ್ರಿಶಂಕುವೂ ಜನಿಸಿದರು. ವೀರನಾದ ಈ ತ್ರಿಶಂಕುವು ಬಹಳ ಸತ್ಯಸಂಧನೆನಿಸಿ

ಕೊಂಡಿದ್ದು ಶರೀರದೊಡನೆಯೇ ಸ್ವರ್ಗವನ್ನು ಹೊಂದಿದನು. ಈತನಿಂದ ಯಶಸ್ವಿಯಾದ ಯವನಾಶ್ವನೆಂಬುವನು ಹುಟ್ಟಿ, ದುಂದುವೆಂಬ ರಾಕ್ಷಸನನ್ನು ಕೊಂದು, ದುಂದುಮಾರನೆಂಬ ಖ್ಯಾತಿಯನ್ನು ಪಡೆದನು. ಈ ಯವನಾಶ್ವನಿಂದ ಮಾಂಧಾತನೂ,ಮಾಧಾತನಿಂದ ಸು ಸಂಧಿಯೂ ಹುಟ್ಟಿದರು. ಈಸುಸಂಧಿಗೆ ಧ್ರುವಸಂಧಿ, ಪ್ರಸೇನಜಿತ್ತು ಎಂಬ ಇಬ್ಬರು ಮಕ್ಕಳಾದರು. ಅವರಲ್ಲಿ ಧ್ರುವಸಂಧಿಗೆ ಭರತನೆಂಬ ಮಗನಾದನು. ಆಭರತನಿಂದ ಅಸಿತನು ಹುಟ್ಟಿದನು. ಆ ಅಸಿತನಿಗೆ ಸಾಮಂತರಾಜರಾಗಿದ್ದ ಹೈಹಯರು, ಕಾಲಜಂಘರು, ಶಶಿಬಿಂದುಗಳು ಎಂಬಮೂವರು ಶತ್ರುಗಳಾದರು. ಅವರೆಲ್ಲರನ್ನೂ ಅಸಿತನು ಇದಿರಿಸಿ ಯುದ್ಧಮಾಡುತ್ತಿರುವಾಗ ಪರಾಜಿತನಾಗಿ ಕಾಡಿಗೆ ಓಡಿಸಲ್ಪಟ್ಟನು. ಹೀಗೆ ಅವನು ರಾಜ್ಯಭ್ರಷ್ಟನಾಗಿ ಹಿಮವತ್ಪರ್ವತಕ್ಕೆ ಹೋಗಿ, ಅಲ್ಲಿಗೂ ಶತ್ರುಗಳು ತನ್ನನ್ನು ಬೆನ್ನುಹತ್ತಿಬರುವರೆಂಬ ಭಯದಿಂದ ಮುನಿವೃತ್ತಿಯನ್ನವಲಂಬಿಸಿ ವಿರಕ್ತನಾಗಿದ್ದುಬಿಟ್ಟನು. ಆತನ ಹೆಂಡತಿಯರಿಬ್ಬರೂ ಗರ್ಭಿಣಿಯರಾಗಿದ್ದರೆಂದು ಪ್ರವಾದವಿದ್ದಿತು. ಅವರಲ್ಲಿ ಒಬ್ಬಳುತನ್ನ ಸವತಿಯ ಗರ್ಭವನ್ನು ಕೆಡಿಸಬೇಕೆಂಬ ಅಸೂಯೆಯಿಂದ ಆ ಸವತಿಗೆ ವಿಷಮಿಶ್ರವಾದ ಭಕ್ಷ್ಯವನ್ನು ಕೊಟ್ಟಳು. ಈ ವಿಷಭಕ್ಷಣವನ್ನು ಮಾಡಿದವಳಿಗೆ ಕಾಳಿಂದಿಯೆಂದು ಹೆಸರು. ಈ ಸಂದರ್ಭದಲ್ಲಿ ಭೃಗುವಂಶದಲ್ಲಿ ಹುಟ್ಟಿದ ಚ್ಯವನನೆಂಬ ಮಹರ್ಷಿಯು ಆ ಹಿಮವತ್ಪರ್ವದಲ್ಲಿರುತಿದ್ದನು. ಕಾಳಿಂದಿಯು ಆ ಋಷಿಯಬಳಿಗೆ ಹೋಗಿ ನಮಸ್ಕರಿಸಿ ತನಗೆಸುಪುತ್ರನನ್ನು ಕೊಡುವಂತೆ ಪ್ರಾರ್ಥಿಸಲು, ಆ ಬ್ರಾಹ್ಮಣನು ಆಕೆಯನ್ನು ಕುರಿತು, "ಎಲೆ, ದೇವಿ! ನಿನಗೆ ಧೀಮಂತನಾಗಿಯೂ,ಲೋಕಪ್ರಸಿದ್ಧನಾಗಿಯೂ,ಧಾರ್ಮಿಕನಾಗಿಯೂ ಸದಾಚಾರಸಂಪನ್ನನಾಗಿಯೂ ಇರುವಸತ್ಪುತ್ರನೊಬ್ಬನು ಹುಟ್ಟುವನು" ಎಂದು ಅನುಗ್ರಹಿಸಿದನು. ಅದಕ್ಕಾರಾಜನೂ ರಾಜಪತ್ನಿಯೂ ಬಹಳಸಂತೋಷಿಸಿ, ಪ್ರದಕ್ಷಿಣ ನಮಸ್ಕಾರಗಳಿಂದ ಆ ಋಷಿಯನ್ನು ಪೂಜಿಸಿ ತಮ್ಮ ಆಸ್ಥಾನಕ್ಕೆ ಹಿಂತಿರುಗಿದರು. ಕೆಲವುದಿವಸದಲ್ಲಿಯೇ ಆಕೆಯ ಗರ್ಭದಿಂದ ಬ್ರಹ್ಮದೇವನಿಗೆ ಸಮಾನನಾದ ಕುಮಾರನು ಹುಟ್ಟಿದನು. ಆದರೆ ಈಕೆಗೆ ಸವತಿಯು ಕೊಟ್ಟವಿಷವೂ ಆ ಶಿಶುವಿನೊಡನೆಯೇ ಕೆಳಗೆಬಿದ್ದಿತು. ಹೀಗೆ ವಿಷದೊಡನೆ ಹುಟ್ಟಿದುದುದರಿಂದ ಆತನಿಗೆ ಸಗರನೆಂದು ಹೆಸರಾಯಿತು. ಈ

ಸಗರನು ಯಜ್ಞದೀಕ್ಷೆಯನ್ನು ಕೈಕೊಂಡು ಯಜ್ಞಾಶ್ವವನ್ನು ಬಿಟ್ಟಾಗ, ಅದು ತಪ್ಪಿಸಿಕೊಂಡು ಹೋಗಲು,ಅದನ್ನು ಹುಡುಕಿ ತರುವುದಕ್ಕಾಗಿ ತನ್ನ ಮಕ್ಕಳನ್ನು ಕಳುಹಿಸಿದನು. ಆ ಸಗರಪುತ್ರರಿಂದಲೇ ಈ ಸಮುದ್ರವು ತೋಡಲ್ಪಟ್ಟಿತು. ಸಗರನಿಗೆ ಅಸಮಂಜನೆಂಬ ಬೇರೊಬ್ಬ ಮಗನಿದ್ದುದಾಗಿ ನಾವು ಕೇಳಿರುವೆವು. ಆತನು ಬಹಳ ಪಾಪಕಾರ್ಯಗಳನ್ನು ಮಾಡುತಿದ್ದುದರಿಂದ ತಂದೆಯು ಅವನನ್ನು ಕಾಡಿಗೋಡಿಸಿಬಿಟ್ಟನು. ಆ ಅಸಮಂಜನಿಂದ ಅಂಶುಮಂತನೂ, ಆತನಿಂದ ದಿಲೀಪನೂ,ದಿಲೀಪನಿಂದ ಭಗೀರಥನೂ, ಆ ಭಗೀರಥನಿಂದ ಕಕುತ್ಸ್ಥನೂ ಕ್ರಮವಾಗಿ ಜನಿಸಿದರು. ಆತನಿಂದಲೇ ಈಗಲೂ ನಿಮಗೆ ಕಾಕುತ್ಸ್ಥರೆಂಬ ಪ್ರಸಿದ್ಧಿಯುಂಟಾಗಿರುವುದು. ಆತನ ಮಗನು ರಘುವು. ಆತನಿಂದ ನಿಮಗೆ ರಾಘವರೆಂಬ ಪ್ರಸಿದ್ಧಿಯೂ ಬಂದಿರುವುದು. ಆ ರಘುವಿಗೆ ಮಹಾತೇಜಸ್ವಿಯಾದ ಪುತ್ರನೊಬ್ಬನು ಹುಟ್ಟಿದನು. ಆತನಿಗೆ ಪ್ರವೃದ್ಧನೆಂದೂ, ಪುರುಷಾದಕನೆಂದೂ, ಕಲ್ಮಾಷಪಾದನೆಂದೂ, ಸೌದಾಸನೆಂದೂ ಲೋಕದಲ್ಲಿ ಹೆಸರುಂಟಾಯಿತು. ಆ ಕಲ್ಮಾಷಪಾದನಿಗೆ ಶಂಖಣನೆಂಬ ಪುತ್ರನು ಪ್ರಸಿದ್ಧನಾಗಿದ್ದನು. ಆ ಶಂಖಣನು[1] ತಂದೆಯಾದ ಕಲ್ಮಾಷಪಾದನನ್ನೇ ಇದಿರಿಸಿ, ಆ ತಂದೆಯಿಂದ ಸೇನಾಸಮೇತನಾಗಿ ನಾಶಹೊಂದಿದನು. ಆ ಶಂಖಣನ ಮಗನು ಸುದರ್ಶನನು. ಆ ಸುದರ್ಶನನಿಂದ ಅಗ್ನಿವರ್ಣನೂ, ಆತನಿಂದ ಶೀಘ್ರಗನೂ,ಅವನಿಂದ ಮರುವೂ,ಆ ಮರುವಿನಿಂದ ಪ್ರಶುಶ್ರುಕನೂ ಜನಿಸಿದರು. ಆ ಪ್ರಶುಶ್ರುಕನಿಗೆ ಅಂಬರೀಷನೆಂಬ ಮಗನು ಹುಟ್ಟಿದನು. ಆತನಿಂದ ಮಹಾವೀರನೆನಿಸಿಕೊಂಡ ನಹುಷನು ಹುಟ್ಟಿದನು. ಆ ನಹುಷನಿಗೆ ಪರಮಧಾರ್ಮಿಕನೆನಿಸಿಕೊಂಡಿದ್ದ ನಾಭಾಗನೆಂಬ ಪುತ್ರನಾದನು. ಆ ನಾಭಾಗನಿಗೆ ಅಜ ಸುವ್ರತರೆಂಬ ಇಬ್ಬರು ಮಕ್ಕಳು ಹುಟ್ಟಿದರು. ಅವರಲ್ಲಿ ಜ್ಯೇಷ್ಠನಾದ ಅಜನೇ ನಿನ್ನ ಪಿತಾಮಹನು. ಧರ್ಮಾತ್ಮನಾದ ದಶರಥನು ಆತನಿಂದ ಹುಟ್ಟಿದವನು. ರಾಮನೆಂದು ಲೋಕಪ್ರಖ್ಯಾತನಾದ ನೀನು ಆ ದಶರಥನ ಜ್ಯೇಷ್ಠಕುಮಾರನು. ವತ್ಸ ರಾಮನೆ! ಈ ವಂಶಕ್ರಮವನ್ನು ಕೇಳಿ

---

1 ವಸಿಷ್ಠಶಾಪದಿಂದ ಕಲ್ಮಾಷಪಾದನಿಗೆ ರಾಕ್ಷಸತ್ವವುಂಟಾಯಿತು. ಇವನು ತನ್ನ ಮಗನನ್ನೇ ಕೊಂದುಬಿಟ್ಟನು.

ದುದರಿಂದಲೇ ನಿಮ್ಮ ಕುಲಾಚಾರವು ಹೇಗೆಂಬುದನ್ನು ನೀನು ಚೆನ್ನಾಗಿ ತಿಳಿದು ಕೊಂಡಿರಬಹುದು. ರಾಜ್ಯವೆಂಬುದು ಜ್ಯೇಷ್ಠಕ್ರಮವಾಗಿಯೇ ಬಂದಿರುವುದು. ದಶರಥನಿಗೆ ನೀನೇ ಜ್ಯೇಷ್ಠಪುತ್ರನಾದುದರಿಂದ ಕೋಸಲರಾಜ್ಯವು ನಿನಗೇ ಸೇರತಕ್ಕುದು. ಆದುದರಿಂದ ನಿನ್ನ ರಾಜ್ಯವನ್ನು ನೀನೇ ಕೈಕೊಂಡು ಪ್ರಜೆಗಳನ್ನು ಪಾಲಿಸುತ್ತಿರು. ಇದುವರೆಗೆ ನಿಮ್ಮ ವಂಶದಲ್ಲಿ ಜ್ಯೇಷ್ಠನಿರುವಾಗ ಕನಿಷ್ಠನಿಗೆ ಪಟ್ಟಾಭಿಷೇಕವನ್ನು ಮಾಡಿದುದೇ ಇಲ್ಲವು. ಪಟ್ಟಾಭಿಷೇಕವೆಂಬುದು ಜ್ಯೇಷ್ಠನಿಗೇ ಸಲ್ಲತಕ್ಕುದು. ಆದುದರಿಂದ ನಿನ್ನ ವಂಶಪರಂಪರೆಯಾಗಿ ಬಂದ ಜ್ಯೇಷ್ಠಾಭಿಷೇಚನವೆಂಬ ಕುಲಧರ್ಮವನ್ನು ಧರ್ಮಜ್ಞನಾದ ನೀನೇ ತಪ್ಪಿಸುವುದುಚಿತವಲ್ಲ. ಎಲೈ ಕೀರ್ತಿವಂತನೆ! ನೀನೂ ನಿನ್ನ ತಂದೆಯಂತೆಯೇ ಸಮೃದ್ಧವಾದ ಮತ್ತು ಅನೇಕಜನಪದಗಳಿಂದ ಕೂಡಿದ ಈ ಭೂಮಂಡಲವನ್ನು ಧರ್ಮದಿಂದ ಪಾಲಿಸುತ್ತಿರು" ಎಂದನು.

ಇಲ್ಲಿಗೆ ನೂರಹತ್ತನೆಯಸರ್ಗವು.

---

ವಸಿಷ್ಠನು ಆಚಾರ್ಯನಾದ ತನ್ನ ಮಾತನ್ನಾದರೂ ಗೌರವಿಸಿ ಅಯೋಧ್ಯೆಗೆ ಹಿಂತಿರುಗುವಂತೆ ರಾಮನನ್ನು ನಿರ್ಬಂಧಿಸಿದುದು. ರಾಮನು ಆಚಾರ್ಯವಾಕ್ಯಕ್ಕಿಂತಲೂ ಪಿತೃವಾಕ್ಯವು ಮೇಲೆಂಬುದನ್ನು ನಿರೂಪಿಸಿದುದು. ಭರತನ ಸ್ಥಂಡಿಲಶಯನವು. ರಾಮನ ಸಮಾಧಾನವು.

ರಾಜಪುರೋಹಿತನಾದ ವಸಿಷ್ಠನು ರಾಮನಿಗೆ ಈ ಕುಲಧರ್ಮವನ್ನು ತಿಳಿಸಿದರೂ, ಆ ರಾಮನು ತಂದೆಯಾಜ್ಞೆಗೆ ಈಕುಲಧರ್ಮವು ವಿರುದ್ಧವಾಗಿರುವುದರಿಂದ, ಸುಮ್ಮನಿರುವನೆಂದು ವಸಿಷ್ಠನು ಭಾವಿಸಿ, ಪುನಃ ಧರ್ಮಯುಕ್ತವಾದ ಮಾತಿನಿಂದ ಆತನನ್ನು ಕುರಿತು "ಎಲೆ ಕಾಕುತ್ಸ್ಥನೆ! ಈ ಪ್ರಪಂಚದಲ್ಲಿ ಹುಟ್ಟಿದ ಪ್ರತಿಯೊಬ್ಬಮನುಷ್ಯನಿಗೂ ಆಚಾರ್ಯನು, ತಂದೆ, ತಾಯಿ ಎಂಬ ಮೂವರು ಮುಖ್ಯಗುರುಗಳುಂಟು. ಅವರಲ್ಲಿ ತಂದೆತಾಯಿಗಳಿಬ್ಬರೂ

ಆ ಪುರುಷನ ದೇಹೋತ್ಪತ್ತಿಗೆ ಮಾತ್ರವೇ ಕಾರಣರಾಗಿರುವರು. [1] ಆಚಾರ್ಯ ನಾದವರೋ, ಅವನಿಗೆ ಅವಶ್ಯವಾದ ಜ್ಞಾನವನ್ನು ಕೊಡುವನಾದುದರಿಂದ, ಆತನಿಗೆ ಗುರುವೆಂದೇ ಹೆಸರು. ಗುರುವೆಂಬ ಶಬ್ದದಿಂದಲೇ ತಂದೆತಾಯಿಗಳಿಗಿಂತಲೂ ಈತನು ದೊಡ್ಡವನೆಂದು ವ್ಯಕ್ತವಾಗುವುದು. ಎಲೈ ರಾಮನೆ! ನಾನು ಯಾರೆಂದುಬಲ್ಲೆಯಾ ? ನಿನಗೆ ಮಾತ್ರವೇ ಅಲ್ಲದೆ ನಿನ್ನ ತಂದೆಗೂ ನಾನೇ ಗುರುವು. ಅವರ ಮಾತಿಗಿಂತಲೂ ನನ್ನ ಮಾತನ್ನು ಹೆಚ್ಚಾಗಿ ಗೌರವಿಸಬೇಕು.ಹಾಗೆ ನಡೆಯುತ್ತಿದ್ದರೆ ಮಾತ್ರವೇ ನೀನು ಸತ್ಪುರುಷರ ಮರ್ಯಾದೆಯನ್ನು ಮೀರದವನಾಗುವೆಯೇಹೊರತು, ನನ್ನ ಮಾತನ್ನೂ ನೀನು ಅತಿಕ್ರಮಿಸಿದರೆ ನೀನು ಧರ್ಮವನ್ನು ಮೀರಿದಂತೆಯೇ ಆಗುವುದು. ನೀನು ನಡೆಸಬೇಕಾದ ಧರ್ಮಗಳು ಇನ್ನೂ ಬೇರೆಯುಂಟು. ಇದೋ ! ಈ ಬ್ರಾಹ್ಮಣರೂ,ಈ ಪುರಜನರೂ, ಈ ಕ್ಷತ್ರಿಯ ವೈಶ್ಯಶೂದ್ರರೂ ನಿನ್ನ ಕಡೆಯವರು. ಇವರನ್ನು ಪಾಲಿಸುವುದೇ ನಿನ್ನ ಮುಖ್ಯಧರ್ಮವು. ಈಧರ್ಮವನ್ನು ಅನುಷ್ಠಿಸಿದರೆ ಮಾತ್ರವೇ ನೀನು ಸತ್ಪುರುಷರ ಮರ್ಯಾದೆಯನ್ನು ಮೀರದವನಾಗುವೆ? ಇದೋ! ಇಲ್ಲಿ ವೃದ್ಧರಾಗಿಯೂ, ಪರಮಧಾರ್ಮಿಕರಾಗಿಯೂ ಇರುವ ನಿನ್ನ ಮಾತೆಯರನ್ನು ನೋಡು ! ಇವರ ಶುಶ್ರೂಷೆಯನ್ನು ಬಿಟ್ಟು ಹೋಗುವುದಕ್ಕಿಂತಲೂ ನಿನಗೆ ಬೇರೊಂದು ಧರ್ಮಾತಿಕ್ರಮವುಂಟೇ ? ತಾಯಿಯ ಶುಶ್ರೂಷೆಯೇ ಮಕ್ಕಳಿಗೆ ಮೊದಲನೆಯಧರ್ಮವು. ಅದನ್ನು ನಡೆಸುತ್ತ, ಮಾತೆಯರಿಗೆ ವಿಧೇಯನಾಗಿ ನೀನು ನಡೆದುಕೊಳ್ಳುತಿದ್ದರೆಮಾತ್ರವೇ ಸನ್ಮಾರ್ಗವನ್ನು ಅತಿಕ್ರಮಿಸದವನಾಗುವೆ. ಎಲೈ ರಘುವಂಶೋತ್ತಮನೆ! [2] ಸತ್ಯಧರ್ಮಗಳನ್ನು ಅನು

---

1. "ಸಹಿವಿದ್ಯಾತಸ್ತಂ ಜನಯತಿ ತಚ್ಛ್ರೇಷ್ಠಂಜನ್ಮ" ಎಂಬ ಶ್ರುತಿಪ್ರಮಾಣವನ್ನನುಸರಿಸಿ, ವಿದ್ಯೆಯಿಂದ ಉತ್ತಮವಾದ ಜನ್ಮವನ್ನು ಕೊಡುವ ಆಚಾರ್ಯನನ್ನು ತಂದೆತಾಯಿಗಳಿಗಿಂತಲೂ ಹೆಚ್ಚಾಗಿ ಗೌರವಿಸಬೇಕೆಂದುಭಾವವು,

2. ನೀನು ಸತ್ಯವನ್ನು ಅತಿಕ್ರಮಿಸಬಾರದೆಂದು ಹೇಗೆ ಹೇಳುವೆಯೋ, ಹಾಗೆಯೇ ಧರ್ಮವನ್ನೂ ಅತಿಕ್ರಮಿಸದಿರಬೇಡವೆ? ಸರ್ವೇಶ್ವರ ಸ್ವರೂಪನಾದ ನಿನಗೆ ಆಶ್ರಿತ ಪಾರತಂತ್ರ್ಯವೆಂಬುದು ಸ್ವಾಭಾವಿಕ ಧರ್ಮವಾದುದರಿಂದ ಆಧರ್ಮವನ್ನೂ ನೀನು ನಡೆಸಬೇಕೆಂದು ಭಾವವು,

ಷ್ಠಿಸುವುದರಲ್ಲಿ ನೀನು ಶೂರನೆಂಬುದೇನೋ ನಿಜವು. ಆದರೆ ಈ ಭರತನು ನಿನ್ನಲ್ಲಿಗೆ ಬಂದು,ನೀನು ಪಟ್ಟವನ್ನು ಕಟ್ಟಿಕೊಳ್ಳಬೇಕೆಂದೂ,ಈ ವಿಷಯದಲ್ಲಿ ತನ್ನ ತಾಯಿಯಾದ ಕೈಕೇಯಿಗೂ ತಾನು ಸಮಾಧಾನಪಡಿಸಿರುವೆನೆಂದೂ ಅನೇಕವಿಧದಲ್ಲಿ ನಿನ್ನನ್ನು ಪ್ರಾರ್ಥಿಸುತ್ತಿರುವನಲ್ಲವೆ? ಹೀಗೆ ಆತ್ಮಭೂತನಾದ ನಿನ್ನ ತಮ್ಮನನ್ನು ನೀನು ಅತಿಕ್ರಮಿಸಿಹೋಗದೆ,ಆತನ ಮಾತನ್ನು ನಡೆಸಿ ಕೊಟ್ಟರೆಮಾತ್ರವೇ ಸದಾಚಾರವನ್ನು ಮೀರದವನಾಗುವೆ! ನೀನು ನಿಜವಾಗಿಯೂ ಸತ್ಯಧರ್ಮಪರಾಯಣನಾಗಿದ್ದರೆ, ಇವರೆಲ್ಲರ ಮಾತುಗಳನ್ನೂ ನಡೆಸುವುದೇ ನಿನ್ನ ಮುಖ್ಯಧರ್ಮವು. ಆಶ್ರಿತಪಾರತಂತ್ರ್ಯವೆಂಬುದು ಸತ್ಯಧರ್ಮಗಳಂತೆಯೇ ಮುಖ್ಯವಾದುದಲ್ಲವೆ? ಆದುದರಿಂದ ಹೀಗೆ ದೈನ್ಯದಿಂದ ಯಾಚಿಸುವ ಭರತನ ಮಾತನ್ನು ನೀನು ಈಡೇರಿಸಿಕೊಡಬೇಡವೆ?"ಎಂದನು. ಹೀಗೆ ಆಚಾರ್ಯನಾದ ವಸಿಷ್ಠನು ಅನುನಯಪೂರ್ವಕವಾಗಿ ಹೇಳಿದಮಾತುಗಳನ್ನು ಕೇಳಿ, ಪುರುಷಶ್ರೇಷ್ಠನಾದ ರಾಮನು ಮುಂದೆ ಕುಳಿತಿದ್ದ ಆತನನ್ನು ನೋಡಿ "ಎಲೈ ಆರ್ಯನೆ! ತಂದೆತಾಯಿಗಳು ಮೊದಲು ಮಕ್ಕಳನ್ನು ಪಡೆಯುವುದಕ್ಕಾಗಿ ಎಷ್ಟೋವ್ರತೋಪವಾಸಗಳನ್ನೂ,ದೇವತಾರಾಧನೆಗಳನ್ನೂ ನಡೆಸುವರು. ಮಕ್ಕಳು ಹುಟ್ಟಿದಮೇಲೆ ಅವರನ್ನು ಪೋಷಿಸುವುದಕ್ಕೆ ಎಷ್ಟೋಕಷ್ಟಪಡುವರು. ಅವರಿಗೆ ಸ್ನಾನಮಾಡಿಸುವುದು, ಅವರನ್ನು ಮುದ್ದಾಡುವುದು, ಅವರಿಗೆ ಹಿತವಾಕ್ಯಗಳನ್ನು ಹೇಳುವುದು, ಇವೇ ಮೊದಲಾದ ಮಹೋಪಕಾರವನ್ನು ಮಾಡಿದತಂದೆತಾಯಿಗಳಿಗೆ,ಮಕ್ಕಳು ತಕ್ಕಂತೆ ಯಾವ ಪ್ರತ್ಯುಪಕಾರವನ್ನು ತಾನೇ ಮಾಡಬಲ್ಲರು?ತಂದೆತಾಯಿಗಳು ಮಾಡಿದ ಈ ಉಪಕಾರಕ್ಕೆ ತಕ್ಕ ಪ್ರತ್ಯುಪಕಾರವನ್ನು ಯಾವಮಕ್ಕಳೂ ಮಾಡಲಾರರು. ಎಲೈ ಮಹಾತ್ಮನೆ! ತಂದೆತಾಯಿಗಳು ದೇಹೋತ್ಪತ್ತಿಗೆಮಾತ್ರವೇ ಕಾರಣಭೂತರೆಂದು ನೀನು ಹೇಳಿದೆಯಲ್ಲವೆ? ನಿನ್ನ ಮಾತಿನಂತೆಯೇ ಆಗಲಿ! [1] ದೇಹವೇ ಸರ್ವಧರ್ಮಕ್ಕೂ

---

1. "ಶರೀರಮಾದ್ಯಂ ಖಲು ಧರ್ಮಸಾಧನಂ" ಎಂಬಂತೆ, ಸಮಸ್ತ ಧರ್ಮಗಳಿಗೂ ಸಾಧನಭೂತವಾದ ದೇಹವನ್ನೇ ನಮಗೆ ಕೊಡುವವರಾದುದರಿಂದಲೂ, ನಾವು ಅಜ್ಞಾನದಶೆಯಿಂದ ಶೈಶವಬಾಲ್ಯಾವಸ್ಥೆಯಲ್ಲಿರುವಾಗ ಸರ್ವಪ್ರಕಾರದಿಂದಲೂ ನಮ್ಮನ್ನು ರಕ್ಷಿಸುವವರಾದುದರಿಂದಲೂ, ಆಚಾರ್ಯರಿಗಿಂತಲೂ ಅನೇಕವಿಧದಲ್ಲಿ ಉಪಕಾರಕರಾದ ತಂದೆತಾಯಿಗಳ ಮಾತನ್ನು ಗುರುವಾಕ್ಯಕ್ಕಿಂತಲೂ ಹೆಚ್ಚಾಗಿ ಗೌರವಿಸಬೇಕೆಂದು ಭಾವವು. ಇದಕ್ಕಾಗಿಯೇ "ಮಾತೃದೇವೋಭವ, ಪಿತೃದೇವೋಭವ, ಆಚಾರ್ಯದೇವೋಭವ" ಎಂದು ತಂದೆತಾಯಿಗಳನ್ನು ಮೊದಲು ಪ್ರಧಾನವಾಗಿ ಹೇಳಿ ಆಮೇಲೆ ಆಚಾರ್ಯನನ್ನು ಹೇಳಿದೆ.

ಕಾರಣಭೂತವು. ಅಂತಹದೇಹವನ್ನೇ ನಮಗೆ ಕೊಟ್ಟಿರುವಾಗ, ಅದಕ್ಕಿಂತ ಲೂ ನಮಗೆ ಹೆಚ್ಚಾದ ಬೇರೆ ಉಪಕಾರವನ್ನು ಲೋಕದಲ್ಲಿಯಾರು ತಾನೇ ಮಾಡಬಲ್ಲರು? ಆದುದರಿಂದ ಗುರುವಿಗಿಂತಲೂ ತಂದೆತಾಯಿಗಳೇ ಮೇಲೆಂದು ನನ್ನ ಮತವು. ಆ ದಶರಥರಾಜನೇ ನನ್ನ ದೇಹೋತ್ಪತ್ತಿಗೆ ಕಾರಣನು. ಆತನಿಗೆ ನಾನು ಯಾವಪ್ರತಿಜ್ಞೆಯನ್ನು ಮಾಡಿ ಕೊಟ್ಟಿದ್ದೆನೋ, ಅದನ್ನು ಎಂದಿಗೂ ತಪ್ಪಿಸಲಾರೆನು. ಮೊದಲೇ ಆತನಿಗೆ ಮಾತುಕೊಟ್ಟಿರುವೆನಾದುದರಿಂದ ಈಗ ನಿನ್ನಮಾತನ್ನಾಗಲಿ, ತಾಯಿಯ ಮಾತನ್ನಾಗಲಿ, ನನ್ನ ಪ್ರಿಯಸಹೋದರನಾದ ಭರತನ ಮಾತನ್ನಾಗಲಿ ನಾನು ನಡೆಸಲಾರೆನು" ಎಂದನು. ಇದನ್ನು ಕೇಳಿ ಸಮೀಪದಲ್ಲಿದ್ದ ಭರತನು ಬಹುದುಃಖಿತನಾಗಿ, ಸುಮಂತ್ರನನ್ನುನೋಡಿ "ಎಲೆಸೂತನೆ! ಇನ್ನೇನು? ಈ ನೆಲದಮೇಲೆ ದರ್ಭಾಸನಗಳನ್ನು ಹಾಸಿಡು? ರಾಮನು ಕೇವಲಸಮಾಧಾನವಾಕ್ಯಗಳಿಂದಲೇ ನನ್ನಲ್ಲಿ ಪ್ರಸನ್ನನಾಗುವಂತೆ ತೋರಲಿಲ್ಲ! ಅವನು ನನ್ನಲ್ಲಿ ಪ್ರಸನ್ನನಾಗಿ ಅನುಗ್ರಹಿಸುವವರೆಗೂ ಆತನಮುಂದೆ ಅಡ್ಡಲಾಗಿ ಮಲಗಿಬಿಡುವೆನು. ಬಡ್ಡಿಯಾಸೆಗಾಗಿ ತನ್ನಲ್ಲಿದ್ದ ಹಣವೆಲ್ಲವನ್ನೂ ಇತರರಿಗೆ ಸಾಲಕೊಟ್ಟ ಬ್ರಾಹ್ಮಣನು, ತನ್ನಲ್ಲಿ ಸಾಲತೆಗೆದವರು ಹಿಂತಿರುಗಿ ಕೊಡದಿದ್ದಾಗ ಅವರ ಮನೆಯ ಬಾಗಿಲಿಗೆ ಅಡ್ಡಲಾಗಿ ನಿದ್ರಾಹಾರಗಳನ್ನು ಬಿಟ್ಟು ಧೈರ್ಯದಿಂದ ಮಲಗಿಬಿಡುವಂತೆ, ರಾಮನು ಅಯೋಧ್ಯೆಗೆ ಬರುವವರೆಗೂ ನಾನೂ ಆಹಾರವನ್ನು ಬಿಟ್ಟು ಮುಖಕ್ಕೆ ಮುಸುಕುಹಾಕಿಕೊಂಡು ಈಪರ್ಣಶಾಲೆಯ ಬಾಗಿಲಲ್ಲಿಯೇ ಮಲಗಿಬಿಡುವೆನು"ಎಂದನು. ಆದರೆ ಸುಮಂತ್ರನು ಭರತನಮಾತನ್ನು ನಡೆಸದೆ ಈವಿಷಯದಲ್ಲಿಯೂ ರಾಮನ ಅನುಜ್ಞೆಯನ್ನೇ ಇದಿರುನೋಡುತ್ತಿದ್ದನು. ಹೀಗೆ ಸುಮ್ಮನಿರುವ ಸುಮಂತ್ರನನ್ನು ನೋಡಿ ಬೇಸರಗೊಂಡು, ಭರತನು ತಾನೇ ದರ್ಭೆಗಳನ್ನು ಸಂಗ್ರಹಿಸಿತಂದು ನೆಲದಮೇಲೆ ಹಾಸಿ ಮಲಗಿಬಿಟ್ಟನು. ಆಗ ಮಹಾತೇಜಸ್ವಿಯಾಗಿಯೂ, ರಾಜರ್ಷಿಗಳಿಗೆಲ್ಲಾ ಮೇಲಾಗಿಯೂ ಇರುವ ರಾಮನು ಹೀಗೆ ದೀನದಶೆಯಲ್ಲಿರುವ ಭರತನನ್ನು ನೋಡಿ "ವತ್ಸಭರತನೆ! ಇದೇನು? ನಾನು ನಿನಗೆ ಯಾವವಿಧದಲ್ಲಿ ಅಪಕಾರಿಯಾಗಿರುವೆನು. ನೀನು ಹೀಗೆ ಅಡ್ಡಲಾಗಿ ಮಲಗುವುದೆಂದ

ರೇನು ? ಬ್ರಾಹ್ಮಣನು ಮಾತ್ರವೇ ತನ್ನಲ್ಲಿ ಸಾಲತೆಗೆದುಕೊಂಡು ಮೋಸ ಮಾಡಿದವರ ಬಾಗಿಲಿಗಡ್ಡಲಾಗಿ ಮಲಗುವುದುಂಟು. ಅಭಿಷೇಕಾರ್ಹರಾದ ಕ್ಷತ್ರಿಯರಿಗೆ ಈ ಕೃತ್ಯವು ಎಂದಿಗೂ ಉಚಿತವಲ್ಲ. ಎಲೈಪುರುಷಶ್ರೇಷ್ಠನೆ! ಏಳು!ಕಠಿನವಾದ ಈವ್ರತವನ್ನು ಬಿಟ್ಟು ಬಿಡು!ಶೀಘ್ರದಲ್ಲಿಯೇ ಅಯೋಧ್ಯಾ ಪುರಿಗೆ ಹೊರಡು" ಎಂದನು. ಭರತನಾದರೋ ಆ ದರ್ಭಾಸ್ತರಣದಮೇಲೆ ಹಾಗೆಯೇ ಕುಳಿತುಕೊಂಡು, ತನ್ನ ಸುತ್ತಲೂ ಇದ್ದ ಪುರವಾಸಿಗಳನ್ನೂ, ದೇಶವಾಸಿಗಳನ್ನೂ ನೋಡಿ, ಎಲೈ ಪ್ರಜೆಗಳಿರಾ!ನೀವಾದರೂ ನಮ್ಮಣ್ಣನಿಗೆ ಸಮಾಧಾನವನ್ನು ಹೇಳಬಾರದೆ? ಇದೇಕೆ ಇನ್ನೂ ಸುಮ್ಮನಿರುವಿರಿ ? " ಎಂ ದನು. ಇದನ್ನು ಕೇಳಿ ಅವರಲ್ಲಿ ಕೆಲವರು, ಮಹಾತ್ಮನಾದ ಭರತನನ್ನು ನೋಡಿ ‹‹ಎಲೈ ರಾಜಕುಮಾರನೆ! ಈರಾಮನು ಸತ್ಯಸಂಧನೆಂಬುದನ್ನು ನಾವು ಚೆ ನ್ನಾಗಿ ಬಲ್ಲೆವು. ಇವನು ಹೇಳಿದಮಾತುಗಳು ಅವನಸ್ವಭಾವಕ್ಕೆ ಅನುಗುಣ ವಾಗಿಯೇ ಇರುವುದು. ಈತನ ಮನಸ್ಸೆಲ್ಲವೂ ತಂದೆಯಾಜ್ಞೆಯಲ್ಲಿಯೇ ಸ್ಥಿರ ವಾಗಿ ನೆಲೆಗೊಂಡಿರುವುದು. ಇವನನ್ನು ಈಗ ಇಲ್ಲಿಂದ ಹಿಂತಿರುಗಿಸಬೇಕೆಂ ದರೆ ನಮ್ಮಲ್ಲಿ ಯಾರಿಗೂ ಸಾಧ್ಯವಲ್ಲ" ಎಂದರು. ರಾಮನು ಈ ಮಾತುಗ ಳನ್ನು ಕೇಳಿ, ಸಂತೋಷದಿಂದ ಭರತನನ್ನುನೋಡಿ ‹‹ವತ್ಸಭರತನೆ! ನೋ ಡಿದೆಯಾ? ಇವರೆಲ್ಲರೂ ಧರ್ಮದೃಷ್ಟಿಯುಳ್ಳವರು. ನಿನ್ನಲ್ಲಿ ಪ್ರೇಮ ವುಳ್ಳವರಾಗಿಯೂ ಇರುವರು. ಇವರ ಮಾತನ್ನಾದರೂ ನೀನು ಲಾಲಿ ಸಬೇಡವೆ? ನಾನು ಹೇಳಿದುದಕ್ಕೆ ಅನುಗುಣವಾಗಿಯೇ ಇವರೂ ಹೇಳುತ್ತಿ ರುವರಲ್ಲವೆ? ಇನ್ನಾದರೂ ನೀನು ಚೆನ್ನಾಗಿ ಪರ್ಯಾಲೋಚಿಸಿನೋಡು ! ನೀನು ಮುಂದೆನಡೆಸಬೇಕಾದ ಕಾರ್ಯವೇನೆಂಬುದನ್ನು ಮನಸ್ಸಿನಲ್ಲಿ ಚೆನ್ನಾಗಿ ನಿರ್ಧರಿಸು!ಕೇವಲಹಠದಿಂದ ಪ್ರಯೋಜನವಿಲ್ಲವು.[1] (ಕ್ಷತ್ರಿಯರಿಗೆ ಯೋಗ್ಯ

---

1 ಇದಕ್ಕೆ ‘‘ಮಾಂಚಸ್ಪೃಶ ತಥೋದಕಂ" ಎಂದು ಮೂಲವು. ಪ್ರತ್ಯುಪವೇಶವೆಂ ದರೆ ದಾರಿಗಡ್ಡಲಾಗಿ ಮಲಗಿಬಿಟ್ಟು, ಸಾಲಗಾರರನ್ನು ಅತ್ತಿತ್ತ ಬಿಡದಹಾಗೆ ನಿರೋಧಿಸು ವುದು. ಈಕಾರ್ಯವು ಕ್ಷತ್ರಿಯರಿಗೆ ಉಚಿತವಲ್ಲದುದರಿಂದ ಈ ಅಕೃತ್ಯಕ್ಕೆ ಪ್ರಾಯಶ್ಚಿತ್ತ ರೂಪವಾಗಿ ತನ್ನನ್ನೂ, ಶುದ್ಧಜಲವನ್ನೂ ಮುಟ್ಟಬೇಕೆಂದು ರಾಮನು ಭರತನಿಗೆ ಹೇಳಿದುದಾಗಿ ಗ್ರಹಿಸಬೇಕು. ಅದರೆ ತನಗಿಂತಲೂ ಹಿರಿಯರಾದ ವಸಿಷ್ಠಾದಿಗಳಿರು

ವಲ್ಲದ ಪ್ರತ್ಯುಪವೇಶವೆಂಬ ಈ ಕೃತ್ಯವನ್ನು ನೀನು ನಡೆಸಿದುದೇ ಮ ಹಾದೋಷವು. ಆದಕ್ಕೆ ಪ್ರಾಯಶ್ಚಿತ್ತರೂಪವಾಗಿ) (ಇನ್ನು ಮೇಲೆ ಹೀಗೆ ಮಾಡುವುದಿಲ್ಲವೆಂಡು ಶಪಥರೂಪವಾಗಿ) ಶುದ್ಧಜಲವನ್ನೂ ನನ್ನನ್ನೂ ಸ್ಪರ್ಶಿಸು" ಎಂದನು. ಇದನ್ನು ಕೇಳಿ ಭರತನು ಆತನ ಆಜ್ಞೆಯಂತೆಯೇ ಎದ್ದುನಿಂತು, ಜಲವನ್ನು ಮುಟ್ಟಿ ಬಂದು, ಆಮೇಲೆ ಅಲ್ಲಿ ದ್ದವರನ್ನು ಕುರಿತು "ಇಲ್ಲಿರತಕ್ಕ ಬ್ರಾಹ್ಮಣರೂ, ಮಂತ್ರಿಗಳೂ, ಪುರವಾಸಿಗ ಳೂ, ಈಗ ನಾನು ಹೇಳುವಮಾತನ್ನು ಗಮನಿಸಿ ಕೇಳಿರಿ! ನಾನು ರಾಜ್ಯ ಕ್ಕಾಗಿ ತಂದೆಯನ್ನು ನಿರ್ಬಂಧಿಸಿದವನೂ ಅಲ್ಲ! ರಾಜ್ಯಪ್ರಾಪ್ತಿಗಾಗಿ ನನ್ನ ತಾಯಿಯನ್ನು ಪ್ರೇರಿಸಿದವನೂ ಅಲ್ಲ! ಪರಮಧಾರ್ಮಿಕನಾದ ನನ್ನ ಅಣ್ಣನಾ ದ ಈ ರಾಮನನ್ನು ರಾಜ್ಯದಿಂದ ಹೊರಡಿಸಿ ಕಾಡಿಗಟ್ಟುವುದಕ್ಕೆ ನಾನು ಎಷ್ಟುಮಾತ್ರಕ್ಕೂ ಅನುಮತಿಸಿದವನೂ ಅಲ್ಲ! ಈತನು ಕಾಡಿನಲ್ಲಿರುವುದು ಈಗಲೂ ನನಗೆ ಸಮ್ಮತವಲ್ಲ! ಹಾಗಿದ್ದರೂ ತಂದೆಯ ಆಜ್ಞೆಗಾಗಿ ಕಾಡಿನಲ್ಲಿ ಅವಶ್ಯವಾಗಿದ್ದುಬರಬೇಕೆಂಬ ನಿರ್ಬಂಧವಿದ್ದ ಪಕ್ಷದಲ್ಲಿ, ಆ ಕಾರ್ಯವನ್ನು ನಾನೇ ನಡೆಸಲು ಸಿದ್ಧನಾಗಿರುವೆನು. ಪಿತೃವಾಕ್ಯಪರಿಪಾಲನಕ್ಕಾಗಿ ನಾನೇ ಹದಿನಾಲ್ಕುವರ್ಷಗಳವರೆಗೆ ಕಾಡಿನಲ್ಲಿದ್ದು ಬರುವೆನು. ನನಗೆ ಬದುಲಾಗಿ ರಾ ಮನೇ ರಾಜ್ಯವನ್ನು ಪಾಲಿಸುತ್ತಿರಲಿ! ಆಗಲೂ ನಾವಿಬ್ಬರೂ ತಂದೆ ಯಾಜ್ಞೆಯನ್ನು ಪಾಲಿಸಿದಂತೆಯೇ ಆಗುವುದಿಲ್ಲವೆ?"ಎಂದನು. ಇದನ್ನು ಕೇಳಿ ಧರ್ಮಾತ್ಮನಾದ ರಾಮನು, ತನ್ನ ತಮ್ಮನ ಮನೋದಾರ್ಢ್ಯಕ್ಕೆ ಮ ಚ್ಚಿದವನಾಗಿ, ಮುಂದಿದ್ದ ಪುರವಾಸಿಗಳನ್ನುನೋಡಿ "ಎಲೈ ಪೂಜ್ಯರೆ.! ತಂದೆಯು ಬದುಕಿರುವಾಗ ಯಾವುದನ್ನು ವಿಕ್ರಯಿಸಿಬಿಟ್ಟನೋ, ಯಾ ವುದನ್ನು ಒತ್ತೆಯಿಟ್ಟನೋ, ಯಾವುದನ್ನು ಕ್ರಯಕ್ಕೆ ತೆಗೆದಿರುವನೋ, ಅವೊಂದನ್ನೂ ಮಾರ್ಪಡಿಸುವುದಕ್ಕೆ ಮಕ್ಕಳಿಗೆ ಎಷ್ಟುಮಾತ್ರವೂ

---

ವಾಗ ತನ್ನನ್ನು ಸ್ಪರ್ಶಿಸಿ ಶುದ್ಧನಾಗೆಂದು ರಾಮನು ಹೇಳಬಹುದೆ" ಎಂದರೆ, ಭರ ತನಿಗೆ ತನ್ನಲ್ಲಿ ಸಂಪೂರ್ಣವಾದ ಪ್ರೀತಿಯಿರುವುದರಿಂದ "ಇನ್ನು ಮೇಲೆ ಹೀಗೆ ಮಾಡುವು ದಿಲ್ಲ" ವೆಂದು ಮೈಮುಟ್ಟಿ ಶಪಥಮಾಡಿಕೊಡೆಂದು ಹೇಳಿದುದಾಗಿಯೂ ಅಭ್ಯಾಂತರವು ಗ್ರಾಹ್ಯವು.

ಸಾಧ್ಯವಲ್ಲವೆಂಬುದನ್ನು ನೀವರಿಯಿರಾ! ನಮ್ಮ ತಂದೆಯು ವನವಾಸವೆಂಬ ಅಮೂಲ್ಯದ್ರವ್ಯವೊಂದನ್ನು ನನ್ನಲ್ಲಿ ಒತ್ತೆಯಿಟ್ಟಿರುವನು. ಅದಕ್ಕೆ ಪ್ರತಿಯಾಗಿ ನನ್ನಿಂದ ರಾಜ್ಯವನ್ನು ತೆಗೆದುಕೊಂಡು .ಈ ಭರತನವಶಕ್ಕೆಕೊಟ್ಟಿರುವನು. ಇದನ್ನು ತಪ್ಪಿಸುವುದಕ್ಕೆ ಈಗ ನಮ್ಮಲ್ಲಿ ಯಾರಿಗೂ ಶಕ್ಯವಲ್ಲ! ನಾನೇ ಆ ವನವಾಸವನ್ನು ನಿರ್ವಹಿಸುವುದಕ್ಕೆ ಶಕ್ತನಾಗಿರುವಾಗ, ನನಗೆ ಪ್ರತಿಯಾಗಿ ಆ ಕಾರ್ಯಕ್ಕೆ ಬೇರೊಬ್ಬನನ್ನು ನಿಯಮಿಸುವುದೂ ಯುಕ್ತವಲ್ಲ! ಒಬ್ಬರಲ್ಲಿ ನಂಬಿಕೆಯಿಂದ ಕೊಟ್ಟ ವಸ್ತುವನ್ನು ಅವರು ಮತ್ತೊಬ್ಬರಲ್ಲಿಡುವುದು ಬಹಳಹೀನಕಾರ್ಯವು. ಆದರಿಂದ ಲೋಕಾಪವಾದವೂ ಬರುವುದು. ಕೈಲಾಗದವರೇ ಈ ಅಕಾರ್ಯಕ್ಕೆ ಪ್ರಯತ್ನಿಸುವರು. ಕೈಕೇಯಿಯೂ ಯುಕ್ತವಾಗಿಯೇ ಹೇಳಿರುವಳು. ನಮ್ಮತಂದೆಯು ನಡೆಸಿದ ಕಾರ್ಯವೂ ಧರ್ಮಯುಕ್ತವಾಗಿಯೇ ಇರುವುದು. ನಾವಿಬ್ಬರೂ ಇದಕ್ಕೆ ಲೋಪವನ್ನು ತಂದು, ನಮಗಿಷ್ಟಬಂದಂತೆ ಹೀನಪಕ್ಷವನ್ನವಲಂಬಿಸಿದರೆ, ನಮ್ಮತಂದೆಯನ್ನು ಅಸತ್ಯದಲ್ಲಿ ಬಿಳಿಸಿದಂತಾಗುವುದಲ್ಲವೆ? ಭರತನು ಬಹಳ ತಾಳ್ಮೆಯುಳ್ಳವನೆಂದೂ, ಗುರುಗಳನ್ನು ಪೂಜಿಸಿದವನೆಂದೂ ನಾನು ಚೆನ್ನಾಗಿ ಬಲ್ಲೆನು. ಸತ್ಯಸಂಧನಾಗಿಯೂ, ಮಹಾತ್ಮನಾಗಿಯೂ ಇರುವ ಆ ಭರತನಿಗೆ ಸಮಸ್ತವಿಧದಲ್ಲಿಯೂ ಶ್ರೇಯಸ್ಸುಂಟಾಗುವುದರಲ್ಲಿ ಸಂದೇಹವೇ ಇಲ್ಲ! ಎಲೈ ಮಹನೀಯರೆ! ಇನ್ನು ಹೆಚ್ಚಾಗಿ ಹೇಳಿದುದರಿಂದೇನು? ನನ್ನವನವಾಸಕಾಲವು ತೀರಿದೊಡನೆಯೇ ಸ್ವಲ್ಪವೂ ಸಾವಕಾಶಮಾಡದೆ ನಾನು ಕಾಡಿನಿಂದ ಹಿಂತಿರುಗಿಬಂದು, ಧರ್ಮಶೀಲನಾದ ಈ ಭರತನೊಡಗೂಡಿಯೇ ರಾಜ್ಯವನ್ನು ಪಾಲಿಸುವೆನು. ಇದುನಿಜವು!" ಎಂದನು. ಆ ಮೇಲೆ ಭರತನನ್ನುನೋಡಿ, "ಎಲೆ ವತ್ಸನೆ! ನಿನ್ನ ತಾಯಿಯಾದ ಕೈಕೇಯಿಯು ರಾಜನಿಂದ ವರವನ್ನು ಪಡೆದಿರುವಳು. ತಾಯಿಯಾದ ಅವಳ ಇಷ್ಟಾನುಸಾರವಾಗಿ ಅವಳಮಾತನ್ನು ಗೌರವಿಸುವುದಕ್ಕಾಗಿಯೇ ನಾನು ಕಾಡಿಗೆ ಹೊರಟುಬಂದೆನು. ಅದರಂತೆಯೇ ನೀನೂ ಅಣ್ಣನಾದ ನನ್ನ ಮಾತನ್ನು ಗೌರವಿಸತಕ್ಕವನಾಗಿದ್ದರೆ, ನಾನು ಹೇಳುವಂತೆ ಅಯೋಧ್ಯೆಗೆಹೋಗಿ ಪಟ್ಟಾಭಿಷಿಕ್ತನಾಗಿ, ನಮ್ಮತಂದೆಯಸತ್ಯವನ್ನು ಪಾಲಿಸಿ ಆತನನ್ನು ಅಸತ್ಯದಿಂದ ಬಿಡಿಸು" ಎಂದನು. ಇಲ್ಲಿಗೆ ನೂರಹನ್ನೊಂದನೆಯ ಸರ್ಗವು.

---

## ರಾಮನು ಭರತನನ್ನು ಸಮಾಧಾನಪಡಿಸಿ ಅಯೋಧ್ಯೆಗೆ ಪ್ರಯಾಣಮಾಡಿಸಿದುದು.

ಎಣೆಯಿಲ್ಲದ ತೇಜಸ್ಸಿನಿಂದ ಪ್ರಕಾಶಿಸುತ್ತಿರುವ ಆ ಅಣ್ಣ ತಮ್ಮಂದಿರ ಸಲ್ಲಾಪಗಳನ್ನೂ,ಅವರ ಸಮಾಗಮವನ್ನೂ ನೋಡಿ, ಅಲ್ಲಿದ್ದ ಮಹರ್ಷಿಗಳೆಲ್ಲರೂ ಆಶ್ಚರ್ಯದಿಂದ ರೋಮಾಂಚಿತರಾಗಿದ್ದರು. ಇದಕ್ಕೆ ಮೊದಲೇ ಅಂತರ್ಹಿತರಾಗಿ ಅಲ್ಲಿದ್ದ ರಾಜರ್ಷಿಗಳೂ, ಸಿದ್ಧರೂ, ದೇವರ್ಷಿಗಳೂ, ಕಕುತ್ಸ್ಥವಂಶಕ್ಕೆ ತಿಲಕಪ್ರಾಯರಾಗಿಯೂ, ಮಹಾತ್ಮರಾಗಿಯೂ ಇದ್ದ ಆ ಸಹೋದರರನ್ನು ನೋಡಿ "ಎಲೈ ಮಹಾತ್ಮರೆ! ನಮಗೆ ನಿಮ್ಮಿಬ್ಬರ ಸಂಭಾಷಣವನ್ನೂ ಕೇಳಿದುದರಿಂದುಂಟಾದ ಸಂತೋಷಕ್ಕೆ ಪಾರವೇ ಇಲ್ಲದಿರುವುದು. ನಮ್ಮ ಮನಸ್ಸೆಲ್ಲವೂ ನಿಮ್ಮ ಮೇಲೆ ನಟ್ಟುಹೋಗಿರುವುದು. ಹೀಗೆ ಧರ್ಮಜ್ಞರಾಗಿಯೂ, ಧರ್ಮಾನುಷ್ಠಾನಪರರಾಗಿಯೂ ಇರುವ ನಿಮ್ಮಿಬ್ಬರನ್ನು ಪುತ್ರರನ್ನಾಗಿ ಪಡೆದ ದಶರಥನೇ ಧನ್ಯನು" ಎಂದು ಸ್ತುತಿಸುತ್ತ, ಮುಂದೆ ನಡೆಯಬೇಕಾದ ರಾವಣವಧವನ್ನು ಮನಸ್ಸಿನಲ್ಲಿಟ್ಟುಕೊಂಡು, ಅವರೆಲ್ಲರೂ ಏಕಕಂಠವಾಗಿ, ರಾಜಶ್ರೇಷ್ಠನಾದ ಭರತನನ್ನು ಕುರಿತು. "ಎಲೈ ಭರತನೆ! ನೀನು ಸತ್ಕುಲದಲ್ಲಿ ಹುಟ್ಟಿದವನು. ಮಹಾಪ್ರಾಜ್ಞನು. ಸದಾಚಾರಸಂಪತ್ತುಳ್ಳವನು. ಅಪಾರವಾದ ಕೀರ್ತಿಯುಳ್ಳವನು. ನಿನ್ನ ತಂದೆಗೆ ನೀನು ಶ್ರೇಯಸ್ಸನ್ನುಕೋರುವುದಾದರೆ ರಾಮನು ಹೇಳಿದಂತೆ ನಡೆಸಬೇಕಾದುದೇ ನಿನಗೆ ಅವಶ್ಯವು. ಹಾಗೆಯೇ ರಾಮನೂ ತಂದೆಯ ಋಣವನ್ನು ತೀರಿಸಿ ಕೃತಾರ್ಥನಾಗಬೇಕೆಂಬುದೇ ನಮ್ಮ ಕೋರಿಕೆ. ದಶರಥನು ಕೈಕೇಯಿಯ ಋಣವನ್ನು ತೀರಿಸಿದುದರಿಂದ ಸ್ವರ್ಗಲೋಕವನ್ನು ಪಡೆದಿರುವನು.ಆತನು ಕೈಕೇಯಿಗೆ ತೀರಿಸಿದಸಾಲವನ್ನು ನೀವು ತಪ್ಪಿಸಿಬಿಟ್ಟರೆ ಆತನು ಸ್ವರ್ಗಭ್ರಷ್ಟನಾಗುವನು" ಎಂದರು. ಹೀಗೆ ಸಿದ್ಧಗಂಧರ್ವಮಹರ್ಷಿಗಳೆಲ್ಲರೂ ಭರತನಿಗೆ ಬುದ್ಧಿವಾದವನ್ನು ಹೇಳಿ ತಮ್ಮ ತಮ್ಮ ಸ್ಥಾನಗಳಿಗೆ ಹೊರಟರು. ರಾಮನು ಇವರಮಾತನ್ನು ಕೇಳಿ ಬಹಳಸಂತೋಷಪಟ್ಟು ಅವರೆಲ್ಲರನ್ನೂ ತಕ್ಕರೀತಿಯಿಂದ ಪೂಜಿಸಿ ಸತ್ಕರಿಸಿದನು. ಆಗ ಭರತನಾದರೋ ದುಃಖದಿಂದಲೂ, ಭಯದಿಂದಲೂ ನಡುಗುತ್ತಿರುವ ಮೈಯುಳ್ಳ

ವನಾಗಿ, ರಾಮನ ಮುಂದೆ ಕೈಮುಗಿದು ನಿಂತು, ತೊದಲು ಮಾತುಗಳಿಂದ, ಅಣ್ಣಾ! “ಯಾರೇನು ಹೇಳಿದರೂ ಹೇಳಲಿ! ರಾಜವಂಶದಲ್ಲಿ ಹುಟ್ಟಿದವನಿಗೆ ರಾಜ್ಯಪರಿಪಾಲನವೇ ಮುಖ್ಯಧರ್ಮವು. ಇದರಮೇಲೆ ಜ್ಯೇಷ್ಠನಿಗೆ ಪಟ್ಟಾಭಿ ಷೇಕವನ್ನು ನಡೆಸುವುದೇ ಹಿಂದಿನಿಂದ ಅನುಸರಿಸಿಬಂದ ನಮ್ಮಕುಲಧರ್ಮವು. ಇವೆರಡನ್ನೂ ನೀನು ಚೆನ್ನಾಗಿ ಪರ್ಯಾಲೋಚಿಸು! ನನ್ನ ತಾಯಿಯು ತನ್ನ ಮೊದಲಿನದುರ್ಬುದ್ಧಿಯನ್ನುಬಿಟ್ಟು ಈಗ ನಿನ್ನಮುಂದೆ ಪ್ರಾರ್ಥಿಸುತ್ತಿರುವು ದನ್ನು ಗಮನಿಸು!ಅದಕ್ಕನುಸಾರವಾಗಿ ನಡೆಯುವುದೇ ನಿನಗುಚಿತವು. ಇದೂ ಅಲ್ಲದೆ ಮಹತ್ತಾದ ಈ ರಾಜ್ಯವನ್ನು ರಕ್ಷಿಸುವುದಕ್ಕೂ ನಾನು ಸಮರ್ಥ ನಲ್ಲ! ನಮ್ಮಲ್ಲಿ ಅನುರಕ್ತರಾದ ಈ ಪ್ರಜೆಗಳ ಮನಸ್ಸನ್ನು ಸಂತೋಷಪಡಿ ಸುವಮಾರ್ಗವೂ ನನಗೆ ತಿಳಿಯದು! ನಾನು ಏಕಾಕಿಯಾಗಿ ಯಾವಕೆಲಸವ ನ್ನೂ ಮಾಡಲಾರೆನು! ನಮ್ಮಬಂಧುಗಳೂ, ಸೇನಾಧಿಪತಿಗಳೂ, ನಮ್ಮ ಮಿ ತ್ರರೂ, ನಮ್ಮ ಶ್ರೇಯಃಕಾಂಕ್ಷಿಗಳೂ ಮೇಘವನ್ನು ಇದಿರುನೋಡುತ್ತಿರು ವ ಕೃಷಿಜೀವಿಗಳಂತೆ, ನಿನ್ನನ್ನೇ ಅತ್ಯಾತುರದಿಂದ ಇದಿರುನೋಡುತ್ತಿರುವ ರು. ನೀನು ರಾಜಪದವಿಗೆ ಬರುವುದನ್ನೇ ನಿರೀಕ್ಷಿಸುತ್ತಿರುವರು. ನಿನಗೆ ತಿಳಿ ಯದುದೊಂದೂ ಇಲ್ಲವು. ನೀನೇ ಈ ರಾಜ್ಯವನ್ನಂಗೀಕರಿಸಿ ಸ್ಥಿರವಾಗಿ ಪಾ ಲಿಸು. ನೀನು ಈ ನಮ್ಮ ಕೋಸಲರಾಜ್ಯವೊಂದನ್ನೇಅಲ್ಲದೆ ಈ ಮೂರು ಲೋಕವನ್ನಾಳುವುದಕ್ಕೂ ಶಕ್ತಿಯುಳ್ಳವನು” ಎಂದು ಹೇಳುತ್ತ,ಆ ರಾಮ ನನ್ನು ಹಿಂತಿರುಗಿಸುವುದಕ್ಕೆ ಬೇರೊಂದುಪಾಯವನ್ನೂ ಕಾಣದೆ, ಆ ರಾಮ ನ ಎರಡು ಕಾಲುಗಳನ್ನೂ ಹಿಡಿದು ಸಾಷ್ಟಾಂಗಪ್ರಣಾಮವನ್ನುಮಾಡಿ ಅ ನೇಕವಿಧದಲ್ಲಿ ಪ್ರಾರ್ಥಿಸಿದನು. ಆಗ ಶ್ಯಾಮವರ್ಣನಾಗಿಯೂ, ಕಮಲದಳ ದಂತೆ ಕಣ್ಣುಳ್ಳವನಾಗಿಯೂ, ಮದಿಸಿದ ಹಂಸದಂತೆ ಇಂಪಾದ ಸ್ವರವುಳ್ಳ ವನಾಗಿಯೂ ಇರುವ ತಮ್ಮನಾದ ಆ ಭರತನನ್ನು ರಾಮನು ಮೇಲಕ್ಕೆತ್ತಿ ಕರೆದು ತೊಡೆಯಮೇಲೆ ಕುಳ್ಳಿರಿಸಿಕೊಂಡು “ಎಲೆ ವತ್ಸನೆ! ನಿನಗೆ ಸಹಜ ವಾದ ಬುದ್ಧಿಯೂ, ಗುರುಶಿಕ್ಷೆಯಿಂದ ಬಂದಬುದ್ಧಿಯೂ ಮೊದಲೇ ಸಿದ್ಧಿಸಿ ರುವುವು. ಆದುದರಿಂದ ಈ ಭೂಮಂಡಲವೆಲ್ಲವನ್ನೂ ಪಾಲಿಸುವುದಕ್ಕೂ ನೀನು ಶಕ್ತನಾಗಿರುವೆ ! ಪ್ರಧಾನಮಂತ್ರಿಗಳೊಡನೆಯೂ, ಮಿತ್ರರೊಡನೆ

ಯೂ, ಬುದ್ಧಿವಂತರಾದ ಅಧಿಕಾರಿಗಳೊಡನೆಯೂ ಕೂಡಿ ಸಮಸ್ತ ಕಾರ್ಯಗಳನ್ನೂ ಚೆನ್ನಾಗಿ ಆಲೋಚಿಸಿ,ನಡೆಸಬೇಕಾದ ಉತ್ತಮಕಾರ್ಯಗಳನ್ನು ನಡೆಸು! ಮುಖ್ಯವಾಗಿ ಒಂದುವಿಷಯವನ್ನು ಹೇಳುವೆನು ಕೇಳು. ಒಂದು ವೇಳೆ ಚಂದ್ರಕಾಂತಿಯು ಚಂದ್ರನನ್ನು ಬಿಟ್ಟು ಹೋದರೂ ಹೋಗಬಹುದು. ಹಿಮವತ್ಪರ್ವತವು ಹಿಮವನ್ನು ಬಿಟ್ಟರೂ ಬಿಡಬಹುದು. ಸಮುದ್ರವು ತನ್ನಮೇರೆಯನ್ನು ಮೀರಿದರೂ ಮೀರಬಹುದು. ನಾನು ಮಾತ್ರ ತಂದೆಗೆ ಮಾಡಿಕೊಟ್ಟ ಪ್ರತಿಜ್ಞೆಯನ್ನು ಎಂದಿಗೂ ಮೀರಲಾರೆನು. ಕಾಮದಿಂದಲೋ, ಲೋಭದಿಂದಲೋ, ನಿನ್ನ ತಾಯಿಯು ನಿನಗಾಗಿ ಈ ಕಾರ್ಯವನ್ನು ಮಾಡಿರಬಹುದೆಂದು ಹೇಳಿದೆಯಲ್ಲವೆ? ಅದನ್ನು ನೀನು ಮನಸ್ಸಿನಲ್ಲಿರಿಸಬೇಡ!ಆಕೆಯಲ್ಲಿ ನೀನು ಮಾತೃಭಕ್ತಿಯನ್ನು ಬಿಡಬಾರದು" ಎಂದನು! ಸೂರ್ಯನಂತೆ ಮಹಾತೇಜಸ್ವಿಯಾಗಿಯೂ, ಪಾಡ್ಯದ ಚಂದ್ರನಂತೆ ದಿನದಿನಕ್ಕೆ ವೃದ್ಧಿಹೊಂದತಕ್ಕವನಾಗಿಯೂ ಇರುವ ರಾಮನು,ಹೀಗೆ ತನಗೆ ಬುದ್ಧಿವಾದಗಳನ್ನು ಹೇಳುತ್ತಿರುವುದನ್ನು ಕೇಳಿ ಭರತನು, "ಅಣ್ಣಾ! ನಾನಿನ್ನೇನು ಹೇಳಲಿ! 'ಇದೋ!ಇಲ್ಲಿಸುವರ್ಣಮಯವಾದ ನಿನ್ನ ಪಾದುಕೆಗಳೆರಡೂ ಇರುವುವಲ್ಲವೆ? ಇವುಗಳಲ್ಲಿ ನಿನ್ನ ಎರಡುಪಾದಗಳನ್ನೂ ಇಡು! ಈಪಾದುಕೆಗಳೇ ಸಮಸ್ತಲೋಕದ ಯೋಗಕ್ಷೇಮವನ್ನೂ ನಡೆಸಬಲ್ಲುವು"ಎಂದನು. ಆಗ ರಾಮನು ಆ ಪಾದುಕೆಗಳಮೇಲೆ ತನ್ನ ಪಾದಗಳೆರಡನ್ನೂ ಇಟ್ಟು, ಅದರಿಂದ ಒಡನೆಯೇ ಕೆಳಗಿಳಿದು ಅವೆರಡನ್ನೂ ಭರತನಿಗೆ ತೆಗೆದುಕೊಟ್ಟನು. ಭರತನು ಅವುಗಳಿಗೆ ಸಾಷ್ಟಾಂಗಪ್ರಣಾಮವನ್ನು ಮಾಡಿ, ಎದ್ದು ನಿಂತು, ರಾಮನಿಗೆ ಕೈಮುಗಿಯುತ್ತ "ಅಣ್ಣಾ! ನಿನ್ನ ವನವಾಸಕಾಲದ ಅವಧಿಯು ಹದಿನಾಲ್ಕು ವರ್ಷಗಳಲ್ಲವೆ? ಅದುವರೆಗೂ ನಾನು ಜಡೆಯನ್ನು ಧರಿಸಿ ನಾರುಮಡಿಯ

---

1 ಭರತನು ಹಿಂತಿರುಗಿ ಹೋಗುವಾಗ, ಭರದ್ವಾಜನೊಡನೆ ಚಿತ್ರಕೂಟದಲ್ಲಿ ನಡೆದ ಸಂಗತಿಗಳನ್ನು ಹೇಳುತ್ತ, "ವಸಿಷ್ಠನು ರಾಮನನ್ನು ಕುರಿತು ಆತನ ಪಾದುಕೆಗಳನ್ನು ನನಗೆ ಕೊಡುವಹಾಗೆ ಹೇಳಿದನು." ಎಂದು ಸೂಚಿಸಿರುವುದರಿಂದ, ಇಲ್ಲಿ ವಸಿಷ್ಠನು ರಾಮನಿಗೆ ಪಾದುಕೆಗಳನ್ನು ಕೊಡೆಂದು ನಿಯಮಿಸಿದಮೇಲೆಯೇ ಭರತನು ಹಾಗೆ ಪ್ರಾರ್ಥಿಸಿದುದಾಗಿ ತಿಳಿದುಬರುವುದು.

ನ್ನುಟ್ಟು ಫಲಮೂಲಗಳನ್ನೇ ತಿನ್ನುತ್ತ, ಸಮಸ್ತ ರಾಜ್ಯಭಾರಗಳನ್ನೂ ಈ
ನಿನ್ನಪಾದುಕೆಗಳಿಗೊಪ್ಪಿಸಿ, ನಮ್ಮ ಅಯೋಧ್ಯೆಗೆ ಹೊರಗಾಗಿಯೇ ಇದ್ದು
ನಿನ್ನ ಆಗಮನವನ್ನೇ ಇದಿರುನೋಡುತ್ತಿರುವೆನು. ಆದರೆ ಒಂದು ವಿಷಯ
ವನ್ನು ಮಾತ್ರ ನಿನ್ನಲ್ಲಿ ವಿಜ್ಞಾಪಿಸುವೆನು. ಹದಿನಾಲ್ಕುವರ್ಷಗಳು ಕಳೆದ
ಮಾರನೆಯ ದಿನದ ಪ್ರಾತಃಕಾಲದಲ್ಲಿ ಪುನಃ ನಿನ್ನನ್ನು ನಾನು ನೋಡದಿದ್ದ
ಪಕ್ಷದಲ್ಲಿ, ನಾನು ಆಕ್ಷಣವೇ ಅಗ್ನಿಪ್ರವೇಶವನ್ನು ಮಾಡಿಬಿಡುವೆನು ಇದು
ನಿಜವು" ಎಂದನು. ರಾಮನು ಅದಕ್ಕೊಪ್ಪಿ, ಸಂತೋಷದಿಂದ ಭರತನನ್ನೂ,
ಶತ್ರುಘ್ನನನ್ನೂ ಆಲಿಂಗಿಸಿಕೊಂಡು, ಪುನಃ ಭರತನನ್ನು ನೋಡಿ "ಎಲೈ
ವತ್ಸನೆ ! ನಿನ್ನ ತಾಯಿಯಾದ ಕೈಕೇಯಿಯನ್ನುಮಾತ್ರ ನೀನು ಗೌರವಿಸಿ
ಕಾಪಾಡುತ್ತಿರಬೇಕು. ಅವಳ ವಿಷಯದಲ್ಲಿ ನಿನಗಿರುವ ಕೋಪವನ್ನು ಬಿಟ್ಟು
ಬಿಡು! ಇದೋ! ನನ್ನಮೇಲೆಯೂ, ಈ ಸೀತೆಯಮೇಲೆಯೂ ಆಣೆಯಿಟ್ಟು
ಹೇಳುವೆನು" ಎಂದು ಹೇಳಿ, ಕಣ್ಣಿನಲ್ಲಿ ಧಾರೆಧಾರೆಯಾಗಿ ನೀರನ್ನು ಸುರಿ
ಸುತ್ತ ಆ ಭರತನನ್ನು ಕಳುಹಿಸಿಕೊಟ್ಟನು. ಆಮೇಲೆ ಪರಾಕ್ರಮಿಯಾಗಿ
ಯೂ ಧರ್ಮಜ್ಞನಾಗಿಯೂ ಇರುವ ಭರತನು, ಆ ರಾಮಪಾದುಕೆಗಳನ್ನು
ಪುಷ್ಪಾದಿಗಳಿಂದಲಂಕರಿಸಿ, ಅವುಗಳನ್ನು ಪೂಜಿಸಿ,ರಾಮನಿಗೆ ಪ್ರದಕ್ಷಿಣವನ್ನು
ಮಾಡಿ,ಆಪಾದುಕೆಗಳೆರಡನ್ನೂ ಶತ್ರುಂಜಯವೆಂಬ ತನ್ನ ಪಟ್ಟದಾನೆಯತಲೆ
ಯಮೇಲೇರಿಸಿದನು. ಇತ್ತಲಾಗಿ ಹಿಮವತ್ಪರ್ವತದಂತೆ ಸ್ವಧರ್ಮದಲ್ಲಿ ಸ್ಥಿರ
ವಾಗಿ ನೆಲೆಸಿದ ರಘುವಂಶವರ್ಧಕನಾದ ರಾಮನು,ಅಲ್ಲಿಗೆ ಬಂದಿದ್ದ ಮಂತ್ರಿ
ಪುರೋಹಿತಾದಿಗಳೆಲ್ಲರನ್ನೂ ಯಥೋಚಿತವಾಗಿ ಮನ್ನಿಸಿ, ಪುರವಾಸಿಗಳಿ
ಗೂ ಸಮಾಧಾನವನ್ನು ಹೇಳಿ, ಅವರೆಲ್ಲರನ್ನೂ ಕಳುಹಿಸಿ ಕೊಟ್ಟನು. ಹಾಗೆ
ಯೇ ಕೌಸಲ್ಯೆಯೇ ಮೊದಲಾದ ಮಾತೃವರ್ಗವೆಲ್ಲವೂ ರಾಮನನ್ನು ಬಿಟ್ಟು
ಹೋಗಲಾರದ ದುಃಖದಿಂದ ಕಣ್ಣೀರು ಬಿಡುತ್ತಿರಲು, ರಾಮನು ಅವರೊ
ಬ್ಬೊಬ್ಬರ ಬಳಿಗೂ ಬಂದು ನಮಸ್ಕರಿಸಿ,ಸಮಾಧಾನಮಾಡಿ ಕಳುಹಿಸಿ, ತಾ
ನೂ ದುಃಖದಿಂದ ಗಟ್ಟಿಯಾಗಿ ಪ್ರಲಾಪಿಸುತ್ತ ತನ್ನ ಪರ್ಣಶಾಲೆಯನ್ನು
ಪ್ರವೇಶಿಸಿದನು. ಇಲ್ಲಿಗೆ ನೂರಹನ್ನೆರಡನೆಯ ಸರ್ಗವು.

---

—•• ◆ಭರತನು ಅಯೋಧ್ಯೆಗೆ ಹೊರಟುದು.◆ ••—

ಆಗ ಭರತನು ಪಟ್ಟದಾನೆಯಮೇಲೆ ಇರಿಸಿದ್ದ ರಾಮಪಾದುಕೆಯನ್ನು ತೆಗೆದು ತನ್ನ ತಲೆಯಮೇಲಿಟ್ಟುಕೊಂಡು, ಪರಮಸಂತೋಷದಿಂದ ಶತ್ರುಘ್ನನೊಡಗೂಡಿ ರಥವನ್ನೇರಿದನು. ವಸಿಷ್ಠನೂ ವಾಮದೇವನೂ, ವ್ರತನಿಷ್ಠನಾದ ಜಾಬಾಲಿಯೂ, ಮಂತ್ರಜ್ಞರಾದ ಮಂತ್ರಿಗಳೂ ಮುಂದೆ ಹೊರಟರು. ಇವರೆಲ್ಲರೂ ಹೊರಟುಬರುವಾಗ, ರಾಮನಿಗೆ ನಿವಾಸಸ್ಥಾನವಾದ ಆ ಚಿತ್ರಕೂಟಪರ್ವತವನ್ನು ಪ್ರದಕ್ಷಿಣಮಾಡಿ, ಅದರ ಪೂರ್ವದಿಕ್ಕಿನ ಮಾರ್ಗವಾಗಿ ಸೀತಾರಾಮರ ಜಲಕ್ರೀಡೆಗಳಿಂದ ರಮಣೀಯವಾದ ಮಂದಾಕಿನೀನದಿಗೆ ಬಂದರು. ಹೀಗೆ ಭರತನು ಸೇನೆಯೊಡಗೂಡಿ ಆಪರ್ವತದ ವಿಚಿತ್ರವಿಚಿತ್ರಗಳಾದ ಧಾತುವಿಶೇಷಗಳನ್ನು ನೋಡುತ್ತ, ಅದರ ಪಕ್ಕದ ದಾರಿಯನ್ನು ಹಿಡಿದು ಬರುತಿದ್ದನು. ದಾರಿಯಲ್ಲಿ ಆ ಚಿತ್ರಕೂಟಪರ್ವತಕ್ಕೆ [1]ಸಮೀಪವಾಗಿ ಭರದ್ವಾಜಮಹರ್ಷಿಯು ಆಗಾಗ ತನ್ನನಿವಾಸಕ್ಕಾಗಿ ಏರ್ಪಡಿಸಿಕೊಂಡಿದ್ದ ಒಂದು ಆಶ್ರಮ ಪ್ರದೇಶವನ್ನು ಕಂಡನು. ಆಗ ಇವನು ಆ ಆಶ್ರಮದೊಳಗೆ ಪ್ರವೇಶಿಸಿ, ರಥದಿಂದಿಳಿದು, ಅಲ್ಲಿದ್ದ ಮಹರ್ಷಿಯ ಪಾದಕ್ಕೆ ನಮಸ್ಕರಿಸಿದನು. ಹೀಗೆ ನಮಸ್ಕರಿಸುತ್ತಿರುವ ಭರತನನ್ನು ನೋಡಿ,

---

1 ಭರದ್ವಾಜಾಶ್ರಮವು ಚಿತ್ರಕೂಟಕ್ಕೆ ದೂರದಲ್ಲಿರುವಹಾಗೆ ಹಿಂದೆ ಕಾಣಿಸಿದೆ. ಇಲ್ಲಿ ಸಮೀಪವೆಂದು ಹೇಳುವುದಕ್ಕೆ ಕಾರಣವೇನೆಂದರೆ, ಭರದ್ವಾಜಾಶ್ರಮವನ್ನು ಬಿಟ್ಟಮೇಲೆ, ಯಮುನಾನದಿಯನ್ನು ದಾಟಿದುದಾಗಿ ಈ ಸರ್ಗದಲ್ಲಿಯೇ ಹೇಳಲ್ಪಡುವುದರಿಂದ, ಯಮುನಾತೀರದಲ್ಲಿಯೂ ಭರದ್ವಾಜನಿಗೆ ಬೇರೊಂದಾಶ್ರಮವಿತ್ತೆಂದು ಸೂಚಿತವಾಗುವುದು. ಈ ಆಶ್ರಮವು ಚಿತ್ರಕೂಟಕ್ಕೆ ಸಮೀಪವಾಗಿರುವುದು. ಭರದ್ವಾಜನು ಚಿತ್ರಕೂಟವೃತ್ತಾಂತವನ್ನು ಶಿಷ್ಯರಮೂಲಕವಾಗಿ ತಿಳಿದುಕೊಳ್ಳಬೇಕೆಂಬ ಆತುರದಿಂದ, ಈ ಆಶ್ರಮಕ್ಕೆ ಬಂದು ನಿರೀಕ್ಷಿಸುತಿದ್ದನೆಂದು ಮಹೇಶ್ವರ ತೀರ್ಥವ್ಯಾಖ್ಯಾನವು. ಚಿತ್ರಕೂಟದಿಂದ ಬರುವ ದಾರಿಯ ರಾಮಣೀಯಕವನ್ನು ನೋಡುತ್ತಾ ವಿನೋದದಿಂದ ಬರುತಿದ್ದ ಭರತನಿಗೆ, ಬಹುದೂರದಲ್ಲಿದ್ದ ಭರದ್ವಾಜಾ ಶ್ರಮವು ಸಮೀಪದಲ್ಲಿದ್ದಂತೆಯೇ ಕಂಡುಬಂದಿತೇ ಹೊರತು ನಿಜವಾಗಿಯೂ ಭರದ್ವಾಜಾಶ್ರಮವು ಚಿತ್ರಕೂಟಕ್ಕೆ ಸಮೀಪದಲ್ಲಿರಲಿಲ್ಲವೆಂದು ಗೋವಿಂದರಾಜವ್ಯಾಖ್ಯಾನವು.



924. ಭರತನು ರಾಮಪಾದುಕೆಯನ್ನು ಶಿರಸ್ಸಿನಲ್ಲಿ ಧರಿಸಿ, ವಸಿಷ್ಠಾದಿಗಳನ್ನು ಮುಂದಿಟ್ಟು
ಕೊಂಡು ಚಿತ್ರಕೂಟದಿಂದ ಅಯೋಧ್ಯೆಗೆ ಹೊರಟುದು.

ಭರದ್ವಾಜನು ಆತನ ಪ್ರತ್ಯಾಗಮನಕ್ಕಾಗಿ ಬಹಳ ಸಂತೋಷಪಟ್ಟು "ವತ್ಸ ಭರತನೆ! ರಾಮನನ್ನು ಕಂಡಿದ್ದೆಯಾ ? ನೀನು ಹೋದ ಕೆಲಸವೇನಾಯಿತು?" ಎಂದು ಕೇಳಿದನು. ಅದಕ್ಕಾ ಭರತನು "ಎಲೈಪೂಜ್ಯನೆ! ರಾಮನು .ದೃಢಸಂಕಲ್ಪವುಳ್ಳವನಲ್ಲವೆ. ರಾಜ್ಯವನ್ನು ಕೈಕೊಳ್ಳಬೇಕೆಂದು ನಾನೂ, ಗುರುವಾದ ವಸಿಷ್ಠನೂ ಅನೇಕವಿಧದಲ್ಲಿ ಆತನನ್ನು ಪ್ರಾರ್ಥಿಸಿದೆವು. ಎಷ್ಟು ಪ್ರಾರ್ಥಿಸಿದರೇನು?ಆತನು ನಮ್ಮೆಲ್ಲರ ಆಗಮನವನ್ನು ನೋಡಿ ಅದಕ್ಕೆಮಾತ್ರ ತಾನ. ಸಂತೋಷಿಸಿದನೇ ಹೊರತು, ನಮ್ಮ ಕೋರಿಕೆಯನ್ನು ಮಾತ್ರ ನಡೆಸಲಿಲ್ಲ. ನಾವೆಲ್ಲರೂ ಅವನನ್ನು ನಿರ್ಬಂಧಿಸಿ ಪ್ರಾರ್ಥಿಸುತ್ತಿದ್ದಾಗ, ಅವನು ನಮ್ಮ ಕುಲಗುರುವಾದ ವಸಿಷ್ಠನನ್ನು ನೋಡಿ "ಎಲೈ ಪೂಜ್ಯನೆ ! ನಾನು ತಂದೆಗೆ ಮಾಡಿಕೊಟ್ಟ ಪ್ರತಿಜ್ಞೆಯೊಂದನ್ನೇ ಪಾಲಿಸುವೆನು. ಕೈಕೇಯಿಗಾಗಿ ನನ್ನ ತಂದೆಯು ನನ್ನನ್ನು ಹದಿನಾಲ್ಕು ವರ್ಷಗಳವರೆಗೆ ಕಾಡಿಗೆ ಕಳುಹಿಸುವುದಾಗಿ ಮಾತುಕೊಟ್ಟಿರುವನು. ಹಾಗೆಯೇ ನಾನೂ ಅವರಿಬ್ಬರಿಗೂ ಮಾತು ಕೊಟ್ಟುಬಂದಿರುವೆನು. ಈಗ ನಾನು ಆ ಪ್ರತಿಜ್ಞೆಯನ್ನು ಪಾಲಿಸಬೇಕಾದುದೇ ಅವಶ್ಯಕಾರ್ಯವು !" ಎಂದನು. ಅದಕ್ಕಾವಸಿಷ್ಠನು ರಾಮನನ್ನು ಕುರಿತು ಯುಕ್ತಿಯುಕ್ತವಾದ ಮಾತುಗಳಿಂದ "ಎಲೈ ರಾಮನೆ! ನೀನು ಎಲ್ಲವನ್ನೂ ಬಲ್ಲವನಾದುದರಿಂದ ನಾನು ನಿನಗೆ ಹೇಳಿ ತಿಳಿಸಬೇಕಾದುದೊಂದೂ ಇಲ್ಲವು. ನಿನ್ನ ಸುವರ್ಣಮಯವಾದ ಪಾದುಕೆಗಳೆರಡನ್ನೂ ಈತನಿಗೆ ಕೊಡು. ಈ ಪಾದುಕೆಗಳೇ ಅಯೋಧ್ಯೆಯ ಯೋಗಕ್ಷೇಮಗಳನ್ನು ನಿರ್ವಹಿಸಬಲ್ಲುವು." ಎಂದನು. ವಸಿಷ್ಠನ ಈ ಮಾತನ್ನು ಕೇಳಿ ರಾಮನು ಪೂರ್ವಾಭಿಮುಖವಾಗಿ ನಿಂತು, ಈ ತನ್ನ ಪಾದುಕೆಗಳಮೇಲೆ ಕಾಲನ್ನಿಟ್ಟು ಅವುಗಳನ್ನು ನನ್ನವಶಕ್ಕೆ ಕೊಟ್ಟನು. ಆಮೇಲೆ ನಾನು ಮಹಾತ್ಮನಾದ ಆರಾಮನ ಅನುಜ್ಞೆಯನ್ನು ಪಡೆದು, ರಾಜ್ಯರಕ್ಷಣಾರ್ಥವಾಗಿ ಅವನು ನನ್ನ ವಶಕ್ಕೆ ಕೊಟ್ಟ ಪಾದುಕೆಗಳನ್ನು ತೆಗೆದುಕೊಂಡು ಹಿಂತಿರುಗಿ ಬಂದೆನು. ಈಗ ಇಲ್ಲಿಂದ ಅಯೋಧ್ಯೆಗೆ ಹೋಗುವೆನು" ಎಂದನು. ಮಹಾತ್ಮನಾದ ಭರತನು ಹೇಳಿದ ಈ ಶುಭವಾಕ್ಯವನ್ನು ಕೇಳಿ ಭರದ್ವಾಜನು ಅನುನಯದಿಂದ ಆಭರತನನ್ನು ನೋಡಿ "ವತ್ಸ ಭರತನೆ ! ಉತ್ತಮವಾದ ಆಚಾರವೂ, ಮೇಲಾದ ನಡೆ.

ತೆಯೂ ಉಳ್ಳವರಲ್ಲಿ ಮೇಲೆನಿಸಿಕೊಂಡಿರುವ ನಿನಗೆ ಇದೇನೂ ಆಶ್ಚರ್ಯವಲ್ಲ. ಹಳ್ಳದಲ್ಲಿಯೇ ನೀರು ನಿಲ್ಲುವುದು ಸ್ವಾಭಾವಿಕವಾಗಿರುವಂತೆ, ಜ್ಯೇಷ್ಠಾನುವರ್ತನವೆಂಬ ವ್ರತವು ನಿನ್ನಲ್ಲಿರುವುದೇನೂ ಅತಿಶಯವಲ್ಲ. ದಶರಥನಿಗೆ, ಧರ್ಮಜ್ಞನಾಗಿಯೂ, ಧರ್ಮಪರಾಯಣನಾಗಿಯೂ ಇರುವ ನಿನ್ನಂತಹ ಸತ್ಪುತ್ರನಿರುವುದರಿಂದ ಆತನು ಮೃತನಾಗಿದ್ದರೂ ಬದುಕಿರುವಂತೆಯೇ ಎಣಿಸುವೆನು" ಎಂದನು. ಮಹಾತ್ಮನಾದ ಭರದ್ವಾಜನು ಹೇಳಿದಮಾತನ್ನು ಕೇಳಿ ಭರತನು ವಿನಯದಿಂದ ಆ ಮಹರ್ಷಿಗೆ ಕೈಮುಗಿದು, ಅವನ ಪಾದಗಳನ್ನು ಹಿಡಿದು ನಮಸ್ಕರಿಸಿ, ಮುಂದಿನ ಪ್ರಯಾಣಕ್ಕೆ ಅವನ ಅನುಮತಿಯನ್ನು ನಿರೀಕ್ಷಿಸುತಿದ್ದು, ಅವನು ಅನುಜ್ಞೆಯನ್ನು ಕೊಟ್ಟಮೇಲೆ ಬಾರಿಬಾರಿಗೂ ಅವನನ್ನು ಪ್ರದಕ್ಷಿಣೆಮಾಡಿ ಅಯೋಧ್ಯೆಯ ಕಡೆಗೆ ಹೊರಟನು. ಆಭರತನ ಸೈನಿಕರು ಅನೇಕುದುರೆಗಳನ್ನೂ ಬಂಡಿಗಳನ್ನೂ ಇತರವಾಹನಗಳನ್ನೂ ಏರಿ ಭರತನನ್ನು ಹಿಂಬಾಲಿಸಿ ಹೊರಟರು. ಹೀಗೆಯೇ ಪ್ರಯಾಣಮಾಡಿ ಬಂದು, ದಾರಿಯಲ್ಲಿದ್ದ ದಿವ್ಯನದಿಯಾದ ಯಮುನೆಯನ್ನು ದಾಟಿ, ಮುಂದೆ ಪವಿತ್ರವಾದ ನೀರುಳ್ಳ ಗಂಗಾನದಿಯನ್ನು ಕಂಡರು. ನಿರ್ಮಲವಾದ ನೀರಿನಿಂದ ತುಂಬಿದ ಅಂದವಾದ ಆಗಂಗಾನದಿಯನ್ನು ಭರತನು ಸಪರಿವಾರನಾಗಿ ದಾಟಿ, ಆ ಸೈನಿಕರೊಡನೆಯೇ ಶೃಂಗಿಬೇರಪುರವನ್ನು ಮುಟ್ಟಿದನು. ಆಗಲೇ ಅಲ್ಲಿಂದ ಹೊರಟು ಮುಂದೆ ಅಯೋಧ್ಯಾನಗರಿಯನ್ನು ಕಂಡನು. ತನ್ನ ತಂದೆಯಿಂದಲೂ, ಅಣ್ಣನಿಂದಲೂ ವಿರಹಿತವಾದ ಆಪಟ್ಟಣವನ್ನು ನೋಡಿದೊಡನೆಯೇ ಭರತನಿಗೆ ಮಿತಿಮೀರಿದ ದುಃಖವುಂಟಾಯಿತು. ಆಗ ಸಾರಥಿಯನ್ನು ನೋಡಿ ''ಎಲೈ ಸುಮಂತ್ರನೆ! ನಮ್ಮ ಅಯೋಧ್ಯಾನಗರಿಯು ಕಾಣುತ್ತಿರುವುದುನೋಡು! ರಾಮವಿಯೋಗದಿಂದ ಇದರ ಕಳೆಯೇ ಕೆಟ್ಟುಹೋಗಿ ಹಾಳುಬಿದ್ದಂತೆ ತೋರುತ್ತಿರುವುದು. ಇದರ ರೂಪವೇ ಮಾರಿ ಹೋಗಿರುವುದು. ಇದರಲ್ಲಿ ಸ್ವಲ್ಪವಾದರೂ ಉಲ್ಲಾಸವಿರುವಂತೆ ಕಾಣಲಿಲ್ಲ. ಬಹುದೀನ ಸ್ಥಿತಿಯನ್ನು ಹೊಂದಿರುವುದು. ಇದರ ಸ್ವರವೂ ಅಡಗಿಹೋದಂತೆ ಕಾಣುವುದು. ನಮ್ಮ ಅಯೋಧ್ಯಾನಗರಿಗೆ ಎಂತಹ ದುಸ್ಥಿತಿಯು ಬಂದೊದಗಿರುವುದು ನೋಡಿದೆಯಾ ?" ಎಂದನು. ಇಲ್ಲಿಗೆ ನೂರಹದಿಮೂರನೆಯ ಸರ್ಗವು.

ಅಯೋಧ್ಯೆಯದುಸ್ಥಿತಿಯನ್ನು ನೋಡಿ ಭರತನು ದುಃಖಿಸಿದುದು.

ಯಶಸ್ವಿಯಾಗಿಯೂ, ಧೀರನಾಗಿಯೂ ಇರುವ ಭರತನು ಗಂಭೀರವಾದ ರಥಚಕ್ರಧ್ವನಿಯೊಡನೆ ಮುಂದೆಮುಂದೆ ಬರುತ್ತ, ಶೀಘ್ರ ದಲ್ಲಿಯೇ ಅಯೋಧ್ಯಾಪುರಿಯನ್ನು ಮುಟ್ಟಿ, ಆ ಪಟ್ಟಣಪ್ರವೇಶವನ್ನು ಮಾಡುವಾಗ, ಅಲ್ಲಲ್ಲಿ ಬೆಕ್ಕುಗಳೂ, ಗೂಗೆಗಳೂ ನಿರಾತಂಕವಾಗಿ ಸಂಚರಿ ಸುತಿದ್ದುದನ್ನು ಕಂಡನು. ಮನುಷ್ಯಸಂಚಾರವೇ ಇರಲಿಲ್ಲ. ಆನೆಕುದುರೆಗ ಳೊಂದಾದರೂ ಕಣ್ಣಿಗೆ ಬೀಳಲಿಲ್ಲ. ಕೇವಲ ಕಾಂತಿಹೀನವಾಗಿ ಕೃಷ್ಣಪಕ್ಷದ ರಾತ್ರಿಯಂತೆ ಕಾಣುತಿತ್ತು. ಆಗ ಭರತನಿಗೆ ಆ ಪಟ್ಟಣದ ಪೂರ್ವಸ್ಥಿತಿಯು ಸ್ಮರಣೆಗೆ ಬಂದಿತು. ಮೊದಲು ಅತಿಶಯವಾದ ಕಾಂತಿವಿಶೇಷದಿಂದ ಜ್ವಲಿ ಸುತ್ತಿದ್ದ! ಚಂದ್ರಪತ್ನಿಯಾದ ರೋಹಿಣಿಯು, ಅಂಗಾರಕಗ್ರಹದಿಂದ ಪೀಡಿತಳಾಗಿ ಒಂಟಿಯಾಗಿ ಪರಿತಪಿಸುವಂತೆಯೂ, ಮೊದಲು ಜಲಸಮೃದ್ಧಿ ಯಿಂದ ಉಕ್ಕುತಿದ್ದ ಗಿರಿನದಿಯು ಬಿಸಿಲಿನಿಂದೊಣಗಿ, ಒಳಗೊಳಗೆ ತತ್ತ ಳಿಸುತ್ತಿರುವ ಜಲಜಂತುಗಳಿಂದ ಕೂಡಿರುವಂತೆಯೂ, ಮೊದಲು ಸು ವರ್ಣರೇಖೆಯಂತೆ ಜಾಜ್ವಲ್ಯಮಾನವಾದ ಜ್ವಾಲೆಯಿಂದ ನಗು ತ್ತಿದ್ದ ಹೋಮಾಗ್ನಿಯು, ದಧಿ ಮೊದಲಾದ ಹವಿಸ್ಸುಗಳಿಂದ ಹೋಮ ಮಾಡಿದಾಗ ಉರಿಯಡಗಿರುವಂತೆಯೂ, ಮೊದಲು ಚತುರಂಗಗ ಳಿಂದ ಕೂಡಿ ಉತ್ಸಾಹದಿಂದ ಜಯಪ್ರಯಾಣಮಾಡುತಿದ್ದ ಸೈನ್ಯವು, ಮ ಹಾಯುದ ದಲ್ಲಿ ಹತರಾದ ಸೈನಿಕರಿಂದಲೂ, ಮುರಿದುಬಿದ್ದ ಆಯುಧಗಳಿಂ ದಲೂ, ಸತ್ತುಬಿದ್ದ ಆನೆಕುದುರೆಗಳಿಂದಲೂ,ತುಮುರುತುಮುರಾಗಿ ಒಡೆದು ಬಿದ್ದಿರುವ ಧ್ವಜರಥಾದಿಗಳಿಂದಲೂ ಕಾಂತಿಹೀನವಾಗಿರುವಂತೆಯೂ, ಮೊ ದಲು ನೊರೆಯಿಂದಲೂ,ಮಹಾಘೋಷದಿಂದಲೂ ಉಬ್ಬಿ ಬರುತ್ತಿದ್ದ ಸಮು ದ್ರತರಂಗಗಳು, ಗಾಳಿಯಿಲ್ಲದಾಗ ಸದ್ದಡಗಿ ಶಾಂತವಾಗಿರುವಂತೆಯೂ, ಯಾಗದ ಕೊನೆಯದಿನವು ಮುಗಿದು, ಋತ್ವಿಕ್ಕುಗಳೆಲ್ಲರೂ ತಮ್ಮ ತಮ್ಮ ಸಾಮಗ್ರಿಗಳನ್ನು ಸಾಗಿಸಿಕೊಂಡು ಹೋದಮೇಲೆ ನಿಶ್ಶಬ್ದವಾಗಿರುವ ಯ ಜ್ಞಶಾಲೆಯಂತೆಯೂ,ತಮ್ಮ ಗುಂಪಿಗೆ ಪ್ರಧಾನವಾದ ಹೋರಿಯು ತಪ್ಪಿಸಿ ಕೊಂಡು ಹೋದುದಕ್ಕಾಗಿ ಅದನ್ನೇಚಿಂತಿಸುತ್ತ, ತಮ್ಮ ಮೇವನ್ನೂ ಬಿಟ್ಟು

ತತ್ತಳಿಸುತ್ತಿರುವ ಹಸುಗಳ ಮಂದೆಯಂತೆಯೂ, ಕಾಂತಿಯನ್ನು ಕೊಡುವ ಪದ್ಮರಾಗಾದಿಮಣಿಗಳಿಲ್ಲದ ಮುತ್ತಿನಸರದಂತೆಯೂ, ಪುಣ್ಯಕ್ಷಯದಿಂದ ಕಾಂತಿಹೀನವಾಗಿ ಆಕಾಶದಿಂದ ಕೆಳಗೆ ಬಿದ್ದಿರುವ ನಕ್ಷತ್ರದಂತೆಯೂ, ಮೊದಲು ಪುಷ್ಪಸಮೃದ್ಧಿಯಿಂದಲೂ, ಭ್ರಮರಗಳ ಝೇಂಕಾರಧ್ವನಿಯಿಂದಲೂ ಅತಿಮನೋಹರವಾಗಿದ್ದು, ವಸಂತಋತುವು ಮುಗಿದ ಮೇಲೆ ಬೇಸಗೆಯಲ್ಲಿ ಕಾಡುಗಿಚ್ಚಿನ ಜ್ವಾಲೆಗೆ ಸಿಕ್ಕಿ ಸುಕ್ಕಿ ಬಿದ್ದ ವನಲತೆಯಂತೆಯೂ, ಆ ಅಯೋಧ್ಯೆಯು ಕಾಂತಿಹೀನವಾಗಿ ಕಾಣುತ್ತಿರುವುದನ್ನು ನೋಡಿದನು. ಮತ್ತು ಆ ಪಟ್ಟಣದ ರಾಜಮಾರ್ಗದಲ್ಲಿ ಜನಸಂಚಾರವೇ ಇರಲಿಲ್ಲ. ಕ್ರಯವಿಕ್ರಯಾದಿಗಳೊಂದೂ ಇಲ್ಲದೆ ಅಂಗಡಿಗಳೆಲ್ಲವೂ ಮುಚ್ಚಲ್ಪಟ್ಟಿದ್ದುವು. ಮೇಘದಿಂದ ಮರೆಸಲ್ಪಟ್ಟ ಚಂದ್ರನಿಂದಲೂ, ನಕ್ಷತ್ರಗಳಿಂದಲೂ ಕೂಡಿದ ಆಕಾಶದಂತೆ ಕಾಂತಿಹೀನವಾಗಿತ್ತು. ಮತ್ತು ಉತ್ತಮವಾದ ಪಾನದ್ರವ್ಯಗಳೊಂದೂ ಇಲ್ಲದೆ ನಿರ್ಜನವಾಗಿ, ಪಾನಪಾತ್ರಗಳೆಲ್ಲವೂ ಒಡೆದು, ಮದ್ಯಪಾನದಿಂದ ಜನರೆಲ್ಲರೂ ಮದಿಸಿ ಸತ್ತುಬಿದ್ದಿರುವಾಗ ಕಳೆಗುಂದಿದ ಪಾನಭೂಮಿಯಂತೆಯೂ, ಹಳ್ಳತಿಟ್ಟುಗಳಿಂದಲೂ ಬಿರುಕ್ಕುಗಳಿಂದಲೂ, ಒಡೆದುಹೋದ ಪಾತ್ರೆಗಳಿಂದಲೂ ಕೂಡಿ ಸ್ವಲ್ಪವಾದರೂ ಕುಡಿಯುವುದಕ್ಕೆ ನೀರಿಲ್ಲದೆ ಹಾಳುಬಿದ್ದಿರುವ ಅರವಟಿಗೆಯಂತೆಯೂ, ಎಳೆದು ಕಟ್ಟಲ್ಪಟ್ಟ ವಿಸ್ತಾರವಾದ ನಾಣಬಳ್ಳಿದಾಗಿ ಯುದ್ಧ ಭೂಮಿಯಲ್ಲಿ ಶತ್ರುಗಳಿಂದ ಕತ್ತರಿಸಲ್ಪಟ್ಟು ನಿಷ್ಪ್ರಯೋಜನವಾಗಿ ಬಿದ್ದಿರುವ ಧನುರ್ಲತೆಯಂತೆಯೂ, ಯುದ್ಧಸಮರ್ಥನಾದ ಕುದುರೆಯ ರಾವುತನಿಂದ ನಡೆಸಲ್ಪಡುತಿದ್ದು, ಬಹಳವಾಗಿ ಬಳಲಿ ಕೊನೆಗೆ ದುರ್ಬಲವಾಗಿ ಏರುವುದಕ್ಕೂ ಯೋಗ್ಯವಲ್ಲದೆ, ಜೀನುಮುಂತಾದ ಸಾಮಗ್ರಿಗಳೆಲ್ಲವನ್ನೂ ಕಳಚಿಟ್ಟ ಕುದುರೆಯ ಮರಿಯಂತೆಯೂ, ನೀರೊಣಗಿ ಹೋದುದರಿಂದ, ಮತ್ಸ್ಯಕೂರ್ಮಾದಿ ಜಲಜಂತುಗಳೆಲ್ಲವೂ ಒಳಗೆ ತತ್ತಳಿಸುತ್ತಿರಲು, ನೈದಿಲೆ ಮೊದಲಾದ ನೀರು ಹೂಗಳೆಲ್ಲವೂ ಕಂದಿಬಿದ್ದಿರಲು, ದಡವುಮುರಿದು ಕಾಂತಿಹೀನವಾಗಿ ಕಾಣುತ್ತಿರುವ ತಾವರೆಕೊಳದಂತೆಯೂ, ಮನಸ್ಸಿಗೆ ಸಂತೋಷವಿಲ್ಲದುದರಿಂದ ಚಂದನಾದ್ಯನುಲೇಪನಗಳನ್ನೂ ಬಿಟ್ಟು, ನಿಯತವಾದ ಆಭರಣಗಳೂ ಇಲ್ಲದೆ,

ದುಃಖದಿಂದ ಕಂದಿದ ಮನುಷ್ಯದೇಹದಂತೆಯೂ, ವರ್ಷಾಕಾಲದಲ್ಲಿ ಸೂರ್ಯನು ಮೇಘದಿಂದ ಮರೆಸಲ್ಪಟ್ಟಿರುವಾಗ ಅಳಿಸಿಹೋದ ಆತನ ಪ್ರಭೆಯಂತೆಯೂ, ಕೇವಲಕಾಂತಿಹೀನವಾಗಿರುತಿತ್ತು. ಶ್ರೀಮಂತನಾಗಿಯೂ, ದಶರಥಪುತ್ರನಾಗಿಯೂ ಇರುವ ಭರತನು, ರಥಸ್ಥನಾಗಿಯೇ ಮುಂದೆಮುಂದೆ ಹೋಗುತ್ತಾ, ಆರಥವನ್ನು ನಡೆಸುತಿದ್ದ ಸಾರಥಿಯನ್ನು ಕುರಿತು, "ಎಲೆ ಸೂತನೆ ! ಇದೇನು? ಮೊದಲು ಈ ಆಯೋಧ್ಯೆಯಲ್ಲಿ ಗೀತವಾದಿತ್ರಾದಿ ಧ್ವನಿಗಳು ಬಹುಗಂಭೀರವಾಗಿ ಎಲ್ಲೆಲ್ಲಿಯೂ ಕೇಳಿಸುತಿದ್ದುವು. ಈಗಲಾದರೋ ಆ ಶಬ್ದವೇ ಸಂಪೂರ್ಣವಾಗಿ ಅಡಗಿಹೋಗಿರುವುದು. ಮೊದಲು ಈ ಪಟ್ಟಣದಲ್ಲಿ ಪಾನಭೂಮಿಗಳಿಂದ ಹೊರಡತಕ್ಕ ಮದ್ಯದ ವಾಸನೆಗಳೂ, ಪುಷ್ಪದ ವಾಸನೆಯೂ, ಆಗರುಧೂಪಾದಿಗಳ ಸುಗಂಧವೂ, ಎಲ್ಲೆಲ್ಲಿಯೂ ವ್ಯಾಪಿಸಿ ಎಷ್ಟೋ ಆನಂದವನ್ನುಂಟುಮಾಡುತಿದ್ದುವು. ಈಗ ಅದೊಂದೂ ಕಾಣುವುದಿಲ್ಲ. ಮೊದಲು ಕುದುರೆ ಮೊದಲಾದ ವಾಹನಗಳ ಧ್ವನಿಯೂ, ಆನೆಗಳ ಗರ್ಜನವೂ, ರಥದ ಚೀತ್ಕಾರವೂ ಎಡೆಬಿಡದೆ ಕೇಳಿಸುತಿದ್ದುವು. ರಾಮನು ಇಲ್ಲಿಂದ ಹೊರಟು ಹೋದಂದಿನಿಂದ ಇಲ್ಲಿನ ಶಬ್ದವೇ ಅಡಗಿಹೋದಂತೆ ಕಾಣುವುದು. ನಮ್ಮ ಅಣ್ಣನಾದ ರಾಮನು ಕಾಡಿಗೆ ಹೋದಮೇಲೆ ನಡುಪ್ರಾಯವುಳ್ಳವರೂಕೂಡ, ತಾವು ಅನುಭವಿಸಬೇಕಾದ ಭೋಗಗಳಲ್ಲಿಯೇ ನಿರಾಶೆಯುಳ್ಳವರಾಗಿ, ಚಂದನಾದ್ಯನುಲೇಪನಗಳನ್ನೂ, ಪುಷ್ಪಾದ್ಯಲಂಕಾರಗಳನ್ನೂ ಬಿಟ್ಟು ದುಃಖದಿಂದ ಪರಿತಪಿಸುತ್ತಿರುವರು. ರಾಮನು ಹೋದಂದಿನಿಂದ, ಮೊದಲಿನಂತೆ ಚೆನ್ನಾಗಿ ಅಲಂಕರಿಸಿಕೊಂಡು ಸಂಚಾರಾರ್ಥವಾಗಿ ಹೊರಗೆ ಹೊರಡುವವರನ್ನೇ ಕಾಣಲಿಲ್ಲ. ನಮ್ಮ ಪಟ್ಟಣದಲ್ಲಿ ಯಾವುದೊಂದುತ್ಸವಗಳೂ ನಡೆಯುವಂತೆ ತೋರಲಿಲ್ಲ. ಎಲೆಸೂತನೆ ! ಅಣ್ಣನಾದ ರಾಮನು ಇಲ್ಲಿಂದ ಕಾಡಿಗೆ ಹೋಗುವಾಗ,ಈಪಟ್ಟಣದ ಕಳೆಯನ್ನೂ ತನ್ನ ಸಂಗಡ ಕರೆದುಕೊಂಡು ಹೋದಂತೆಯೇ ಎಣಿಸಬೇಕಾಗಿದೆ. ಅವಿಚ್ಛಿನ್ನವಾದ ಮಳೆಯಿಂದ ಕೂಡಿ, ಕತ್ತಲೆ ಕವಿದಿರುವ ಶುಕ್ಲಪಕ್ಷದ ರಾತ್ರಿಯಂತೆ,ಈ ಅಯೋಧ್ಯಾನಗರಿಯ ಪ್ರಕಾಶವು ಈಗ ಸ್ವಲ್ಪವಾದರೂ ಹೊರಗೆ ಕಾಣಿಸುವುದಿಲ್ಲವಲ್ಲಾ ! ಇನ್ನು ನನ್ನಣ್ಣನಾದ ರಾಮನು ಹಿಂತಿರುಗಿಬಂದು

ಯಾವಾಗ ಈ ಅಯೋಧ್ಯೆಯನ್ನು ಪ್ರವೇಶಿಸುವನೋ ? ಬೇಸಗೆಯಲ್ಲಿ ಬಿಸಿಲಿನಿಂದ ತತ್ತ್ರಳಿಸುತ್ತಿರುವ ಪ್ರಾಣಿವರ್ಗಕ್ಕೆ ತಂಪಾದ ಮಳೆಯನ್ನು ಸುರಿಸುತ್ತಿರುವ ಮೇಘಪರಂಪರೆಯು ಹೇಗೋ ಹಾಗೆ, ಆತನು ಈ ಅಯೋಧ್ಯೆಯನ್ನು ಪ್ರವೇಶಿಸಿ ಜನಗಳಿಗೆ ಯಾವಾಗ ಸಂತೋಷವನ್ನುಂಟುಮಾಡುವನೋ ? ರಾಮಾಗಮನವೆಂಬ ಮಹೋತ್ಸವವು ಇಲ್ಲಿಗೆ ಯಾವಾಗ ಲಭಿಸುವುದೋ ! ಚೆನ್ನಾಗಿ ತಮ್ಮತಮ್ಮ ದೇಹವನ್ನಲಂಕರಿಸಿಕೊಂಡು ಬೀದಿಗಳಲ್ಲಿ ಬೆಡಗಿನಿಂದ ನಡೆಯುತಿದ್ದತರುಣರು, ಈಗ ತಮ್ಮ ಸಂಚಾರವನ್ನೇ ನಿಲ್ಲಿಸಿಬಿಟ್ಟಿರುವುದರಿಂದ, ಈ ರಾಜಮಾರ್ಗಗಳಿಗೆ ಕಳೆಯೇ ಇಲ್ಲದಂತಿರುವುದು. ಆಹಾ ! ಈ ನಮ್ಮ ನಗರಿಗೆ ಯಾವದುರವಸ್ಥೆಯು ಬಂದೊದಗಿತು ನೋಡಿದೆಯಾ ! ”ಎಂದನು. ಹೀಗೆ ಭರತನು ಅನೇಕವಿಧದಲ್ಲಿ ಚಿಂತಿಸಿ ಕೊರಗುತ್ತಾ, ಸಿಂಹವಿಲ್ಲದ ಗುಹೆಯಂತೆ ರಾಜನಿಲ್ಲದ ತನ್ನತಂದೆಯ ಅರಮನೆಯನ್ನು ಪ್ರವೇಶಿಸಿದನು. ಮಹಾತ್ಮನಾಗಿಯೂ ಧೀರನಾಗಿಯೂಇರುವ ಆಭರತನು,[1]ದೇವಾಸುರಯುದ್ಧದಲ್ಲಿ ದೇವತೆಗಳೆಲ್ಲರೂ ಪರಾಜಿತರಾಗಿ ಹೋದಮೇಲೆ, ಸೂರ್ಯನೂ ರಾಹುಗ್ರಸ್ತನಾಗಿರುವಾಗ, ಹಗಲಿರುಳೆಂಬ ವಿಭಾಗವೇ ಇಲ್ಲದಿದ್ದ ದಿನದಂತೆ, ಜನರಹಿತವಾಗಿಯೂ, ಕಾಂತಿಹೀನವಾಗಿಯೂ ಇರುವ ಅಲ್ಲಿನ ಅಂತಃಪುರವನ್ನು ನೋಡಿ ಮತ್ತಷ್ಟು ದುಃಖಿತನಾಗಿ ಕಣ್ಣೀರು ಬಿಡುತಿದ್ದನು.
ಇಲ್ಲಿಗೆ ನೂರಹದಿನಾಲ್ಕನೆಯಸರ್ಗವು.

---

1 ಪೂರ್ವದಲ್ಲಿ ದೇವಾಸುರರಿಗೆ ದೊಡ್ಡಯುದ್ಧವು ನಡೆದಾಗ, ದೇವತೆಗಳೆಲ್ಲರೂ ಅಸುರರಿಂದ ಪರಾಜಿತರಾದರು. ಈಕಾಲಕ್ಕೆ ಸರಿಯಾಗಿ ಸೂರ್ಯನೂ ರಾಹುವಿನಿಂದ ಹಿಡಿಯಲ್ಪಟ್ಟು ಮರೆಸಿಹೋಗಿದ್ದನು. ಆಗ ಕೆಲವುಕಾಲದವರೆಗೆ ಹಗಲಿರುಳೆಂಬ ಭೇದವೇ ತಿಳಿಯಲಿಲ್ಲ. ಆಮೇಲೆ ಬ್ರಹ್ಮನು ಅತ್ರಿಮಹಾಮುನಿಯನ್ನು ಪ್ರೇರಿಸಲು, ಅತ್ರಿಮಹರ್ಷಿಯು ಸೂರ್ಯಾಧಿಕಾರವನ್ನು ವಹಿಸಿ ಏಳುದಿವಸಗಳವರೆಗೆ ತನ್ನ ಬ್ರಹ್ಮತೇಜಸ್ಸಿನಿಂದ ಪ್ರಪಂಚವನ್ನು ಬೆಳಗುತಿದ್ದನೆಂದು ಪುರಾಣಕಥೆಯುಂಟು.



931. ನಂದಿಗ್ರಾಮದಲ್ಲಿ ರಾಮಪಾದುಕಾ ಪಟ್ಟಾಭಿಷೇಕವು.

{ ಭರತನು ಅಯೋಧ್ಯೆಯನ್ನು ಬಿಟ್ಟು, ಬಂದು ನಂದಿ ಗ್ರಾಮದಲ್ಲಿ ರಾಮಪಾದುಕೆಗಳನ್ನು ಮುಂದಿಟ್ಟು ಕೊಂಡು ರಾಜ್ಯಪರಿಪಾಲನವನ್ನು ಮಾಡಿದುದು. }

## ಪಾದುಕಾ ಪಟ್ಟಾಭಿಷೇಕವು.

ತನ್ನ ಹಿರಿಯಣ್ಣನಲ್ಲಿ ಪೂರ್ಣಭಕ್ತಿಯೆಂಬ ವ್ರತವನ್ನೇ ದೃಢವಾಗಿ ಹಿಡಿದಿರತಕ್ಕ ಆ ಭರತನು, ಮಾತೆಯರೆಲ್ಲರನ್ನೂ ಆ ಅಯೋಧ್ಯೆಯ ಅಂತಃಪುರದಲ್ಲಿರಿಸಿ, ರಾಮವಿಯೋಗದಿಂದ ಎಡೆಬಿಡದೆ ದುಃಖಿಸುತ್ತ, ತನ್ನನ್ನು ಸುತ್ತಿ ಬರುತಿದ್ದ ಗುರುಜನಗಳನ್ನು ಕುರಿತು, "ಎಲೈ ಪೂಜ್ಯರೆ! ನಾನು ಇಲ್ಲಿರಲಾರೆನು. ನಂದಿಗ್ರಾಮಕ್ಕೆ ಹೋಗಿ ಅಲ್ಲಿಯೇ ಇರಬೇಕೆಂದುದ್ದೇಶಿಸಿರುವೆನು. ತಾವೆಲ್ಲರೂ ಇದಕ್ಕೆ ಅನುಮತಿಸಬೇಕು. ನಾನು ಅಲ್ಲಿದ್ದರೆ ನನ್ನ ಅಣ್ಣನಾದ ರಾಮನ ಆಗಲಿಕೆಯಿಂದಾದ ಈ ದುಃಖವನ್ನು ಸ್ವಲ್ಪಮಟ್ಟಿಗಾದರೂ ಸಹಿಸಬಹುದು. ಮಹಾಯಶಸ್ವಿಯಾದ ಆ ರಾಮನೇ ಈ ಅಯೋಧ್ಯೆಗೆ ರಾಜನಾಗಿರಬೇಕಾದುದರಿಂದ, ಆತನಿಲ್ಲದ ಈ ಅಯೋಧ್ಯೆಯನ್ನು ನೋಡುತಿದ್ದಷ್ಟೂ ನನ್ನ ದುಃಖವು ಮಿತಿಮೀರಿ ಹೋಗುತ್ತಿರುವುದು. ಆದುದರಿಂದ ನಾನು ಅಲ್ಲಿಯೇ ಇದ್ದು ರಾಜ್ಯನಿರ್ವಹಣಕ್ಕಾಗಿ ಅಣ್ಣನ ಪ್ರತ್ಯಾಗಮನವನ್ನೇ ನಿರೀಕ್ಷಿಸುತ್ತಿರುವೆನು." ಎಂದನು. ಭರತನು ಹೇಳಿದ ಈ ಶುಭವಾಕ್ಯವನ್ನು ಕೇಳಿ ಅಲ್ಲಿದ್ದ ಮಂತ್ರಿಗಳೂ, ಪುರೋಹಿತನಾದ ವಸಿಷ್ಠನೂ ಅವನನ್ನು ನೋಡಿ, "ಎಲೈ ಮಹಾತ್ಮನಾದ ಭರತನೆ! ನೀನು ಹೇಳಿದ ವಿಷಯವು ಬಹಳ ಶ್ಲಾಘನೀಯವಾಗಿಯೇ ಇರುವುದು. ವಿಶೇಷವಾದ ಭ್ರಾತೃವಾತ್ಸಲ್ಯವುಳ್ಳ ನೀನಲ್ಲದೆ ಲೋಕದಲ್ಲಿ ಹೀಗೆ ಹೇಳುವವರು ಬೇರೆ ಯಾರುಂಟು? ನಿನ್ನ ಮಾತುಗಳು ನಿನ್ನ ಗುಣಕ್ಕನುರೂಪಗಳಾಗಿಯೇ ಇರುವುವು. ಬಂಧುಗಳಲ್ಲಿ ಬಹಳ ಪ್ರೇಮವುಳ್ಳವನಾಗಿಯೂ, ಒಡಹುಟ್ಟಿದವರಲ್ಲಿ ವಿಶೇಷವಾತ್ಸಲ್ಯವುಳ್ಳವನಾಗಿಯೂ, ಸತ್ಪುರುಷರ ಮಾರ್ಗವನ್ನು

ಎಡೆಬಿಡದೆ ಅನುವರ್ತಿಸಿದವನಾಗಿಯೂ ಇರುವ ನಿನ್ನ ಈ ಸದುದ್ದೇಶಕ್ಕೆ, ಯಾರು ತಾನೇ ಅಡ್ಡಿಮಾಡಬಲ್ಲರು?" ಎಂದರು. ಹೀಗೆ ಆ ಮಂತ್ರಿಗಳೆಲ್ಲರೂ ತನ್ನ ಉದ್ದೇಶಕ್ಕೆ ಒಡಂಬಟ್ಟು ಪ್ರಿಯವಾಕ್ಯಗಳನ್ನಾಡುತ್ತಿರಲು, ಭರತನು ಬಹಳ ಸಂತೋಷಪಟ್ಟು, ಸಮೀಪದಲ್ಲಿದ್ದ ಸಾರಥಿಯನ್ನು ನೋಡಿ "ಎಲೈ ಸೂತನೆ! ರಥವನ್ನು ಸಿದ್ಧಪಡಿಸಿಡು!" ಎಂದನು. ಆಮೇಲೆ ಅವನು ಸಂತೋಷದಿಂದ ತನ್ನ ಮಾತೆಯರೆಲ್ಲರಿಗೂ ಕ್ರಮವಾಗಿ ನಮಸ್ಕರಿಸಿ, ಅವರ ಅನುಮತಿಯನ್ನೂ ಪಡೆದು ಬಂಧು, ಶತ್ರುಘ್ನನೊಡಗೂಡಿ ರಥವನ್ನೇರಿದನು. ಹೀಗೆ ಭರತಶತ್ರುಘ್ನರಿಬ್ಬರೂ ಪರಮಸಂತೋಷದಿಂದ ರಥವನ್ನೇರಿ ಮಂತ್ರಿ ಪುರೋಹಿತಾದಿಗಳಿಂದ ಪರಿವೃತರಾಗಿ ವೇಗದಿಂದ ಹೊರಟರು. ಮುಂಭಾಗ ದಲ್ಲಿ ವಸಿಷ್ಠಾದಿಬ್ರಾಹ್ಮಣಶ್ರೇಷ್ಠರೂ, ಇತರಗುರುಜನಗಳೂ ಹೊರಟರು. ಇವರೆಲ್ಲರೂ ಪೂರ್ವಾಭಿಮುಖವಾಗಿ ಹೊರಟು ನಂದಿಗ್ರಾಮದ ಕಡೆಗೆ ಬರುತಿದ್ದರು. ಭರತನು ಹೋಗುತ್ತಿರುವಾಗ, ಅವನು ಅಪೇಕ್ಷಿಸದಿದ್ದರೂ ಆನೆ ಕುದುರೆಗಳೇ ಮೊದಲಾದ ಚತುರಂಗಸೈನ್ಯಗಳೂ ಅವನನ್ನು ಹಿಂಬಾ ಲಿಸಿ ಬರುತಿದ್ದುವು. ಹಾಗೆಯೇ ಅಯೋಧ್ಯಾವಾಸಿಗಳೂ ಹಿಂದೆ ಹೊರಟು ಬಂದರು. ಭ್ರಾತೃವತ್ಸಲನಾಗಿಯೂ ಧರ್ಮಾತ್ಮನಾಗಿಯೂ ಇರುವ ಆ ಭರತ ನಾದರೋ,ರಥದಲ್ಲಿ ಕುಳಿತಹಾಗೆಯೇ ರಾಮನ ಪಾದುಕೆಗಳೆರಡನ್ನೂ ತಲೆಯ ಮೇಲಿಟ್ಟುಕೊಂಡು ನಂದಿಗ್ರಾಮಾಭಿಮುಖನಾಗಿ ಹೊರಟುಬರುತ್ತ, ಆ ಗ್ರಾಮವನ್ನು ಪ್ರವೇಶಿಸಿ,ಅಲ್ಲಿ ರಥದಿಂದಿಳಿದು ಸಮೀಪದಲ್ಲಿದ್ದ ಗುರುಗಳನ್ನು ಕುರಿತು, "ಎಲೈ ಪೂಜ್ಯರೆ! ನಮ್ಮಣ್ಣನು ಈ ರಾಜ್ಯವನ್ನು ನ್ಯಾಸರೂಪ ವಾಗಿ ನನ್ನಲ್ಲಿಟ್ಟಿರುವನು. ಸುವರ್ಣಮಯವಾದ ಆತನ ಈ ಪಾದುಕೆಗಳೇ ರಾಜ್ಯದ ಯೋಗಕ್ಷೇಮಗಳನ್ನು ವಹಿಸತಕ್ಕವುಗಳಾಗಿರುವುವು. ಆತನು ತನಗೆ ಪ್ರತಿನಿಧಿಯಾಗಿ ಇವುಗಳನ್ನು ಇಲ್ಲಿಗೆ ಕಳುಹಿಸಿಕೊಟ್ಟಿರುವನು. ಇಷ್ಟೇ ಹೊರತು ರಾಜ್ಯಕ್ಕೂ ನನಗೂ ಯಾವಸಂಬಂಧವೂ ಇಲ್ಲವು." ಎಂದು ಹೇಳಿ, ಆಮೇಲೆ ಆ ಪಾದುಕೆಗಳೆರಡನ್ನೂ ತಲೆಯಲ್ಲಿ ಇಟ್ಟುಕೊಂಡಹಾ ಗೆಯೇ ಸುತ್ತಲೂ ನಿಂತಿದ್ದ ಪ್ರಜೆಗಳೆಲ್ಲರನ್ನೂ ಕುರಿತು ದುಃಖದಿಂದ "ಎಲೈ ಪ್ರಜೆಗಳಿರಾ! ಇದೋ! ಇವೆರಡೂ ಆರ್ಯನಾದ ನಮ್ಮಣ್ಣನ ಪಾದುಕೆಗಳು.

ಇವುಗಳಿಗೆ ನಮ್ಮ ರಾಜಚಿಹ್ನವಾದ ಶ್ವೇತಚ್ಛತ್ರವನ್ನು ಹಿಡಿಯಿರಿ! ಆರ್ಯನಾದ ರಾಮನ ಈಪಾದುಕೆಗಳೇ ರಾಜ್ಯಧರ್ಮಗಳನ್ನು ನಿರ್ವಹಿಸುವುವು. ನಮ್ಮಣ್ಣನು ನನ್ನಲ್ಲಿ ಪ್ರೇಮದಿಂದ ಇವುಗಳನ್ನು ನ್ಯಾಸರೂಪವಾಗಿ ನನ್ನಲ್ಲಿರಿಸಿರುವನು. ಆರ್ಯನು ಹಿಂತಿರುಗಿ ಬರುವವರೆಗೂ ಈ ನ್ಯಾಸವನ್ನು ನಾನು ಕಾಪಾಡುತಿದ್ದು, ಅವನು ಬಂದಕೂಡಲೆ ಈಪಾದುಕೆಗಳನ್ನು ನನ್ನ ಕೈಯಿಂದಲೇ ಆತನ ಪಾದಕಮಲಗಳಿಗೆ ತುಡಿಸಿ, ಈ ಸುವರ್ಣಪಾದುಕೆಗಳಿಂದಲಂಕರಿಸಲ್ಪಟ್ಟ ಆತನ ಪಾದಗಳನ್ನು ನೋಡಿ ಸಂತೋಷಿಸುವೆನು. ಆತನಿಗೆ ಅವನ ರಾಜ್ಯವನ್ನೊಪ್ಪಿಸಿಬಿಟ್ಟಮೇಲೆಯೇ ನನ್ನಮೇಲಿನ ಭಾರವಿಳಿಕಿದಂತಾಗುವುದು. ಆಗ ನಾನುನಿರ್ಭರನಾಗಿ ಅವನಲ್ಲಿಯೇ ಶಿಷ್ಯವೃತ್ತಿಯನ್ನವಲಂಬಿಸಿ ಆತನೊಡನೆ ಸಂತೋಷದಿಂದಿರುವೆನು. ನಮ್ಮ ಅಣ್ಣನು ನನ್ನಲ್ಲಿ ನ್ಯಾಸರೂಪವಾಗಿ ಇಟ್ಟಿರುವ, ಅವನ ಈ ಎರಡುಪಾದುಕೆಗಳನ್ನೂ, ಅವನ ರಾಜ್ಯವನ್ನೂ, ಅವನ ಅಯೋಧ್ಯೆಯನ್ನೂ ಆತನಿಗೊಪ್ಪಿಸಿದಹೊರತು ನನಗೆ ಪಾಪವಿಮೋಚನವಿಲ್ಲ. ರಾಮನು ಪಟ್ಟಾಭಿಷಿಕ್ತನಾಗುವುದನ್ನೂ, ಈ ನಮ್ಮ ದೇಶವಾಸಿಗಳೆಲ್ಲರೂ ಸಂತೋಷದಿಂದ ಉಕ್ಕುತಿರುವುದನ್ನೂ ನೋಡುವವರೆಗೆ ನನ್ನ ಮನಸ್ಸಿಗೆ ನೆಮ್ಮದಿಯಿಲ್ಲ. ಆಗಿನ ಸಂತೋಷವು ನನಗೆ ರಾಜ್ಯಲಾಭಕ್ಕಿಂತಲೂ ನಾಲ್ಕುಮಡಿ ಹೆಚ್ಚಾಗುವುದು" ಎಂದನು. ಹೀಗೆ ಮಹಾಯಶಸ್ವಿಯಾದ ಆಭರತನು ಬಹುದೈನ್ಯದಿಂದ ಪ್ರಲಾಪಿಸುತ್ತ,ಮಂತ್ರಿಗಳೊಡಗೂಡಿ ಆ ನಂದಿಗ್ರಾಮದಲ್ಲಿಯೇ ರಾಜ್ಯವನ್ನು ನಡೆಸುವುದಾಗಿ ಉದ್ದೇಶಿಸಿದನು. ತಾನು ಜಡೆಯನ್ನೂ ನಾರುಮಡಿಯನ್ನೂ ಧರಿಸಿ ಮುನಿವೇಷದಿಂದಿದ್ದು, ತನ್ನ ಸಮಸ್ತ ಸೈನ್ಯಗಳನ್ನೂ ಅಲ್ಲಿಯೇ ನೆಲೆಗೊಳಿಸಿದನು. ಭ್ರಾತೃವತ್ಸಲನಾದ ಆ ಭರತನು ತನ್ನ ಅಣ್ಣನು ಹಿಂತಿರುಗಿ ಬರುವುದನ್ನೂ, ತನ್ನಪ್ರತಿಜ್ಞೆಯು ಕೊನೆಮುಟ್ಟುವುದನ್ನೂ ನಿರೀಕ್ಷಿಸುತ್ತ, ಅಣ್ಣನು ತನಗೆ ಹೇಳಿದ್ದ ಬುದ್ಧಿವಾದಗಳನ್ನೇ ಮನಸ್ಸಿನಲ್ಲಿಟ್ಟುನಡೆಸುತ್ತ. ಆ ನಂದಿಗ್ರಾಮದಲ್ಲಿಯೇ ನಿಂತುಬಿಟ್ಟನು. ಆಗ ಆತನು ಶ್ರೀರಾಮಪಾದುಕೆಗಳೆರಡನ್ನೂ ಸಿಂಹಾಸನದಲ್ಲಿರಿಸಿ, ಅವುಗಳಿಗೆ ಕ್ರಮವಾಗಿ ರಾಜ್ಯಾಭಿಷೇಕವನ್ನು ಮಾಡಿ, ಆ ಗ್ರಾಮದಲ್ಲಿಯೇ ಇರುತ್ತ, ಪ್ರತಿದಿನವೂ ತಾ

ನು ನಡೆಸತಕ್ಕ ರಾಜಶಾಸನಗಳೆಲ್ಲವನ್ನೂ ಆಗಾಗ ಆ ಪಾದುಕೆಗಳಮುಂದೆನಿಂತು ವಿಜ್ಞಾಪಿಸುತ್ತಿದ್ದನು. ಹೀಗೆ ಶ್ರೀಮಂತನಾದ ಭರತನು ಅಣ್ಣನಾದ ರಾಮನ ಪಾದುಕೆಗಳಿಗೆ ಬಹುವೈಭವದಿಂದ ಪಟ್ಟಾಭಿಷೇಕವನ್ನು ನಡೆಸಿ, ತಾನು ಆ ಪಾದುಕೆಗಳಿಗೆ ಪರತಂತ್ರನಾಗಿಯೇ ಇದ್ದು ರಾಜ್ಯಕಾರ್ಯಗಳನ್ನು ನಿರ್ವಹಿಸುತ್ತಿದ್ದನು. ಯಾವ ರಾಜಕಾರ್ಯವು ಬಂದೊದಗಿದರೂ ಭರತನು ಅವುಗಳನ್ನು ಮೊದಲು ಆ ರಾಮಪಾದುಕೆಗಳಿಗೆ ನಿವೇದಿಸಿ, ಆಮೇಲೆಯೇ ತಾನು ಅದರಲ್ಲಿ ಪ್ರವರ್ತಿಸುತ್ತಿದ್ದನು. ಇಲ್ಲಿಗೆ ನೂರಹದಿನೈದನೆಯ ಸರ್ಗವು.

---

{ರಾಕ್ಷಸಬಾಧೆಗಾಗಿ ಋಷಿಗಳು ಚಿತ್ರಕೂಟವನ್ನು ಬಿಟ್ಟು ಬೇರೆ ಆಶ್ರಮಗಳಿಗೆ ಹೊರಟುಹೋದುದು.}

ಇತ್ತಲಾಗಿ ಭರತನು ಹೊರಟುಬಂದುಬಿಟ್ಟಮೇಲೆ, ಅತ್ತಲಾಗಿ ರಾಮನು ಆ ಚಿತ್ರಕೂಟದ ತಪೋವನದಲ್ಲಿಯೇ ಕೆಲವು ದಿವಸಗಳವರೆಗೆ ವಾಸಮಾಡುತ್ತಿದ್ದನು. ಈ ನಡುವೆ ಅಲ್ಲಿನ ತಪಸ್ವಿಗಳು ಮನಸ್ಸಿನಲ್ಲಿ ಏನೋ ಭಯದಿಂದಲೂ, ಕಳವಳದಿಂದಲೂ ತತ್ತಳಿಸುತ್ತಿರುವಹಾಗೆ ಕಂಡುಬಂದಿತು. ಅದರಲ್ಲಿಯೂ ಮುಖ್ಯವಾಗಿ ತನ್ನ ಆಶ್ರಮದಸುತ್ತಲೂ ಪರ್ಣಶಾಲೆಯನ್ನು ಕಟ್ಟಿಕೊಂಡು, ತನ್ನನ್ನೇ ಆಶ್ರಯಿಸಿಕೊಂಡಿದ್ದ ಕೆಲವು ಋಷಿಗಳು ಬಹಳವಾಗಿ ಭಯದಿಂದ ಕಳವಳಿಸುತ್ತಿರುವುದನ್ನು ಕಂಡನು. ಆದರೆ ಈ ಋಷಿಗಳು ತಮ್ಮ ಮನಸ್ಸಿನಲ್ಲಿರುವ ಭಯಕಾರಣವನ್ನು ರಾಮನಿಗೆ ತಿಳಿಸುವುದಕ್ಕೂ ಅಂಜಿದವರಾಗಿ, ತಮ್ಮೊಳಗೆ ತಾವು ಒಬ್ಬರಿಗೊಬ್ಬರು ಕಣ್ಣು ಸನ್ನೆಗಳಿಂದಲೂ, ಹುಬ್ಬಿನ ಸನ್ನೆಯಿಂದಲೂ ಮಾತಾಡಿಕೊಳ್ಳುತಿದ್ದರು. ಒಬ್ಬರಿಗೊಬ್ಬರು ಆಗಾಗ ಗುಟ್ಟುಮಾತುಗಳನ್ನೂ ಆಡಿಕೊಳ್ಳುತಿದ್ದರು. ಹೀಗೆ ಮಹರ್ಷಿಗಳು ಭಯದಿಂದ ಒಬ್ಬರಿಗೊಬ್ಬರು ಗುಣುಗುಟ್ಟುವುದನ್ನು ನೋಡಿ ರಾಮನು, ತನ್ನಿಂದ ಅಲ್ಲಿನ ಆಶ್ರಮವಾಸಿಗಳಿಗೆ ಯಾವ ಬಾಧೆಯುಂಟಾಯಿತೋ ಎಂದು ತನಗೆ ತಾನೇ ಸಂದೇಹಿಸುತ್ತಿದ್ದನು. ಕೊನೆಗೆ ಆ ಋಷಿಗಳಿಗೆಲ್ಲಾ ಪ್ರಮುಖನಾದ ಕುಲಪತಿಯ ಬಳಿಗೆ ತಾನೇ ಹೋಗಿ, ಆತ

ನಿಗೆ ವಿನಯದಿಂದ ಕೈಮುಗಿದು, "ಪೂಜ್ಯನೆ! ನಾನು ಇಲ್ಲಿರುವುದರಿಂದ ನಿಮಗೇನೂ ಬಾಧೆಯುಂಟಾಗಿಲ್ಲವಷ್ಟೆ? ಇಲ್ಲಿನ ಋಷಿಗಳು ಮನಸ್ಸಿನಲ್ಲಿ ಏನೋ ಅಸಮಾಧಾನಹೊಂದಿರುವುದಾಗಿ ಕಾಣುತ್ತಿದೆ. ನನ್ನ ನಡತೆಯಲ್ಲಿ ನಿಮ್ಮ ಮನಸ್ಸಿಗೆ ಬೇಸರವನ್ನು ಹುಟ್ಟಿಸತಕ್ಕ ವ್ಯತ್ಯಾಸವೇನೂ ಇಲ್ಲವಷ್ಟೆ? ನನ್ನ ತಮ್ಮನಾದ ಲಕ್ಷ್ಮಣನಾದರೂ ಅಜ್ಞಾನವಶದಿಂದ ನಿಮ್ಮಲ್ಲಿ ಏನಾದರೂ ಅಪಚಾರಪಟ್ಟಿರುವನೆ? ಲಕ್ಷ್ಮಣನ ನಡತೆಯು ನಿಮಗೇನಾದರೂ ಸರಿಬಿಳಲಿಲ್ಲವೆ? ಅಥವಾ ನನ್ನ ಪ್ರಿಯಪತ್ನಿಯಾದ ಸೀತೆಯು ನನ್ನ ಉಪಚಾರದಲ್ಲಿಯೇ ಮೈಮರೆತು, ನಿಮ್ಮ ಶುಶ್ರೂಷೆಯಲ್ಲಿ ಏನಾದರೂ ಅನಾದರವನ್ನು ತೋರಿಸಿದಳೆ? ಅಥವಾ ಅವಳು ನಿಮ್ಮಲ್ಲಿ ಉಚಿತವಾದ ಮರ್ಯಾದೆಯನ್ನು ಮೀರಿನಡೆದಳೆ?" ಎಂದು ಕೇಳಿದನು. ಇದನ್ನು ಕೇಳಿ ಮುಪ್ಪಿನಿಂದಲೂ, ತಪಸ್ಸಿನಿಂದಲೂ ಬಹಳ ಜರ್ಝರಿತವಾದ ಮೈಯ್ಯುಳ್ಳವನಾಗಿಯೂ, ಜ್ಞಾನವೃದ್ಧನಾಗಿಯೂ ಇರುವ ಆಋಷಿಯು, ಸರ್ವಭೂತದಯಾಪರನೆನಿಸಿಕೊಂಡಿರುವ ರಾಮನನ್ನು ನೋಡಿ, "ವತ್ಸರಾಮನೆ! ಚೆನ್ನಾಯಿತು! ಇದೇನು ಹೀಗೆಹೇಳುವೆ? ಶುಭಸ್ವಭಾವವುಳ್ಳ ಸೀತೆಯು ನಮ್ಮಲ್ಲಿ ಅತಿಕ್ರಮಿಸುವುದೆಂದರೇನು? ಹಾಗೆ ನಾವು ಮನಸ್ಸಿನಲ್ಲಿಯೂ ಎಣಿಸಬಾರದು. ಅದರಲ್ಲಿಯೂ ತಪಸ್ವಿಗಳಾದ ನಮ್ಮ ವಿಷಯದಲ್ಲಿ ಅವಳು ಎಂದಿಗೂ ಹಾಗೆ ಮಾಡಲಾರಳು. ನಿನ್ನ ನಿಮಿತ್ತವಾಗಿ ಇಲ್ಲಿನ ತಾಪಸರಿಗೆ ರಾಕ್ಷಸರಿಂದ ಬಹಳ ಉಪದ್ರವವುಂಟಾಗುತ್ತಿರುವುದು. ಅದಕ್ಕಾಗಿ ಇವರು ಭಯಪಟ್ಟು ಒಬ್ಬರಿಗೊಬ್ಬರು ರಹಸ್ಯಗಳನ್ನಾಡಿಕೊಳ್ಳುತ್ತಿರುವರು. ಇಲ್ಲಿಗೆ ಸಮೀಪದಲ್ಲಿ ಖರನೆಂಬ ರಾಕ್ಷಸನೊಬ್ಬನಿರುವನು. ಅವನು ರಾವಣನಿಗೆ ಒಡಹುಟ್ಟಿದ ತಮ್ಮನು. ಅವನು ಆಗಾಗ ಬಂದು ಜನಸ್ಥಾನವೆಂಬ ಪ್ರದೇಶದಲ್ಲಿರುವ ತಾಪಸರನ್ನೆಲ್ಲಾ ಬಾಧಿಸುತ್ತಿರುವನು. ಅವನು ಯಾರಿಗೂ ಅಂಜುವವನಲ್ಲ ಪರಮಘಾತುಕಸ್ವಭಾವವುಳ್ಳವನು. ಮನುಷ್ಯರನ್ನು ಕಂಡಾಗ ಅವರನ್ನು ಒಟ್ಟಿಗೆ ನುಂಗಿಬಿಡುವನು. ಆತನ ಗರ್ವಕ್ಕೆ ಕೊನೆಮೊದಲಿಲ್ಲ. ಪರಮಪಾಪಿಯು. ನಮ್ಮಂತಹ ಬಡಮುನಿಗಳ ಪಾಡುಹಾಗಿರಲಿ! ನಿನ್ನನ್ನೇ ಆತನು ಲಕ್ಷ್ಯಮಾಡಲಾರನು. ನೀನು ಈ ನಮ್ಮಾಶ್ರಮಕ್ಕೆ ಕಾಲಿಟ್ಟುದು

ಮೊದಲು, ಅವನ ಕಡೆಯರಾಕ್ಷಸರು ಸಹಿಸಲಾರದೆ, ಗುಂಪುಗುಂಪಾಗಿ ಇಲ್ಲಿಗೆ ಬಂದು ನಮ್ಮನ್ನು ಪೀಡಿಸುತ್ತಿರುವರು. ಮತ್ತು ಅವರು ತಮ್ಮ ಮಾಯೆಯಿಂದ ಬಹಳ ಅಸಹ್ಯವಾಗಿಯೂ, ಕ್ರೂರವಾಗಿಯೂ, ಭಯಂಕರವಾಗಿಯೂ ಇರುವ ಬಗೆಬಗೆಯಾದ ವಿಕಾರರೂಪಗಳನ್ನು ತೋರಿಸಿ, ಅದರಿಂದಲೇ ನಮಗೆ ಅರ್ಧಪ್ರಾಣವಾಗುವಹಾಗೆ ಮಾಡಿಬಿಡುವರು. ಇದರ ಮೇಲೆ ಅವರಲ್ಲಿ ಕೆಲವರು,ಕೆಲವು ಋಷಿಗಳಮುಂದೆಯೇ ನಿರ್ಭಯವಾಗಿನಿಂತು, ಹೇಯವಾದ ಮತ್ತು ಅಶುಚಿಯಾದ ಪದಾರ್ಥಗಳನ್ನು ಅವರಮೇಲೆ ಬೀಸಿ ಬಡಿಯುವರು. ಮತ್ತೆ ಕೆಲವುರಾಕ್ಷಸರು ನಮ್ಮ ಆಶ್ರಮಪ್ರದೇಶಗಳಲ್ಲಿ ಅಲ್ಲಲ್ಲಿ ಯಾರಿಗೂ ತಿಳಿಯದಂತೆ ಮರೆಸಿಕೊಂಡಿದ್ದು, ದುರ್ಬಲರಾದ ಋಷಿಗಳಮೇಲೆ ಬಿದ್ದು ಅವರನ್ನು ಕೊಲ್ಲುತ್ತ ವಿನೋದಿಸುವರು. ಅವರು ತಪಸ್ವಿಗಳ ಹೋಮಸಾಧನಗಳೆಲ್ಲವನ್ನೂ ಅತ್ತಿತ್ತ ತೆಗೆದು ಬಿಸುಡುವರು. ಹೋಮಾಗ್ನಿಗೆ ನೀರು ಸುರಿದು ನಂದಿಸಿಬಿಡುವರು. ಹೋಮಕಲಶಗಳನ್ನು ಒಡೆದು ಹಾಕುವರು. ಈ ದುಷ್ಕೃತ್ಯಗಳಿಂದ ಮಹರ್ಷಿಗಳ ಯಜ್ಞಕಾರ್ಯಕ್ಕೇ ಅವಕಾಶವನ್ನು ಕೊಡುವುದಿಲ್ಲ. ಈ ದುರಾತ್ಮರ ಹಾವಳಿಯನ್ನು ತಡೆಯಲಾರದುದಕ್ಕಾಗಿ, ಇಲ್ಲಿನ ಋಷಿಗಳು ಈ ಆಶ್ರಮವನ್ನೇ ಬಿಟ್ಟು ಹೋಗಬೇಕೆಂದು ನನಗೆ ಪ್ರೇರಿಸುತ್ತಿರುವರು. ಎಲೈರಾಮನೆ! ಹೀಗೆ, ಈ ದುಷ್ಟರು ನಮ್ಮ ನಿತ್ಯಕರ್ಮಗಳನ್ನು ಕೆಡಿಸುತ್ತಿರುವುದು ಮಾತ್ರವೇ ಅಲ್ಲದೆ, ಮೇಲೆ ಬಿದ್ದು ಆಗಾಗ ಶರೀರಹಿಂಸೆಯನ್ನೂ ಮಾಡುವುದರಿಂದ ಈ ಆಶ್ರಮವನ್ನು ಬಿಟ್ಟು ಹೋಗುವುದೇ ಮೇಲೆಂದು ನನಗೂ ತೋರಿರುವುದು. ಇಲ್ಲಿಗೆ ದೂರದಲ್ಲಿ ಸಮೃದ್ಧವಾದ ಫಲಮೂಲಾದಿಗಳಿಂದ ತುಂಬಿ, ಬಹು ರಮಣೀಯವಾಗಿರುವ ನಮ್ಮ ಹಳೆಯ ಆಶ್ರಮವೊಂದುಂಟು. ಇದನ್ನು ಬಿಟ್ಟು ಆ ನಮ್ಮ ಆಶ್ರಮವನ್ನೇ ಆಶ್ರಯಿಸಬೇಕೆಂದಿರುವೆವು. ನಾನು ಇವರೆಲ್ಲರನ್ನೂ ಕರೆದುಕೊಂಡು ಅಲ್ಲಿಗೇ ಹೊರಟು ಹೋಗುವೆನು.ವತ್ಸರಾಮನೆ! ಆ ದುಷ್ಟರಾಕ್ಷಸನು ನಿನಗೂ ಒಂದುವೇಳೆ ಕೇಡನ್ನು ಮಾಡಬಹುದು. ನಿನಗೆ ಇಷ್ಟವಿದ್ದರೆ ನೀನೂ ನಮ್ಮೊಡನೆಯೇ ಬಂದು ಬಿಡು! ನೀನೇನೋ ಬಹಳ ಎಚ್ಚರಿಕೆಯುಳ್ಳವನು. ಮತ್ತು ಯಾವುದಕ್ಕೂ ಹೆದರುವವನಲ್ಲ. ನೀನ

ಸಮರ್ಥನಾಗಿಯೂ ಇರುವೆ ! ಆದರೂ ನಿನ್ನ ಹೆಂಡತಿಯನ್ನೂ ಇಟ್ಟುಕೊಂಡು ಇಲ್ಲಿರುವುದೇನೋ ಕಷ್ಟವೆಂದು ನನಗೆ ತೋರಿರುವುದು"ಎಂದನು ಹೀಗೆ ಆತಪಸ್ವಿಯು ಭಯಗ್ರಸ್ತನಾಗಿ ಹೇಳಿದುದನ್ನು ಕೇಳಿ, ರಾಮನು ಅವನಿಗೆ ಅನೇಕಸಮಾಧಾನಗಳನ್ನು ಹೇಳಿದರೂ, ಅವನು ಅಲ್ಲಿ ನಿಲ್ಲುವುದಕ್ಕೊಪ್ಪಲಿಲ್ಲ. ಕೊನೆಗೆ ಆ ಋಷಿಯು ರಾಮನಿಗೇ ಸಮಾಧಾನವನ್ನು ಹೇಳಿ ಆತನನ್ನೊಪ್ಪಿಸಿ, ಅವನ ಅನುಮತಿಯನ್ನು ಪಡೆದು,ತನ್ನ ಕಡೆಯ ಋಷಿಗಳೆಲ್ಲರೊಡನೆ ಆ ಆಶ್ರಮವನ್ನು ಬಿಟ್ಟು ಹೊರಟುಹೋದನು. ರಾಮನಾದರೋ ಆ ಋಷಿಗಳೆಲ್ಲರನ್ನೂ ಯಥೋಚಿತವಾಗಿ ಮನ್ನಿಸಿ, ತಾನೂ ಅವರನ್ನು ಸ್ವಲ್ಪದೂರದವರೆಗೆ ಹಿಂಬಾಲಿಸಿ ಹೋಗಿ, ಅವರೆಲ್ಲರಿಗೂ ನಮಸ್ಕರಿಸಿ, ಸಂತುಷ್ಟರಾದ ಅವರ ಅನುಜ್ಞೆಯನ್ನು ಪಡೆದು, ಅವರ ಬುದ್ಧಿವಾದಗಳೆಲ್ಲವನ್ನೂ ವಿನಯದಿಂದ ಕೇಳಿ, ತನ್ನ ಪುಣ್ಯಾಶ್ರಮದಕಡೆಗೆ ಹಿಂತಿರುಗಿದನು. ಇಲ್ಲಿಗೆ ಬಂದಮೇಲೆ ಋಷಿಗಳಿಲ್ಲದೆ ನಿರ್ಜನವಾದ ಆ ಆಶ್ರಮವನ್ನು ರಾಮನು ಆಗಲೇ ಬಿಡಬೇಕಾಗಿದ್ದರೂ, ಋಷಿಗಳ ವಾಸಸ್ಥಳವೆಂಬ ಪ್ರೇಮದಿಂದ ಅದನ್ನು ಕ್ಷಣಮಾತ್ರವೂ ಬಿಟ್ಟು ಹೋಗಲಾರದೆ, ಎಚ್ಚರಿಕೆಯಿಂದಿರುತಿದ್ದನು. ಮುನಿವೃತ್ತಿಯನ್ನು ಯಥಾವಿಧಿಯಾಗಿ ಅನುಸರಿಸುತಿದ್ದ ಆರಾಮನನ್ನು, ಗುಣಾಢ್ಯರಾಗಿದ್ದ ಆತಾಪಸರೂ ಇಲ್ಲಿರುವವರೆಗೂ ಎಡೆಬಿಡದೆ ಅನುಸರಿಸುತಿದ್ದರು. ಇಲ್ಲಿಗೆ ನೂರಹದಿನಾರನೆಯ ಸರ್ಗವು.

---

## ರಾಮನು ಅತ್ರಿಮುನಿಯ ಆಶ್ರಮವನ್ನು ಪ್ರವೇಶಿಸಿದುದು.

ಋಷಿಗಳೆಲ್ಲರೂ ಹೊರಟುಹೋದಮೇಲೆ ರಾಮನಿಗೂ ಆ ಚಿತ್ರಕೂಟದ ವಾಸವು ಮನಸ್ಸಿಗೊಪ್ಪಲಿಲ್ಲ. ತನ್ನ ಸಹವಾಸಿಗಳು ಬಿಟ್ಟು ಹೋದರೆಂಬುದೊಂದೇ ಅಲ್ಲದೆ, ಇನ್ನೂ ಅನೇಕಕಾರಣಗಳಿಂದ ಆತನ ಮನಸ್ಸಿಗೂ ಆಸ್ಥಳವನ್ನು ಬಿಟ್ಟು ಹೋಗುವುದೇ ಉತ್ತಮವೆಂದು ತೋರಿತು. ಏಕೆಂದರೆ, ತಾನು ಆಸ್ಥಳದಲ್ಲಿಯೇ ಭರತನನ್ನೂ, ತನ್ನಮಾತೆಯರನ್ನೂ, ಪುರವಾಸಿಗಳನ್ನೂ ನೋಡಿದ್ದುದರಿಂದ, ಆಗಾಗ ಅವರ ಸ್ಮರಣವು ಮನಸ್ಸಿಗೆ ಬಂದು ದುಃಖವುಂಟಾಗಬಹುದೆಂದೂ, ಆ ಪ್ರದೇಶವನ್ನು ನೋ

ಡುತಿದ್ದ ಹಾಗೆಲ್ಲಾ ಹಿಂದಿನ ಸ್ಮರಣೆಯು ಬರುವುದೆಂದೂತೋರಿತು. ಮತ್ತು ಮಹಾತ್ಮನಾದ ಭರತನ ಸೈನ್ಯವು ಅಲ್ಲಿ ಬಂದು ಬೀಡುಬಿಟ್ಟುದರಿಂದ, ಆ ಸೈನ್ಯದ ಆನೆ ಕುದುರೆ ಮುಂತಾದುವುಗಳು ಆ ತಪೋವನವೆಲ್ಲವನ್ನೂ ಕೆಡಿಸಿಬಿಟ್ಟಿದ್ದುವು. ಮಲಮೂತ್ರಾದಿಗಳಿಂದ ಆಶ್ರಮಪ್ರದೇಶವೆಲ್ಲವನ್ನೂ ಅಶುಚಿಯಾಗಿ ಮಾಡಿದ್ದುವು. ಆದುದರಿಂದ ಆಸ್ಥಳವನ್ನು ಬಿಡುವುದೇ ಮೇಲೆಂದು ತೋರಿತು. ಹಾಗೆಯೇ ಅವನು ಮನಸ್ಸಿನಲ್ಲಿ ನಿರ್ಧರಿಸಿಕೊಂಡು, ಸೀತಾಲಕ್ಷ್ಮಣರನ್ನು ಕರೆದುಕೊಂಡು [1] ಅಲ್ಲಿಂದ ಹೊರಟನು. ಹೀಗೆ ಪ್ರಯಾಣ ಮಾಡಿ ಹೋಗುತ್ತಿರುವಾಗ ದಾರಿಯಲ್ಲಿ ಅತ್ರಿಮಹಾಮುನಿಯ ಆಶ್ರಮವನ್ನು ನೋಡಿ, ಅದರೊಳಗೆ ಪ್ರವೇಶಿಸಿ, ಆ ಮಹರ್ಷಿಗೆ ನಮಸ್ಕರಿಸಿದನು. ಆ ಋಷಿಯಾದರೋ ರಾಮನನ್ನು ಪುತ್ರವಾತ್ಸಲ್ಯದಿಂದ ಆದರಿಸಿ, ತಾನಾಗಿಯೇ ಆತನಿಗೆ ಸಮಸ್ತವಿಧವಾದ ಅತಿಥಿಸತ್ಕಾರಗಳನ್ನೂ ನಡೆಸಿ,ಲಕ್ಷ್ಮಣನನ್ನೂ ಮಹಾಭಾಗೆಯಾದ ಸೀತೆಯನ್ನೂ ಪ್ರಿಯವಾಕ್ಯಗಳಿಂದ ಮನ್ನಿಸಿದನು. ಆಮೇಲೆ ಧರ್ಮಜ್ಞನಾಗಿಯೂ, ಸರ್ವಭೂತದಯಾಪರನಾಗಿಯೂ ಇರುವ ಆ ಋಷಿಯು, ಲೋಕಪೂಜ್ಯಳಾದ ತನ್ನ ಪತ್ನಿಯನ್ನು ಕರೆದು ಅವಳಿಗೆ ಇವರನ್ನು ತೋರಿಸಿದನು. ಆ ಋಷಿಪತ್ನಿಯು ಇವರೆಲ್ಲರನ್ನೂ ಪ್ರಿಯವಾಕ್ಯಗಳಿಂದ ಆದರಿಸಿದಳು. ಆಮೇಲೆ ಆ ಅತ್ರಿಮಹಾಮುನಿಯು ಸೀತೆಯನ್ನು ನೋಡಿ “ಎಲೆಭದ್ರೆ! ಈ ಅನಸೂಯೆಯು ಮಹಾಮಹಿಮೆಯುಳ್ಳವಳು. ಬಹಳ ತಪೋನಿಷ್ಠಳು. ಧರ್ಮಾನುಷ್ಠಾನದಲ್ಲಿಯೇ

---

1 ಇಲ್ಲಿ ಈ ಕೆಳಗಿನ ವಿಷಯಗಳನ್ನು ಗಮನಿಸಿಡಬೇಕಾದುದವಶ್ಯವು. ಭರತನು ಜ್ಯೇಷ್ಠಮಾಸದಲ್ಲಿ ಅಯೋಧ್ಯೆಯಿಂದ ಚಿತ್ರಕೂಟಕ್ಕೆ ಹೊರಟುಬಂದು ಆಗಲೇ ಅಲ್ಲಿಂದಹಿಂತಿರುಗಿಬಿಟ್ಟನು. ಆಗ ಮಳೆಗಾಲವು ಸನ್ನಿಹಿತವಾಗಿದ್ದುದರಿಂದ ರಾಮನು ಕಾರ್ತಿಕಮಾಸದ ಕೊನೆಯವರಿಗೂ ಆಚಿತ್ರಕೂಟದಲ್ಲಿಯೇ ಇರುತಿದ್ದು, ಕೆಲವು ದಿನಗಳಮೇಲೆ ಆ ಚಿತ್ರಕೂಟವನ್ನು ಬಿಟ್ಟು ದಂಡಕಾರಣ್ಯಕ್ಕೆ ಹೊರಟನೇ ಹೊರತು, ಭರತನು ಚಿತ್ರಕೂಟವನ್ನುಬಿಟ್ಟು ಅಯೋಧ್ಯೆಗೆ ಹಿಂತಿರುಗಿದೊಡನೆಯೇ ರಾಮನು ದಂಡಕಾರಣ್ಯದಕಡೆಗೆ ಹೊರಡಲಿಲ್ಲವೆಂದು ಗ್ರಹಿಸಬೇಕು. ಇದಕ್ಕನುಸಾರವಾಗಿ ಪಾದ್ಮಪುರಾಣದಲ್ಲಿಯೂ ಭರತನು ಅಯೋಧ್ಯೆಗೆ ಹಿಂತಿರುಗಿದನೆಂದು ಹೇಳಿದಮೇಲೆ ಕಾಕಾಸುರವೃತ್ತಾಂತವು ಹೇಳಲ್ಪಟ್ಟಿರುವುದು.

ನಿರತಳಾದವಳು. ಆದುದರಿಂದ ಈಕೆಗೆ ನೀನು ನಮಸ್ಕರಿಸು" ಎಂದನು. ಆ ಮೇಲೆ ರಾಮನನ್ನು ನೋಡಿ ಆತನಿಗೂ ತಪಸ್ವಿನಿಯಾದ ಅನಸೂಯೆಯನ್ನು ನಿರ್ದೇಶಿಸಿ ತೋರಿಸಿ ‹‹ಎಲೈ ಶುದ್ಧಾತ್ಮನೆ! ಇವಳ ಮಹಿಮೆಯನ್ನು ಬಲ್ಲೆಯಾ? ಮೊದಲು ಒಂದಾನೊಂದು ಕಾಲದಲ್ಲಿ ಹತ್ತು ವರ್ಷಗಳವರೆಗೆ ಮಳೆಯಿಲ್ಲದೆ ಮಹಾಕ್ಷಾಮವೊಂದುಂಟಾಯಿತು. ಬಿಸಿಲಿನ ಬೇಗೆಯಿಂದ ಲೋಕವೆಲ್ಲವೂ ಎಡೆಬಿಡದೆ ದಗ್ಧವಾಗುತಿತ್ತು. ಆಗ ಈಕೆಯು ತನ್ನ ಮಹಿಮೆಯಿಂದ ಋಷಿಗಳಿಗಾಗಿ ಫಲಮೂಲಗಳನ್ನು ಸೃಷ್ಟಿಸಿ, ಒಣಗಿಹೋಗಿದ್ದ ಗಂಗಾನದಿಯನ್ನು ಕೂಡ ಜಲಪೂರ್ಣವಾಗಿ ಪ್ರವಹಿಸುವಂತೆ ಮಾಡಿದಳು. ಈಕೆಯು ಹತ್ತುಸಾವಿರ ವರ್ಷಗಳವರೆಗೆ ಏಕಾಗ್ರಚಿತ್ತದಿಂದ ಮಹಾತಪಸ್ಸನ್ನು ಮಾಡಿದವಳು. ಕೃಚ್ಛ್ರಚಾಂದ್ರಾಯಣಾದಿವ್ರತಗಳನ್ನು ಅನೇಕವಾಗಿ ನಡೆಸಿ, ಋಷಿಗಳಿಗುಂಟಾಗುತಿದ್ದ ತಪೋವಿಘ್ನಗಳೆಲ್ಲವನ್ನೂ ನೀಗಿಸಿರುವಳು. ಮತ್ತು ಮೊದಲೊಂದಾವರ್ತಿ ದೇವತೆಗಳ ಕಾರ್ಯ್ಯಾರ್ಥವಾಗಿ ತ್ವರೆಪಡಬೇಕಾದ ಸಂಭ್ರಮದಲ್ಲಿ, ಹತ್ತು ರಾತ್ರಿಗಳನ್ನು ಒಂದೇ ರಾತ್ರಿಯಂತೆ ಮಾಡಿದ ಮಹಾಮಹಿಮೆಯುಳ್ಳವಳು. ಬಹಳ ಉಗ್ರವಾದ ತಪಸ್ಸುಗಳೆಲ್ಲವನ್ನೂ ನಡೆಸಿರುವಳು. ಈಕೆಗೆ ವ್ರತನಿಯಮಗಳೆಂಬುದೇ ಮುಖ್ಯವಾದ ಅಲಂಕಾರವು. ಈಕೆಯನ್ನು ನೀನು ತಾಯಿಯಂತೆ ಗೌರವಿಸಿ ಪೂಜಿಸಬೇಕು. ಇದರಿಂದ ನಿನಗೆ ಶ್ರೇಯಸ್ಸುಂಟು. ಪರಾನುಗ್ರಹಾರ್ಥವಾಗಿ ಅನೇಕಕರ್ಮಗಳನ್ನು ಮಾಡಿಯೂ ತಾನು ಅಸೂಯೆಯಿಲ್ಲದವಳಾದುದರಿಂದಲೂ, ಮತ್ತು ಅಸಾಧ್ಯವಾದ ಅನೇಕಪಾತಿವ್ರತ್ಯಕರ್ಮಗಳನ್ನು ನಡೆಸಿ, ಬೇರೆ ಸ್ತ್ರೀಯರಿಗೆ ತನ್ನಂತೆ ನಡೆಯುವುದು ಶಕ್ಯವೇ ಅಲ್ಲವೆಂದು ತೋರಿಸಿಬಿಟ್ಟಿರುವುದರಿಂದ, ಅವರ ಅಸೂಯೆಗೂ ಪಾತ್ರಳಾಗಿಲ್ಲವೆಂಬ ಖ್ಯಾತಿಗೊಂಡಿರುವುದರಿಂದಲೂ ಈಕೆಯನ್ನು ಅನಸೂಯೆಯೆಂದು ಕರೆಯುವರು. ಸಮಸ್ತ ಪ್ರಾಣಿಗಳಿಗೂ ಈಕೆಯು ನಮಸ್ಕಾರ್ಯ್ಯಳಾಗಿರುವಳು. ಮಹಾಯಶಸ್ವಿನಿಯಾಗಿ, ವೃದ್ಧಳಾಗಿ, ಕೋಪರಹಿತಳಾಗಿರುವ ಈ ಅನಸೂಯೆಗೆ ನಮಸ್ಕರಿಸುವಂತೆ ಸೀತೆಗೂ ಹೇಳು" ಎಂದನು. ಆ ಮಹರ್ಷಿಯ ವಾಕ್ಯವನ್ನು ಕೇಳಿ ರಾಮನು ‹‹ಎಲೈ ಮಹಾತ್ಮನೆ! ನಿನ್ನಾಜ್ಞೆಯಂತೆಯೇ ಆಗಲಿ" ಎಂದು ಹೇಳಿ, ಸೀತೆಯ ಕಡೆಗೆ ತಿರುಗಿ‹‹ಎಲೆ ರಾಜ.

ಪುತ್ರಿ! ಈ ಮಹರ್ಷಿಯ ಆಜ್ಞೆಯನ್ನು ಕೇಳಿದೆಯಾ? ತಪಸ್ವಿನಿಯಾದ ಈ ಅನಸೂಯೆಗೆ ನಮಸ್ಕರಿಸು. ನಿನಗೆ ಇದರಿಂದ ಶ್ರೇಯಸ್ಸುಂಟು" ಎಂದನು. ಆಗ ಸೀತೆಯು ತನಗೆ ಶ್ರೇಯಃಕಾಂಕ್ಷಿಯಾಗಿ ರಾಮನು ಕೊಟ್ಟ ಆಜ್ಞೆಯನ್ನು ಶಿರಸಾವಹಿಸಿ, ಆ ಅತ್ರಿಪತ್ನಿಗೆ ವಿನಯದಿಂದ ಪ್ರದಕ್ಷಿಣ ಮಾಡಿದಳು. ಅಂಗಾಂಗಳೆಲ್ಲವೂ ಸಡಿಲಬಿದ್ದು, ದೇಹದ ಚರ್ಮವೆಲ್ಲವೂ ಸುಕ್ಕಿದ್ದು, ಮುಪ್ಪಿನಿಂದ ನರೆತ ತಲೆಕೂದಲುಳ್ಳವಳಾಗಿ, ಬಿರುಗಾಳಿಗೆ ಸಿಕ್ಕಿದ ಬಾಳೆಯಗಿಡದಂತೆ ನಡುಗುತ್ತಿರುವ ಮೈಯ್ಯುಳ್ಳವಳಾಗಿ, ಮಹಾಭಾಗಳಾಗಿ ಪತಿವ್ರತೆಯೆನಿಸಿಕೊಂಡಿರುವ ಆ ಅನಸೂಯೆಗೆ ಸೀತೆಯು ತನ್ನ ಹೆಸರನ್ನು ತಿಳಿಸಿ ನಮಸ್ಕರಿಸಿದಳು. ಹೀಗೆ ನಮಸ್ಕಾರಮಾಡಿದಮೇಲೆ ಆಕೆಯ ಮುಂದೆ ಸಂತೋಷದಿಂದ ಕೈಮುಗಿದು ನಿಂತುಕೊಂಡು, "ಎಲೌ ಪೂಜ್ಯಳೆ! ನಿನಗೆ ಕ್ಷೇಮವೆ?" ಎಂದು ಕುಶಲ ಪ್ರಶ್ನಮಾಡಿದಳು. ಆಗ ಅನಸೂಯೆಯು ಮಹಾತ್ಮಳಾಗಿಯೂ, ಧರ್ಮಜ್ಞಳಾಗಿಯೂ ಇರುವ ಸೀತೆಯನ್ನು ನೋಡಿ ಪರಮಸಂತುಷ್ಟಳಾಗಿ, ಪ್ರಿಯವಾಕ್ಯಗಳಿಂದ ಅವಳನ್ನು ಮನ್ನಿಸುತ್ತ "ಎಲೆವತ್ಸೆ! ಭಾಗ್ಯವಶದಿಂದ ನೀನು ನಿನ್ನ ಪಾತಿವ್ರತ್ಯಧರ್ಮವನ್ನು ಎಚ್ಚರಿಕೆಯಿಂದ ಕಾಪಾಡಿಕೊಂಡು ಬರುತ್ತಿರುವೆ. ಲೋಕದಲ್ಲಿ ನಿನ್ನಂತೆ ಮಹಾಪತಿವ್ರತೆಯರು ಯಾರುಂಟು? ನೀನು ನಿನ್ನ ಬಂಧುಜನಗಳನ್ನೂ ತೊರೆದು, ರಾಜಕುಮಾರಿಯೆಂಬ ಹೆಮ್ಮೆಯನ್ನೂ, ಐಶ್ವರ್ಯವನ್ನೂ, ಇನ್ನೂ ಉಳಿದಭೋಗಸಾಮಗ್ರಿಗಳೆಲ್ಲವನ್ನೂ ಬಿಟ್ಟು, ಪತಿಯಾದ ರಾಮನನ್ನೇ ಅನುವರ್ತಿಸಿ, ಕಾಡಿನಲ್ಲಿ ಕಷ್ಟಕ್ಕೆ ಸಿಕ್ಕಿ ಬಿದ್ದಿರುವ ಆತನನ್ನು ಬಿಡದೆ ಹಿಂಬಾಲಿಸಿ ಬಂದಿರುವೆಯಲ್ಲಾ! ಸ್ತ್ರೀಯಾದ ನಿನಗೆ ಇದೊಂದು ಭಾಗ್ಯವೇ ಹೊರತು ಬೇರೆಯಲ್ಲ! ಲೋಕದಲ್ಲಿಸ್ತ್ರೀಯರಿಗೆ ಪತಿಯೇದೈವವು. ಪತಿಯು ರಾಜ್ಯದಲ್ಲಿದ್ದರೂ, ಅಥವಾ ಕಾಡಿನಲ್ಲಿದ್ದರೂ, ಆತನು ಪಾಪಿಯಾಗಿದ್ದರೂ, ಪುಣ್ಯಾತ್ಮನಾಗಿದ್ದರೂ, ದರಿದ್ರನಾದರೂ, ಧನಿಕನಾದರೂ ಆತನನ್ನು ಬಿಡದೆ ಪ್ರೀತಿಯಿಂದಿರುವ ಸ್ತ್ರೀಯರಿಗೆ ಉತ್ತಮಲೋಕವು ಎಂದಿಗೂ ತಪ್ಪುವುದಿಲ್ಲ! ಪತಿಯಾದವನು ಕೇವಲ ದುಸ್ಸ್ವಭಾವವುಳ್ಳವನಾಗಿದ್ದರೂ, ಯುಕ್ತಾಯುಕ್ತ ವಿವೇಚನೆಯನ್ನು ಬಿಟ್ಟು! ಹುಚ್ಚನಂತೆ ಸ್ವೇಚ್ಛೆಯಾಗಿ ನಡೆಯುವವನಾಗಿದ್ದರೂ, ಬಡವನಾಗಿ

ದ್ಧರೂ ಪೂಜ್ಯಸ್ವಭಾವವುಳ್ಳ, ಸ್ತ್ರೀಯರು ಆತನನ್ನೇ ಪರದೈವವೆಂದು ಭಾವಿಸಬೇಕು. ಎಲೆ ವೈದೇಹಿ! ನಾನು ಎಷ್ಟೆಷ್ಟುವಿಧದಲ್ಲಿ ಆಲೋಚಿಸಿನೋಡಿದರೂ, ಪತಿಯನ್ನು ಬಿಟ್ಟರೆ, ಸ್ತ್ರೀಯರಿಗೆ ಮಹಾತಪಸ್ಸಿನಂತೆ ಅಕ್ಷಯವಾಗಿ, ಸರ್ವಾವಸ್ಥೆಗಳಲ್ಲಿಯೂ ರಕ್ಷಿಸತಕ್ಕ ಬೇರೆ ಬಂಧುವೊಬ್ಬನಾದರೂ ತೋರಲಿಲ್ಲ! ಕಾಮಪರವಶರಾಗಿ ತಮ್ಮ ಗಂಡದಿರನ್ನೇ ತಮ್ಮ ಕೈಕೆಳಗಿಟ್ಟುಕೊಂಡು ಪರಪುರುಷರನ್ನು ಮನಸ್ಸಿನಲ್ಲಿ ಕೋರುತ್ತಿರುವ ದುಷ್ಟಸ್ತ್ರೀಯರಿಗೆ ಇದರ ಗುಣಾಗುಣಗಳು ತಿಳಿಯುವು. ಅಂತಹ ಸ್ತ್ರೀಯರು ಇಹಲೋಕದಲ್ಲಿ ಅಪಕೀರ್ತಿಯನ್ನು ಹೊಂದಿ, ಪರಲೋಕಕ್ಕೂ ಭ್ರಷ್ಟರಾಗಿ ನರಕದಲ್ಲಿ ಬೀಳುವರು. ಲೋಕದಲ್ಲಿ ಯುಕ್ತಾಯುಕ್ತವನ್ನು ತಿಳಿದ ಗುಣಯುಕ್ತರಾದ ನಿನ್ನಂತಹ ಉತ್ತಮಸ್ತ್ರೀಯರೇ ಸ್ವರ್ಗದಲ್ಲಿ ವಿಹರಿಸುವರು. ಆದುದರಿಂದ ನೀನು ಈಗಿನಂತೆಯೇ ಪತಿಯನ್ನನುವರ್ತಿಸುತ್ತ, ಪತಿವ್ರತಾಧರ್ಮವನ್ನನುಸರಿಸಿ ಆತನಿಗೆ ಸಹಧರ್ಮಚಾರಿಣಿಯಾಗಿರು. ಇದರಿಂದ ನೀನು ಅಪಾರವಾದ ಕೀರ್ತಿಗೂ ಧರ್ಮಕ್ಕೂ ಪಾತ್ರಳಾಗುವೆ" ಎಂದಳು. ಇಲ್ಲಿಗೆ ನೂರಹದಿನೇಳನೆಯ ಸರ್ಗವು.

---

ಸೀತೆಯು ಅನಸೂಯೆಯಿಂದ ಉಪದೇಶಿಸಲ್ಪಟ್ಟ ಪಾತಿವ್ರತ್ಯಧರ್ಮವನ್ನನುಮೋದಿಸಿ, ಆಕೆಗೆ ತನ್ನ ಸ್ವಯಂವರಕಥೆಯನ್ನು ಹೇಳಿದುದು.

ಅನಸೂಯೆಯು ಹೀಗೆ ಹೇಳಿದ ಬುದ್ಧಿವಾದಗಳನ್ನು ಸೀತೆಯು ಕೇಳಿ, ಅದೆಲ್ಲವನ್ನೂ ಗುಣವಾಗಿ ಕೈಕೊಂಡು, ಆ ತಪಸ್ವಿನಿಯನ್ನು ಪೂಜಿಸಿ ಪ್ರಿಯವಾಕ್ಯದಿಂದ ಆಕೆಯನ್ನು ಕುರಿತು "ಎಲೆ ಆರ್ಯೆ! ಪೂಜ್ಯಳಾದ ನೀನು ಶಿಷ್ಯಪ್ರಾಯಳಾದ ನನಗೆ ಈ ಬುದ್ಧಿವಾದಗಳನ್ನು ಹೇಳಿದುದು ಸಹಜವಾಗಿಯೇ ಇರುವುದು. ಸ್ತ್ರೀಯರಿಗೆ ಪತಿಯೇ ಪರವಸ್ತುವೆಂಬುದನ್ನು ನಾನೂ ತಿಳಿದೇ ಇರುವೆನು. ಒಂದುವೇಳೆ ಪತಿಯಾದವನು ಮರ್ಯಾದೆಯನ್ನು ಮೀರಿ ನಡೆದರೂ, ಪತ್ನಿಯು ಆತನಲ್ಲಿ ಗುಣದೋಷಗಳ ಭೇದವನ್ನೆಣಿಸದೆ, ಆತನನ್ನೇ ಪರದೈವವೆಂದು ಭಾವಿಸಿ ಉಪಚರಿಸುತ್ತಿರಬೇಕೆಂಬುದರಲ್ಲಿ ತಡೆಯೇ ಇಲ್ಲ

ವು. ಹೀಗಿರುವಾಗ ಸದ್ಗುಣಸಂಪನ್ನನಾಗಿ, ದಯಾಳುವಾಗಿ, ಜಿತೇಂದ್ರಿಯ ನಾಗಿ, ನನ್ನಲ್ಲಿ ಪರಮಪ್ರೇಮವುಳ್ಳವನಾಗಿ, ಧರ್ಮಾತ್ಮನೆನಿಸಿಕೊಂಡಿರುವ ನನ್ನ ಪ್ರಿಯನನ್ನು ನಾನು ಹೇಗೆ ಸೇವಿಸಬೇಕೆಂಬುದನ್ನು ನನಗೆ ಇತರರುಹೇ ಳಿ ತಿಳಿಸಬೇಕೆ? ಆತನು ನನಗೆ ತಾಯಿಯಂತೆ ಹಿತಕರನಾಗಿಯೂ, ತಂದೆಯಂತೆ ನನ್ನ ಶ್ರೇಯಃಕಾಂಕ್ಷಿಯಾಗಿಯೂ ಇರುವವನಲ್ಲವೆ! ಮಹಾಬಲನಾದ ಆ ರಾ ಮನು ಹೆತ್ತತಾಯಿಯಾದ ಕೌಸಲ್ಯೆಯಲ್ಲಿಹೇಗೆ ವರ್ತಿಸುವನೋ ಹಾಗೆಯೇ ಮಹಾರಾಜನ ಅಂತಃಪುರದಲ್ಲಿರುವ ಇತರಸ್ತ್ರೀಯರಲ್ಲಿಯೂ ವರ್ತಿಸುತ್ತಿರುವ ನು. ಪಿತೃವತ್ಸಲನಾದ ಮತ್ತು ಧರ್ಮಜ್ಞನಾದ ಆ ವೀರನು, ತನ್ನ ತಂದೆಯಾದ ದಶರಥನು ಒಂದಾವರ್ತಿ ಕಣ್ಣಿಟ್ಟು ನೋಡಿದ ಇತರ ಸಾಮಾನ್ಯ ಸ್ತ್ರೀಯ ವಿಷಯದಲ್ಲಿಕೂಡ ತಾಯಿಯ ಭಾವನೆಯನ್ನಿಟ್ಟು ಶುಶ್ರೂಷೆಮಾಡುವನು. ಇದಕ್ಕೆ ಮೊದಲು ನಾನು ಭಯಂಕರವಾದ ಈ ವನಕ್ಕೆ ಪ್ರಯಾಣಮಾಡಿ ಹೊರಟು ಬರುವಾಗಲೇ, ನಮ್ಮ ಅತ್ತೆಯಾದ ಕೌಸಲ್ಯೆಯು ನನಗೆ ಪಾತಿ ವ್ರತ್ಯಧರ್ಮವನ್ನು ಕುರಿತು ಅನೇಕವಿಧದಲ್ಲಿ ಉಪದೇಶಿಸಿರುವಳು. ಅವುಗ ಳನ್ನು ನಾನು ಇನ್ನೂ ಮನಸ್ಸಿನಲ್ಲಿಯೇ ಇಟ್ಟಿರುವೆನು. ಮತ್ತು ನನ್ನ ಪಾಣಿ ಗ್ರಹಣದಲ್ಲಿ ಅಗ್ನಿಹೋತ್ರಸಾನ್ನಿಧ್ಯದಲ್ಲಿಯೇ ನನ್ನ ತಾಯಿಯು ನನಗೆ ಪತಿ ವ್ರತ್ಯೋಪದೇಶವನ್ನು ಮಾಡಿರುವಳು. ಎಲೈ ಧರ್ಮಚಾರಿಣಿಯೆ ! ನಿನ್ನ ಮಾ ತುಗಳಿಂದ ಅವೆಲ್ಲವೂ ಈಗ ನನಗೆ ಹೊಸದಾಗಿ ತೋರಿಸಲ್ಪಟ್ಟುವು. ಸ್ತ್ರೀಯ ರಿಗೆ ಪತಿಶುಶ್ರೂಷೆಗಿಂತಲೂ ಬೇರೆ ತಪಸ್ಸಿಲ್ಲವು. ಸಾವಿತ್ರಿಯೆಂಬವಳು ಪತಿಶುಶ್ರೂಷೆಯಿಂದಲೇ ಈಗಲೂ ಸ್ವರ್ಗದಲ್ಲಿ ಪೂಜಿಸಲ್ಪಡುತ್ತಿರುವಳು. ನಮಗೆ ಅಷ್ಟು ದೂರದ ನಿದರ್ಶನವೇಕೆ ? ನೀನೂ ಹಾಗೆಯೇ ಪತಿಶುಶ್ರೂ ಷೆಯೆಂಬ ಧರ್ಮದಲ್ಲಿದ್ದುದರಿಂದಲೇ ಸ್ವರ್ಗವನ್ನು ಪಡೆದವಳಲ್ಲವೆ? ಎಲ್ಲಾ ಸ್ತ್ರೀಯರಿಗೂ ಮೇಲೆನಿಸಿಕೊಂಡು, ದೇವತಾಸ್ವರೂಪದಿಂದ ಆಕಾಶದಲ್ಲಿ ರುವ ರೋಹಿಣಿಯೂಕೂಡ ಚಂದ್ರನನ್ನು ಬಿಟ್ಟು ಒಂದು ಮುಹೂರ್ತವಾ ದರೂ ಹೊರಗೆ ಕಾಣತಕ್ಕವಳಲ್ಲ. ಹೀಗೆಯೇ ದೃಢವಾದ ಪಾತಿವ್ರತ್ಯವನ್ನು ಹಿಡಿದಿರುವ ಎಷ್ಟೋ ಉತ್ತಮಸ್ತ್ರೀಯರು ತಮ್ಮತಮ್ಮ ಪುಣ್ಯಕರ್ಮದಿಂದ ಸ್ವರ್ಗಾದಿಲೋಕಗಳಲ್ಲಿ ಪೂಜಿಸಲ್ಪಡುತ್ತಿರುವರು. " ಎಂದಳು. ಇದನ್ನು

ಕೇಳಿ ಅನಸೂಯೆಯು ಪರಮಸಂತುಷ್ಟಳಾಗಿ, ಪ್ರೀತಿಯಿಂದ ಆ ಸೀತೆಯ ತಲೆಯನ್ನಾಘ್ರಾಣಿಸಿ, ಅವಳನ್ನು ಮತ್ತಷ್ಟು ಪ್ರೋತ್ಸಾಹಿಸುವಂತೆ ಒಂದಾನೊಂದು ಮಾತನ್ನು ಹೇಳುವಳು. "ಎಲೆವತ್ಸೆ! ನಾನು ನಾನಾವಿಧವಾದ ನಿಯಮಗಳನ್ನು ನಡೆಸಿ ಗಳಿಸಿಟ್ಟಿರುವ ತಪೋಬಲವು ಈಗಲೂ ನನಗೆ ಸ್ವಾಧೀನವಾಗಿರುವುದು. ಕಾಡಿನಲ್ಲಿ ಹೀಗೆ ಕಷ್ಟಪಡುತ್ತಿರುವಾಗಲೂ ಬೇಸರಗೊಳದೆ, ಪತಿಸೇವೆಯೊಂದರಿಂದಲೇ ಹಿಗ್ಗುತ್ತ, ಈಗಲೂ ಹಸನ್ಮುಖಳಾಗಿರುವ ನಿನ್ನ ಸುಗುಣಗಳಿಗಾಗಿ ನಾನು ಬಹಳ ಸಂತೋಷಪಟ್ಟಿರುವೆನು. ನನ್ನ ತಪೋಬಲದಿಂದ ನಿನಗೆ ಇನ್ನೂ ಮೇಲೆಮೇಲೆ ಶ್ರೇಯಸ್ಸನ್ನು ಕೂಡಿಸಬೇಕೆಂದಿರುವೆನು. ನಿನ್ನ ಮಾತುಗಳು ನಿನ್ನ ಸುಸ್ವಭಾವಕ್ಕೆ ಅನುಗುಣಗಳಾಗಿಯೇ ಇರುವುವು. ಇವು ನನಗೆ ಎಷ್ಟೋ ಆನಂದವನ್ನುಂಟುಮಾಡಿವೆ. ನಾನು ನಿನ್ನಲ್ಲಿ ಪ್ರಸನ್ನಳಾಗಿರುವೆನು. ನಿನಗೆ ನನ್ನಿಂದಾಗಬೇಕಾದುದೇನು? ಹೇಳು" ಎಂದಳು. ಇದನ್ನು ಕೇಳಿ ಸೀತೆಯು ಆಶ್ಚರ್ಯಭರಿತಳಾಗಿ, ಮಂದಹಾಸದೊಡನೆ ಕೂಡಿ, ಮಹಾತಪಸ್ವಿನಿಯಾದ ಅನಸೂಯೆಯನ್ನು ಕುರಿತು, "ಆರ್ಯೆ! ಇನ್ನು ನಿನ್ನಿಂದ ನನಗಾಗಬೇಕಾದುದೇನು? ನಿನ್ನ ಈ ಪ್ರಿಯವಾಕ್ಯಗಳೇ ಸಾಕು" ಎಂದಳು, ಇದನ್ನು ಕೇಳಿ ಧರ್ಮಜ್ಞಳಾದ ಆ ಅನಸೂಯೆಗೆ ಸೀತೆಯಲ್ಲಿ ಮತ್ತಷ್ಟು ಪ್ರೇಮವು ಹೆಚ್ಚಿತು. ಆಗ ಆ ಸೀತೆಯನ್ನು ಕುರಿತು, "ಆಹಾ! ಎಲೆ ಸೀತೆ! ಲೋಕಾದ್ಭುತವಾದ ನಿನ್ನ ಸೌಜನ್ಯದಿಂದ ನನಗುಂಟಾಗಿರುವ ಈ ಅಪಾರವಾದ ಸಂತೋಷವನ್ನು ನಾನು ಸಫಲಗೊಳಿಸದೆ ಇರಲಾರೆನು! ಇದೋ! ಈ ಪುಷ್ಪಹಾರಗಳನ್ನು ನೋಡು! ಇದೋ ಈ ವಸ್ತ್ರಾಭರಣಗಳನ್ನು ನೋಡು! ಇದೋ! ಇಲ್ಲಿ ಚಂದನಾದ್ಯನುಲೇಪನಗಳನ್ನು ನೋಡು! ನಾನು ಅನುಗ್ರಹಿಸಿ ಕೊಡುವ ಈ ಅಲಂಕಾರಸಾಮಗ್ರಿಗಳಿಂದ ನಿನ್ನ ದೇಹವನ್ನಲಂಕರಿಸು! ಇವು ನಿನ್ನ ದೇಹಕ್ಕೆ ಅನುರೂಪವಾಗಿರುವುವು. ಮತ್ತು ಈ ಪುಷ್ಪಾದಿಗಳನ್ನು ಸಾಮಾನ್ಯವೆಂದೆಣಿಸಬೇಡ! ಇವು ಎಂದೆಂದಿಗೂ ಬಾಡತಕ್ಕವುಗಳಲ್ಲ! ನಿನಗೆ ಶಾಶ್ವತವಾದ ಅಲಂಕಾರವಾಗುವುವು. ಎಲೆ ಜನಕಪುತ್ರಿ! ದಿವ್ಯವಾದ ಈ ಅಂಗರಾಗದಿಂದ ನೀನು ದೇಹವನ್ನಲಂಕರಿಸಿಕೊಂಡು, ಪತಿಸಾನ್ನಿಧ್ಯದಲ್ಲಿದ್ದರೆ ಶ್ರೀಮಹಾಲಕ್ಷ್ಮಿ

ಯಿಂದ ವಿಷ್ಣುವಿಗೆ ಹೇಗೋ ಹಾಗೆ ನಿನ್ನಿಂದ ನಿನ್ನ ಪತಿಗೂ ಒಂದು ಕಾಂತಿ ವಿಶೇಷವುಂಟು. ಇವು ನಿಮಗೆ ಸಮಸ್ತಶ್ರೇಯಸ್ಸುಗಳಿಗೂ ಕಾರಣವಾ ದುದರಿಂದ ಇವುಗಳನ್ನಂಗೀಕರಿಸು "ಎಂದಳು!" ಆಗ ಸೀತೆಯಾದರೋ ಅನಸೂಯೆಯು ತನಗೆ ಪ್ರೀತಿಯಿಂದಕೊಟ್ಟವಸ್ತ್ರಾಭರಣಾದಿಗಳನ್ನೂ, ಹೂ ಗಂಧ, ಮುಂತಾದುವುಗಳನ್ನೂ ಸಂತೋಷದಿಂದ ಸ್ವೀಕರಿಸಿ, ಆತಪಸ್ವಿ ನಿಗೆ ಕೈಮುಗಿದು ನಮಸ್ಕರಿಸಿ ಮುಂದೆ ಕುಳಿತಳು. ಆಮೇಲೆ ಅನಸೂ ಯೆಯು ಸೀತೆಯೊಡನೆ ಬೇರೆಬೇರೆ ಪ್ರಿಯಕಥೆಗಳನ್ನಾಡುತ್ತಿರುವಾಗ ಆ ಕೆಯನ್ನು ಕುರಿತು ಪ್ರಶ್ನೆಮಾಡುವಳು. "ಎಲೆ ಸೀತೆ! ಯಶಸ್ವಿಯಾದ ಈ ರಾಮನು ನಿನ್ನನ್ನು ಸ್ವಯಂವರದಲ್ಲಿ ವರಿಸಿದನೆಂಬ ಸುದ್ದಿಯು ಯಾವಾ ಗಲೋ ನನ್ನ ಕಿವಿಗೆ ಬಿದ್ದಹಾಗಿದೆ! ಅದರ ವಿಚಾರವನ್ನು ನಿನ್ನಿಂದ ವಿಸ್ತಾರ ವಾಗಿ ಕೇಳಿ ತಿಳಿಯಬೇಕೆಂದು ನನಗೆ ಆಸೆ ಹುಟ್ಟಿರುವುದು. ಆದುದರಿಂದ ನೀನು ಅಲ್ಲಿ ನಡೆದುದನ್ನು ನಡೆದಹಾಗೆಯೇ ನನಗೆ ವಿವರವಾಗಿ ತಿಳಿಸಬೇಕು." ಎಂದಳು. ಆದಕ್ಕಾ ಸೀತೆಯು ಧರ್ಮಪರಾಯಣಳಾದ ಅನಸೂಯೆಯನ್ನು ಕುರಿತು" ಎಲೆ ಪೂಜ್ಯಳೆ! ಹಾಗೆ ನಿನಗೆ ಕುತೂಹಲವಿದ್ದರೆ ಹೇಳುವೆನು ಕೇಳು! ಎಂದು ಹೇಳಿ, ಆ ಕಥೆಯನ್ನು ಹೇಳಲಾರಂಭಿಸಿದಳು. "ಆರ್ಯೆ! ಕೇಳು! ಮಿಥಿಲಾನಗರಕ್ಕೆ ಅಧಿಪತಿಯಾದ ಜನಕನೆಂಬ ರಾಜನುಂಟು. ಆ ತನು ಮಹಾವೀರನು! ಸಮಸ್ತ ಧರ್ಮಗಳನ್ನೂ ಬಲ್ಲವನು. ಅವನು ತನ್ನ ಕ್ಷತ್ರಿ ಯಧರ್ಮವನ್ನವಲಂಬಿಸಿ ನ್ಯಾಯರೀತಿಯಿಂದ ಭೂಮಿಯನ್ನು ಪಾಲಿಸುತ್ತಿ ರುವನು. ಆತನು ಹಿಂದೆ ಒಂದಾನೊಂದು ಕಾಲದಲ್ಲಿ ಒಂದುಯಾಗವ ನ್ನಾರಂಭಿಸಿ, ಯಜ್ಞಭೂಮಿಯನ್ನು ಶೋಧಿಸುವುದಕ್ಕಾಗಿ ನೇಗಿಲಿನಿಂದ ನೆಲವನ್ನು ಉಳುವುದಕ್ಕೆ ತೊಡಗಿದನು. ಹೀಗೆ ಉಳುತ್ತಿರುವಾಗ ಭೂಮಿ ಯನ್ನು ಭೇದಿಸಿಕೊಂಡು ನಾನು ಮೇಲೆದ್ದು ಕಾಣಿಸಿಕೊಂಡೆನು. ಯಜ್ಞ ಮಾಡುವವನು ಯಾಗವಿಧಿಯನ್ನನುಸರಿಸಿ[1] ಹದಿನಾಲ್ಕು ಹಿಡಿಗಳ ಪ್ರಮಾಣ

1 "ಯಾಜಾತಾಓಷಧಯೋ ದೇವೇಭ್ಯಃ" ಇತ್ಯಾದಿಮಂತ್ರೋಕ್ತಪ್ರಕಾರವಾಗಿ ಯಜ್ಞಕರ್ತನು ಭೂಮಿಯನ್ನು ತನ್ತ್ರ ಹದಿನಾಲ್ಕುಹಿಡಿಗಳಷ್ಟು ಓಷಧಿಗಳನ್ನು ಬಿತ್ತ ಬೇಕೆಂದು ತಿಳಿದುಬರುವುದು.

ದಷ್ಟು ಓಷಧಿಗಳನ್ನು ಯಜ್ಞಭೂಮಿಯಲ್ಲಿ ಬಿತ್ತಬೇಕೆಂಬ ನಿಯಮದಂತೆ, ಆ ಕಾರ್ಯ್ಯದಲ್ಲಿ ಉದ್ಯುಕ್ತನಾಗಿದ್ದ ನನ್ನತಂದೆಯು, ಆಕಸ್ಮಿಕವಾಗಿ ನೆಲದ ಮಣ್ಣಿನಿಂದ ಮೇಲೆದ್ದು ಬಂದು ಧೂಳಿನಿಂದ ಮಲಿನವಾದ ದೇಹವುಳ್ಳ ನನ್ನನ್ನು ನೋಡಿ ಆಶ್ಚರ್ಯದಿಂದ ಬೆರಗಾಗಿದ್ದನು.ಆತನು ಅದುವರೆಗೆ ಸಂತಾನ ವಿಲ್ಲದವನಾಗಿದ್ದುದರಿಂದಲೂ, ಮಕ್ಕಳನ್ನು ಕಂಡರೆ ಬಹಳಪ್ರೀತಿಯುಳ್ಳವ ನಾಗಿದ್ದುದರಿಂದಲೂ, ನನ್ನ ಕೈಹಿಡಿದೆತ್ತಿ ತನ್ನ ತೊಡೆಯಮೇಲೆ ಕುಳ್ಳಿರಿಸಿ ಕೊಂಡು, ನನ್ನನ್ನು ಮಗಳೆಂದೇ|ಭಾವಿಸಿ ಪ್ರೀತಿಯಿಂದ ಲಾಲಿಸುತಿದ್ದನು. ನನ್ನಲ್ಲಿ ಆತನಿಗುಂಟಾದ ಪ್ರೇಮಕ್ಕೆ ಪಾರವೇ ಇರಲಿಲ್ಲ! ಇಷ್ಟರಲ್ಲಿ ಆತನ ಕಿವಿಗೆ ಆಕಾಶವಾಣಿಯೊಂದು ಕೇಳಿಸಿತು. ‘‘ಎಲೈ ರಾಜನೆ!ನೀನು ಈ ಕನ್ನಿಕೆ ಯನ್ನು ಪುತ್ರಿಯೆಂದು ಭಾವಿಸಿದುದು ಯುಕ್ತವಾಗಿಯೇ ಇರುವುದು. ನಿಜ ಧರ್ಮವನ್ನನುಸರಿಸಿ ಈಕೆಯು ನಿನ್ನ ಪುತ್ರಿಯಾಗಿಯೇ ಇರುವಳು" ಎಂಬೀ ಮಾತು ಆತನ ಕಿವಿಗೆ ಬಿದ್ದಿತು. ಆಗ ಜನಕನು ಎಣೆಯಿಲ್ಲದ ಈ ಅಮಾನುಷ ವಾಕ್ಯವನ್ನು ಕೇಳಿ, ಪರಮಸಂತೋಷದಿಂದ ಕೂಡಿದವನಾಗಿ, ನನ್ನನ್ನು ಕರೆ ದುಕೊಂಡು ತನ್ನ ಅರಮನೆಗೆ ಬಂದು, ಅಂದಿನಿಂದ ಮಹಾಭ್ಯುದಯವನ್ನು ಹೊಂದಿ ಶೋಭಿಸುತ್ತಿದ್ದನು. ನನ್ನ ತಂದೆಯಾದ ಆ ಜನಕನು ನನ್ನನ್ನು ಕರೆ ತಂದೊಡನೆಯೇ ತನ್ನ ಜ್ಯೇಷ್ಠಭಾರ್ಯೆಯವಶಕ್ಕೊಪ್ಪಿಸಿದನು. ಆಕೆಯು ಬಹುಕಾಲದಿಂದ ಮಕ್ಕಳಿಲ್ಲದೆ ತಪಿಸುತಿದ್ದುದರಿಂದ,ನನ್ನನ್ನು ಬಹು ಪ್ರೇಮ ದಿಂದ ಸ್ವೀಕರಿಸಿ, ತನ್ನ ಹೊಟ್ಟೆಯಲ್ಲಿ ಹುಟ್ಟಿದ ಮಗಳೆಂದೇ ಭಾವಿಸಿ ಪೋಷಿ ಸುತ್ತ ಬಂದಳು. ಹೀಗೆ ಕೆಲವುಕಾಲವು ಕಳೆಯಲು, ಒಮ್ಮೆ 'ನನ್ನ ತಂದೆಯು ನನ್ನನ್ನು ನೋಡಿದಾಗ, ನನಗೆ ವಿವಾಹಯೋಗ್ಯವಾದ ವಯಸ್ಸು ಪ್ರಾಪ್ತ ವಾಗಿರುವುದೆಂದು ಆತನ ಮನಸ್ಸಿಗೆ ತೋರಿತು. ಪತಿಸಂಯೋಗವಿಲ್ಲದೆ ಬಿ ಟ್ಟಿರಬಾರದ ನನ್ನ ಯೌವನಾವಸ್ಥೆಯನ್ನು ನೋಡಿ ಆತನಮನಸ್ಸಿನಲ್ಲಿ ಚಿಂತೆ ಯುಹುಟ್ಟಿತು.ಆಗ ಆತನಿಗುಂಟಾದ ಚಿಂತೆಯು ಸಾಮಾನ್ಯವಾದುದಲ್ಲ. ತನ್ನ ಲ್ಲಿದ್ದ ಅಲ್ಪಸಲ್ಪಹಣವನ್ನೂ ಕಳೆದುಕೊಂಡ ಬಡವನಂತೆ ಆತನು ಬಹಳ ಚಿಂತಾಗ್ರಸ್ತನಾಗಿ ಕಳವಳಿಸುತಿದ್ದನು. ಅಮ್ಮಾ! ಲೋಕದಲ್ಲಿ ಯಾರಿಗಾದ ರೇನು? ಹೆಣ್ಣುಮಕ್ಕಳನ್ನು ಪಡೆದವನು ಮಹೇಂದ್ರನಿಗೆ ಸಮಾನನಾಗಿದ್ದ

ರೂ, ತನಗೆ ಸಮಾನರಾದವರಿಂದ ತಿರಸ್ಕಾರವನ್ನು ಹೊಂದಬೇಕಾಗುವುದು. ಕೊನೆಗೆ ಒಂದೊಂದುವೇಳೆ ತನಗಿಂತ ಕೀಳಾದವರೂ ತನ್ನನ್ನು ತಿರಸ್ಕರಿಸುವ ರು.ಈಕಾರಣದಿಂದಲೇ ನನ್ನ ತಂದೆಯು ತನಗೆ ಅಂತಹ ಅವಮಾನವು ಪ್ರಾಪ್ತವಾಗುವಕಾಲವು ಸನ್ನಿಹಿತವಾಯಿತೆಂದು ತಿಳಿದು, ದುಃಖಸಮುದ್ರದಲ್ಲಿ ಮುಳುಗಿ,ತೆಪ್ಪವಿಲ್ಲದವನು ದಡವನ್ನು ಸೇರಲಾರದೆ ನಡುನೀರಿನಲ್ಲಿ ತತ್ತಳಿಸುವಂತೆ ನೆಮ್ಮದಿಯಿಲ್ಲದಿದ್ದನು. ಇದರಮೇಲೆ ನಾನು ಮನುಷ್ಯಗರ್ಭದಿಂದಲೂ ಹುಟ್ಟಿದವಳಲ್ಲವೆ,ಅಯೋನಿಜೆಯಾಗಿದ್ದುದರಿಂದ,ನನಗೆ ತಕ್ಕವರನನ್ನು ಎಲ್ಲಿ ಸಂಪಾದಿಸುವುದೆಂಬ ಚಿಂತೆಯೇ ಆತನ ಮನಸ್ಸಿನಲ್ಲಿ ಸಂಪೂರ್ಣವಾಗಿ ನೆಲೆಗೊಂಡಿತ್ತು. ಎಷ್ಟೆಷ್ಟು ಯೋಚಿಸಿದರೂ ಆತನ ಮನಸ್ಸಿಗೆ ನಿರ್ಧರವು ತೋರಲಿಲ್ಲ. ಹೀಗೆ ಅಹೋರಾತ್ರವೂ ಚಿಂತಿಸುತ್ತಿರುವಾಗ ಆತನ ಮನಸ್ಸಿಗೆ ಒಂದಾನೊಂದು ಆಲೋಚನೆಯು ಹುಟ್ಟಿತು. ಸ್ವಯಂವರರೂಪದಿಂದ ನನಗೆ ವಿವಾಹವನ್ನು ನಡೆಸಿಬಿಡುವುಧಾಗಿ ನಿಶ್ಚಯಿಸಿ ಕೊಂಡನು. [1]ಮೊದಲು ಒಂದಾನೊಂದು ಮಹಾಯಜ್ಞದಲ್ಲಿ ತೃಪ್ತಿಹೊಂದಿ ಪ್ರಸನ್ನರಾದ ದೇವತೆಗಳು,ವರುಣನ ಮೂಲಕವಾಗಿ ನಮ್ಮವಂಶದರಾಜನಿಗೆ ಒಂದಾನೊಂದು ಮಹಾಧನುಸ್ಸನ್ನೂ, ಅಕ್ಷಯಬಾಣಗಳುಳ್ಳ ಎರಡು ಬತ್ತಳಿಕೆಗಳನ್ನೂ ಅನುಗ್ರಹಿಸಿಕೊಟ್ಟಿದ್ದರು. ಅದು ಬಹಳ ಭಾರವುಳ್ಳುದಾಗಿದ್ದುದರಿಂದ ಕೇವಲ ಮನುಷ್ಯಮಾತ್ರರು ಎಷ್ಟೇ ಪ್ರಯತ್ನಪಟ್ಟರೂ ಅದನ್ನು ಅಡಿಸುವುದಕ್ಕೂ ಆಗುತ್ತಿರಲಿಲ್ಲ. ಆದುದರಿಂದ ಯಾವರಾಜರೂ ಸ್ವಪ್ನದಲ್ಲಿಯಾಗಲಿ ಅದನ್ನು ಎತ್ತಿ ಬಗ್ಗಿಸಲಾರರು. ಇದನ್ನು ತಿಳಿದು ಸತ್ಯವಾದಿಯಾದ ನನ್ನತಂದೆಯು, ದೇಶದೇಶದ ರಾಜರೆಲ್ಲರನ್ನೂ ಕರೆಸಿ ಸಭೆಕೂಡಿಸಿ,ಅವರನಡುವೆ ಆಧನುಸ್ಸನ್ನು ತರಿಸಿಟ್ಟು "ಇದೋ! ಈ ಧನುಸ್ಸನ್ನು ನೋಡಿರಿ! ನಿಮ್ಮಲ್ಲಿ ಯಾವವೀರನು

---

1. ಪೂರ್ವದಲ್ಲಿ ದಕ್ಷಯಜ್ಞಕಾಲದಲ್ಲಿ ಶಿವನಿಂದ ಪೀಡಿತರಾದ ದೇವತೆಗಳು, ಆ ಶಿವನನ್ನೇ ಪ್ರಾರ್ಥಿಸಿ ಆತನ ಕೈಯ್ಯಲ್ಲಿದ್ದ ಧನುಸ್ಸನ್ನು ತಮಗೆ ಕೊಟ್ಟು ಬಿಡಬೇಕೆಂದು ಕೇಳಿದರು. ಶಿವನು ಆ ಧನುಸ್ಸನ್ನು ದೇವತೆಗಳಿಗೆ ಕೊಡುವಾಗ ಅದನ್ನು ದೇವರಾತನಿಗೆ ಕೊಡುವಂತೆ ಹೇಳಿಕೊಟ್ಟನು. ಆಮೇಲೆ ದೇವತೆಗಳು ವರುಣನ ಮೂಲಕವಾಗಿ ಆ ಧನುಸ್ಸನ್ನು ಜನಕವಂಶಕ್ಕೆಸೇರಿದ ದೇವರಾತನಿಗೆ ಕೊಡಿಸಿದರೆಂದು ಪುರಾಣಕಥೆಯು.

ಈ ಧನುಸ್ಸನ್ನೆತ್ತಿ ನಾಣೇರಿಸುವನೋ ಅತನಿಗೆ ನನ ಮಗಳನ್ನು ಕೊಟ್ಟು ವಿವಾಹಮಾಡುವೆನು. ಇದರಲ್ಲಿ ಸಂದೇಹವಿಲ್ಲವು" ಎಂದು ಸಾರಿದನು. ಇದನ್ನು ಕೇಳಿ ಅಲ್ಲಿದ್ದ ರಾಜರೆಲ್ಲರೂ ಒಬ್ಬೊಬ್ಬರಾಗಿ ಮುಂದೆಬಂದು ಆ ಧನುಸ್ಸಿನ ಆಕಾರವನ್ನು ನೋಡಿ ಭಗ್ನಮನೋರಥರಾಗಿ, ಅದನ್ನು ಕೈಯ್ಯಿಂದಲೂ ಎತ್ತಲಾರದೆ ಕೊನೆಗೆ ಆಧನುಸ್ಸಿಗೆ ಕೈಮುಗಿದು ಹಿಂತಿರುಗಿ ಹೋಗುತ್ತಿದ್ದರು. ಬಹುಕಾಲದಮೇಲೆ ಸತ್ಯಪರಾಕ್ರಮಿಯಾಗಿಯೂ, ತೇಜಸ್ವಿಯಾಗಿಯೂ ಇರುವ ಈ ರಾಮನು, ತನ್ನ ತಮ್ಮನಾದ ಈ ಲಕ್ಷ್ಮಣನೊಡನೆ ವಿಶ್ವಾಮಿತ್ರನನ್ನು ಮುಂದಿಟ್ಟುಕೊಂಡು ನನ್ನ ತಂದೆಯ ಯಜ್ಞವನ್ನು ನೋಡಬೇಕೆಂದು ನಮ್ಮ ಪಟ್ಟಣಕ್ಕೆ ಬಂದನು. ಹೀಗೆ ಅತಿಥಿಯಾಗಿ ಬಂದ ವಿಶ್ವಾಮಿತ್ರನನ್ನು ನನ್ನ ತಂದೆಯು ಉಚಿತರೀತಿಯಿಂದ ಸತ್ಕರಿಸಿದಮೇಲೆ,ಆ ಮಹರ್ಷಿಯು ನನ್ನತಂದೆಯನ್ನು ನೋಡಿ "ಎಲೈರಾಜನೆ! ಇದೋ! ಇವರಿಬ್ಬರೂ ದಶರಥರಾಜನ ಮಕ್ಕಳು. ಇವರಿಬ್ಬರೂ ನಿನ್ನ ಧನುಸ್ಸನ್ನು ನೋಡಬೇಕೆಂದಿರುವರು. ನಿನಗೆ ದೇವತಾನುಗ್ರಹದಿಂದ ಬಂದಿರುವ ಆ ದಿವ್ಯ ಧನುಸ್ಸನ್ನು ಇವರಿಗೂ ಒಂದಾವರ್ತಿ ತೋರಿಸಿಬಿಡು" ಎಂದನು. ಆ ಬ್ರಾಹ್ಮಣೋತ್ತಮನ ಮಾತನ್ನು ಕೇಳಿ ನನ್ನ ತಂದೆಯು ಆದಿವ್ಯಧನುಸ್ಸನ್ನು ಇವರಮುಂದೆ ! ತರಿಸಿಟ್ಟನು. ವೀರ್ಯವಂತನಾದ ರಾಮನು ಆ ಧನುಸ್ಸನ್ನು ನೋಡುತ್ತಿರುವವನಂತೆಯೇ,ರೆಪ್ಪೆಬಡಿಯುವಷ್ಟರಲ್ಲಿ ಅದನ್ನು ಕೈಯ್ಯಿಂದೆತ್ತಿ ಬಗ್ಗಿಸಿ ನಾಣೇರಿಸಿಕಟ್ಟಿ, ಎಳೆಯುವುದಕ್ಕೂ ಪ್ರಯತ್ನಿಸಿದನು. ಹೀಗೆ ಆ ನಾಣನ್ನು ಎಳೆಯುವಾಗ, ಈತನ ಶಕ್ತಿಗೆ ತಡೆಯಲಾರದೆ ಆ ಧನುರ್ದಂಡವು ನಡುವೆ ಮುರಿದುಹೋಗಿ ಎರಡು ತುಂಡಾಗಿ ಬಿದ್ದಿತು. ಇದರಿಂದುಂಟಾದ ಮಹಾಶಬ್ದವು ಸಿಡಿಲು ಬಡಿದಂತೆ ಬಹು ಭಯಂಕರವಾಗಿ ಸುತ್ತಲೂ ವ್ಯಾಪಿಸಿತು. ಆಕ್ಷಣವೇ ಸತ್ಯಸಂಧನಾದ ನನ್ನ ತಂದೆಯು ನನ್ನನ್ನು ರಾಮನ ಕೈಗೆ ಒಪ್ಪಿಸುವುದಕ್ಕಾಗಿ ಧಾರೆಯೆರೆಯಬೇಕೆಂದು ಜಲಕುಂಭವನ್ನು ಕೈಯ್ಯಲ್ಲಿ ಹಿಡಿದು ನಿಂತಿದ್ದನು. ಹೀಗೆ ಜನಕನು ಆತುರಪಡುತ್ತಿರುವುದನ್ನು ನೋಡಿ ರಾಮನು, ಆಗಲೇ ನನ್ನನ್ನು ಪರಿಗ್ರಹಿಸುವುದಕ್ಕೆ ಇಷ್ಟಪಡಲಿಲ್ಲ ! ಅಯೋಧ್ಯಾಧಿಪತಿಯಾದ ತನ್ನ ತಂದೆಯಾದ ದಶರಥನ ಅಭಿಪ್ರಾಯವನ್ನು ಕೇಳದೆ

ತಾನು ನನ್ನನ್ನು ಪ್ರತಿಗ್ರಹಿಸಲಾರೆನೆಂದು ಹೇಳಿಬಿಟ್ಟನು. ಆಗ ನನ್ನ ತಂದೆಯು ವೃದ್ಧನಾದ ನನ್ನ ಮಾವನನ್ನು ಕರೆಸಿ ಆತನ ಅನುಮತಿಯಿಂದ ನನ್ನನ್ನು ರಾಮನಿಗೆ ವಿವಾಹಮಾಡಿಕೊಟ್ಟನು. ಇಷ್ಟೇ ಅಲ್ಲ. ನನ್ನ ತಂಗಿಯಾದ ಊರ್ಮಿಳೆಯೆಂಬವಳೊಬ್ಬಳಿರುವಳು. ಆಕೆಯು ಪತಿವ್ರತಾಧರ್ಮವನ್ನು ಬಹಳ ಚೆನ್ನಾಗಿ ಬಲ್ಲವಳು. ಲೋಕಮೋಹಕವಾದ ರೂಪವುಳ್ಳವಳು. ಅವಳನ್ನೂ ನನ್ನ ತಂದೆಯು ಈ ಲಕ್ಷ್ಮಣನಿಗೆ ವಿವಾಹಮಾಡಿಕೊಟ್ಟನು. ಇದೇ ನಮ್ಮ ಸ್ವಯಂವರವೃತ್ತಾಂತವು. ಆ ಸ್ವಯಂವರದಲ್ಲಿ ನಾನು ಮಹಾತ್ಮನಾದ ಈತನ ಕೈಗೆ ಸೇರಿದ ವೃತ್ತಾಂತವೆಲ್ಲವನ್ನೂ ತಿಳಿಸಿರುವೆನು. ಎಲೈ ಆರ್ಯೆ! ನಾನು ಸತ್ಯಪರಾಕ್ರಮಿಗಳಲ್ಲಿ ಮೇಲೆನಿಸಿಕೊಂಡ ಈ ನನ್ನ ಪತಿಯಲ್ಲಿ ಧರ್ಮರೀತಿಯಿಂದ ಅನುರಕ್ತಳಾಗಿಯೇ ಇರುವೆನು." ಎಂದಳು. ಇಲ್ಲಿಗೆ ನೂರಹದಿನೆಂಟನೆಯಸರ್ಗವು.

---

(ರಾಮನು ಆ ರಾತ್ರಿಯನ್ನು ಋಷ್ಯಾಶ್ರಮದಲ್ಲಿಯೇ ಕಳೆದು, ಪ್ರಾತಃಕಾಲದಲ್ಲಿ ಎದ್ದು, ಆಹ್ನಿಕಗಳನ್ನು ನಡೆಸಿ ದಂಡಕಾರಣ್ಯಕ್ಕೆ ಹೊರಟುದು.)

ಧರ್ಮಜ್ಞಳಾದ ಅನಸೂಯೆಯು ಈ ಸ್ವಯಂವರಚರಿತ್ರವನ್ನು ಕೇಳಿ ಸಂತೋಷಗೊಂಡು, ಕೈನೀಡಿ ಸೀತೆಯನ್ನಪ್ಪಿಕೊಂಡು, ಪ್ರೀತಿಯಿಂದ ಆಕೆಯ ತಲೆಯನ್ನಾಘ್ರಾಣಿಸಿ "ಎಲೆವತ್ಸೆ! ಸ್ಫುಟಾಕ್ಷರಗಳುಳ್ಳುದಾಗಿಯೂ, ಕಿವಿಗಿಂಪಾಗಿಯೂ ಇರುವ ಈ ನಿನ್ನ ಮಾತುಗಳನ್ನು ಕೇಳುವಾಗಲೇ ನನಗೆ ಮೈಮರೆಯುವಷ್ಟು ಆನಂದವುಂಟಾಗುವುದು. ಅದರಲ್ಲಿಯೂ ನಿನ್ನ ಅದ್ಭುತವಾದ ಸ್ವಯಂವರಚರಿತ್ರೆಯನ್ನು ಕೇಳುವಾಗ ಇನ್ನು ಹೇಳುತಕ್ಕುದೇನು? ಈಗಲೀಗ ಅದರ ಪೂರ್ವೋತ್ತರಗಳೆಲ್ಲವನ್ನೂ ನಿನ್ನಿಂದ ನಾನು ಚೆನ್ನಾಗಿ ಕೇಳಿದಂತಾಯಿತು. ಈ ಕಥೆಯು ನನಗೆ ಎಷ್ಟೋ ಆನಂದವನ್ನುಂಟುಮಾಡಿತು. ಎಲೆವತ್ಸೆ, ಅದು ಹಾಗಿರಲಿ! ಇದೋ! ಸೂರ್ಯನು ಅಸ್ತಂಗತನಾಗುತ್ತಿರುವನು. ಮಂಗಳಕರವಾದ ರಾತ್ರಿಯು ಸನ್ನಿಹಿತವಾಗುತ್ತಿರುವುದು. ಹಗ

ಲೆಲ್ಲವೂ ಆಹಾರಾರ್ಥವಾಗಿ ಅಲ್ಲಲ್ಲಿ ಸಂಚರಿಸುತಿದ್ದ ಪಕ್ಷಿಗಳು ನಿದ್ರಾತುರ ದಿಂದ ತಮ್ಮ ತಮ್ಮ ಗೂಡಿಗೆ ಹೋಗಿಸೇರುತ್ತಿರುವುದರಿಂದ,ಅವುಗಳಕಲಕಲ ಧ್ವನಿಯು ಹೊರಡುತ್ತಿರುವುದನ್ನು ಕೇಳಿದೆಯಾ ? ಇದೋ! ಇಲ್ಲಿನೋಡು ! ಈ ಮಹರ್ಷಿಗಳು ಸಾಯಂಕಾಲಸ್ನಾನವನ್ನು ಮಾಡಿ,ತೊಯ್ದಮೈಯುಳ್ಳ ವರಾಗಿ, ಕೈಯ್ಯಲ್ಲಿ ಜಲಕುಂಭಗಳನ್ನಿಟ್ಟುಕೊಂಡು, ನೆನೆದ ನಾರುಮಡಿಗ ಳೊಡನೆಯೇ ಆಶ್ರಮಕ್ಕೆ ಗುಂಪುಗುಂಪಾಗಿ ಬರುತ್ತಿರುವರು. ಅದೋ! ಅಲ್ಲಿ ಕೆಲವು ಋಷಿಗಳು ಅಗ್ನಿಕಾರ್ಯವನ್ನು ನಡೆಸುವಾಗ ಶಾಸ್ತ್ರೋಕ್ತವಾಗಿ ಹೋಮಮಾಡಿದ ಹವಿಸ್ಸುಗಳಿಂದ ಹೊಗೆಯು ಹೊರಡುತ್ತಿರುವುದು ನೋ ಡು! ಆ ಧೂಮವು, ಪಾರಿವಾಳದ ಮೈಯ್ಯಂತೆ ಎಳಗೆಂಪುಳ್ಳದಾಗಿ ಗಾಳಿ ಯಿಂದ ನಾಲ್ಕುಕಡೆಗೂ ಚದರಿಸಲ್ಪಡುತ್ತಿರುವುದು. ದಿಕ್ಕುಗಳೆಲ್ಲವೂ ಸ್ಪ ಷ್ಟವಾಗಿ ಕಾಣಿಸದಿರುವುದರಿಂದ, ವಿಶೇಷವಾಗಿ ಎಲೆಗಳಿಲ್ಲದ ಈ ವೃಕ್ಷ ಗಳೂಕೂಡ ಹತ್ತಿರದಲ್ಲಿ ನೋಡುವಾಗಲೂ ಎಲೆಗಳಿಂದ ದಟ್ಟವಾಗಿ ತುಂಬಿ ದಂತೆ ಕಾಣುವುವು. ರಾತ್ರಿಯಲ್ಲಿ ಸಂಚರಿಸತಕ್ಕ ಭೂತ ಬೇತಾಳ ರಾಕ್ಷಸ ಪಿಶಾಚಾದಿಗಳೂ, ಇತರ ಕ್ರೂರ ಮೃಗಗಳೂ ಅಲ್ಲಲ್ಲಿ ಸಂಚರಿಸುತ್ತಿರುವುವು. ನಮ್ಮ ತಪೋವನದ ಮೃಗಗಳು ಅಗ್ನಿವೇದಿಕೆಯ ಪ್ರದೇಶಗಳಲ್ಲಿ ಮಲಗಿರು ವುದನ್ನು ನೋಡು. ಎಲೆ ಸೀತೆ! ಇನ್ನುನಕ್ಷತ್ರಗಳಿಂದಲಂಕರಿಸಲ್ಪಟ್ಟ ರಾತ್ರಿ ಯೂ ಗೋಚರಿಸಿ ಬಿಟ್ಟಳು. ಚಂದ್ರಿಕೆಯಿಂದಲಂಕರಿಸಲ್ಪಟ್ಟ ಚಂದ್ರನೂ ಆಕಾಶದಲ್ಲಿ ಉದಿಸಿಬಿಟ್ಟನು. ನೀನು ಹೋಗು! ರಾಮನ ಸಮೀಪ ದಲ್ಲಿರು. ನಿನ್ನ ಇಂಪಾದ ಮಾತುಗಳನ್ನು ಕೇಳಿ ನನಗೆ ಪರಮಸಂತೋಷ ವಾಯಿತು. ಎಲೆವತ್ಸೆ! ಇದೋ! ಈ ವಸ್ತ್ರಾಭರಣಗಳನ್ನೂ ಅನುಲೇಪನಗ ಳನ್ನೂ ನೀನು ಸ್ವೀಕರಿಸಿ! ನನ್ನಿದಿರಾಗಿಯೇ ನಿನ್ನ ದೇಹವನ್ನಲಂಕರಿಸಿಕೊಂ ಡು ನನಗೆ ಸಂತೋಷವನ್ನುಂಟು ಮಾಡು. ಈ ದಿವ್ಯಾಲಂಕಾರಗಳಿಂದ ನಿನ್ನ ದೇಹವು ಅಲಂಕೃತವಾದುದನ್ನು ನೋಡಿದ ಹೊರತು ನನ್ನ ಮನಸ್ಸುಸಿಲ್ಲದು" ಎಂದಳು. ಇದನ್ನು ಕೇಳಿ ಆ ಸೀತೆಯು ತನ್ನ ದೇಹವನ್ನಲಂಕರಿಸಿಕೊಂಡು ದಿವ್ಯ ಸ್ತ್ರೀಯಂತೆ ಕಾಣುತ್ತ, ಆಕೆಯ ಪಾದಗಳನ್ನು ಹಿಡಿದು ನಮಸ್ಕರಿಸಿ ರಾಮನ ಸಮೀಪವನ್ನು ಸೇರುವುದಕ್ಕಾಗಿ ಹೊರಟಳು. ಹೀಗೆ ಅಲಂಕೃತ

ಇದಾಗಿ ಬಂದ ಸೀತೆಯನ್ನು ನೋಡಿ ರಾಮನು ತಪಸ್ವಿನಿಯಾದ ಅನಸೂಯೆಯು ತಮ್ಮಲ್ಲಿ ತೋರಿಸಿದ ಪ್ರೀತಿಗಾಗಿ ಪರಮಸಂತೋಷದಿಂದಿದ್ದನು. ಆಮೇಲೆ ಸೀತೆಯು ತನಗೆ ಅನಸೂಯೆಯು ಕೊಟ್ಟಪಾರಿತೋಷಿಕಗಳನ್ನೆಲ್ಲಾ ರಾಮನಿಗೆ ತೋರಿಸಿ, ಅಲ್ಲಿ ನಡೆದ ವೃತ್ತಾಂತಗಳೆಲ್ಲವನ್ನೂ ವಿಸ್ತಾರವಾಗಿ ತಿಳಿಸಿದಳು. ಮನುಷ್ಯಮಾತ್ರರಿಗೆ ದುರ್ಲಭವಾದ ಈ ಸತ್ಕಾರಗಳನ್ನು ಕೇಳಿ ರಾಮಲಕ್ಷ್ಮಣರಿಬ್ಬರೂ ಬಹಳಸಂತೋಷದಿಂದಿದ್ದರು. ಆಮೇಲೆ ರಾಮನು ಅಲ್ಲಿನ ಮಹರ್ಷಿಗಳಿಂದ ಅನೇಕವಿಧದಲ್ಲಿ ಸತ್ಕರಿಸಲ್ಪಟ್ಟವನಾಗಿ, ಪರಮಸಂತೋಷದಿಂದ ಆರಾತ್ರಿಯನ್ನು ಅಲ್ಲಿಯೇ ಕಳೆದನು.ಮಹರ್ಷಿಗಳ ಸಹವಾಸದಿಂದ ಅತಿಪವಿತ್ರವೆನಿಸಿಕೊಂಡ ಆರಾತ್ರಿಯು ಕಳೆದು ಬೆಳಗಾಗಲು, ಋಷಿಗಳೆಲ್ಲರೂ ಪ್ರಾತಃಕಾಲದಲ್ಲಿ ಸ್ನಾನಮಾಡಿ ಅಗ್ನಿಕಾರ್ಯವನ್ನು ನಡೆಸಿದ ಮೇಲೆ, ಪುರುಷಶ್ರೇಷ್ಠರಾದ ರಾಮಲಕ್ಷ್ಮಣರಿಬ್ಬರೂ ಆ ಋಷಿಗಳಬಳಿಗೆ ಬಂದು "ಎಲೈ ಪೂಜ್ಯರೆ! ನಾವುಹೋಗಿಬರುವೆವು. ನಮಗೆ ಅನುಜ್ಞೆಯನ್ನು ಕೊಡಬೇಕು" ಎಂದರು. ಧರ್ಮಾನುಷ್ಠಾನಪರರಾದ ಆಮಹರ್ಷಿಗಳು ರಾಮಲಕ್ಷ್ಮಣರನ್ನು ಕುರಿತು ಆವನದಲ್ಲಿ ಆಗಾಗ ತಮಗೆ ಸಂಭವಿಸುತ್ತಿದ್ದ ರಾಕ್ಷಸಬಾಧೆಯನ್ನು ತಿಳಿಸುವುದಕ್ಕಾಗಿ, ವ್ಯಾಜಾಂತರದಿಂದ "ವತ್ಸ ರಾಮನೆ! ಈ ಘೋರಾರಣ್ಯದಲ್ಲಿ ಮನುಷ್ಯರನ್ನೇ ನುಂಗಿಬಿಡತಕ್ಕ ನಾನಾರೂಪವುಳ್ಳ ರಾಕ್ಷಸರಿರುವರು. ಇಲ್ಲಿ ರಕ್ತವನ್ನೇ ತಮ್ಮ ಆಹಾರವಾಗಿಟ್ಟುಕೊಂಡಿರುವ ಕ್ರೂರಮೃಗಗಳೂ ಅನೇಕವಾಗಿರುವುವು. ಈ ಭಯಂಕರವಾದ ಅರಣ್ಯದಲ್ಲಿ ರಾಕ್ಷಸರು ಅಲ್ಲಲ್ಲಿ ಗುಂಪುಗುಂಪಾಗಿ ಕಾದಿರುವರು. ಋಷಿಗಳು ಮೈಲಿಗೆಯಿಂದಾಗಲಿ ಅಜಾಗ್ರತೆಯಿಂದಾಗಲಿ ಇರುವ ಸಮಯವನ್ನು ನೋಡಿ ಮೇಲೆಬಿದ್ದು ಆ ಋಷಿಗಳನ್ನು ತಿಂದುಬಿಡುವರು. ಅವರನ್ನಡಗಿಸುವ ಭಾರವು ನಿನಗೆ ಸೇರಿದೆ. ವತ್ಸ ರಾಮನೆ! ಇದೋನೋಡು!ಋಷಿಗಳು ತಮ್ಮ ಆಹಾರಾರ್ಥವಾಗಿ ಕಾಡಿನಲ್ಲಿ ಹಣ್ಣುಹಂಪಲುಗಳನ್ನೂ, ಗಡ್ಡೆಗೆಣಸುಗಳನ್ನೂ

ಸಂಗ್ರಹಿಸಿತರುವುದಕ್ಕಾಗಿ ಹೋಗಿಬರುವ ದಾರಿಯೇ ಇದು. ಇದೇ ದಾರಿಯನ್ನು ಹಿಡಿದು ಹೋಗಿ, ನೀನು ದುರ್ಗಮವಾದ ಆ ದಂಡಕಾರಣ್ಯವನ್ನು ಪ್ರವೇಶಿಸುವುದುಚಿತವು" ಎಂದರು. ಹೀಗೆ ತಪಸ್ವಿಗಳೆಲ್ಲರೂ ವಿನಯದಿಂದ ಕೇಳಿಕೊಳ್ಳುತ್ತ, ಮಂಗಳಾಶೀರ್ವಾದಗಳನ್ನು ಮಾಡಲು, ಪರಂತಪನಾದ ರಾಮನು ಅವೆಲ್ಲವನ್ನೂ ಶಿರಸಾವಹಿಸಿ, ಸೀತಾಲಕ್ಷ್ಮಣರೊಡಗೂಡಿ, ಸೂರ್ಯನು ಮೇಘಮಂಡಲವನ್ನು ಪ್ರವೇಶಿಸುವಂತೆ ದಂಡಕಾರಣ್ಯವನ್ನು ಪ್ರವೇಶಿಸಿದನು. ಇಲ್ಲಿಗೆ ನೂರಹತ್ತೊಂಬತ್ತನೆಯ ಸರ್ಗವು.

ಇಲ್ಲಿಗೆ ಅಯೋಧ್ಯಾಕಾಂಡವು ಮುಗಿದುದು.

ಮಂಗಳಂ.



